ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೧೩

## ಉತ್ತರಪರ್ವ—ಚತುರ್ಥ ಸಂಪುಟ

೧೫೩ ರಿಂದ ೨೦೮ ಅಧ್ಯಾಯ

( ಪುರಾಣ ಸಮಾಪ್ತಿ )



ಅನುವಾದಕ :

ವೇ॥ ಬ್ರ॥ ಪಂಡಿತ ಬಿ. ಚನ್ನಕೇಶವಯ್ಯ,

ಆಸ್ಥಾನ ವಿದ್ವಾನ್.



ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್,

೧೯೫೨.

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

# ಮುನ್ನುಡಿ

ಆಸ್ತಿಕತೆಯು ಮಾನವರಲ್ಲಿರಬೇಕಾದುದು ಆವಶ್ಯಕವೆಂದು ಆರ್ಯ ಮಹರ್ಷಿಯರ ಆಶಯ. ದೇವರಲ್ಲಿ ಭಕ್ತಿಯಿಡಬೇಕು. ದೇವರು ಮೆಚ್ಚುವಂತೆ ನಡೆಯುವುದೇ ಧರ್ಮ. ಧಾರ್ಮಿಕ ಜೀವನವೇ ಶ್ರೇಯಸ್ಕರ ಎಂಬ ಬುದ್ಧಿ ಎಲ್ಲರಿಗೂ ಹುಟ್ಟಿದರೆ, ಎಲ್ಲರೂ ಹಾಗೆಯೇ ನಡೆಯುತ್ತಾರೆ. 'ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ' ಎಂಬದಾಗಿ ಪೂಜ್ಯರು ಹೇಳಿದ ಮಾತು ಆಗ ಅಕ್ಷರಶಃ ಅನ್ವಯಿಸಬಹುದು. ಆದರೆ ಹಾಗೆ ನಡೆಯಿಸುವುದು ಸರ್ವತ್ರ ಸಾಧ್ಯವೇ? ಎಂದು ಸಂಶಯಕ್ಕೆಡೆಗೊಡುವಂತಹ ಸಂದರ್ಭಗಳು ಇವೆಯೆಂದು ಕಾಣುವಂತೆ "ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಂ" ಎಂದು ಭರ್ತೃಹರಿ ಮಹಾಕವಿಯ ವಚನವಿದೆ. ಮಾನವನಿಗೆ ಪ್ರಪಂಚದಲ್ಲಿ ಕಂಡುಬರುವ ಎಲ್ಲ ವಸ್ತುಗಳೂ ಒಂದಲ್ಲ ಒಂದು ರೀತಿಯಲ್ಲಿ ಭಯಪ್ರದವಾಗಿಯೇ ಕಂಡುಬರುವುವು. ಜನರ ಮಾನಸಿಕವಾದ ಮಮತಾಭಾವವೇ ಅದಕ್ಕೆ ಕಾರಣ. ಯಾವುದನ್ನು ನಾವು ನಮ್ಮದು ಎನ್ನುತ್ತೇವೆಯೋ ಅದು ನಿಜವಾಗಿ ನಮ್ಮದಲ್ಲ. ಆ ಭಾವನೆ ಇರುವವರೆಗೂ ನಮಗೆ ಸುಖಶಾಂತಿಗಳು ದೊರೆಯುವುದಿಲ್ಲ. ಇತ್ಯಾದಿ ಅನುಭವೈಕಸಿದ್ಧವಾದ ವಿಷಯಗಳನ್ನು ನಮ್ಮ ಭಾರತೀಯ ಮಹಾಪುರುಷರು ಯುಗಯುಗಾಂತರಗಳಿಂದ ನಮಗೆ ಬೋಧಿಸುತ್ತಿರುವರು. ಮಹಾತ್ಮ ಬುದ್ಧ, ಶ್ರೀ ಶಂಕರಾಚಾರ್ಯರು ಮುಂತಾದ ಮಹನೀಯರು ತಮ್ಮ ಜೀವಿತಕಾಲದಲ್ಲಿ ಮಮತಾಭಾವನೆಯನ್ನು ದೂರಗೊಳಿಸಿ, ಶಾಂತಿಪ್ರದವಾದ ವೈರಾಗ್ಯವನ್ನವಲಂಬಿಸಿ, ತಾವೂ ಮುಕ್ತರಾದರಲ್ಲದೆ ತಮ್ಮ ಅನೇಕ ಶಿಷ್ಯವರ್ಗವನ್ನೂ ಪರಮಪದಕ್ಕೆ ಕಳುಹಿಸಿದರು. ಇಂತಹ ವೈರಾಗ್ಯ ಭಾವನೆಯು ಸಾಮಾನ್ಯ ಮಾನವರಿಗೆ ಸುಲಭವಾಗಿ ದೊರೆಯಲಾರದು. ಕಾಮಕ್ರೋಧಾದಿ ಅರಿಷಡ್ವರ್ಗಗಳು ಮಾನವರನ್ನು ಆವರಿಸಿ ಯಾವಾಗಲೂ ಆಶಾಪಾಶದಿಂದ ಬಂಧಿಸುವುವು. ತಮ್ಮ ಜೀವನಕ್ಕೆ ಮತ್ತು ಭೋಗಕ್ಕೆ ಪರ್ಯಾಪ್ತವಾಗುವಷ್ಟು ಸುಖಸಾಮಗ್ರಿಗಳನ್ನು ಬಯಸುವುದು ಸಾಮಾನ್ಯರ ಲಕ್ಷಣವಾದರೂ, ಮಿತಿಮೀರಿದ ಭೋಗಸಾಮಗ್ರಿಗಳನ್ನು ಕೂಡಹಾಕಿಕೊಂಡು ತಾವೂ ಅನುಭವಿಸದೆ ಮತ್ತೊಬ್ಬರಿಗೂ ಕೊಡದೆ ಜೀವನವನ್ನು ಕೊನೆಗಾಣಿಸುವುದು ಅಧಮರ ಸ್ವಭಾವ. ಇಂತಹ ಜನರು ಲೋಕಕ್ಕೆ ಕಂಟಕ

ಪ್ರಾಯರಾಗುವರು. ಇದನ್ನು ತಪ್ಪಿಸಿ ಮಾನವವೃಂದವನ್ನು ಸನ್ಮಾರ್ಗಕ್ಕೆ ಆಕರ್ಷಿಸಿ ತ್ಯಾಗಬುದ್ಧಿಯನ್ನು ಹೆಚ್ಚಿಸಿ ಪ್ರತಿಯೊಬ್ಬನಿಂದಲೂ ಸಮಾಜಕ್ಕೆ ಅನುಕೂಲ ಒದಗುವಂತೆ ನಮ್ಮ ಪ್ರಾಚೀನ ಮಹರ್ಷಿಗಳು ಪುರಾಣ ಲೇಖನಗಳ ಮೂಲಕ ಜನತೆಗೆ ಮಾರ್ಗದರ್ಶಕರಾದರು.

ಪ್ರಕೃತ ಭವಿಷ್ಯಮಹಾಪುರಾಣವು ಈ ಭಾಗ (ಸಂಪುಟ) ದಿಂದ ಪೂರ್ಣವಾಗುವುದು. ಇದರಲ್ಲಿ ನಾನಾ ವಿಧಗಳಾದ ದಾನಗಳನ್ನೂ, ಅವುಗಳ ಆಚರಣೆಯ ಕಾಲ ಮತ್ತು ಕ್ರಮಗಳನ್ನೂ ವಿವರಿಸಿ, ಜನತೆಯು ತ್ಯಾಗಬುದ್ಧಿಗೆ ಮನಗೊಡುವಂತೆ ಮಾಡಿರುವರು. ದಾನಗಳು ಮತ್ತು ಅವುಗಳ ಭೇದಗಳು ಇವನ್ನು ವಿಸ್ತಾರ ರೀತಿಯಿಂದ ಪೂರ್ಣವಾಗಿ ತಿಳಿಸುವಂತಹ ಗ್ರಂಥವು ಇದೊಂದೇ ಎಂದು ಹೇಳಬಹುದು. ಮನುಷ್ಯರು ಅತ್ಯಂತ ಕಷ್ಟದಿಂದ ಸಂಪಾಸಿದ ಧನಕ್ಕೆ ದಾನ ಭೋಗ ನಾಶ ಎಂಬ ಮೂರು ದಾರಿಗಳಿವೆ. ಮೊದಲನೆಯ ಮಾರ್ಗವೇ ಸನ್ಮಾರ್ಗ. ಎರಡನೆಯದಾದ ಭೋಗವು ಮಧ್ಯಮವಾದುದು. ಇವೆರಡು ದಾರಿಯೂ ಧನಕ್ಕೆ ಸಿಕ್ಕದಿದ್ದರೆ ಮೂರನೆಯದಾದ ನಾಶಮಾರ್ಗದಲ್ಲಿ ನುಗ್ಗಿ ಹೋಗುವುದು ಎಂದು ಸುಭಾಷಿತಕಾರರೊಬ್ಬರು ಎಚ್ಚರಿಸಿರುವರು. ಇದೇ ಅಭಿಪ್ರಾಯವನ್ನೇ ಪುರಾಣಕಾರರು ಇಲ್ಲಿ ಪ್ರಸ್ತಾಪಿಸಿ ದಾನಶೀಲರಾದವರಿಗೆ ದಾನಮಾಡುವ ಕ್ರಮವನ್ನು ಒಂದು ನಿಯಮಬದ್ಧವನ್ನಾಗಿ ಮಾಡಿ ಸೂಚಿಸಿರುವರು. ದಾನಿಯು ನಿಜವಾಗಿ ನಿಷ್ಕಾಮನಾಗಿ ವರ್ತಿಸಬೇಕು. ಹಾಗಿದ್ದರೇ ಆ ದಾನದ ಫಲವು ಅವನಿಗೆ ಮೋಕ್ಷಪ್ರದವಾಗುವುದು. ಆದರೆ ಈ ಗ್ರಂಥದಲ್ಲಿ ಮಾತ್ರ ಅನೇಕ ದಾನಗಳಿಗೆ ಬೇರೆ ಬೇರೆ ಕಾಮ್ಯಫಲಗಳನ್ನು ನಿರ್ದೇಶಿಸಿರುವರು. "ಸ್ವರ್ಗ ಕಾಮನಾದವನು ಜ್ಯೋತಿಷ್ಟೋಮಯಾಗ ಮಾಡಬೇಕು" ಎಂಬ ವಿಧಿವಾಕ್ಯಗಳಲ್ಲಿ ಕಾಮ್ಯಕರ್ಮಗಳೂ ಶ್ರುತಿಯಲ್ಲಿ ಹೇಗೆ ಪ್ರಸಿದ್ಧಗಳಾಗಿವೆಯೋ ಅದೇರೀತಿ ಪುರಾಣಗಳಲ್ಲಿ ಕಾಮ್ಯವಾದ ದಾನಗಳೂ ನಿರೂಪಿತಗಳಾಗಿವೆ. ಜೀವನದ ಮೊತ್ತಮೊದಲನೆಯ ಮೆಟ್ಟಲಿನಲ್ಲಿ ಎಲ್ಲರೂ ಕಾಮವಾಸನೆಯಿಂದಲೇ ಸತ್ಕರ್ಮಗಳನ್ನೆಸಗಬೇಕು. ಅಂತಹ ಸತ್ಕರ್ಮಗಳ ಫಲಾನುಭವದಿಂದ ಚಿತ್ತಶುದ್ಧಿಯನ್ನು ಪಡೆದು, ತನ್ಮೂಲಕ ನಿಷ್ಕಾಮಕರ್ಮಗಳನ್ನೆಸಗಿ ಅದರಿಂದ ಮಾನವರು ನಿತ್ಯಶುದ್ಧಮುಕ್ತರಾಗುವರು ಎಂಬುದೇ ಪುರಾಣಕಾರರ ಆಶಯ.

ಈ ಮಹಾಪುರಾಣವು ಇಪ್ಪತ್ತಾರುಸಾವಿರ ಶ್ಲೋಕಗಳನ್ನೊಳಗೊಂಡು ಮಹಾಪುರಾಣದ ಸಕಲ ಲಕ್ಷಣಗಳಿಂದಲೂ ಕೂಡಿ ಐಹಿಕಾಮುಷ್ಮಿಕ ಫಲಗಳೆರಡನ್ನೂ ಒದಗಿಸುವ ಅನೇಕ ಕರ್ಮ ಧರ್ಮಸ್ವರೂಪಗಳನ್ನು ತಿಳಿಸತಕ್ಕುದಾಗಿದೆ. ಇದನ್ನು ಕನ್ನಡಭಾಷೆಗೆ ಪರಿವರ್ತಿಸಬೇಕೆಂಬ ಒಂದು ರಾಜಾಜ್ಞೆಯು ಪರಿವರ್ತನಕಾರನಾದ ನನಗೆ ಈಶ್ವರಾನುಗ್ರಹದಂತೆ ಪರಿಣಮಿಸಿತು. ಭಗವಂತನ

ಪೂರ್ಣ ಬೆಂಬಲದಿಂದ ನಾನು ಇವನ್ನು ಯಥಾಮತಿ ಕನ್ನಡಭಾಷೆಗೆ ಭಾಷಾಂತರ ಗೊಳಿಸಿರುವೆನು. ನಮ್ಮ ಭಾರತ ಭೂಮಿಯಲ್ಲಿ ಇಲ್ಲಿನವರೆಗೂ ವಿದ್ಯಾವಂತರಿಗೆ ಕಲ್ಪವೃಕ್ಷದಂತೆ ಸರ್ವ ಸಹಾಯಗಳನ್ನೊದಗಿಸಿ ಬಹು ದ್ರವ್ಯವ್ಯಯದಿಂದ ಕಲಾಭಿವೃದ್ಧಿಗೊಳಿಸಿರುವ ಕೀರ್ತಿ ರಾಜಾಧಿರಾಜರಿಗೆ ಸಲ್ಲುತ್ತಿದೆ. ಅದರಲ್ಲಿಯೂ ಸ್ವಯಂ ವಿದ್ಯಾಪರಿಪೂರ್ಣರಾಗಿ,. ಕವಿಗಳ ಗುಂಪಿಗೆ ಆಶ್ರಯವಿತ್ತು, ಜಗದ್ವಿಖ್ಯಾತರಾಗಿ ಸಾರಸ್ವತಸಂಪತ್ತನ್ನು ಕನ್ನಡಿಗರಿಗೆ ಒದಗಿಸಿರುವ **ಶ್ರೀ ಚಿಕ್ಕದೇವರಾಜ ಒಡೆಯರು, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು, ಶ್ರೀ ನಾಲ್ವಡಿ ಕೃಷ್ಣರಾಜ ಮಹಾಪ್ರಭುಗಳು** ಇಂತಹ ಮಹಾಮಹಿಮರಾದ ರಾಜರ ಸದ್ವಂಶದಲ್ಲಿ ಜನಿಸಿ ಧರ್ಮದಿಂದ ಪ್ರಜಾಪಾಲನ ಮಾಡುತ್ತಿರುವ ನಮ್ಮ ಶ್ರೀಮನ್ಮಹಾರಾಜರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳು ಅಷ್ಟಾದಶ ಮಹಾಪುರಾಣಗಳ ಹಾಗೆಯೇ ಅಷ್ಟಾದಶ ಉಪಪುರಾಣಗಳ ಅನೇಕ ಪ್ರಾಚೀನ ಇತಿಹಾಸ ಗ್ರಂಥಗಳ ಪರಿವರ್ತನಕಾರ್ಯವನ್ನು ಪೂರ್ಣಗೊಳಿಸಿ, ಕನ್ನಡ ಜನತೆಗೆ ಮಹೋಪಕಾರಮಾಡಿರುವರು. ಹೀಗೆ ಆಸ್ತಿಕ ಶ್ರೇಷ್ಠರೂ ಧರ್ಮಕಾರ್ಯ ತತ್ಪರರೂ ದೇವದ್ವಿಜಗುರುಭಕ್ತಿಧುರೀಣರೂ ಆದ ಮಹಾರಾಜರ ಆಳ್ವಿಕೆಗೆ ಒಳಪಟ್ಟಿರುವ ಕನ್ನಡನಾಡೇ ಇಂದು ಧನ್ಯವೆನಿಸಿದೆ. ಇಂತಹ ಮಹಾಪ್ರಭುಗಳಿಗೂ ಅವರ ಕುಟುಂಬವರ್ಗಕ್ಕೂ ಭಗವಂತನು ಇತ್ಯೋಪತಿಶಯವಾದ ಪುರೋಭಿವೃದ್ಧಿಯನ್ನೂ ಆಯುರಾರೋಗ್ಯಭಾಗ್ಯಗಳನ್ನೂ ಕರುಣಿಸಿ ಸಲಹುತ್ತಿರಲಿ ಎಂದು ಅನನ್ಯಭಾವನೆಯಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಶ್ರೀ ನಂದನನಾಮ ಸಂವತ್ಸರ
ಕಾರ್ತೀಕ ಶುದ್ಧ ನವಮಿ ಸೋಮವಾರ,
೨೭—೧೦—೫೨.

ಇಂತು ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ.**

## ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ನೂರಐವತ್ತಮೂರರಿಂದ ಇನ್ನೂರಎಂಟನೆಯ ಅಧ್ಯಾಯಗಳ ( ಪುರಾಣ ಸಮಾಪ್ತಿಯ ವರೆಗಿನ )

# ವಿಷಯಾನುಕ್ರಮಣಿಕೆ.



ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ



## ಸಮಾಪ್ತೋಽಯಂ ಭವಿಷ್ಯಮಹಾಪುರಾಣಗ್ರಂಥಃ.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ತ್ರಿಪಂಚಾಶದುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಜಲಧೇನುಂ ಪ್ರವಕ್ಷ್ಯಾಮಿ ಪ್ರೀಯತೇ ದತ್ತಯಾ ಯಯಾ |
ದೇವದೇವೋ ಹೃಷೀಕೇಶಃ ಪೂಜಿತಃ ಸರ್ವಭಾವನಃ || ೧ ||

ಜಲಕುಂಭಂ ನರವ್ಯಾಘ್ರ ಸ್ಥಾಪಯಿತ್ವಾ ಸುಪೂಜಿತಂ |
ರತ್ನಗರ್ಭಂ ತು ತಂ ಕೃತ್ವಾ ಗ್ರಾಮ್ಯೈರ್ಧಾನ್ಯೈಃ ಸಮನ್ವಿತಂ || ೨ ||

ಸಿತವಸ್ತ್ರಯುಗಚ್ಛನ್ನಂ ದೂರ್ವಾಪಲ್ಲವಶೋಭಿತಂ |
ಕುಷ್ಠಮಾಂಸೀಪುರೋಶೀರವಾಲಕಾಮಲಕೀಯುತಂ || ೩ ||

---

### ನೂರಐವತ್ತಮೂರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಓ ಪಾರ್ಥ! ಯಾವ ಜಲಧೇನುವನ್ನು ದಾನಮಾಡುವುದರಿಂದ ದೇವದೇವನೂ, ಚರಾಚರಾತ್ಮಕವಾದ ಪ್ರಪಂಚ ಸ್ವರೂಪನೂ ಆದ ಹೃಷೀಕೇಶನೆನಿಸಿದ ಮಹಾವಿಷ್ಣುವು ಅತಿಶಯವಾಗಿ ಸಂತೋಷ ಹೊಂದುವನೋ ಅಂತಹ ಜಲಧೇನು ವಿಷಯವನ್ನು ನಿನಗೆ ತಿಳಿಸುವೆನು ಕೇಳು.

೨. ಓ ರಾಜಶ್ರೇಷ್ಠ! ಮೊದಲು ಜಲಭರಿತವಾದ ಕುಂಭವನ್ನು ಸ್ಥಾಪಿಸಿ ಅದರೊಳಗೆ ರತ್ನವನ್ನೂ ಬಗೆಬಗೆಯ ಧಾನ್ಯಗಳನ್ನೂ ಹಾಕಿ ಪೂಜೆಗಿಡಬೇಕು.

೩. ಅಲ್ಲದೆ ಆ ಕುಂಭಕ್ಕೆ ಒಂದುಜತೆ ಬಿಳಿಯ ವಸ್ತ್ರವನ್ನು ಹೊದಿಸಿ ಗರಿಕೆ ಚಿಗುರು ಇವುಗಳಿಂದ ಅಲಂಕರಿಸಬೇಕು. ಮತ್ತು ಚಂಗಲಕೋಷ್ಟ, ಜಟಾ ಮಾಂಸಿ, ಪುರೋಶೀರ (ಲಾಮಂಚ), ವಾಲಕ, ಆಮಲಕೀ (ನೆಲ್ಲಿಯ ಚಿಗುರು) ಈ ವನಸ್ಪತಿಗಳನ್ನು ಕಲಶದಲ್ಲಿ ಹಾಕಬೇಕು.

ಪ್ರಿಯಂಗುಪತ್ರಸಹಿತಂ ಸಿತಯಜ್ಞೋಪವೀತಿನಂ ।
ಸೋಪಾನತ್ಕಂ ಚ ಸಚ್ಛತ್ರಂ ದರ್ಭವಿಷ್ಟರಸಂಸ್ಥಿತಂ ॥ ೪ ॥

ಚತುರ್ಭಿಃ ಸಂಯುತಂ ರೌಪ್ಯಂ ತಿಲಪಾತ್ರೈಶ್ಚತುರ್ದಿಶಂ ।
ಸ್ಥಗಿತಂ ದಧಿಪಾತ್ರೇಣ ಘೃತಕ್ಷೌದ್ರವತಾ ಮುಖಂ ॥ ೫ ॥

ಸವತ್ಸಾಂ ಚ ಪ್ರತಿಷ್ಠಾಪ್ಯ ಗೋಮಯೇನೋಪಶೋಭಿತಾಂ ।
ಸ್ರಗ್ದಾಮಪುಚ್ಛೀಂ ಕುರ್ವೀತ ತಾಮ್ರದೋಹನಕಾನ್ವಿತಾಂ ॥ ೬ ॥

ತತಃ ಸಮಭ್ಯರ್ಚ್ಯ ವಿಭುಂ ವಾಸುದೇವಂ ಸನಾತನಂ ।
ಪುಷ್ಪಧೂಪೋಪಹಾರೈಶ್ಚ ಯಥಾವಿಭವಮಾತ್ಮನಃ ॥ ೭ ॥

---

೪. ಮತ್ತು ನವಣೆಯ ಎಲೆಗಳನ್ನೂ ಹಾಕಬೇಕು. ಅಲ್ಲದೆ ಬಿಳಿಯ ಯಜ್ಞೋಪವೀತವನ್ನು ಅಲಂಕರಿಸಬೇಕು. ಕಲಶದ ಬಳಿ ಹೊಸ ಪಾದರಕ್ಷೆ, ಛತ್ರಿ ಇವುಗಳನ್ನು ಇರಿಸಬೇಕು. ನೆಲದ ಮೇಲೆ ದರ್ಭೆಯನ್ನು ಹರಡಿ ಅದರ ಮೇಲೆ ಕಲಶವನ್ನು ಇರಿಸಬೇಕು.

೫. ಈ ಕಲಶವು ಬೆಳ್ಳಿಯದಾಗಿರಬೇಕು. ಅದರ ನಾಲ್ಕು ದಿಕ್ಕುಗಳಲ್ಲಿಯೂ ಎಳ್ಳಿನಿಂದ ಭರಿತವಾದ ನಾಲ್ಕು ಪಾತ್ರೆಗಳನ್ನು ಇರಿಸಬೇಕು. ಅಲ್ಲದೆ ಈ ಬೆಳ್ಳಿಯ ಕಲಶದ ಮುಂಭಾಗದಲ್ಲಿ ಮೊಸರು ತುಪ್ಪ ಮತ್ತು ಜೇನು ಇವುಗಳಿಂದ ಕೂಡಿದ ಪಾತ್ರೆಗಳನ್ನಿಡಬೇಕು.

೬. ಅನಂತರ ಗೋಮಯದಿಂದ ಚೆನ್ನಾಗಿ ಸಾರಿಸಿ, ರಂಗವಲ್ಲಿಯಿಂದ ಅಲಂಕರಿಸಲ್ಪಟ್ಟಿರುವ ಜಾಗದಲ್ಲಿ ಕರುವಿನೊಡನೆ ಜಲಧೇನುವನ್ನು ರಚನೆ ಮಾಡಬೇಕು. ಹೂಮಾಲೆಯಿಂದ ಬಾಲವನ್ನು ರಚಿಸಬೇಕು. ಅದರ ಬಳಿ ಹಾಲು ಕರೆಯುವ ಪಾತ್ರೆಯನ್ನಿರಿಸಬೇಕು.

೭–೮. ಅನಂತರ ಸಂಕಲ್ಪಮಾಡಿ ಸನಾತನನೂ, ಸರ್ವಸಮರ್ಥನೂ ಆದ ವಾಸುದೇವನನ್ನು ತನ್ನ ಐಶ್ವರ್ಯಕ್ಕೆ ತಕ್ಕಂತೆ ಹೂ, ಧೂಪ, ನೈವೇದ್ಯ ಮುಂತಾದವುಗಳಿಂದ ಪೂಜಿಸಿ, ಜಲಧೇನುಸ್ವರೂಪವಾದ ಆ ಕುಂಭವನ್ನು "ವಿಷ್ಣುವಿನ ವಕ್ಷಸ್ಥಲದಲ್ಲಿ ನೆಲಸಿರುವ ಲಕ್ಷ್ಮಿ, ಅಗ್ನಿದೇವನ ಹೃದಯಾಶ್ರಿತಳಾದ

**ಸಂಕಲ್ಪ್ಯ ಜಲಧೇನುಂ ಚ ಕುಂಭಂ ತಮಭಿಮಂತ್ರ್ಯ ಚ ।**
**ವಿಷ್ಣೋರ್ವಕ್ಷಸಿ ಯಾ ಲಕ್ಷ್ಮೀಃ ಸ್ವಾಹಾ ಯಾ ಚ ವಿಭಾವಸೋಃ ॥**
**ಸೋಮಶಕ್ರಾರ್ಕಶಕ್ತಿರ್ಯಾ ಧೇನುರೂಪೇಣ ಸಾಸ್ತು ಮೇ ॥ ೮ ॥**

**ಏವಮಾಮಂತ್ರ್ಯ ವಿಧಿವತ್ಸಕಲಾಂ ವತ್ಸಕಾನ್ವಿತಾಂ ।**
**ಭಕ್ತ್ಯಾ ಸಂಪೂಜ್ಯ ಗೋವಿಂದಂ ಜಲಶಾಯಿನಮಚ್ಯುತಂ ॥ ೯ ॥**

**ಸಿತವಸ್ತ್ರಧರಃ ಶಾನ್ತೋ ವೀತರಾಗೋ ವಿಮತ್ಸರಃ ।**
**ದದ್ಯಾದ್ವಿಪ್ರಾಯ ರಾಜೇಂದ್ರ ಪ್ರೀತ್ಯರ್ಥಂ ಜಲಶಾಯಿನಃ ॥ ೧೦ ॥**

**ಶೇಷಪರ್ಯಂಕಶಯನಃ ಶ್ರೀಮಾನ್ ಶಾರ್ಙ್ಗವಿಭೂಷಿತಃ ।**
**ಜಲಶಾಯೀ ಜಗದ್ಯೋನಿಃ ಪ್ರೀಯತಾಂ ಮಮ ಕೇಶವಃ ॥ ೧೧ ॥**

---

ಸ್ವಾಹಾದೇವಿ ಮತ್ತು ಚಂದ್ರ, ಇಂದ್ರ, ಸೂರ್ಯ ಇವರ ಶಕ್ತಿದೇವತೆಯರು ಇವರೆಲ್ಲರೂ ಈ ಜಲಧೇನುರೂಪದಿಂದ ನನಗೆ ಅನುಗ್ರಹಮಾಡಲಿ ಎಂದು ಅಭಿಮಂತ್ರಿಸಬೇಕು.

೯-೧೦. ಕರುವಿನೊಡಗೂಡಿದ್ದು ಫಲಸಮೇತವೂ ಆದ ಈ ಜಲಧೇನುವನ್ನು ಹೀಗೆ ವಿಧಿಗನುಸಾರವಾಗಿ ಅಭಿಮಂತ್ರಿಸಿದ ಮೇಲೆ, ಜಲದಲ್ಲಿಯೇ ಯಾವಾಗಲೂ ಮಲಗಿ ನಿದ್ರಿಸುತ್ತಿರುವ ನಾಶರಹಿತನಾದ ಗೋವಿಂದನನ್ನು ಭಕ್ತಿಯಿಂದ ಪೂಜೆಮಾಡಬೇಕು. ದಾನಮಾಡುವ ಯಜಮಾನನು ಬಿಳಿಯ ವಸ್ತ್ರವನ್ನು ಧರಿಸಿ, ರಾಗದ್ವೇಷ ಮತ್ತು ಮಾತ್ಸರ್ಯ ಇವುಗಳನ್ನು ತೊರೆದು, ಶಾಂತಚಿತ್ತನಾಗಿ ಸಕಲ ಪರಿಕರಗಳೊಡಗೂಡಿದ ಈ ಜಲಧೇನುವನ್ನು ಜಲಶಾಯಿಯಾಗಿರುವ ಶ್ರೀಮನ್ನಾರಾಯಣನ ಪ್ರೀತ್ಯರ್ಥವಾಗಿ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೧೧-೧೨. ಓ ರಾಜೇಂದ್ರ ! ಆದಿಶೇಷನೆಂಬ ಮಂಚದ ಮೇಲೆ ಮಲಗಿ, ಶಾರ್ಙ್ಗವೆಂಬ ಆಯುಧವನ್ನು ಧರಿಸಿ, ಸಕಲ ಜಗತ್ತುಗಳಿಗೂ ಮೂಲಕಾರಣನಾಗಿರುವ ಶ್ರೀಮಾನ್ (ಲಕ್ಷ್ಮೀ ಸಮೇತನಾದ) ಕೇಶವನು ಈ ಜಲಧೇನುವಿನ ದಾನದಿಂದ ಪ್ರೀತನಾಗಲಿ ಎಂದು ಹೇಳಿ ಜಗನ್ನಾಥನಾದ ಶ್ರೀಮನ್ನಾರಾಯಣನನ್ನು ಧ್ಯಾನಮಾಡುತ್ತಾ ಈ ಧೇನುವನ್ನು ದಾನಮಾಡ

ಇತ್ಯುಚ್ಚಾರ್ಯ ಜಗನ್ನಾಥಂ ವಿಪ್ರಾಯ ಪ್ರತಿಪಾದ್ಯ ತಾಂ ।
ತದ್ದಿನಂ ಗೋವ್ರತಸ್ತಿಷ್ಠೇಚ್ಛ್ರದ್ಧಯಾ ಪರಯಾ ಯುತಃ ॥ ೧೨ ॥

ಅನೇನ ವಿಧಿನಾ ದತ್ತ್ವಾ ಜಲಧೇನುಂ ಜನಾಧಿಪ ।
ಸರ್ವಭೋಗಾನವಾಪ್ನೋತಿ ಯೇ ದಿವ್ಯಾ ಯೇ ಚ ಮಾನುಷಾಃ ॥೧೩॥

ಶರೀರಾರೋಗ್ಯಮತುಲಂ ಪ್ರಶಮಃ ಸರ್ವಕಾಲಿಕಃ ।
ನೃಣಾಂ ಭವಂತಿ ದತ್ತಾಯಾಂ ಸರ್ವೇ ಕಾಮಾ ನ ಸಂಶಯಃ ॥ ೧೪ ॥

ಅತ್ರಾಪಿ ಶ್ರೂಯತೇ ಭೂಪ ಮುದ್ಗಲೇನ ಮಹಾತ್ಮನಾ ।
ಜಾತಿಸ್ಮರೇಣ ಯದ್ಗೀತಮಿಹಾಭ್ಯೇತ್ಯ ಪುರಾ ಕಿಲ ॥ ೧೫ ॥

ಸ ಮುದ್ಗಲಃ ಪುರಾ ವಿಪ್ರೋ ಯಮಲೋಕಗತೋ ಮುನಿಃ ।
ದದರ್ಶ ಯಾತನಾನೇಕಾಃ ಪಾಪಕರ್ಮಕೃತಾಂ ನೃಣಾಂ ॥ ೧೬ ॥

---

ಬೇಕು. ಅನಂತರ ಆ ದಿನ ಯಜಮಾನನು ತುಂಬಾ ಶ್ರದ್ಧೆಯಿಂದ ಗೋವ್ರತವನ್ನಾಚರಿಸಬೇಕು.

೧೩-೧೪. ಎಲೈ ರಾಜಕುಲಲಲಾಮನೇ! ಈ ರೀತಿ ವಿಧಿಗನುಸಾರವಾಗಿ ಜಲಧೇನುವನ್ನು ದಾನಮಾಡುವವನು ದೇವಾರ್ಹವಾದ ಸಕಲ ಭೋಗಗಳನ್ನೂ ಮತ್ತು ಮಾನವಸಹಜವಾದ ಭೋಗಗಳನ್ನೂ ಸಮೃದ್ಧಿಯಾಗಿ ಹೊಂದುವನು. ಅಲ್ಲದೆ ಸಂಪೂರ್ಣ ದೇಹಾರೋಗ್ಯವನ್ನೂ, ಸದಾ ಶಾಂತಿಯನ್ನೂ, ಮತ್ತು ಇತರ ಮನೋರಥಗಳೆಲ್ಲವನ್ನೂ ಪಡೆಯುವನು. ಇದರಲ್ಲಿ ಸಂಶಯವಿಲ್ಲ.

೧೫. ಓ ರಾಜೇಂದ್ರ! ಈ ಜಲಧೇನು ದಾನದ ವಿಷಯದಲ್ಲಿ, ತನ್ನ ಹಿಂದಿನ ಜನ್ಮವನ್ನು ಸ್ಮರಣೆಮಾಡಿಕೊಳ್ಳುವ ಶಕ್ತಿಯುಳ್ಳ ಮಹಾತ್ಮನಾದ ಮುದ್ಗಲನೆಂಬವನು ಹೇಳಿರುವ ಪ್ರಾಚೀನ ವೃತ್ತಾಂತವೊಂದನ್ನು ತಿಳಿಸುವೆನು ಕೇಳು.

೧೬. ಹಿಂದೆ ಮುದ್ಗಲನೆಂಬ ಬ್ರಾಹ್ಮಣನು ಒಂದುಸಲ ಯಮಲೋಕಕ್ಕೆ ತೆರಳಿದನು. ಮನನಶೀಲನಾದ ಮುದ್ಗಲನು ಅಲ್ಲಿ ಪಾಪಕೆಲಸಗಳನ್ನು ಮಾಡಿರುವ ಮಾನವರು ತಮ್ಮ ಪಾಪಕ್ಕನುಸಾರವಾಗಿ ಅನುಭವಿಸುತ್ತಿರುವ ಘೋರವಾದ ಯಾತನೆಗಳನ್ನು ದರ್ಶನಮಾಡಿದನು.

ದೀಪ್ತಾಗ್ನಿತೀಕ್ಷ್ಣಯಂತ್ರಸ್ಥಾಃ ಕ್ವಾಥತೈಲಮಯಾಸ್ತಥಾ ।
ಉಷ್ಣಕ್ಷಾರನದೀಪಾತಾ ಭೈರವಾಃ ಪುರುಷರ್ಷಭ ॥ ೧೭ ॥

ವ್ರಣಕ್ಷಾರನಿಪಾತೋಽಥ ಕುಂಭೀಪಾಕಮಹಾಲಯಾಃ ।
ತಾ ದೃಷ್ಟ್ವಾ ಯಾತನಾ ವಿಪ್ರಶ್ಚಕಾರ ಪರಮಾಂ ಕೃಪಾಂ ॥ ೧೮ ॥

ಆಹ್ಲಾದಂ ತೇ ತದಾ ಜಗ್ಮುಃ ಪಾಪಾಸ್ತದನುಕಂಪಯಾ ।
ತಂ ದೃಷ್ಟ್ವಾ ನಾರಕಾಃ ಕೇಚಿತ್ ಸ್ಥಿತ್ವಾ ತದವಲೋಕಿನಃ ॥ ೧೯ ॥

ತದವಸ್ಥಂ ವಿಲೋಕ್ಯಾಥ ಮುನಿರ್ನಾರಕಮಂಡಲಂ ।
ಧರ್ಮರಾಜಂ ಸ ಪಪ್ರಚ್ಛ ತೇಷಾಂ ಪ್ರಶಮಕಾರಣಂ ॥ ೨೦ ॥

---

೧೭-೧೮. ಪ್ರಜ್ವಲಿಸುತ್ತಿರುವ ಬೆಂಕಿ, ತೀಕ್ಷ್ಣವಾದ ಯಂತ್ರಗಳು, ಚೆನ್ನಾಗಿ ಕುದಿಯುತ್ತಿರುವ ಎಣ್ಣೆಯ ಕೊಪ್ಪರಿಗೆಗಳು, ಕುದಿಯುವ ನೀರಿನ ಭಯಂಕರವಾದ ನದಿಗಳು, ಉಪ್ಪುನೀರಿನ ನದಿಗಳು ಇವುಗಳಲ್ಲಿ ನಾನಾರೀತಿಯಿಂದ ಯಾತನೆಯನ್ನು ಅನುಭವಿಸುವವರನ್ನೂ, ಶರೀರದಲ್ಲಿ ವ್ರಣಗಳನ್ನು ಮಾಡಿ ಆ ಘಾಯಗಳಿಗೆ ಉಪ್ಪನ್ನು ಉಜ್ಜುವುದು, ಕುಂಭೀಪಾಕವೆಂಬ ಘೋರ ನರಕದಲ್ಲಿ ತಳ್ಳುವುದು, ಮುಂತಾದ ಕ್ರೂರಶಿಕ್ಷೆಯಿಂದ ಯಾತನೆಗಳನ್ನು ಅನುಭವಿಸುತ್ತಿರುವುದನ್ನೂ ಸಹ ನೋಡಿ ಆ ಮುದ್ಗಲನಿಗೆ ಆ ನರಕವಾಸಿಗಳ ಮೇಲೆ ತುಂಬಾ ದಯೆಯುಂಟಾಯಿತು.

೧೯-೨೦. ಹೀಗೆ ಆ ಮಹಾಪುರುಷನ ದಯೆಯು ಅವರ ಮೇಲೆ ಉಂಟಾದ್ದರಿಂದ ಈ ಪಾಪಿಗಳೆಲ್ಲರಿಗೂ ಅವರ ಘೋರವಾದ ಯಾತನೆಗಳೆಲ್ಲ ನಿವಾರಣೆಯಾಗಿ ಆನಂದವುಂಟಾಯಿತು. ಆಗ ಆ ನರಕವಾಸಿಗಳೆಲ್ಲರೂ ಇವನನ್ನೇ ನೋಡುತ್ತಾ ನಿಂತುಕೊಂಡರು. ಓ ಯುಧಿಷ್ಠಿರ! ನರಕವಾಸಿಗಳ ತಂಡವೆಲ್ಲ ಇದ್ದಕ್ಕಿದ್ದಹಾಗೆಯೇ ಹೀಗೆ ಆದದ್ದನ್ನು ನೋಡಿ ಆ ಮುದ್ಗಲಮುನಿಯು ಈರೀತಿ ಎಲ್ಲರಿಗೂ ಶಾಂತಿಯುಂಟಾಗಲು ಕಾರಣವೇನೆಂದು ಧರ್ಮರಾಜನೆನಿಸಿದ ಯಮನನ್ನು ಪ್ರಶ್ನೆಮಾಡಿದನು.

**ತಸ್ಮೈ ಚಾಚಷ್ಟ ರಾಜೇಂದ್ರ ತದಾ ವೈವಸ್ವತೋ ಯಮಃ ।**
**ಆಹ್ಲಾದಹೇತುಮಧಿಕಂ ನಾರಕಾಣಾಂ ನರೋತ್ತಮ ॥ ೨೦ ॥**

**ದಾನಾನುಭಾವಾತ್ಸರ್ವೇಷಾಂ ನಾರಕಾಣಾಂ ದ್ವಿಜೋತ್ತಮ ।**
**ಸಂಪ್ರವೃತ್ತೋಽಯಮಾಹ್ಲಾದಃ ಕಾರಣಂ ತಚ್ಛೃಣುಷ್ವ ಮೇ ॥೨೧॥**

**ತ್ವಯಾಭ್ಯರ್ಚ್ಯ ಜಗನ್ನಾಥಂ ಸರ್ವೇಶಂ ಜಲಶಾಯಿನಂ ।**
**ಜಲಧೇನುಃ ಪುರಾ ದತ್ತಾ ವಿಧಿವದ್ದ್ವಿಜಪುಂಗವ ॥ ೨೩ ॥**

**ತಸ್ಮಾತ್ತ್ವಜ್ಜನ್ಮನೋಽತೀತೇ ತೃತೀಯೇ ದ್ವಿಜಜನ್ಮನಿ ।**
**ತಸ್ಯ ದಾನಸ್ಯ ತೇ ವ್ಯುಷ್ಟಿರಿಯಮಾಹ್ಲಾದದಾಯಿನೀ ॥ ೨೪ ॥**

**ಯೇ ತ್ವಾಂ ಪಶ್ಯಂತಿ ಶೃಣ್ವಂತಿ ಯೇ ಚ ಧ್ಯಾಯಂತಿ ಮಾನವಾಃ ।**
**ಶೃಣೋಷಿ ಯಾಂಶ್ಚ ವಿಪ್ರೇಂದ್ರ ಯಾಂಶ್ಚ ಧ್ಯಾಯಸಿ ಪಶ್ಯಸಿ ॥ ೨೫ ॥**

---

೨೦. ಓ ರಾಜೇಂದ್ರ! ಆಗ ವೈವಸ್ವತಯಮನು, ಆ ನರಕವಾಸಿಗಳಾದ ಜನರಿಗೆ ಉಂಟಾದ ಅತಿಶಯವಾದ ಆನಂದಕ್ಕೆ ಕಾರಣವನ್ನು ಮುದ್ಗಲಮುನಿಗೆ ಹೀಗೆ ತಿಳಿಸಿದನು.

೨೧. ಎಲೈ ಬ್ರಾಹ್ಮಣೋತ್ತಮನೇ! ನೀನು ಮಾಡಿರುವ ದಾನದ ಮಹಿಮೆಯಿಂದ ಈ ನರಕವಾಸಿಗಳಾದ ಜನಗಳೆಲ್ಲರಿಗೂ ಈ ರೀತಿ ಆನಂದ ವುಂಟಾಗಿದೆ. ಇದಕ್ಕೆ ಕಾರಣವನ್ನು ತಿಳಿಸುವೆನು ಕೇಳು.

೨೩. ಓ ಬ್ರಾಹ್ಮಣೋತ್ತಮ! ಸರ್ವಜಗತ್ತಿಗೊಡೆಯನೂ, ಜಗನ್ನಾಥನೂ ಮತ್ತು ಯಾವಾಗಲೂ ನೀರಿನಲ್ಲೇ ಮಲಗಿರುವನೂ ಆದ ಶ್ರೀಮನ್ನಾರಾಯಣ ನನ್ನು ನೀನು ಭಕ್ತಿಯಿಂದ ಪೂಜಿಸಿ, ಅವನ ಪ್ರೀತ್ಯರ್ಥವಾಗಿ ವಿಧಿಪ್ರಕಾರ ಜಲಧೇನುವನ್ನು ದಾನಮಾಡಿದ್ದೀ.

೨೪. ಹಿಂದೆ ನಿನ್ನ ಮೂರನೆಯ ಬ್ರಾಹ್ಮಣಜನ್ಮದಲ್ಲಿ ನೀನು ಮಾಡಿದ ಆ ಜಲಧೇನು ದಾನಮಹಿಮೆಯಿಂದುಂಟಾದ ಪುಣ್ಯಸಮೂಹವೇ ಈಗ ಇವರೆಲ್ಲರಿಗೂ ಆನಂದವನ್ನುಂಟುಮಾಡುತ್ತಿದೆ.

೨೫–೨೬. ಎಲೈ ಬ್ರಾಹ್ಮಣಶ್ರೇಷ್ಠನೇ! ನಿನ್ನನ್ನು ದರ್ಶನಮಾಡುವವರೂ, ನಿನ್ನ ವಿಷಯವನ್ನು ಕೇಳುವವರೂ, ಯಾವಾಗಲೂ ನಿನ್ನನ್ನು ಧ್ಯಾನಿಸುವವರೂ,

**ನಿವೃತ್ತಿಃ ಪರಮಾ ತೇಷಾಂ ಸರ್ವಾಹ್ಲಾದಪ್ರದಾಯಿನೀ ।**
**ಸದ್ಯೋ ಭವತಿ ಮಾsತ್ರ ತ್ವಂ ದ್ವಿಜಾತೇ ಕುರು ವಿಸ್ಮಯಂ ॥ ೨೬ ॥**

**ಆಹ್ಲಾದಹೇತುಜನನಂ ನಾಸ್ತಿ ವಿಪ್ರೇಂದ್ರ ತಾದೃಶಂ ।**
**ಜಲಧೇನುರ್ಯಥಾ ನೄಣಾಂ ಜನ್ಮಾನ್ಯೇಕೋನವಿಂಶತಿಂ ॥ ೨೭ ॥**

**ನ ದೋಷೋ ನ ಜ್ವರೋ ನಾರ್ತಿರ್ನ ಕ್ಲಮೋ ದ್ವಿಜ ಜಾಯತೇ ।**
**ಅಪಿ ಜನ್ಮಸಹಸ್ರೇsಪಿ ಜಲಧೇನುಪ್ರದಾಯಿನಾಂ ॥ ೨೮ ॥**

**ಸ ತ್ವಂ ಗಚ್ಛ ಗೃಹೀತ್ವಾರ್ಘಮಸ್ಮತ್ತೋ ದ್ವಿಜಸತ್ತಮ ।**
**ಯೇಷಾಂ ಸಮಾಶ್ರಯಃ ಕೃಷ್ಣೇ ನ ನಿಯಮ್ಯಾ ಹಿ ತೇ ಮಯಾ ॥೨೯॥**

---

ಮತ್ತು ನಿನ್ನ ದರ್ಶನಕ್ಕೆ ತಾವಾಗಿಯೇ ಪಾತ್ರರಾಗುವವರೂ, ನಿನ್ನಿಂದ ಕೇಳಿ ತಿಳಿಯಲ್ಪಡುವವರೂ ಅಲ್ಲದೆ ನಿನ್ನ ಧ್ಯಾನವಿಷಯಕ್ಕೆ ಗೋಚರವಾಗುವವರೂ ಸಹ ಕೂಡಲೇ ಉತ್ಕೃಷ್ಟವಾದ ಆನಂದವನ್ನು ಪಡೆದು ಸುಖಲೋಲುಪರಾಗುವರು. ಓ ಬ್ರಾಹ್ಮಣೋತ್ತಮ! ಇದನ್ನು ಆಶ್ಚರ್ಯವೆಂದು ತಿಳಿಯಬೇಡ.

೨೭. ಓ ಬ್ರಾಹ್ಮಣಶ್ರೇಷ್ಠ! ಜಲಧೇನು ದಾನವು ಜನಗಳಿಗೆ ಮುಂದೆ ತಮ್ಮ ಹತ್ತೊಂಭತ್ತು ಜನ್ಮಗಳವರೆಗೂ ಮತ್ತಾವುದರಿಂದಲೂ ಹೊಂದಲಸಾಧ್ಯವಾದ ಆನಂದವನ್ನುಂಟುಮಾಡುತ್ತದೆ.

೨೮. ಈ ಜಲಧೇನುವನ್ನು ದಾನಮಾಡುವವರಿಗೆ ಮುಂದೆ ಸಾವಿರ ಜನ್ಮಗಳವರೆಗೂ ಯಾವ ದೋಷವೂ, ಜ್ವರಬಾಧೆಯೂ, ಪೀಡೆಗಳೂ, ಇತರ ಆಯಾಸಾದಿಗಳೂ ಸಹ ಉಂಟಾಗಲಾರವು.

೨೯. ಓ ಬ್ರಾಹ್ಮಣಾಗ್ರೇಸರ! ನೀನು ಶ್ರೀಕೃಷ್ಣಭಕ್ತನಾದುದರಿಂದ ನನ್ನಿಂದ ಪೂಜೆಯನ್ನು ಸ್ವೀಕರಿಸಿ ಮುಂದೆ ಪ್ರಯಾಣಮಾಡಬೇಕು. ಕೃಷ್ಣನನ್ನೇ ಆಶ್ರಯಿಸಿ ಸದಾ ಶ್ರೀಕೃಷ್ಣ ಭಜನೆಯಲ್ಲಿಯೇ ನಿರತರಾಗಿರುವ ಜನಗಳು ನನ್ನ ಯಾವ ವಿಧವಾದ ನಿಯಮಗಳಿಗೂ ಒಳಪಡಲಾರರು.

ಕೃಷ್ಣಸ್ತು ಪೂಜಿತೋ ಯೈಸ್ತು ಯೇ ಕೃಷ್ಣಾರ್ಥಮುಪೋಷಿತಾಃ ।
ಯೈಶ್ಚ ನಿತ್ಯಂ ಸ್ಮೃತಃ ಕೃಷ್ಣೋ ನ ತೇ ಮದ್ವಿಷಯೋಪಗಾಃ ॥ ೩೦ ॥

ನಮಃ ಕೃಷ್ಣಾಚ್ಯುತಾನಂತ ವಾಸುದೇವೇತ್ಯುದೀರಿತಂ ।
ಯೈರ್ಭಾವಭಾವಿತೈರ್ವಿಪ್ರ ನ ತೇ ಮದ್ವಿಷಯೋಪಗಾಃ ॥ ೩೧ ॥

ದಾನಂ ದದದ್ಭಿರ್ಯೈರುಕ್ತಮಚ್ಯುತಃ ಪ್ರೀಯತಾಮಿತಿ ।
ಶ್ರದ್ಧಾಪುರಃಸರೈರ್ವಿಪ್ರ ನ ತೇ ಮದ್ವಿಷಯೋಪಗಾಃ ॥ ೩೨ ॥

ಸ ಏವ ನಾಥಃ ಸರ್ವಸ್ಯ ತನ್ನಿಯೋಗಕರಾ ವಯಂ ।
ಜನಸಂಯಮನಶ್ಚಾಹಮಸ್ಮತ್ಸಂಯಮನೋ ಹರಿಃ ॥ ೩೩ ॥

---

೩೦. ಕೃಷ್ಣನನ್ನು ಸದಾ ಪೂಜಿಸುವವರೂ, ಕೃಷ್ಣನನ್ನುದ್ದೇಶಿಸಿ ಉಪವಾಸ ಮಾಡುವವರೂ, ಮತ್ತು ನಿತ್ಯವೂ ಶ್ರೀಕೃಷ್ಣನನ್ನು ಸ್ಮರಣೆಮಾಡುವವರೂ ಸಹ ನನ್ನ ನಿಯಮಗಳಿಗೆ ಒಳಪಡಬೇಕಾದುದಿಲ್ಲ.

೩೧. ಅಚ್ಯುತ, ಅನಂತ, ವಾಸುದೇವ ನಿನಗೆ ನಮಸ್ಕಾರ ಎಂದು ಸದಾ ಶ್ರೀಕೃಷ್ಣನ ನಾಮಸ್ಮರಣೆಮಾಡುವ ಮಾನವರು ನನ್ನ ನಿಯಮಕ್ಕೊಳಪಡ ಬೇಕಾದುದಿಲ್ಲ.

೩೨. ಎಲೈ ಬ್ರಾಹ್ಮಣಶ್ರೇಷ್ಠನೇ! ದಾನಮಾಡುವಾಗ ಶ್ರದ್ಧೆಯಿಂದ 'ನಾನು ಮಾಡುವ ಈ ದಾನದಿಂದ ನಾಶರಹಿತದಾದ ಶ್ರೀಕೃಷ್ಣನಿಗೆ ಸಂತೋಷ ವುಂಟಾಗಲಿ' ಎಂದು ಹೇಳುವ ಮಾನವರು ಈ ಯಮಲೋಕವನ್ನು ಹೊಂದ ಲಾರರು.

೩೩. "ಎಲೈ ಮುದ್ಗಲಮುನಿಯೇ! ಆ ಶ್ರೀಕೃಷ್ಣಪರಮಾತ್ಮನೇ ಸರ್ವ ಜಗತ್ತುಗಳಿಗೂ ಒಡೆಯನು. ನಾವೆಲ್ಲರೂ ಅವನಪ್ಪಣೆಯಂತೆ ನಡೆಯತಕ್ಕವರು. ನಾನು ಜನಗಳನ್ನು ಅವರ ಪಾಪಪುಣ್ಯಗಳಿಗನುಸಾರವಾಗಿ ನಿಗ್ರಹಿಸುತ್ತೇನೆ. ಆ ಶ್ರೀಕೃಷ್ಣನಾದರೋ ನನ್ನನ್ನೂ ನಿಗ್ರಹಿಸುವ ಸಾಮರ್ಥ್ಯವುಳ್ಳವನು" ಎಂದು ವೈವಸ್ವತಯಮನು ಮುದ್ಗಲಮುನಿಗೆ ತಿಳಿಸಿದನು.

**ಇತ್ಥಂ ನಿಶಮ್ಯ ವಚನಂ ಯಮಸ್ಯ ವದತೋಽಖಿಲಂ ।**
**ಊಚುಸ್ತೇ ನಾರಕಾಃ ಸರ್ವೇ ವಹ್ನಿಶಸ್ತ್ರಾರ್ಕಭೀರವಃ　　॥ ೩೪ ॥**

**ನಮಃ ಕೃಷ್ಣಾಯ ಹರಯೇ ವಿಷ್ಣವೇ ಜಿಷ್ಣವೇ ನಮಃ ।**
**ಹೃಷೀಕೇಶಾಯ ಕೇಶಾಯ ಜಗದ್ಧಾತ್ರೇಽಚ್ಯುತಾಯ ಚ　　॥ ೩೫ ॥**

**ನಮಃ ಪಂಕಜನೇತ್ರಾಯ ನಮಃ ಪಂಕಜನಾಭಯೇ ।**
**ಜನಾರ್ದನಾಯ ಶ್ರೀಶಾಯ ಶ್ರೀಭರ್ತ್ರೇ ಪೀತವಾಸಸೇ　　॥ ೩೬ ॥**

**ಗೋವಿಂದಾಯ ನಮೋ ನಿತ್ಯಂ ನಮಶ್ಶ್ಯೋದಧಿಶಾಯಿನೇ ।**
**ನಮಃ ಕಮಲನೇತ್ರಾಯ ನೃಸಿಂಹಾಯ ನಿನಾದಿನೇ　　॥ ೩೭ ॥**

---

೩೪. ಹೀಗೆ ಯಮಧರ್ಮರಾಜನು ಮುದ್ಗಲನಿಗೆ ಹೇಳುತ್ತಿದ್ದ ಶ್ರೀಕೃಷ್ಣ ನಾಮಮಹಿಮೆಯನ್ನು ಸಮಗ್ರವಾಗಿ ಲಾಲಿಸಿ, ಆ ನರಕದಲ್ಲಿ ಘೋರವಾದ ಬೆಂಕಿ, ಶಸ್ತ್ರಗಳು ಮತ್ತು ತೀಕ್ಷ್ಣಕಿರಣನಾದ ಸೂರ್ಯ ಇವರ ತಾಪಕ್ಕೆ ಹೆದರಿ ಬೆಂಡಾಗಿರುವ ಜನಗಳೆಲ್ಲರೂ ಮುಂದೆ ಹೇಳುವಂತೆ ಶ್ರೀಕೃಷ್ಣಭಗವಂತನ ನಾಮ ಸ್ಮರಣ ಮಾಡತೊಡಗಿದರು.

೩೫–೪೩. ಓಂ ಕೃಷ್ಣಾಯನಮಃ, ಎಲ್ಲರ ಮನಸ್ಸನ್ನೂ ಆಕರ್ಷಿಸುವ ಸ್ವಾಮಿಗೆ ನಮಸ್ಕಾರ. ಓಂ ಹರಯೇನಮಃ, ತನ್ನ ಭಕ್ತರ ಪಾಪಗಳನ್ನು ನಾಶಮಾಡುವ ಶ್ರೀಮನ್ನಾರಾಯಣನಿಗೆ ನಮಸ್ಕಾರ. ಓಂ ಜಿಷ್ಣವೇನಮಃ, ಜಯಶೀಲನಾದ ದೇವನಿಗೆ ನಮಸ್ಕಾರ. ಓಂ ಹೃಷೀಕೇಶಾಯನಮಃ, ಇಂದ್ರಿಯ ಗಳಿಗೆ ಸ್ವಾಮಿಯಾದ ದೇವನಿಗೆ ನಮಸ್ಕಾರ. ಓಂ ಕೇಶಾಯನಮಃ, ನೀರುಗಳಿಗೆ ಒಡೆಯನಾದ ಸ್ವಾಮಿಗೆ ನಮಸ್ಕಾರ. ಓಂ ಜಗದ್ಧಾತ್ರೇನಮಃ, ಸಕಲ ಪ್ರಪಂಚಗಳನ್ನೂ ತನ್ನ ಶಕ್ತಿಯಿಂದ ಧರಿಸಿರುವ ದೇವದೇವನಿಗೆ ಪ್ರಣಾಮ. ಓಂ ಅಚ್ಯುತಾಯನಮಃ, ಚ್ಯುತಿ ಅಥವಾ ನಾಶವಿಲ್ಲದ ನಿತ್ಯಸ್ವರೂಪನಾದ ದೇವ ನಿಗೆ ಪ್ರಣಾಮ. ಓಂ ಜನಾರ್ದನಾಯನಮಃ, ಜನಗಳನ್ನು ಅವರವರ ಪಾಪ ಪುಣ್ಯಗಳಿಗನುಸಾರವಾಗಿ ಶಿಕ್ಷಿಸುವ ಸ್ವಾಮಿಗೆ ನಮಸ್ಕಾರ. ಓಂ ಶ್ರೀಶಾಯ ನಮಃ, ಲಕ್ಷ್ಮೀಕಾಂತನಿಗೆ ನಮಸ್ಕಾರ. ಓಂ ಶ್ರೀಭರ್ತ್ರೇನಮಃ ಸದಾ ಲಕ್ಷ್ಮಿ ಯನ್ನು ತನ್ನ ವಕ್ಷಸ್ಥಲದಲ್ಲಿಯೇ ಧರಿಸಿರುವ ದೇವನಿಗೆ ನಮಸ್ಕಾರ ಓಂ ಪೀತವಾಸಸೇನಮಃ, ಪೀತಾಂಬರವನ್ನು ಧರಿಸಿರುವ ದೇವನಿಗೆ ಪ್ರಣಾಮ.

ಶಾರ್ಙ್ಗಿಣೇ ಶಿತಖಡ್ಗಾಯ ಶಂಖಚಕ್ರಗದಾಭೃತೇ ।
ನಮೋ ವಾಮನರೂಪಾಯ ಕ್ರಾಂತಲೋಕತ್ರಯಾಯ ಚ ॥ ೩೮ ॥

ವರಾಹರೂಪಾಯ ತಥಾ ನಮೋ ಯಜ್ಞಾಂಗಧಾರಿಣೇ ।
ವ್ಯಾಪ್ತಾಶೇಷದಿಗಂತಾಯಾನಂತಾಯ ಪರಮಾತ್ಮನೇ ॥ ೩೯ ॥

ವಾಸುದೇವ ನಮಸ್ತುಭ್ಯಂ ನಮಃ ಕೈಟಭಸೂದಿನೇ ।
ಕೇಶವಾಯ ನಮೋ ರಾಮ ನಮಸ್ತೇಽಸ್ತು ಮಹೀಧರ ॥ ೪೦ ॥

---

ಓಂ ಗೋವಿಂದಾಯನಮಃ, ಭೂದೇವಿಯನ್ನು ತನ್ನ ಸತಿಯಾಗಿ ಹೊಂದಿದವನು ಅಥವಾ ಗೋವುಗಳನ್ನು ಹೊಂದಿದವನು ಎನಿಸಿದ ಸ್ವಾಮಿಗೆ ನಮಸ್ಕಾರ. ಓಂ ಉದಧಿಶಾಯಿನೇನಮಃ, ಯಾವಾಗಲೂ ಸಮುದ್ರದಲ್ಲಿಯೇ ಮಲಗಿ ನಿದ್ರಿಸುವ ದೇವನಿಗೆ ನಮಸ್ಕಾರ. ಓಂ ಕಮಲನೇತ್ರಾಯನಮಃ, ತಾವರೆಯಂತೆ ಸುಂದರ ವಾದ ಕಣ್ಣುಗಳುಳ್ಳ ಸ್ವಾಮಿಗೆ ನಮಸ್ಕಾರ. ಓಂ ನರಸಿಂಹಾಯನಮಃ, ನರರೂಪವನ್ನೂ ಮತ್ತು ಸಿಂಹಾಕೃತಿಯನ್ನೂ ಸಹ ಜತೆಯಲ್ಲಿಯೇ ಹೊಂದಿ ಅವತರಿಸಿದ ಸ್ವಾಮಿಗೆ ನಮಸ್ಕಾರ. ಓಂ ನಿನಾದಿನೇನಮಃ, ಗಂಭೀರವಾದ ನಾದವುಳ್ಳ ದೇವನಿಗೆ ನಮಸ್ಕಾರ. ಓಂ ಶಾರ್ಙ್ಗಿಣೇನಮಃ, ಶಾರ್ಙ್ಗಯುಧ ವನ್ನು ಹಿಡಿದಿರುವ ಸ್ವಾಮಿಗೆ ನಮಸ್ಕಾರ. ಓಂ ಶಿತಖಡ್ಗಾಯನಮಃ, ಹರಿತ ವಾದ ಕತ್ತಿಯುಳ್ಳ ದೇವನಿಗೆ ಪ್ರಣಾಮ. ಓಂ ಶಂಖಚಕ್ರಗದಾಭೃತೇನಮಃ, ಶಂಖ, ಚಕ್ರ ಮತ್ತು ಗದೆ ಈ ಆಯುಧಗಳನ್ನು ಹಿಡಿದಿರುವ ಸ್ವಾಮಿಯನ್ನು ನಮಸ್ಕರಿಸುವೆನು. ಓಂ ವಾಮನರೂಪಾಯನಮಃ, ವಾಮನಾವತಾರವನ್ನು ತಾಳಿ ಬಲಿರಾಕ್ಷಸನಿಂದ ಭೂದಾನವನ್ನು ಪಡೆದ ದೇವನಿಗೆ ನಮಸ್ಕಾರ. ಓಂ ಕ್ರಾಂತಲೋಕತ್ರಯಾಯನಮಃ, ಸ್ವರ್ಗ, ಮರ್ತ್ಯ, ಪಾತಾಳವೆಂಬ ಮೂರು ಲೋಕಗಳನ್ನೂ ಆಕ್ರಮಿಸಿದ ಸ್ವಾಮಿಗೆ ನಮಸ್ಕಾರ. ಓಂ ವರಾಹರೂಪಾಯ ನಮಃ, ಹಂದಿಯ ರೂಪನ್ನು ತಾಳಿ ಹಿರಣ್ಯಾಕ್ಷನನ್ನು ನಿಗ್ರಹಿಸಿದ ದೇವನಿಗೆ ನಮಸ್ಕಾರ. ಓಂ ಯಜ್ಞಾಂಗಧಾರಿಣೇನಮಃ, ಯಾಗದ ಅಂಗಭೂತವಾದ ಅಗ್ನಿ ಪುರುಷ, ಹೋತೃ ಮುಂತಾದವರನ್ನೆಲ್ಲಾ ಧರಿಸಿರುವ ದೇವನಿಗೆ ನಮಸ್ಕಾರ. ಓಂ ವ್ಯಾಪ್ತಾಶೇಷದಿಗಂತಾಯನಮಃ, ಎಲ್ಲಾ ದಿಕ್ಕುಗಳ ಕೊನೆಯಲ್ಲಿಯೂ

**ನಮೋಽಸ್ತು ವಾಸುದೇವಾಯ ಹ್ಯೇವಮುಚ್ಚಾರಿತೇ ಚ ತೈಃ ।**
**ಶಸ್ತ್ರಾಣಿ ಕುಂಠತಾಂ ಜಗ್ಮುರನಲಶ್ಚಾಪಿ ಶೀತತಾಂ ॥ ೪೧ ॥**

**ಸಮಭಜ್ಯಂತ ವಸ್ತ್ರಾಣಿ ಸಮುತ್ಪೇತುರಯೋಮುಖಾಃ ।**
**ಸಂಶುಷ್ಕಾಃ ಕ್ಷಾರಸರಿತಃ ಪತಿತಃ ಶಾಲ್ಮಲಿದ್ರುಮಃ ॥ ೪೨ ॥**

**ಪ್ರಕಾಶಸ್ತಮಸೋ ಜಜ್ಞೇ ನರಕಾದ್ಭಾನುಭಿಃ ಸಹ ।**
**ಪವೌ ಚ ಯುಂಜನ್ಪವನೋಽಪ್ಯಸಿಪತ್ರವನೇ ತತಃ ॥ ೪೩ ॥**

---

ವ್ಯಾಪಿಸಿರುವ ಕೀರ್ತಿಯುಳ್ಳ ಸ್ವಾಮಿಗೆ ನಮಸ್ಕಾರ. ಓಂ ಅನಂತಾಯನಮಃ, ನಾಶವಿಲ್ಲದ ದೇವನಿಗೆ ನಮಸ್ಕಾರ. ಓಂ ಪರಮಾತ್ಮನೇನಮಃ, ಉತ್ಕೃಷ್ಟ ಸ್ವರೂಪನಾದ ಸ್ವಾಮಿಯೇ! ನಿನಗೆ ನಮಸ್ಕಾರ. ಓಂ ವಾಸುದೇವನಮಸ್ತುಭ್ಯಂ, ವಸುದೇವಸುತನಾದ ದೇವನೇ! ಇಗೋ ನಿನ್ನನ್ನು ನಮಸ್ಕರಿಸುವೆನು. ಓಂ ಕೈಟಭಸೂದಿನೇನಮಃ, ಕೈಟಭನೆಂಬ ರಾಕ್ಷಸನನ್ನು ಧ್ವಂಸಮಾಡಿದವನಿಗೆ ನಮಸ್ಕಾರ. ಓಂ ಕೇಶವಾಯನಮಃ, ಉತ್ತಮವಾದ ಕೂದಲುಳ್ಳವನು ಅಥವಾ ಬ್ರಹ್ಮ, ರುದ್ರರನ್ನು ಒಳಗೊಂಡವನು ಅಂದರೆ ಬ್ರಹ್ಮವಿಷ್ಣುಶಿವಾತ್ಮಕನಾದ ಸ್ವಾಮಿಗೆ ನಮಸ್ಕಾರ. ಓಂ ರಾಮಾಯನಮಃ, ಯೋಗಿಗಳ ಮನಸ್ಸನ್ನೆಲ್ಲಾ ತನ್ನ ವ್ಯಾಪಾರದಿಂದ ಆನಂದಗೊಳಿಸುವವನಿಗೆ ನಮಸ್ಕಾರ. ಓಂ ಮಹೀಧರಾಯ ನಮಃ, ಭೂಮಿಯನ್ನು ಧರಿಸಿರುವವನಿಗೆ ಪ್ರಣಾಮ. ನಮೋಽಸ್ತುವಾಸು ದೇವಾಯ, ವಸುದೇವನ ಕುಮಾರನಾದ ಶ್ರೀಕೃಷ್ಣನಿಗೆ ನಮಸ್ಕಾರ" ಎಂದು ಆ ನಕರವಾಸಿಗಳಾದ ಜನಗಳು ಭಗವನ್ನಾಮಪರಂಪರೆಯನ್ನು ಉಚ್ಚಾರ ಮಾಡಲಾಗಿ, ಅವರಿಗೆ ಹಿಂಸೆಕೊಡುತ್ತಿದ್ದ ಶಸ್ತ್ರಗಳೆಲ್ಲವೂ ಮೊಂಡಾಗಿ ಹೋದವು. ಉಗ್ರವಾದ ಜ್ವಾಲೆಯಿಂದ ಕೂಡಿದ ಅಗ್ನಿಯೂ ಸಹ ತಣ್ಣಗಾದನು. ವಿಷವಸ್ತ್ರ ಗಳೆಲ್ಲವೂ ಹರಿದುಹೋದವು. ಭರ್ಜಿಯೇ ಮೊದಲಾದ ಆಯುಧಗಳೆಲ್ಲವೂ ಬಿದ್ದುಹೋದವು. ಕ್ಷಾರನದಿಗಳು ಒಣಗಿಹೋದವು. ಮಹಾಭಯಂಕರವಾದ ಭೂರುಗವೃಕ್ಷವು ಬಿದ್ದುಹೋಯಿತು. ಆ ನರಕದಲ್ಲಿದ್ದ ಅಸಿಪತ್ರವನದಲ್ಲಿ ಅಡಗಿದ್ದ ಅಂಧಕಾರವೆಲ್ಲವೂ ತೊಲಗಿ ಕೋಟಿಸೂರ್ಯರಿಂದ ಪ್ರಕಾಶವುಂಟಾಯಿತು. ವಾಯುವೂ ಸಹ ಹಿತವಾಗಿ ಬೀಸತೊಡಗಿದನು.

**ನಿರುತ್ಸಾಹಾ ಜಡಧಿಯೋ ಬಭೂವುರ್ಯಮಕಿಂಕರಾಃ ।**
**ಜಾತಾ ಗಂಗಾಂಬುವಾಹಿನ್ಯಃ ಪೂಯಶೋಣಿತನಿಮ್ನಗಾಃ ॥ ೪೪ ॥**

**ದಿವ್ಯಃ ಸುಗಂಧಿಃ ಪವನೋ ಮನಃಪ್ರೀತಿಕರಸ್ತಥಾ ।**
**ವೇಣುವೀಣಾಸ್ವನಯುತಾಃ ಶಬ್ದಾಶ್ಚಾಸನ್ಮನೋರಮಾಃ ॥ ೪೫ ॥**

**ತಂ ತಾದೃಶಮಥಾಲಕ್ಷ್ಯ ತದಾ ವೈವಸ್ವತೋ ಯಮಃ ।**
**ಕ್ಷೀಣಪಾಪತ್ರಯಾಂಸ್ತಾಂಸ್ತು ಪಾದ್ಯಾರ್ಘ್ಯೈಃ ಸಮಪೂಜಯತ್॥೪೬॥**

**ಪೂಜಯಿತ್ವಾ ಚ ತಾನಾಹ ಕೃಷ್ಣಾಯ ಸ ಕೃತಾಂಜಲಿಃ ।**
**ಸಮಾಹಿತಮತಿರ್ಭೂತ್ವಾ ಧರ್ಮರಾಜೋ ನರೇಶ್ವರ ॥ ೪೭ ॥**

---

೪೪-೪೫. ಹೀಗಾದುದನ್ನು ನೋಡಿ ಯಮಭಟರೆಲ್ಲರೂ ತಮ್ಮ ಕಾರ್ಯದಲ್ಲಿ ಉತ್ಸಾಹವೇ ಇಲ್ಲದೆ ಮಂಕುಹಿಡಿದಂತಾದರು. ಮಾಂಸ, ರಕ್ತ, ಕೀವು ಮುಂತಾದವುಗಳಿಂದ ತುಂಬಿ ಹರಿಯುತ್ತಿದ್ದ ನದಿಗಳೆಲ್ಲವೂ ಪವಿತ್ರವಾದ ಗಂಗಾ ನದಿಯ ನೀರಿನಿಂದ ತುಂಬಿ ಹರಿಯತೊಡಗಿದವು. ಸುಗಂಧಭರಿತವಾದ ದಿವ್ಯ ಮಂದಮಾರುತವು ಮನಸ್ಸಿಗೆ ಪ್ರೀತಿಯನ್ನುಂಟುಮಾಡುವಂತೆ ಬೀಸಲಾರಂಭಿಸಿತು. ಅದೇ ಸಮಯದಲ್ಲಿ ಮನೋಹರವಾದ ಕೊಳಲು ಮತ್ತು ವೀಣೆ ಇವುಗಳ ಮಧುರವಾದ ನಾದವು ಕೇಳತೊಡಗಿತು.

೪೬. ಈ ರೀತಿ ಆದುದನ್ನು ನೋಡಿ ಆ ನರಕವಾಸಿಗಳಾಗಿದ್ದವರೆಲ್ಲರೂ ಸಕಲ ತಾಪತ್ರಯದಿಂದಲೂ ಮುಕ್ತರಾಗಿರುವರೆಂದು ವೈವಸ್ವತ ಯಮನು ತಿಳಿದು ಅವರನ್ನು ಅರ್ಘ್ಯಪಾದ್ಯಾಚಮನೀಯಾದಿಗಳಿಂದ ಪೂಜೆ ಮಾಡಿದನು.

೪೭. ಓ ರಾಜನೇ! ಹೀಗೆ ಎಲ್ಲರನ್ನು ಪೂಜೆಮಾಡಿದಮೇಲೆ ನೆಟ್ಟಮನಸ್ಸಿನಿಂದ ಶ್ರೀಕೃಷ್ಣಪರಮಾತ್ಮನಿಗೆ ಕೈಮುಗಿದು ನಮಸ್ಕರಿಸಿ, ಆ ನರಕವಾಸಿಗಳನ್ನು ಕುರಿತು ಯಮಧರ್ಮರಾಜನು ಹೀಗೆಂದನು.

ವಿಷ್ಣೋ ದೇವ ಜಗದ್ಧಾತರ್ಜನಾರ್ದನ ಜಗತ್ಪತೇ ।
ಪ್ರಣಾಮಂ ಯೇಽಪಿ ಕುರ್ವಂತಿ ತೇಷಾಮಪಿ ನಮೋನಮಃ ॥ ೪೮ ॥

ಅಚ್ಯುತಾಯಾಪ್ರಮೇಯಾಯ ಮಾಯಾವಾಮನರೂಪಿಣೇ ।
ಪ್ರಣಾಮಂ ಯೇಽಪಿ ಕುರ್ವಂತಿ ತೇಷಾಮಪಿ ನಮೋ ನಮಃ ॥ ೪೯ ॥

ನಮಸ್ತೇ ವಾಸುದೇವಾಯ ಧೀಮತೇ ಪುಣ್ಯಕೀರ್ತಯೇ ।
ಪ್ರಣಾಮಂ ಯೇ ಚ ಕುರ್ವಂತಿ ತೇಷಾಮಪಿ ನಮೋ ನಮಃ ॥ ೫೦ ॥

ತಸ್ಯ ಯಜ್ಞವರಾಹಸ್ಯ ವಿಷ್ಣೋರಮಿತತೇಜಸಃ ॥ ೫೧ ॥

ಏವಂ ಸ್ತುತ್ವಾ ಹೃಷೀಕೇಶಂ ಧರ್ಮರಾಜಸ್ಯ ಪಶ್ಯತಃ ।
ವಿಮಾನವರಮಾರುಹ್ಯ ನಾರಕಾಸ್ತ್ರಿದಿವಂ ಯಯುಃ ॥ ೫೨ ॥

---

೪೮. "ಓ ಸರ್ವವ್ಯಾಪಕನಾದ ದೇವನೇ ! ನೀನು ಜಗತ್ಸೃಷ್ಟಿಕರ್ತನು, ದುಷ್ಟಶಿಕ್ಷಣ ಶಿಷ್ಟಪರಿಪಾಲನಮಾಡುವವನು. ಎಲೈ ಜಗದೊಡೆಯನೇ ! ನಿನ್ನನ್ನು ನಮಸ್ಕರಿಸುವೆನು" ಎಂದು ಶ್ರೀಕೃಷ್ಣನಿಗೆ ಪ್ರಣಾಮಮಾಡುವವರಿಗೆ ನನ್ನ ನಮಸ್ಕಾರ.

೪೯. ನಾಶರಹಿತನೂ, ಪ್ರಮಾಣಕ್ಕೆ ಗೋಚರವಾಗದವನೂ, ತನ್ನ ಮಾಯೆಯಿಂದ ವಾಮನರೂಪವನ್ನು ತಾಳಿದವನೂ ಆದ ಪರಮಾತ್ಮನನ್ನು ನಮಸ್ಕರಿಸುವರಿಗೆ ನಾನು ಪ್ರಣಾಮಮಾಡುವೆನು.

೫೦. ವಸುದೇವಕುಮಾರನೂ, ಮೇಧಾವಿಯೂ, ಪುಣ್ಯಕೀರ್ತಿಯುಳ್ಳವನೂ ಆದ ಶ್ರೀಕೃಷ್ಣನಿಗೆ ಪ್ರಣಾಮಮಾಡಿದವರಿಗೆ ನನ್ನ ನಮಸ್ಕಾರ.

೫೧. ಯಜ್ಞವರಾಹರೂಪನೂ, ಅಸಾಧಾರಣವಾದ ತೇಜಸ್ಸುಳ್ಳವನೂ ಆಗಿ ಸರ್ವವ್ಯಾಪಕನಾಗಿರುವ ಮಹಾವಿಷ್ಣುವನ್ನು ನಮಸ್ಕಾರಮಾಡುವ ಮಾನವರಿಗೆ ನನ್ನ ಪ್ರಣಾಮಗಳು.

೫೨. ಯಮನು ಹೀಗೆ ಹೇಳುತ್ತಾ ನೋಡುತ್ತಿರುವಲ್ಲಿ ಆ ನರಕವಾಸಿಗಳಾಗಿದ್ದ ಜನಗಳು ಇಂದ್ರಿಯಗಳಿಗಧಿಪತಿಯಾದ ಶ್ರೀಕೃಷ್ಣನನ್ನು ಸ್ತೋತ್ರಮಾಡಿ, ಎಲ್ಲರೂ ಉತ್ತಮವಾದ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳಿದರು.

ಮುದ್ಗಲೋಽಪಿ ಮಹಾಬುದ್ಧಿರ್ದೃಷ್ಟ್ವೈತದಖಿಲಂ ನೃಪ ।
ಜಾತಿಸ್ಮರೋಽಭವದ್ವಿಪ್ರಃ ಕಣ್ವಗೋತ್ರೇ ಮಹಾಮುನಿಃ ॥ ೫೩ ॥

ಸಂಸ್ಮೃತ್ಯ ಯಮವಾಕ್ಯಾನಿ ವಿಷ್ಣೋರ್ಮಾಹಾತ್ಮ್ಯಮೇವ ಚ ।
ಜಲಧೇನೋಸ್ತು ಮಾಹಾತ್ಮ್ಯಂ ಸಂಸ್ಮೃತ್ಯೇದಮಗಾಯತ ॥ ೫೪ ॥

ಅಹೋ ಸುದುಸ್ತರಾ ವಿಷ್ಣೋರ್ಮಾಯೇಯಮತಿಗಹ್ವರೀ ।
ಯಯಾ ಮೋಹಿತಚಿತ್ತಸ್ತು ನ ವೇತ್ತಿ ಪರಮೇಶ್ವರಂ ॥ ೫೫ ॥

ಜೀವೋ ಗಚ್ಛತಿ ಕೀಟತ್ವಂ ಯೂಕಾಮತ್ಕುಣಯೋನಿತಾಂ ।
ತಸ್ಮಾದ್ದ್ರುಮಲತಾದೀನಾಂ ಯೋನಿಂ ತಸ್ಮಾಚ್ಚ ಪಕ್ಷಿಣಾಂ ॥ ೫೬ ॥

---

೫೩. ಮಹಾಬುದ್ಧಿಯಾದ ಮುದ್ಗಲಮುನಿಯೂ ಸಹ ಇವೆಲ್ಲವನ್ನೂ ನೋಡಿ, ತಾನು ಹಿಂದೆ ಕಣ್ವಗೋತ್ರದಲ್ಲಿ ಜನಿಸಿ ಮಹಾಮುನಿಯೆನಿಸಿಕೊಂಡಿದ್ದ ಪೂರ್ವಜನ್ಮದ ಸ್ಮರಣೆಮಾಡಿಕೊಳ್ಳುವ ಸಾಮರ್ಥ್ಯವುಳ್ಳವನಾದನು.

೫೪. ಮಹಾಮುನಿಯೆನಿಸಿದ ಈ ಮುದ್ಗಲಋಷಿಯು ಯಮನ ವಾಕ್ಯಗಳನ್ನೂ, ವಿಷ್ಣುವಿನ ಮಾಹಾತ್ಮ್ಯವನ್ನೂ ಮತ್ತು ಜಲಧೇನುವಿನ ಮಹಿಮೆಯನ್ನೂ ಸ್ಮರಿಸಿಕೊಂಡು ಮುಂದೆ ಹೇಳುವಂತೆ ಗಾನಮಾಡಿದನು.

೫೫. ವಿಷ್ಣುವಿನ ಮಾಯೆಯು ತುಂಬಾ ಗಂಭೀರವಾದುದು. ಇದನ್ನು ತಿಳಿವುದು ಬಹಳ ಕಷ್ಟಕರವಾಗಿರುವುದು. ಈ ವಿಷ್ಣುಮಾಯೆಯಿಂದ ಮೋಹಗೊಂಡಿರುವ ಮನಸ್ಸುಳ್ಳ ಮಾನವನು ಪರಮೇಶ್ವರನನ್ನೇ ತಿಳಿಯಲಾರನು. ಈ ಮಹಾವಿಷ್ಣುವಿನ ಮಾಯೆಯು ಅತ್ಯದ್ಭುತವಾದುದು.

೫೬. ಈ ವಿಷ್ಣುಮಾಯೆಯಿಂದ ಜೀವನು ಮೋಹಿತನಾಗಿ ಕೀಟಜನ್ಮವನ್ನು ಪಡೆಯುವನು. ಅನಂತರ ಹೇನು, ಕೂರೆ ಮುಂತಾದ ಪ್ರಾಣಿಗಳ ಜನ್ಮವನ್ನೂ, ಆಮೇಲೆ ತಿಗಣೆಯ ಜನ್ಮವನ್ನೂ ತಾಳುವನು. ತಿಗಣೆಯ ಜನ್ಮದಿಂದ ಮರ ಮತ್ತು ಬಳ್ಳಿಗಳ ಜನ್ಮವನ್ನೂ ಆಮೇಲೆ ಪಕ್ಷಿಜನ್ಮವನ್ನೂ ಹೊಂದುವನು.

**ತತಶ್ಚ ಪಶುತಾಂ ಪ್ರಾಪ್ಯ ನರಶ್ಚಾನುಭಿವಾಂಛತಿ ।
ತತೋ ಮನುಷ್ಯತಾಂ ಪ್ರಾಪ್ಯ ನರೋ ಯೋನಿಂ ಕೃತಾತ್ಮನಾಂ ।
ತಾಂ ಪ್ರಾಪ್ಯ ಚ ಶ್ರಿಯಂ ಪರಾಂ ನರೋ ಮಾಯಾವಿಮೋಹಿತಃ॥೫೭॥**

**ದುಸ್ತರಾಪಿ ಸುಸಾಧ್ಯಾ ಸಾ ಮಾಯಾ ಕೃಷ್ಣಸ್ಯ ಮೋಹಿನೀ ।
ವಿದ್ಯತೇ ಸಾ ಮನೋನ್ಯಸ್ತಾ ಮುಧ್ಯೈವ ಮಧುಸೂದನೇ　　॥ ೫೮ ॥**

**ಅವಾಪ್ಯೈವಂ ಚ ಗಾರ್ಹಸ್ಥ್ಯಮವಾಪ್ಯೈವಂ ಚ ತತ್ಪರಂ ।
ಭಿನತ್ತಿ ವೈಷ್ಣವೀಂ ಮಾಯಾಂ ಕೇಶವಾರ್ಪಿತಮಾನಸಃ　　॥ ೫೯ ॥**

**ಅವಿರೋಧೇನ ವಿಷಯಾನ್ಭುಂಜನ್ವಿಷ್ಣುಂ ಸಮಾಶ್ರಯೇತ್ ।
ಭುಕ್ತ್ವಾ ನರಸ್ತರತ್ಯೇನಾಂ ವಿಷ್ಣೋರ್ಮಾಯಾಂ ಸುದುಸ್ತರಾಂ ॥೬೦॥**

---

೫೭. ಅನಂತರ ಪಕ್ಷಿಜನ್ಮದಿಂದ ಪಶುಜನ್ಮವು ಲಭಿಸುವುದು. ಅಲ್ಲಿಂದ ಮುಂದೆ ಮಾನವಜನ್ಮವನ್ನು ಅಪೇಕ್ಷಿಸುವನು. ಮನುಷ್ಯಜನ್ಮವೆತ್ತಿ ಕೃತಕೃತ್ಯನಾದ ಮೇಲೂ ಅತಿಶಯವಾದ ಐಶ್ವರ್ಯದ ಬಲೆಗೆ ಬಿದ್ದು, ಪುನಃ ವಿಷ್ಣುವಿನ ಮಾಯೆಗೆ ಬೆರಗಾಗಿ ಮೋಹಿತನಾಗುವನು.

೫೮ ಜಗನ್ಮೋಹಕವಾದ ಶ್ರೀಕೃಷ್ಣನ ಮಾಯೆಯು ಮೀರಲು ಅಸಾಧ್ಯವಾದರೂ ಮಧುಸೂದನನೆನಿಸಿದ ಶ್ರೀಕೃಷ್ಣನನ್ನು ಮನಃಪೂರ್ವಕವಾಗಿ ಧ್ಯಾನ ಮಾಡಿದರೆ ಅದನ್ನು ಸುಲಭವಾಗಿಯೇ ದಾಟಬಹುದು.

೫೯. ಗೃಹಸ್ಥಾಶ್ರಮವನ್ನು ಹೊಂದಿದ್ದರೂ ಅಥವಾ ಅದಕ್ಕಿಂತಲೂ ಉತ್ಕೃಷ್ಟವಾದ ವಾನಪ್ರಸ್ಥ ಮತ್ತು ಸನ್ಯಾಸಾದ್ಯಾಶ್ರಮಗಳಲ್ಲಿದ್ದರೂ ಮಾನವನು ಕೇಶವನಲ್ಲಿ ಭಕ್ತಿಪೂರ್ವಕವಾಗಿ ಮನಸ್ಸಿಟ್ಟು ಧ್ಯಾನಮಾಡಿದರೆ ಆ ವಿಷ್ಣುಮಾಯೆಯೆಲ್ಲವೂ ನಾಶವಾಗುವುದು.

೬೦. ಮಾನವನು ಕಾಮಕ್ರೋಧಾದಿ ವಿಷಯಗಳನ್ನು ವಿರೋಧವಿಲ್ಲದಂತೆ ಅನುಭವಿಸುತ್ತಿರುವಾಗಲೂ ಮಹಾವಿಷ್ಣುವನ್ನು ಆಶ್ರಯಿಸಿದರೆ ಅತ್ಯಂತ ದುಸ್ತರವಾದ ಈ ವಿಷ್ಣುಮಾಯೆಯನ್ನು ದಾಟುತ್ತಾನೆ.

**ಈ ದೃಗ್ಬಹುಫಲಾ ಭಕ್ತಿಃ ಸರ್ವಧಾತರಿ ಕೇಶವೇ |**
**ಮಾಯಯಾ ತಸ್ಯ ದೇವಸ್ಯ ತಾಂ ನ ಕುರ್ವಂತಿ ಮೋಹಿತಾಃ || ೬೧ ||**

**ಮುಧೈವೋಕ್ತಂ ಸುಧಾಪಾನಂ ಮುಧಾ ತದ್ಧಿ ವಿಚೇಷ್ಟಿತಂ |**
**ಮುಧೈವ ಜನ್ಮ ತನ್ನಷ್ಟಂ ಯತ್ರ ನಾರಾಧಿತೋ ಹರಿಃ || ೬೨ ||**

**ಆರಾಧಿತೋ ಹಿ ಯಃ ಪುಂಸಾಮೈಹಿಕಾಮುಷ್ಮಿಕಂ ಫಲಂ |**
**ದದಾತಿ ಭಗವಾನ್ದೇವಃ ಕಸ್ತಂ ನ ಪ್ರತಿಪೂಜಯೇತ್ || ೬೩ ||**

**ಸಂವತ್ಸರಾಸ್ತಥಾ ಮಾಸಾ ವಿಫಲಾ ದಿವಸಾಶ್ಚ ತೇ |**
**ನರಾಣಾಂ ವಿಷಯಾಂಧಾನಾಂ ಯೈಸ್ತು ನಾರಾಧಿತೋ ಹರಿಃ || ೬೪ ||**

---

೬೧. ಸರ್ವ ಜಗನ್ನಿಯಾಮಕನಾದ ಕೇಶವನಲ್ಲುಂಟಾಗುವ ಭಕ್ತಿಯು ಈರೀತಿ ಅನೇಕ ಫಲಗಳನ್ನು ಕೊಡುವುದು. ಹೀಗಿದ್ದರೂ ಆ ದೇವದೇವನ ಮಾಯೆಯಿಂದ ಮೋಹಗೊಂಡು ಇದನ್ನರಿಯದ ಜನಗಳು ಭಕ್ತಿಮಾರ್ಗವನ್ನು ಹೊಂದಲಾರರು.

೬೨. ಅಮೃತವನ್ನೇ ಪಾನಮಾಡಿದರೂ, ದಿವ್ಯಸುಖಗಳನ್ನೇ ಅನುಭವಿಸಿದರೂ, ವಿಷ್ಣುವನ್ನು ಪೂಜಿಸದ ಮಾನವನ ಜನ್ಮವು ವ್ಯರ್ಥವೆಂದೇ ತಿಳಿಯಬೇಕು. (ವಿಷ್ಣುಭಕ್ತನ ಸುಖಾನಂದಾದಿಗಳು ಈ ಸುಧಾಪಾನಾದಿಗಳಿಂದ ದೊರೆಯಲಾರವೆಂದು ಭಾವವು.)

೬೩. ತನ್ನನ್ನು ಪೂಜಿಸಿದ ಪುರುಷರಿಗೆ ಐಹಿಕ ಫಲಗಳನ್ನೂ ಮುಂದೆ ಪರಲೋಕದಲ್ಲಿ ಉತ್ತಮವಾದ ಸ್ಥಾನವನ್ನೂ ಕೊಟ್ಟು ಉದ್ಧಾರಮಾಡುವಾಗ ಆ ದೇವನನ್ನು ಪೂಜೆಮಾಡದೆ ಉಂಟೇ ?

೬೪. ವಿಷಯಸುಖದಲ್ಲಿ ಮುಂದುಗಾಣದವರಾಗಿ ಹರಿಯನ್ನಾರಾಧಿಸದ ಜನರಿಗೆ ತಮ್ಮ ಆಯುಸ್ಸಿನಲ್ಲಿ ಆ ಭೋಗಾಸಕ್ತಿಯಲ್ಲಿ ಕಳೆದುಹೋದ ವರ್ಷಗಳೂ, ತಿಂಗಳುಗಳೂ ಮತ್ತು ದಿವಸಗಳೂ ಇವೆಲ್ಲಾ ಕೇವಲ ವ್ಯರ್ಥವೇ ಸರಿ.

ಯೋ ನ ವಿತ್ತರ್ಧಿವಿಭವೈರ್ನ ವಾಸೋಭಿರ್ನ ಭೂಷಣೈಃ ।
ತುಷ್ಯತೇ ಹೃದಯೇನೈವ ಕಸ್ತಮೀಶಂ ನ ಪೂಜಯೇತ್ ॥ ೬೫ ॥

ಜಲಧೇನೋಸ್ತು ಮಾಹಾತ್ಮ್ಯಂ ನಿಶಮ್ಯೇದೃಗ್ವಿಧಂ ನರಾಃ ।
ನಾತ್ರ ಯಚ್ಛಂತಿ ತೇಷಾಂ ವೈ ವಿವೇಕಃ ಕುತ್ರ ತಿಷ್ಠತಿ ॥ ೬೬ ॥

ಕರ್ಮಭೂಮೌ ಹಿ ಮಾನುಷ್ಯಂ ಜನ್ಮನಾಮಯುತೈರಪಿ ।
ಸ್ವರ್ಗಾಪವರ್ಗಫಲದಂ ಕದಾಚಿತ್ಪ್ರಾಪ್ಯತೇ ನರೈಃ ॥ ೬೭ ॥

ಸಂಪ್ರಾಪ್ಯ ಚ ನ ಯೈರ್ವಿಷ್ಣುಸ್ತೋಷಿತೋ ಜಲಧೇನುನಾ ।
ತೇ ಜನಾ ಭ್ರಷ್ಟಜನ್ಮಾನೋ ವಂಚಿತಾಸ್ತಸ್ಯ ಮಾಯಯಾ ॥ ೬೮ ॥

---

೬೫. ಅತುಲವಾದ ಐಶ್ವರ್ಯ ಸಂಪತ್ತುಗಳಿಂದಲೂ, ಅಮೂಲ್ಯವಾದ ವಸ್ತ್ರಾಭರಣಗಳಿಂದಲೂ ಸಹ ಪರಮಾತ್ಮನು ಎಂದಿಗೂ ತೃಪ್ತಿಹೊಂದಲಾರನು. ಕೇವಲ ಭಕ್ತಿಪೂರ್ವಕವಾದ ಮನಸ್ಸಿನಿಂದ ಮಾತ್ರ ತೃಪ್ತನಾಗಿ ಒಲಿಯುವ ನಾದ್ದರಿಂದ ಇಂತಹ ಭಕ್ತಿಭಾವದಿಂದ ಪರಮಾತ್ಮನನ್ನು ಪೂಜಿಸಿ ಒಲಿಸಿಕೊಳ್ಳು ವುದು ನಮ್ಮ ಕರ್ತವ್ಯವಲ್ಲವೇ ?

೬೬. ಜಲಧೇನುವಿನ ಇಷ್ಟು ಅದ್ಭುತವಾದ ಮಾಹಾತ್ಮ್ಯವನ್ನು ತಿಳಿದೂ ಈ ಜನ್ಮದಲ್ಲಿ, ಈ ಜಲಧೇನುವನ್ನು ವಿಧಿಪೂರ್ವಕವಾಗಿ ಸದ್ಬ್ರಾಹ್ಮಣನಿಗೆ ದಾನ ಮಾಡದೆ ಹೋಗುವ ಮಾನವರ ಅವಿವೇಕಕ್ಕೆ ಎಣೆಯುಂಟೇ ?

೬೭. ಕರ್ಮಭೂಮಿಯೆನಿಸಿದ ಈ ಭಾರತದೇಶದಲ್ಲಿ ಸ್ವರ್ಗಮೋಕ್ಷಾದಿ ಸದ್ಗತಿಸಾಧಕವಾದ ನರಜನ್ಮವು ದೊರೆಯಬೇಕಾದರೆ ಅದಕ್ಕೆ ಮುಂಚೆ ಹತ್ತು ಸಾವಿರ ಜನ್ಮಗಳು ಕಳೆಯಬೇಕು. ಅನೇಕ ಜನ್ಮಗಳು ಕಳೆದ ಮೇಲೆ ಎಲ್ಲೋ ಒಂದುಬಾರಿ ಅದು ದೊರೆಯಬಹುದು.

೬೮. ಹಾಗೆ ಒಂದುವೇಳೆ ದೊರೆತರೂ, ಉತ್ಕೃಷ್ಟವಾದ ಮಾನವಜನ್ಮದಲ್ಲಿ ಜಲಧೇನುವನ್ನು ದಾನಮಾಡಿ ವಿಷ್ಣುವಿಗೆ ಸಂತೋಷವುಂಟುಮಾಡದವರು ನಿಜವಾಗಿಯೂ ವಿಷ್ಣುಮಾಯೆಯಿಂದ ವಂಚಿತರಾಗಿ ತಮ್ಮ ಜನ್ಮವನ್ನೇ ನಿಷ್ಫಲ ಮಾಡಿಕೊಳ್ಳುವರು.

ಊರ್ಧ್ವಬಾಹುರ್ವಿರೌಮ್ಯೇಷ ದೃಷ್ಟಲೋಕದ್ವಯೋಽಸ್ಮಿ ಭೋಃ ।
ಆರಾಧಯಧ್ವಂ ಗೋವಿಂದಂ ಜಲಧೇನುಂ ಪ್ರಯಚ್ಛತ ॥ ೬೯ ॥

ದುಃಸಹೋ ನಾರಕೋ ವಹ್ನಿರವಿಷಹ್ಯಾ ಚ ಯಾತನಾ ।
ಜ್ಞಾತಂ ಮಯ್ಯೈತದಾಲಂಬ್ಯ ಕೃಷ್ಣಂ ಭವತಿ ನಿಶ್ಚಲಃ ॥ ೭೦ ॥

ಆದೇಶಿಕೋ ದೇಶಿಕೋ ಹಿ ಯಮಮಾರ್ಗೇ ಸುದುಸ್ತರೇ ।
ವಿಚಿಂತ್ಯ ವಸ್ತ್ವತ್ಯಮೇತನ್ಮನಃ ಕೃಷ್ಣೇ ನಿವೇಶ್ಯತಾಂ ॥ ೭೧ ॥

ಇಷ್ಟೇನ ಕಿಂ ಕ್ರತುಶತೇನ ಸುದುಷ್ಕರೇಣ ।
ಕ್ಲೇಶಾಧಿಕೇನ ಸುಕೃತೈರ್ನಿಯಮೈರ್ವ್ರತೈಶ್ಚ ॥

---

೬೯. ಓ ಮಾನವರೇ! ಮರ್ತ್ಯಲೋಕವನ್ನೂ ಯಮಲೋಕವನ್ನೂ ಕಣ್ಣಾರ ನೋಡಿರುವ ನಾನು ಕೈಯೆತ್ತಿ ಸಾರಿಸಾರಿ ಹೇಳುವೆನು. ಗೋವಿಂದನನ್ನು ಪೂಜಿಸಿ. ಜಲಧೇನುವನ್ನು ದಾನಮಾಡಿರಿ.

೭೦. ನರಕದಲ್ಲಿ ಆಗುವ ಯಾತನೆಗಳು ಭಯಂಕರವಾದುವು. ಸಹಿಸಲಸಾಧ್ಯವೆಂದು ತಿಳಿಯಿರಿ. ನರಕಾಗ್ನಿಯು ಅತಿ ತೀವ್ರವಾಗಿರುವುದು. ಇದನ್ನು ನಾನು ಪ್ರತ್ಯಕ್ಷವಾಗಿ ತಿಳಿದಿರುವೆನು. ಮಾನವನು ಶ್ರೀಕೃಷ್ಣಭಗವಂತನನ್ನು ಆಶ್ರಯಿಸಿ ಭಕ್ತಿಯಿಂದ ಪೂಜಿಸಿದರೆ ಈ ನರಕಯಾತನೆಗಳು ಉಂಟಾಗದೆ ಶಾಂತಚಿತ್ತನಾಗುವನು.

೭೧. ಅತ್ಯಂತ ಭಯಂಕರವಾದ ಯಮಲೋಕಮಾರ್ಗದಲ್ಲಿ ಆ ಜಗದ್ಗುರುವಾದ ಶ್ರೀಕೃಷ್ಣನೇ 'ಹೀಗೆ ಮಾಡಿರಿ ನಿಮಗೆ ಒಳ್ಳೆಯದಾಗುವುದು' ಎಂದು ಉಪದೇಶಮಾಡುತ್ತಾನೆ. ಆದುದರಿಂದ ಎಲೈ ಮಾನವರೇ! ಇದನ್ನು ಸತ್ಯವೆಂದು ತಿಳಿದು ನಿಮ್ಮ ಮನಸ್ಸನ್ನು ಸದಾ ಶ್ರೀಕೃಷ್ಣನಲ್ಲಿಯೇ ನೆಲಸುವಂತೆ ಮಾಡಿರಿ.

೭೨. ತುಂಬಾ ಶ್ರಮಸಾಧ್ಯವಾದ ನೂರಾರು ಯಾಗಗಳನ್ನು ಮಾಡಿ ತುಂಬಾ ಕ್ಲೇಶದಿಂದಲೂ ವ್ರತನಿಯಮದಿಂದಲೂ ಪಡೆದ ಸುಕೃತಗಳಿಂದ ಏನೂ

**ದತ್ವಾ ದ್ವಿಜಾಯ ಪಿತೃರಾಜಗೃಹಂ ಗತಸ್ಯ |**
**ಹ್ಯೇಕಾಪಿ ಗೌರ್ಜಲಮಯೀ ಸುಖಮಾತನೋತಿ　　|| ೭೨ ||**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಜಲಧೇನು ದಾನವಿಧಿವರ್ಣನಂ ನಾಮತ್ರಿಪಂಚಾಶದುತ್ತರಶತತಮೋऽಧ್ಯಾಯಃ.**



---

ಪ್ರಯೋಜನವಿಲ್ಲ. ಒಂದೇ ಒಂದು ಜಲಧೇನುವನ್ನು ಭಕ್ತಿಯಿಂದ ಬ್ರಾಹ್ಮಣೋತ್ತಮನಿಗೆ ದಾನಮಾಡಿದರೆ ಯಮಲೋಕವನ್ನೈದಿದರೂ ಆತನಿಗೆ ಅತಿಶಯವಾದ ಸುಖವುಂಟಾಗುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಜಲಧೇನುವಿನ ದಾನವ್ರತ ವಿಧಿವರ್ಣನೆಯೆಂಬ ನೂರೈವತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುಷ್ಪಂಚಾಶದುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಘೃತಧೇನುಂ ಪ್ರವಕ್ಷ್ಯಾಮಿ ತಾಂ ಶೃಣುಷ್ವ ನರೋತ್ತಮ |
ದೀಯತೇ ಯೇನ ವಿಧಿನಾ ಯಾದೃಗ್ರೂಪಾಂ ಚ ಕಾರಯೇತ್ || ೧ ||

ಗವ್ಯಸ್ಯ ಸರ್ಪಿಷಃ ಕುಂಭಾನ್ಗಂಧಮಾಲ್ಯವಿಭೂಷಿತಾನ್ |
ಕಾಂಸ್ಯೋಪದೋಹಸಂಯುಕ್ತಾನ್ಸಿತವಸ್ತ್ರಾವಗುಂಠಿತಾನ್ || ೨ ||

ಇಕ್ಷುಯಷ್ಟಿಮಯಾಃ ಪಾದಾಃ ಖುರಾ ರೌಪ್ಯಮಯಾಸ್ತಥಾ |
ಸೌವರ್ಣೇ ಚಾಕ್ಷಿಣೀ ಕಾರ್ಯೇ ಶೃಂಗೇ ಚಾಗುರುಕಾಷ್ಠಕೇ || ೩ ||

---

### ನೂರಐವತ್ತನಾಲ್ಕನೆಯ ಅಧ್ಯಾಯ

೧. ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ—ಓ ರಾಜೇಂದ್ರ! ಈಗ ಘೃತಧೇನುವಿನ ದಾನಮಾಹಾತ್ಮ್ಯೆಯನ್ನೂ ಅದನ್ನು ಯಾವರೀತಿ ರಚಿಸಿ ದಾನಮಾಡಬೇಕೆಂಬ ವಿಧಿಯನ್ನೂ ಹೇಳುವೆನು ಕೇಳು.

೨. ಹಸುವಿನ ತುಪ್ಪದ್ದಿಂದ ಪೂರ್ಣವಾದ ಕಲಶಗಳನ್ನಿರಿಸಿ, ಅವುಗಳಿಗೆ ಗಂಧ, ಹೂಮಾಲಿಕೆ ಮುಂತಾದುವುಗಳಿಂದ ಅಲಂಕಾರಮಾಡಬೇಕು. ಅದರ ಬಳಿ ಹಾಲುಕರೆಯುವ ಕಂಚಿನ ಪಾತ್ರೆಯನ್ನು ಇರಿಸಿ ಎಲ್ಲಕ್ಕೂ ಬಿಳಿಯ ವಸ್ತ್ರಗಳನ್ನು ಹೊದ್ದಿಸಬೇಕು.

೩. ಈ ಘೃತಧೇನುವಿಗೆ ಕಬ್ಬಿನ ತುಂಡುಗಳಿಂದ ಕಾಲುಗಳನ್ನೂ, ಬೆಳ್ಳಿಯಿಂದ ಗೊರಸುಗಳನ್ನೂ, ಚಿನ್ನದಿಂದ ಕಣ್ಣುಗಳನ್ನೂ, ಅಗರುಚಕ್ಕೆಯಿಂದ ಕೊಂಬುಗಳನ್ನೂ ರಚಿಸಬೇಕು.

ಸಪ್ತಧಾನ್ಯಮಯೋ ಪಾರ್ಶ್ವೇ ಪಟೋರ್ಣೇನ ಚ ಕಂಬಲಂ ।
ಕುರ್ಯಾತ್ತುರುಷ್ಕಕರ್ಪೂರೈರ್ಘ್ರಾಣಂ ಫಲಮಯೌ ಸ್ತನೌ ॥ ೪ ॥

ತದ್ವಚ್ಛರ್ಕರಯಾ ಜಿಹ್ವಾಂ ಗುಡಕ್ಷೀರಮಯಂ ಮುಖಂ ।
ಕ್ಷೌಮಸೂತ್ರೇಣ ಲಾಂಗೂಲಂ ರೋಮಾಣಿ ಸಿತಸರ್ಷಪೈಃ ॥ ೫ ॥

ತಾಮ್ರಪಾತ್ರಮಯಂ ಪೃಷ್ಠಂ ಕುರ್ಯಾಚ್ಛ್ರದ್ಧಾಸಮನ್ವಿತಃ ।
ಈದೃಗ್ರೂಪಾಂ ತು ಸಂಕಲ್ಪ್ಯ ಘೃತಧೇನುಂ ನರಾಧಿಪ ॥ ೬ ॥

ತದ್ವತ್ಕಲ್ಪನಯಾ ಧೇನೋರ್ವತ್ಸಂ ಚ ಪರಿಕಲ್ಪಯೇತ್ ।
ಮಂತ್ರೇಣಾನೇನ ರಾಜೇಂದ್ರ ತಾಂ ಸಮಭ್ಯರ್ಚ್ಯ ಬುದ್ಧಿಮಾನ್ ॥ ೭ ॥

---

೪. ಸಪ್ತಧಾನ್ಯಗಳಿಂದ ಆದರ ಎರಡು ಪಾರ್ಶ್ವಗಳನ್ನೂ, ಬುಕ್ಕಿಹಿಟ್ಟಿನಿಂದ ಕಂಬಲವನ್ನೂ, ಹಾಲುಮಡ್ಡಿ ಮತ್ತು ಕರ್ಪೂರ ಇವುಗಳಿಂದ ಮೂಗನ್ನೂ, ಹಣ್ಣುಗಳಿಂದ ಮೊಲೆಗಳನ್ನೂ ನಿರ್ಮಿಸಬೇಕು.

೫. ಹಾಗೆಯೇ ಸಕ್ಕರೆಯಿಂದ ನಾಲಗೆಯನ್ನೂ, ಬೆಲ್ಲ ಮತ್ತು ಹಾಲು ಇವುಗಳಿಂದ ಮುಖವನ್ನೂ, ರೇಷ್ಮೆಯ ನೂಲುಗಳಿಂದ ಬಾಲವನ್ನೂ, ಬಿಳಿಯ ಸಾಸುವೆಗಳಿಂದ ರೋಮಗಳನ್ನೂ ರಚಿಸಬೇಕು.

೬. ಈ ಧೇನುವಿನ ಪೃಷ್ಠಪ್ರದೇಶವನ್ನು ತಾಮ್ರದ ರೇಖಿನಿಂದ ರಚಿಸಬೇಕು. ಈರೀತಿ ಶ್ರದ್ಧಾಯುಕ್ತನಾಗಿ ಎಲ್ಲವನ್ನೂ ರಚಿಸಿ, "ನಾನು ಮಾಡಿರುವ ಈ ರಚನೆಯಿಂದ ಈ ಘೃತಧೇನುವು ಪರಿಪೂರ್ಣವಾಗಲಿ" ಎಂದು ಸಂಕಲ್ಪಮಾಡಬೇಕು.

೭. ಓ ರಾಜೇಂದ್ರ ! ಬುದ್ಧಿವಂತನಾದ ಮಾನವನು ಇದೇ ರೀತಿ ಈ ಘೃತಧೇನುವಿನ ಕರುವನ್ನೂ ವಿಧಿಪ್ರಕಾರ ನಿರ್ಮಿಸಿ, ಮುಂದೆ ಹೇಳುವ ಮಂತ್ರಪೂರ್ವಕವಾಗಿ ಈ ಧೇನುವನ್ನು ಪೂಜಿಸಬೇಕು.

ಆಜ್ಯಂ ತೇಜಃ ಸಮುದ್ದಿಷ್ಟಮಾಜ್ಯಂ ಪಾಪಹರಂ ಪರಂ ।
ಆಜ್ಯಂ ಸುರಾಣಾಮಾಹಾರಃ ಸರ್ವಮಾಜ್ಯೇ ಪ್ರತಿಷ್ಠಿತಂ ॥ ೮ ॥

ತ್ವಂ ಚೈವಾಜ್ಯಮಯೀ ದೇವಿ ಕಲ್ಪಿತಾಸಿ ಮಯಾ ಕಿಲ ।
ಸರ್ವಪಾಪಾಪನೋದಾಯ ಸುಖಾಯ ಭವ ಭಾಮಿನಿ ॥ ೯ ॥

ತಂ ಚ ವಿಪ್ರಂ ಮಹಾಭಾಗ ಮನಸೈವ ಘೃತಾರ್ಚಿಷಾ ।
ಕಲ್ಪಯಿತ್ವಾ ತತಸ್ತಸ್ಮೈ ಪ್ರಯತಃ ಪ್ರತಿಪಾದಯೇತ್ ॥ ೧೦ ॥

ದಕ್ಷಿಣಾಸಹಿತಾ ಧೇನುಃ ಕಲ್ಪಿತಾಜ್ಯಮಯೀ ಶುಭಾ ।
ಏತಾಂ ಮಮೋಪಕಾರಾಯ ಗೃಹಾಣ ತ್ವಂ ದ್ವಿಜೋತ್ತಮ ॥ ೧೧ ॥

ಇತ್ಯುದಾಹೃತ್ಯ ವಿಪ್ರಾಯ ತಾಂ ಗಾಂ ತು ಪ್ರತಿಪಾದಯೇತ್ ।
ದತ್ತ್ವೈಕರಾತ್ರಂ ಸ್ಥಿತ್ವಾ ಚ ಘೃತಾಹಾರೋ ಯತವ್ರತಃ ॥ ೧೨ ॥

---

೮–೯. "ತುಪ್ಪವನ್ನು ತೇಜಸ್ಸೆಂದು ಹೇಳುವರು. ಈ ಆಜ್ಯವು ಉತ್ಕೃಷ್ಟವೂ ಪಾಪನಾಶಕವೂ ಆಗಿರುವುದು. ಈ ತುಪ್ಪವೇ ದೇವತೆಗಳಿಗೆ ಆಹಾರವಾಗಿರುವುದು. ಸಕಲ ಸತ್ವವೂ ಈ ತುಪ್ಪದಲ್ಲೇ ಅಡಗಿರುವುದು. ದೇವಿ! ನಿನ್ನನ್ನೂ ನಾನು ತುಪ್ಪದಿಂದಲೇ ರಚಿಸಿರುವೆನು. ಆದುದರಿಂದ ಎಲೌ ಮಂಗಳಾಂಗಿಯಾದ ಧೇನುವೇ! ನನ್ನ ಸಕಲ ಪಾಪಗಳನ್ನೂ ನಾಶಪಡಿಸಿ ನನಗೆ ಸುಖವುಂಟಾಗುವಂತೆ ಮಾಡು" ಎಂದು ಘೃತಧೇನುವನ್ನು ಪ್ರಾರ್ಥಿಸಬೇಕು.

೧೦. ಓ ಮಹಾಭಾಗ! ದಾನಕೊಡಬೇಕೆಂದಿರುವ ಬ್ರಾಹ್ಮಣನನ್ನು ಘೃತರೂಪವಾದ ಪೂಜೆಗಳಿಂದ ಮನಸ್ಸಿನಿಂದಲೇ ಧ್ಯಾನಮಾಡಿ ಅನಂತರ ನಿಯಮಬದ್ಧನಾಗಿ ಆ ಬ್ರಾಹ್ಮಣನಿಗೆ ಈ ಘೃತಧೇನುವನ್ನು ದಾನಮಾಡಬೇಕು.

೧೧. ದಾನಮಾಡುವಾಗ ಎಲೈ "ಬ್ರಾಹ್ಮಣೋತ್ತಮನೇ! ತುಪ್ಪದಿಂದ ಕಲ್ಪಿಸಲ್ಪಟ್ಟಿರುವ ಈ ಶುಭಕರವಾದ ಧೇನುವನ್ನು ದಕ್ಷಿಣೆಸಮೇತವಾಗಿ ಸ್ವೀಕರಿಸಿ ನನಗೆ ಉಪಕಾರಮಾಡಬೇಕು ಎಂದು" ಪ್ರಾರ್ಥಿಸಬೇಕು.

೧೨. ಹೀಗೆ ಮಂತ್ರಗಳನ್ನುಚ್ಚರಿಸಿ ಅನಂತರ ಬ್ರಾಹ್ಮಣನಿಗೆ ಆ ಧೇನುವನ್ನು ದಾನಮಾಡಿ ಆದಿನ ರಾತ್ರಿ ಕೇವಲ ತುಪ್ಪವನ್ನೇ ಆಹಾರವಾಗಿ ಉಪಯೋಗಿಸಿ ನಿಯಮದಿಂದಿರಬೇಕು.

**ಅನೇನ ಚ ವಿಧಾನೇನ ನವನೀತಮಯೀ ಶುಭಾ ।**
**ದಾತವ್ಯಾ ನೃಪತೇ ಧೇನುರ್ನ್ಯೂನಾಧಿಕವಿವರ್ಜಿತಾ ॥ ೧೩ ॥**

**ಶೃಣು ಪಾರ್ಥ ಮಹಾಬಾಹೋ ಪ್ರದಾನಫಲಮುತ್ತಮಂ ।**
**ಘೃತಕ್ಷೀರಮಹಾನದ್ಯೋ ಯತ್ರ ಪಾಯಸಕರ್ದಮಾಃ ॥ ೧೪ ॥**

**ಘೃತಧೇನುಪ್ರದಾ ಯಾನ್ತಿ ತತ್ರ ಕಾಮ್ಯೈಃ ಸುಪೂರಿತಾಃ ।**
**ಪಿತುರೂರ್ಧ್ವಂ ಚ ಯೇ ಸಪ್ತ ಪುರುಷಾಸ್ತಸ್ಯ ಯೇಽಪ್ಯಧಃ ॥ ೧೫ ॥**

**ತಾಂಸ್ತೇಷು ನೃಪ ಲೋಕೇಷು ಸ ನಯತ್ಯಸ್ತಕಲ್ಮಷಾನ್ ।**
**ಸಕಾಮಾನಾಮಿಯಂ ವ್ಯುಷ್ಟಿಃ ಕಥಿತಾ ನೃಪಸತ್ತಮ ॥ ೧೬ ॥**

**ನಿಷ್ಕಿಲ್ಬಿಷಂ ಪದಂ ಯಾಂತಿ ನಿಷ್ಕಾಮಾ ಘೃತಧೇನುದಾಃ ।**
**ಘೃತಮಗ್ನಿರ್ಘೃತಂ ಸೋಮಸ್ತನ್ಮಯಾಃ ಸರ್ವದೇವತಾಃ ॥ ೧೭ ॥**

---

೧೩. ಎಲೈ ಯುಧಿಷ್ಠಿರ ಮಹಾರಾಜನೇ! ಇದೇ ವಿಧಿಯನ್ನನುಸರಿಸಿ ತುಪ್ಪದಂತೆಯೇ ಬೆಣ್ಣೆಯಿಂದಲೂ ಗೋವನ್ನು ಶುಭಕರವಾಗಿ ರಚಿಸಿ, ಸ್ವಲ್ಪವೂ ನ್ಯೂನತೆಯಿಲ್ಲದಂತೆ ದಾನಮಾಡಬೇಕು.

೧೪–೧೬. ಓ ರಾಜಶ್ರೇಷ್ಠನಾದ ಕುಂತೀಪುತ್ರನೇ! ಹೀಗೆ ಘೃತಧೇನು ಮತ್ತು ನವನೀತಧೇನು ಇವುಗಳನ್ನು ದಾನಮಾಡುವುದರ ಉತ್ತಮವಾದ ಫಲಗಳನ್ನು ಹೇಳುವೆನು ಕೇಳು! ಈ ಘೃತಧೇನುವನ್ನು ದಾನಮಾಡಿದವರು ಪರಲೋಕದಲ್ಲಿ ಎಲ್ಲೆಲ್ಲಿ ಹೋದರೂ ತುಪ್ಪ ಮತ್ತು ಹಾಲು ಇವುಗಳಿಂದ ಪೂರ್ಣವಾದ ನದಿಗಳು, ಪಾಯಸವೆಂಬ ಕೆಸರುಳ್ಳದ್ದಾಗಿ ಅವರಿಗೆ ಬೇಕಾದ ಇಷ್ಟಾರ್ಥಗಳನ್ನೆಲ್ಲಾ ಪೂರ್ಣಗೊಳಿಸುವುವು. ಅಲ್ಲದೆ ಪಿತೃಲೋಕಕ್ಕಿಂತ ಕೆಳಗೇಳು ಮತ್ತು ಮೇಲೇಳು ಲೋಕಗಳಲ್ಲಿರುವ ತನ್ನ ಬಂಧುಗಳೆಲ್ಲರನ್ನೂ ಪಾಪರಹಿತರನ್ನಾಗಿ ಮಾಡುತ್ತದೆ. ಓ ರಾಜಶ್ರೇಷ್ಠನೇ! ಈ ಫಲಸಮೂಹವು ಕೇವಲ ಅಪೇಕ್ಷೆಯುಳ್ಳವರಿಗೆ ಮಾತ್ರ ದೊರೆಯುವುದೆಂದು ಹೇಳಿದೆ.

೧೭–೧೮. ಈ ಘೃತಧೇನುವನ್ನು ದಾನಮಾಡುವವರು ಪಾಪರಹಿತವಾದ ಉತ್ತಮಸ್ಥಾನವನ್ನು ಪಡೆಯುವರು. ಈ ಘೃತವು ಅಗ್ನಿಸ್ವರೂಪ, ಮತ್ತು ಚಂದ್ರಸ್ವರೂಪ. ಅಲ್ಲದೆ ಸಕಲದೇವತೆಗಳೂ ಈ ಘೃತಸ್ವರೂಪರೇ ಆಗಿರುವರು.

ಘೃತಂ ಪ್ರಯಚ್ಛತಾಂ ಭೀತಾ ಭವಂತ್ಯಖಿಲದೇವತಾಃ || ೧೮ ||

ಮಾಯಾಜಲಂ ಸುತಕಲತ್ರಮಹೋರ್ಮಿಮಾಲಂ |
ಲೋಭೋಗ್ರನಕ್ರವಿಷಮಂ ಬಹುಪುಣ್ಯಭಾಜಃ ||
ಲಗ್ನಾ ನಿಮಗ್ನವಪುಷೋ ಘೃತಧೇನುಪುಚ್ಛೇ |
ಸಂಸಾರಸಾಗರಮಪಾರಮಹೋ ತರಂತಿ || ೧೯ ||

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಘೃತಧೇನು ದಾನವ್ರತವಿಧಿವರ್ಣನಂ ನಾಮಚತುಷ್ಪಂಚಾಶದುತ್ತರಶತತಮೋಽಧ್ಯಾಯಃ.**



---

ಆದುದರಿಂದ ಈ ಘೃತವನ್ನು ದಾನಮಾಡುವವರಿಗೆ ಎಲ್ಲಾ ದೇವತೆಗಳೂ ಭಯಪಡುವರು.

೧೯. ಮಾಯೆ ಅಥವಾ ಅಜ್ಞಾನವೆಂಬ ನೀರಿನಿಂದಲೂ; ಮಕ್ಕಳು, ಹೆಂಡಿರು ಎಂಬ ದೊಡ್ಡ ಅಲೆಗಳ ಸಮೂಹದಿಂದಲೂ ವ್ಯಾಪ್ತವಾಗಿ, ಲೋಭವೆಂಬ ಭಯಂಕರವಾದ ಮೊಸಳೆಯಿಂದ ದುಸ್ಸಹವಾಗಿರುವ ಈ ಸಂಸಾರವೆಂಬ ಸಾಗರದಲ್ಲಿ ಮುಳುಗಿರುವ ಶರೀರವುಳ್ಳ ಮಾನವರು, ಅಪಾರವಾದ ಪುಣ್ಯವಿಶೇಷದಿಂದ ಈ ಘೃತಧೇನುವಿನ ಬಾಲವನ್ನು ಆಶ್ರಯಿಸಿ ಇಂತಹ ಘೋರವಾದ ಸಂಸಾರ ಸಾಗರವನ್ನು ದಾಟಲು ಸಮರ್ಥರಾಗುವರು. ಇವರೇ ಪುಣ್ಯಭಾಗಿಗಳೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಘೃತಧೇನುವಿನ ದಾನವಿಧಿವರ್ಣನೆಯೆಂಬ ನೂರೈವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಪಂಚಾಶದುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಕೃಷ್ಣಕೃಷ್ಣ ಮಹಾಬಾಹೋ ಸರ್ವಶಾಸ್ತ್ರವಿಶಾರದ ।
ಕಥಯಸ್ವೇಹ ದಾನಾನಾಮುತ್ತಮಂ ಯತ್ಪ್ರಕೀರ್ತಿತಂ ॥ ೧ ॥

ಯೇನ ದತ್ತೇನ ದಾನಾನಿ ಸರ್ವಾಣ್ಯೇವ ಭವಂತ್ಯುತ ।
ಸರ್ವಕಾಮಸಮೃದ್ಧಿಶ್ಚ ಸರ್ವಪಾಪಕ್ಷಯೋ ಭವೇತ್ ॥ ೨ ॥

॥ ಶ್ರೀಕೃಷ್ಣ ಉವಾಚ ॥

ಪ್ರಾಯಶ್ಚಿತ್ತವಿಶುದ್ಧಿಶ್ಚ ತನ್ಮೇ ಕಥಯ ಸುವ್ರತ ।
ಶೃಣು ರಾಜನ್ಪ್ರವಕ್ಷ್ಯಾಮಿ ದಾನಾನಾಮುತ್ತಮೋತ್ತಮಂ ॥ ೩ ॥

---

## ನೂರಐವತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆ ಮಾಡುತ್ತಾನೆ—ಆಜಾನುಬಾಹುವೂ, ಸಕಲ ಶಾಸ್ತ್ರವಿಶಾರದನೂ ಆಗಿರುವ ಎಲೈ ಕೃಷ್ಣಪರಮಾತ್ಮನೇ! ಎಲ್ಲಾ ದಾನಗಳಿಗಿಂತಲೂ ಉತ್ತಮವಾದ ದಾನವು ಯಾವುದು? ಅದನ್ನು ನನಗೆ ತಿಳಿಸು.

೨. ಯಾವುದನ್ನು ಕೊಡುವುದರಿಂದ ಸಕಲದಾನಗಳ ಫಲವೂ ಉಂಟಾಗುವುದು? ಅಲ್ಲದೆ ಸಕಲ ಇಷ್ಟಾರ್ಥಸಮೃದ್ಧಿಯೂ, ಸರ್ವಪಾಪಗಳ ನಾಶವೂ ಮತ್ತು ಪ್ರಾಯಶ್ಚಿತ್ತಶುದ್ಧಿಯೂ ಯಾವುದರಿಂದುಂಟಾಗುವುದು? ಎಲೈ ಸುವ್ರತನೇ! ದಯವಿಟ್ಟು ಅದನ್ನು ನನಗೆ ತಿಳಿಸು.

೩–೬. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರ ರಾಜನೇ! ಕೇಳು. ಲವಣಧೇನು ದಾನವು ಎಲ್ಲಾ ದಾನಗಳಿಗಿಂತಲೂ ಅತ್ಯಂತ ಉತ್ತಮೋತ್ತಮ

**ಖ್ಯಾತಂ ಲವಣಧೇನ್ವಾಖ್ಯಂ ಸರ್ವಕಾಮಪ್ರದಂ ನೃಣಾಂ ।**
**ಯಾಂ ದತ್ವಾ ಬ್ರಹ್ಮಹಾ ಗೋಘ್ನಃ ಪಿತೃಹಾ ಗುರುತಲ್ಪಗಃ ॥ ೪ ॥**

**ವಿಶ್ವಾಸಘಾತೀ ಕ್ರೂರಾತ್ಮಾ ಸರ್ವಪಾಪರತೋಽಪಿ ವಾ ।**
**ಮುಚ್ಯತೇ ನಾತ್ರ ಸಂದೇಹಃ ಶಿವಲೋಕಂ ಸ ಗಚ್ಛತಿ ॥ ೫ ॥**

**ಸುಭಗೋ ಧನಸಂಪನ್ನೋ ದೀರ್ಘಾಯುರಪರಾಜಿತಃ ।**
**ಜಾಯತೇ ಪುರುಷೋ ಲೋಕೇ ಸರ್ವಕಾಮಸಮನ್ವಿತಃ ॥ ೬ ॥**

**ವಿಧಿಂ ವಕ್ಷ್ಯಾಮಿ ರಾಜೇಂದ್ರ ಲವಣಸ್ಯೇಹ ಕಲ್ಪನಂ ।**
**ಗೋಮಯೇನೋಪಲಿಪ್ತೇನ ದರ್ಭಸಂಸ್ತರಸಂಸ್ಥಿತಂ ॥ ೭ ॥**

**ಆವಿಕಂ ಚರ್ಮ ವಿನ್ಯಸ್ಯ ಪೂರ್ವಾಶಾಭಿಮುಖಂ ಸ್ಥಿತಂ ।**
**ವಸ್ತ್ರೇಣಾಚ್ಛಾದಿತಂ ಕೃತ್ವಾ ಧೇನುಂ ಕುರ್ವೀತ ಬುದ್ಧಿಮಾನ್ ॥ ೮ ॥**

---

ವೆನಿಸಿ ಪ್ರಸಿದ್ಧವಾಗಿರುವುದು. ಇದು ಮಾನವರ ಸಕಲ ಇಷ್ಟಾರ್ಥಗಳನ್ನೂ ತಪ್ಪದೆ ದೊರಕಿಸಿಕೊಡುವುದು. ಈ "ಲವಣ (ಉಪ್ಪಿನ) ಧೇನು" ವನ್ನು ದಾನಮಾಡಿದರೆ ಬ್ರಹ್ಮಹತ್ಯ, ಗೋಹತ್ಯ, ಪಿತೃಹತ್ಯ, ಗುರುಪತ್ನೀಸಮಾಗಮ ಇವನ್ನು ಮಾಡಿದವನೂ, ವಿಶ್ವಾಸಘಾತುಕನೂ, ಕ್ರೂರಸ್ವಭಾವವುಳ್ಳವನೂ, ಸದಾ ಕಾಲದಲ್ಲೂ ಪಾಪಕಾರ್ಯಗಳಲ್ಲಿ ನಿರತನಾಗಿರುವವನೂ ಸಹ ಆ ಪಾಪಗಳಿಂದ ವಿಮುಕ್ತನಾಗಿ ಶಿವಲೋಕವನ್ನೈದುವನು. ಇದರಲ್ಲಿ ಸಂದೇಹವಿಲ್ಲ. ಅಲ್ಲದೆ ಮಾನವನು ಸೌಭಾಗ್ಯವಂತನೂ, ಧನಿಕನೂ, ದೀರ್ಘಾಯುವೂ ಮತ್ತು ಯಾವಾಗಲೂ ಯಾರಿಗೂ ಸೋಲದವನೂ ಆಗಿ ಸಕಲ ಇಷ್ಟಾರ್ಥಗಳನ್ನೂ ಪಡೆದು ಸುಖವಾಗಿ ಬಾಳುವನು.

೭-೮. ಓ ರಾಜೇಂದ್ರ! ಈ ಲವಣಧೇನುವನ್ನು ರಚಿಸುವ ವಿಧಾನವನ್ನು ಹೇಳುವೆನು ಕೇಳು. ಬುದ್ಧಿವಂತನಾದ ಯಜಮಾನನು ಚೆನ್ನಾಗಿ ಗೋಮಯದಿಂದ ಭೂಮಿಯನ್ನು ಸಾರಿಸಿ, ಅದರ ಮೇಲೆ ದರ್ಭೆಯನ್ನು ಹರಡಬೇಕು. ಅನಂತರ ಆ ದರ್ಭೆಗಳ ಮೇಲೆ ಪೂರ್ವದಿಕ್ಕಿಗೆ ಅಭಿಮುಖವಾಗಿ ಆಡಿನ ಚರ್ಮವನ್ನು ಹಾಸಿ ಅದರ ಮೇಲೆ ವಸ್ತ್ರವನ್ನು ಹಾಕಿ ಧೇನುವನ್ನು ರಚಿಸಬೇಕು.

ಆಢಕೇನೈವ ಕುರ್ವೀತ ಬಹುವಿತ್ತೋಽಲ್ಪವಿತ್ತವಾನ್ ।
ಸ್ವರ್ಣಶೃಂಗೀಂ ರೌಪ್ಯಖುರಾಮಿಕ್ಷುಪಾದಾಂ ಫಲಸ್ತನೀಂ ॥ ೯ ॥

ಕಾರ್ಯಾ ಶರ್ಕರಯಾ ಜಿಹ್ವಾ ಗಂಧಘ್ರಾಣವತೀ ತಥಾ ।
ಸಮುದ್ರೋದರಜೇ ಶುಕ್ತೀ ಕರ್ಣೌ ತಸ್ಯಾಃ ಪ್ರಕಲ್ಪಯೇತ್ ॥ ೧೦ ॥

ಕಂಬಲಂ ಪಟ್ಟಸೂತ್ರೇಣ ಗ್ರೀವಾಯಾಂ ಘಂಟಿಕಾಂ ತಥಾ ।
ಶೃಂಗೇ ಚಂದನಕಾಷ್ಠಾಭ್ಯಾಂ ಮೌಕ್ತಿಕೇ ಚಾಕ್ಷಿಣೀ ಉಭೇ ॥ ೧೧ ॥

ಕಪೋಲೌ ಸಕ್ತುಪಿಂಡಾಭ್ಯಾಂ ಯವಾನಾಸ್ಯೇ ಪ್ರದಾಪಯೇತ್ ।
ತಿಲಾನ್ಪಾರ್ಶ್ವೇ ಪ್ರಕುರ್ವೀತ ಗೋಧೂಮಾಶ್ಚೈವ ಭಕ್ತಿತಃ ॥ ೧೨ ॥

ಏವಂ ವೈ ಸಪ್ತ ಧಾನ್ಯಾನಿ ಯಥಾಲಾಭಂ ಪ್ರಕಲ್ಪಯೇತ್ ।
ಪೃಷ್ಠೇ ವೈ ತಾಮ್ರಪಾತ್ರಂ ತು ಅಪಾನೇ ಗುಡಪಿಂಡಿಕಾಂ ॥ ೧೩ ॥

---

೯–೧೦. ತುಂಬಾ ಹಣವುಳ್ಳವನು ಒಂದು ಆಢಕ ಉಪ್ಪಿನಿಂದ ಧೇನುವನ್ನು ನಿರ್ಮಿಸಬೇಕು. ಸಾಮಾನ್ಯನಾದವನು ತನ್ನ ಐಶ್ವರ್ಯಕ್ಕನುಗುಣವಾಗಿ ರಚಿಸಬೇಕು ಈ ಧೇನುವಿಗೆ ಚಿನ್ನದ ಅಣಸುಗಳನ್ನೂ, ಬೆಳ್ಳಿಯ ಗೊರಸುಗಳನ್ನೂ, ಕಬ್ಬಿನ ತುಂಡುಗಳಿಂದ ಕಾಲುಗಳನ್ನೂ, ಹಣ್ಣುಗಳಿಂದ ಮೊಲೆಯನ್ನೂ, ಸಕ್ಕರೆಯಿಂದ ನಾಲಗೆಯನ್ನೂ, ಗಂಧದಿಂದ ಮೂಗನ್ನೂ, ಮುತ್ತಿನ ಚಿಪ್ಪುಗಳಿಂದ ಕಿವಿಗಳನ್ನೂ ನಿರ್ಮಿಸಬೇಕು.

೧೧–೧೫ ಮತ್ತು ರೇಷ್ಮೆಯ ವಸ್ತ್ರಗಳಿಂದ ಕಂಬಲ (ಕುತ್ತಿಗೆಯ ಕೆಳಗಡೆ ಆವರಿಸಿಕೊಂಡಿರುವ ಚರ್ಮ ಗಂಗೆದೊಗಲನ್ನು), ಕೊರಳಲ್ಲಿ ಘಂಟೆಯನ್ನೂ, ಚಂದನದ ಕಾಷ್ಠಗಳಿಂದ ಕೊಂಬುಗಳನ್ನೂ, ಮುತ್ತುಗಳಿಂದ ಎರಡು ಕಣ್ಣುಗಳನ್ನೂ, ಸಕ್ತುವಿನ ಉಂಡೆಯಿಂದ ಕಪೋಲಸ್ಥಲವನ್ನೂ ರಚಿಸಿ, ಬಾಯಿಯೊಳಗೆ ಯವಧಾನ್ಯಗಳನ್ನು ಸೇರಿಸಬೇಕು. ಪಾರ್ಶ್ವಪ್ರದೇಶಗಳಲ್ಲಿ ಎಳ್ಳು, ಗೋಧಿ ಮುಂತಾದ ಸಪ್ತಧಾನ್ಯಗಳಲ್ಲಿ ದೊರೆತದ್ದನ್ನು ಸೇರಿಸಿ ರಚನೆಮಾಡಬೇಕು. ಆ ಧೇನುವಿನ ಪೃಷ್ಠಪ್ರದೇಶದಲ್ಲಿ ತಾಮ್ರದ ತಗಡನ್ನೂ, ಅಪಾನವಾಯುಸ್ಥಳದಲ್ಲಿ ಬೆಲ್ಲದ ಉಂಡೆಯನ್ನೂ, ಬಾಲವಲ್ಲಿ ಕಂಬಳಿಯನ್ನೂ, ಹಾಲುಕರೆಯುವ

ಲಾಂಗೂಲೇ ಕಂಬಲಂ ದದ್ಯಾದ್ದ್ರಾಕ್ಷಾಂ ಕ್ಷೀರಪ್ರದೇಶತಃ ।
ಯೋನಿಪ್ರದೇಶೇ ಚ ಮಧು ಸರ್ವವಸ್ತುಫಲಾನ್ವಿತಂ ॥ ೧೪ ॥

ಏವಂ ಸಮ್ಯಕ್ಪರಿಸ್ಥಾಪ್ಯ ರಸರಸ್ಯಮಯಿಂ ಚ ಗಾಂ ।
ಸ್ಥಾಪಯೇದ್ವತ್ಸಮೇಕಂ ಚ ಚತುರ್ಭಾಗೇನ ಮಾನವಃ ॥ ೧೫ ॥

ಏವಂ ಧೇನುಂ ಸಮಭ್ಯರ್ಚ್ಯ ಮಾಲ್ಯವಸ್ತ್ರವಿಭೂಷಣೈಃ ।
ಸ್ನಾತ್ವಾ ದೇವಾರ್ಚನಂ ಕೃತ್ವಾ ಬ್ರಾಹ್ಮಣಾನಭಿಪೂಜ್ಯ ಚ ॥
ಕೃತ್ವಾ ಪ್ರದಕ್ಷಿಣಾಂ ಗಾಂ ತು ಪುತ್ರಭಾರ್ಯಾಸಮನ್ವಿತಃ ॥ ೧೬ ॥

ಬ್ರಾಹ್ಮಣಾಯ ಸುಶೀಲಾಯ ವೃತ್ತಯುಕ್ತಾಯ ವೈ ನೃಪ ।
ದದ್ಯಾತ್ಪರ್ವಸು ಸರ್ವೇಷು ಮಂತ್ರಪೂರ್ವಂ ಸುಭಕ್ತಿತಃ ॥ ೧೭ ॥

---

ಸ್ಥಳದಲ್ಲಿ ಅಂದರೆ ಮೊಲೆಗಳಲ್ಲಿ ದ್ರಾಕ್ಷಿಗಳನ್ನೂ, ಯೋನಿಪ್ರದೇಶದಲ್ಲಿ ಜೇನನ್ನೂ ಮತ್ತು ಸಕಲ ಫಲವಸ್ತುಗಳನ್ನೂ ಇರಿಸಬೇಕು. ಈರೀತಿ ಚೆನ್ನಾಗಿ ರಸಭರಿತವಾಗಿ ಲವಣಧೇನುವನ್ನು ರಚಿಸಿದ ಮೇಲೆ, ಆ ಹಸುವಿನ ನಾಲ್ಕನೆಯ ಒಂದು ಪ್ರಮಾಣದ ಉಪ್ಪಿನಿಂದ ಅದರ ಕರುವನ್ನು ವಿಧಿಪ್ರಕಾರ ರಚಿಸಬೇಕು.

೧೬–೧೯. ಎಲೈ ರಾಜನೇ! ಪ್ರತಿಯು ಸ್ನಾನಮಾಡಿ, ಹೀಗೆ ಕರುಸಮೇತವಾಗಿ ರಚಿಸಲ್ಪಟ್ಟಿರುವ ಲವಣಧೇನುವನ್ನು. ಹೂಮಾಲೆ, ವಸ್ತ್ರ ಮುಂತಾದ ಪೂಜೋಪಕರಣಗಳಿಂದ ಪೂಜಿಸಿ, ತನ್ನ ಕುಲದೇವರನ್ನೂ ಮತ್ತು ಬ್ರಾಹ್ಮಣರನ್ನೂ ಭಕ್ತಿಯಿಂದ ಪೂಜೆಮಾಡಬೇಕು. ಅನಂತರ ತನ್ನ ಹೆಂಡತಿಮಕ್ಕಳೊಡನೆ ಈ ಲವಣಧೇನುವನ್ನು ಪ್ರದಕ್ಷಿಣೆಮಾಡಿ, ಒಳ್ಳೆಯ ನಡತೆಯುಳ್ಳವನೂ, ಸದ್ವೃತ್ತಿಯಲ್ಲಿದ್ದುಕೊಂಡು ಪೂಜ್ಯ ತೋರುತ್ತಿರುವವನೂ ಆದ ಯೋಗ್ಯ ಬ್ರಾಹ್ಮಣನಿಗೆ ಪರ್ವಕಾಲಗಳಲ್ಲಿ ಭಕ್ತಿಯಿಂದ ಮಂತ್ರವತ್ತಾಗಿ ದಾನಮಾಡಬೇಕು. "ಸಕಲ ರಸಗಳೂ ಈ ಲವಣದಲ್ಲಿ (ಉಪ್ಪಿನಲ್ಲಿ) ನೆಲಸಿರುವುವು. ಈ ಉಪ್ಪಿನಲ್ಲಿ ಎಲ್ಲಾ ದೇವತೆಗಳೂ ಅಡಗಿರುವರು. ಎಲೌ ಸರ್ವದೇವತಾಸ್ವರೂಪಿಣಿಯೆಸಿದ

**ಲವಣೇ ವೈ ರಸಾಃ ಸರ್ವೇ ಲವಣೇ ಸರ್ವದೇವತಾಃ ।**
**ಸರ್ವದೇವಮಯೇ ದೇವೀ ಲವಣಾಖ್ಯೇ ನಮೋಽಸ್ತು ತೇ　　॥ ೧೮ ॥**

**ಏವಮುಚ್ಚಾರ್ಯ ಮಂತ್ರಾಂತೇ ವಿಪ್ರಾಯ ಪ್ರತಿಪಾದಯೇತ್ ।**
**ಸಮ್ಯಕ್ಪ್ರದಕ್ಷಿಣಾಂ ಕೃತ್ವಾ ದಕ್ಷಿಣಾಸಹಿತಾಂ ನೃಪ　　॥ ೧೯ ॥**

**ಪ್ರದಕ್ಷಿಣಾ ಮಹೀ ತೇನ ಕೃತಾ ಭವತಿ ಭಾರತ ।**
**ಸರ್ವದಾನಾನಿ ದತ್ತಾನಿ ಸರ್ವಕ್ರತುಫಲಾನಿ ಚ　　॥ ೨೦ ॥**

**ಸರ್ವೇ ರಸಾಃ ಸರ್ವಮನ್ನಂ ಸರ್ವಂ ಚ ಸಚರಾಚರಂ ।**
**ಸೌಭಾಗ್ಯಂ ಪರಮಾಬುದ್ಧಿರಾರೋಗ್ಯಂ ಸರ್ವಸಂಪದಃ　　॥ ೨೦ ॥**

**ಭವಂತಿ ದತ್ವಾ ನ್ಯಾಣಾಂ ತು ರಸಧೇನುಂ ನ ಸಂಶಯಃ ।**
**ಸ್ವರ್ಗೇ ಚ ನಿಯುತಾವಾಸೋ ಯಾವದಾಭೂತಸಂಪ್ಲವಂ　　॥ ೨೨ ॥**

---

ಲವಣಸಂಜ್ಞಕಳಾಗಿರುವ ಗೋದೇವಿಯೇ! ನಿನ್ನನ್ನು ನಮಸ್ಕರಿಸುವೆನು" ಎಂಬ ಅರ್ಥವುಳ್ಳ ಮಂತ್ರವನ್ನುಚ್ಚರಿಸಿ ಧೇನುವನ್ನು ಪ್ರದಕ್ಷಿಣೆಮಾಡಿ ತನ್ನ ಯೋಗ್ಯತಾನುಸಾರ ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ಆ ಲವಣಧೇನುವನ್ನು ದಾನಮಾಡಬೇಕು.

೨೦–೨೨. ಹೀಗೆ ಈ ಲವಣಧೇನುವನ್ನು ಪ್ರದಕ್ಷಿಣೆಮಾಡಿ ದಾನಮಾಡುವುದರಿಂದ ಯಜಮಾನನು ಈ ಭೂಮಂಡಲವನ್ನೇ ಪ್ರದಕ್ಷಿಣೆಮಾಡಿದಂತಾಗುತ್ತದೆ. ಎಲೈ ಭರತಕುಲಶ್ರೇಷ್ಠನಾದ ಯುಧಿಷ್ಠಿರನೇ! ಇದರಿಂದ ಸಕಲ ದಾನಗಳನ್ನೂ ಸರ್ವಯಜ್ಞಗಳನ್ನೂ ಮಾಡಿದಷ್ಟು ಫಲವುಂಟಾಗುವುದು. ಅಲ್ಲದೆ ಸಕಲ ರಸಗಳೂ, ಸಮಸ್ತ ಅನ್ನಗಳೂ ಚರಾಚರಾತ್ಮಕವಾದ ಸಕಲ ವಸ್ತುಗಳೂ, ಸರ್ವಸೌಭಾಗ್ಯಗಳೂ, ಉತ್ತಮವಾದ ಬುದ್ಧಿಯೂ, ಒಳ್ಳೆಯ ಶರೀರಾರೋಗ್ಯವೂ, ಸಕಲೈಶ್ವರ್ಯಗಳೂ ಸಹ ನಿಸ್ಸಂದೇಹವಾಗಿ ಉಂಟಾಗುವುವು. ಅಲ್ಲದೆ ಆತನು ಪ್ರಳಯಕಾಲದವರೆಗೂ ಸ್ವರ್ಗದಲ್ಲಿ ಸುಖವಾಗಿ ವಾಸಮಾಡುತ್ತಾನೆ.

**ಪಟ್ಟೋರ್ಣಕಂಬಲಗಲಾಂ ಲವಣಾಢಕೇನ ।**
**ಕೃತ್ವಾ ಫಲಸ್ತನವತೀಮಪಿ ಲಾವಣಾಖ್ಯಾಂ ॥**
**ದತ್ವಾ ದ್ವಿಜಾಯ ವಿಧಿವದ್ರಸಧೇನುಮೇನಾಂ ।**
**ಲೋಕಂ ಗವಾಂ ಸಕಲಸೌಖ್ಯಯುತೋವಿಶೇತ್ಸಃ ॥ ೨೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಲವಣಧೇನು ದಾನವಿಧಿವರ್ಣನಂ ನಾಮಪಂಚಪಂಚಾಶದುತ್ತರಶತತಮೋಽಧ್ಯಾಯಃ.**



---

೨೩. ಒಂದು ಕೊಳಗ ಉಪ್ಪು ಮತ್ತು ರೇಷ್ಮೆಯ ಬಟ್ಟೆ ಮುಂತಾದ ವಸ್ತುಗಳಿಂದ ಧೇನುವನ್ನೂ ಹಣ್ಣುಗಳಿಂದ ಸ್ತನಗಳನ್ನೂ ರಚಿಸಿ, ವಿಧಿಪ್ರಕಾರ ಈ ರಸಧೇನುವನ್ನು ಬ್ರಾಹ್ಮಣನಿಗೆ ದಾನಮಾಡುವ ಮಾನವನು ಗೋಲೋಕವನ್ನು ಹೊಂದಿ ಅಲ್ಲಿ ಸಕಲ ಸೌಖ್ಯಗಳನ್ನೂ ಅನುಭವಿಸುತ್ತಾ ವಾಸ ಮಾಡುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಲವಣಧೇನು ದಾನವಿಧಿವರ್ಣನೆಯೆಂಬ ನೂರೈವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಷಟ್ಪಂಚಾಶದುತ್ತರಶತತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ರಾಜನ್ಕಾಂಚನಧೇನುಕಾಂ ।
ಯಾಂ ದತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧ ॥

ಸುರಾಪೋ ಬ್ರಹ್ಮಹಾ ಗೋಘ್ನೋ ಭೀರುರ್ಭಗ್ನವ್ರತೋಽಪಿ ವಾ ।
ಗುರುಘಾತೀ ಸ್ವಸೃಗಾಮೀ ಪರದಾರರತಶ್ಚ ಯಃ ॥ ೨ ॥

---

## ನೂರಐವತ್ತಾರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಸಕಲ ಪಾಪಗಳನ್ನೂ ನಿಸ್ಸಂದೇಹವಾಗಿ ನಾಶಮಾಡುವ ಕಾಂಚನಧೇನುವಿನ ದಾನವಿಷಯವನ್ನು ಈಗ ತಿಳಿಸುವೆನು.

೨. ಹೆಂಡ ಕುಡಿಯುವವನು, ಬ್ರಹ್ಮಹತ್ಯಾ, ಗೋಹತ್ಯಾದಿಗಳನ್ನು ಮಾಡುವವನು, ಹೇಡಿತನವುಳ್ಳವನು, ವ್ರತಭಂಗಮಾಡಿದವನು, ಗುರುವನ್ನು ಕೊಂದವನು, ತನ್ನ ಸಹೋದರಿಯನ್ನೇ ಭೋಗಿಸಿದವನು, ಪರಸ್ತ್ರೀಸಂಗ ಮಾಡಿದವನು ಇಂತಹ ಪಾಪಾತ್ಮರು ಸುವರ್ಣರಚಿತವಾದ ಧೇನುವನ್ನು ದಾನ ಮಾಡಿದರೆ ಆ ಪಾಪದಿಂದ ಮುಕ್ತರಾಗುವರು.

ಮುಚ್ಯತೇ ಪಾತಕೈಸ್ಸರ್ವೈಃ ದತ್ತ್ವಾ ಕಾಂಚನಧೇನುಕಾಂ ।
ಸಂಶುದ್ಧಸ್ಯ ಸುವರ್ಣಸ್ಯ ಪಂಚಾಶತ್ಪಾಲಿಕಾಂ ಶುಭಾಂ ॥ ೩ ॥

ಅರ್ಧೇನ ವಾ ಪ್ರಕುರ್ವೀತ ಶಕ್ತ್ಯಾ ವಾ ನೃಪಸತ್ತಮ ।
ಉಖಾಂ ಪಶ್ಚಿಮಭಾಗೇ ತು ದೃಷ್ಟಕುಕ್ಷಿಪಯೋಧರಾಂ ॥ ೪ ॥

ವಿಭಕ್ತಾಂಗೀಂ ಸುಜಘನಾಂ ಸುಮನೋಹರಕರ್ಣಿಕಾಂ ।
ಸರ್ವರತ್ನವಿಚಿತ್ರಾಂಗೀಂ ಕಾರಯೇತ್ಕಪಿಲಾಂ ಶುಭಾಂ ॥ ೫ ॥

ಚತುರ್ಥೇನ ತು ಭಾಗೇನ ವತ್ಸಂ ತಸ್ಯಾಃ ಪ್ರಕಲ್ಪಯೇತ್ ।
ರೌಪ್ಯಘಂಟಾಂ ಚ ದತ್ತ್ವಾ ತು ಕೌಶೇಯಪರಿವಾರಿತಾಂ ॥ ೬ ॥

ತಾಮ್ರಶೃಂಗೀಂ ತಥಾ ಕುರ್ಯಾದ್ವೈಡೂರ್ಯಮಯಕಂಬಲಾಂ ।
ಮುಕ್ತಾಫಲಮಯೇ ನೇತ್ರೇ ವೈದ್ರುಮೀ ರಸನಾ ತಥಾ ॥ ೭ ॥

---

೩–೫. ಎಲೈ ರಾಜಶ್ರೇಷ್ಠನೇ! ಪುಟಹಾಕಿ ಶುದ್ಧಿಮಾಡಿದ ಐವತ್ತು ತೊಲ ಚಿನ್ನದಿಂದಲಾಗಲಿ ಅಥವಾ ಇಪ್ಪತ್ತೈದು ತೊಲದಿಂದಾಗಲಿ, ಅಷ್ಟು ಸಾಧ್ಯವಿಲ್ಲದಿದ್ದರೆ ತನ್ನ ಶಕ್ತಿಯಿದ್ದಷ್ಟು ಪ್ರಮಾಣ ಚಿನ್ನದಿಂದಲಾಗಲಿ ಶುಭಕರವಾದ ಧೇನುವನ್ನು ಮಾಡಿಸಬೇಕು. ಪಶ್ಚಿಮಭಾಗದಲ್ಲಿ ಉಖೆ, ಹೊಟ್ಟೆ ಮತ್ತು ಕೆಚ್ಚಲು ಇವು ಚೆನ್ನಾಗಿ ಕಾಣುವಂತೆ ರಚಿಸಬೇಕು. ಧೇನುವಿನ ಪ್ರತಿಯೊಂದು ಅವಯವಗಳೂ ಸ್ಪಷ್ಟವಾಗಿ ತೋರುವಂತಿರಬೇಕು. ಸುಂದರವಾದ ಜಘನ, ಮನೋಹರವಾದ ಕಿವಿಗಳು ಇವುಗಳಿಂದ ಯುಕ್ತವಾಗಿರುವಂತೆ ರಚಿಸಬೇಕು. ಅವಯವಗಳು ಚಿತ್ರವಿಚಿತ್ರವಾದ ಬಣ್ಣಗಳಿಂದ ಕೂಡಿರುವಂತೆ ಸಕಲ ರತ್ನ ಖಚಿತವಾಗಿ ಕಪಿಲಾಧೇನುವನ್ನು ನಿರ್ಮಿಸಬೇಕು.

೬. ಈ ಧೇನುವಿನ ಪ್ರಮಾಣದ ನಾಲ್ಕನೆಯ ಒಂದುಭಾಗದಿಂದ ಇದರ ಕರುವನ್ನು ನಿರ್ಮಿಸಿ, ಅದರ ಕೊರಳಲ್ಲಿ ಬೆಳ್ಳಿಯ ಘಂಟೆಯನ್ನು ಕಟ್ಟಿ, ರೇಷ್ಮೆಯ ವಸ್ತ್ರವನ್ನು ಮೈಮೇಲೆ ಹೊದಿಸಬೇಕು.

೭. ಸುವರ್ಣಧೇನುವಿಗೆ ತಾಮ್ರದಿಂದ ಕೊಂಬುಗಳನ್ನೂ, ವೈಡೂರ್ಯ ಖಚಿತವಾದ ಕಂಬಳವನ್ನೂ, ಮುತ್ತಿನ ಮಣಿಗಳಿಂದ ಕಣ್ಣುಗಳನ್ನೂ ಹವಳಗಳಿಂದ ನಾಲಗೆಯನ್ನೂ ಸಹ ನಿರ್ಮಿಸಬೇಕು.

**ಕೃಷ್ಣಾಜಿನೇ ಗುಡಪ್ರಸ್ಥಂ ತತ್ರಸ್ಥಾಂ ಕಾರಯೇಚ್ಛುಭಾಂ ।**
**ಕುಂಭಾಷ್ಟಕಸಮೋಪೇತಾಂ ನಾನಾಫಲಸಮನ್ವಿತಾಂ ॥ ೮ ॥**

**ತಥಾಷ್ಟಾದಶಧಾನ್ಯಾತಪತ್ರೋಪಾನದ್ಯುಗಾನ್ವಿತಾಂ ।**
**ಭಾಜನಂ ವಸನಂ ಚೈವ ತಾಮ್ರದೋಹನಕಂ ತಥಾ ॥ ೯ ॥**

**ದೀಪಕಾನ್ನಾದಿಲವಣಶರ್ಕರಾಧಾನ್ಯಕಾನ್ವಿತಾಂ ।**
**ಪ್ರದದ್ಯಾದ್ಬ್ರಾಹ್ಮಣಂ ಪೂಜ್ಯ ವಸ್ತ್ರೈರಾಭರಣೈಃ ಶುಭೈಃ ॥ ೧೦ ॥**

**ಸ್ನಾತಃ ಪ್ರದಕ್ಷಿಣೀಕೃತ್ಯ ಧೇನುಂ ಸರ್ವಾಂಗಸಂಯುತಾಂ ।**
**ಗುಡಧೇನೂಕ್ತಮಂತ್ರೈಶ್ಚ ಆವಾಹ್ಯ ಪ್ರತಿಪೂಜ್ಯ ಚ ॥ ೧೧ ॥**

**ತ್ವಂ ಸರ್ವದೇವಗಣಮಂದಿರಭೂಷಣಾಸಿ ।**
**ವಿಶ್ವೇಶ್ವರತ್ರಿಪಥಗೋದಧಿಪರ್ವತಾನಾಂ ॥**

---

೮–೧೦. ಅನಂತರ ಒಂದುಪ್ರಸ್ಥಪರಿಮಾಣವುಳ್ಳ ಬೆಲ್ಲವನ್ನು ಕೃಷ್ಣಾಜಿನದ ಮೇಲಿರಿಸಿ, ಅಲ್ಲಿ ಈ ಶುಭಕರವಾದ ಧೇನುವನ್ನು ಸ್ಥಾಪಿಸಬೇಕು. ಜತೆಯಲ್ಲಿ ನಾನಾವಿಧವಾದ ಹಣ್ಣುಹಂಪಲುಗಳಿಂದ ಪೂರ್ಣವಾದ ಎಂಟು ಕುಂಭಗಳು, ಹದಿನೆಂಟು ಬಗೆಯ ಧಾನ್ಯಗಳು, ಛತ್ರಿ, ಒಂದುಜತೆ ಪಾವರಕ್ಷೆ, ಪಾತ್ರೆಗಳು, ವಸ್ತ್ರ ಮತ್ತು ಹಾಲುಕರೆಯುವ ಪಾತ್ರೆ ಇವುಗಳನ್ನೂ, ವಿಧವಿಧವಾದ ದೀಪಗಳು, ನಾನಾಬಗೆಯ ಅನ್ನ ಮುಂತಾದ ಆಹಾರಪದಾರ್ಥಗಳು, ಉಪ್ಪು, ಸಕ್ಕರೆ ಇತರ ದವಸಧಾನ್ಯಗಳು ಇವೆಲ್ಲವನ್ನೂ ಸಿದ್ಧಪಡಿಸಿಕೊಂಡು, ಯೋಗ್ಯನಾದ ಬ್ರಾಹ್ಮಣ ನನ್ನು ಕರೆದು ಅವನನ್ನು ಶುಭಕರವಾದ ವಸ್ತ್ರ ಮತ್ತು ಆಭರಣಾದಿಗಳಿಂದುಪ ಚರಿಸುತ್ತಾ ಪೂಜೆಮಾಡಿ, ಬಳಿಕ ಸಕಲ ಪರಿಕರಗಳೊಡನೆ ಈ ಸುವರ್ಣ ಧೇನುವನ್ನು ಅವನಿಗೆ ದಾನಮಾಡಬೇಕು.

೧೧–೧೪. ದಾನಮಾಡುವುದಕ್ಕೆ ಮುಂಚಿತವಾಗಿ ಯಜಮಾನನು ಸ್ನಾನ ಮಾಡಿ ಸರ್ವಾವಯವಗಳಿಂದಲೂ ಪರಿಪೂರ್ಣವಾಗಿರುವ ಈ ಸುವರ್ಣಧೇನುವನ್ನು ಗುಡಧೇನುವಿನ ಆವಾಹನೆಗೆ ಹೇಳಿರುವ ಮಂತ್ರಗಳಿಂದಲೇ ಆವಾಹನೆಮಾಡಿ ಪೂಜಿಸಬೇಕು. "ಎಲೌ ಗೋಮಾತೆಯೇ! ನೀನು ಸಕಲ ದೇವಮಂದಿರ ಗಳಿಗೂ ಅಲಂಕಾರಪ್ರಾಯಳಾಗಿರುವೆ. ಪರಮೇಶ್ವರ, ಗಂಗಾದೇವಿ, ಚತು

ಶ್ರದ್ಧಾಂಬುತೀಕ್ಷ್ಣಶಕಲೀಕೃತಪಾತಕೌಘಃ ।
ಪ್ರಾಪ್ನೋತಿ ನಿರ್ವೃತಿಮತೀವ ಪರಾಂ ನಮಾಮಿ ॥ ೧೨ ॥

ಲೋಕೋ ಯಥೇಪ್ಸಿತಫಲಾರ್ಥವಿಧಾಯಿನೀಂ ತ್ವಾ- ।
ಮಾಸಾದ್ಯ ಕೋ ಹಿ ಭಯಭಾಗ್ಭವತೀಹ ಮರ್ತ್ಯಃ ॥
ಸಂಸಾರದುಃಖಶಮನಾಯ ಯತಸ್ತ್ವಕಾಮಾ ।
ಸ್ತ್ವಾಂ ಕಾಮಧೇನುಮಿತಿ ವೇದವಿದೋ ವದಂತಿ । ೧೩ ॥

ಕ್ಷಮಾಮಾಮಂತ್ರ್ಯ ತಾಂ ಧೇನುಂ ವಿಪ್ರಾಯ ಪ್ರತಿಪಾದಯೇತ್ ।
ಸದಕ್ಷಿಣೋಪಸ್ಕರಾಂ ಚ ಪ್ರಣಿಪತ್ಯ ಕ್ಷಮಾಪಯೇತ್ ॥ ೧೪ ॥

ದಾನಕಾಲೇ ತು ಯೇ ದೇವಾಸ್ತೀರ್ಥಾನಿ ಮುನಯಸ್ತಥಾ ।
ಶರೀರೇ ನಿವಸಂತ್ಯಸ್ಯಾಸ್ತಾಞ್ಛೃಣುಷ್ವ ನರಾಧಿಪ ॥ ೧೫ ॥

---

ಸ್ಸಮುದ್ರಗಳು, ಪರ್ವತಗಳು ಇವೆಲ್ಲವೂ ನಿನ್ನಲ್ಲಿಯೇ ಅಡಕವಾಗಿರುವುವು. ನಿನ್ನ ವಿಷಯದಲ್ಲಿ ಮಾನವರಿಗುಂಟಾಗುವ ಶ್ರದ್ಧೆಯೆಂಬ ತೀಕ್ಷ್ಣಬಾಣವು ಜನರ ಅನಂತವಾದ ಪಾಪಸಮೂಹವನ್ನೆಲ್ಲಾ ನಿರ್ಮೂಲಮಾಡುತ್ತದೆ. ಮತ್ತು ಅವರು ಅತಿಶಯವಾದ ಸುಖವನ್ನು ಹೊಂದುವರು. ತಾಯಿ! ಇಗೋ ನಿನ್ನನ್ನು ನಮಸ್ಕರಿಸುವೆನು. ನೀನು ಸರ್ವಶ್ರೇಷ್ಠಳು. ಆರಾಧಕರಿಗೆ ಬೇಕಾದ ವರಗಳನ್ನು ತಪ್ಪದೇ ಕೊಡುವ ನಿನ್ನನ್ನು ಆಶ್ರಯಿಸಿದವನಿಗೆ ಭಯವೆಂದರೇನು? ಬೇರಾವ ಅಭಿಲಾಷೆಯೂ ಇಲ್ಲದೆ ಈ ಸಂಸಾರದ ದುಃಖವನ್ನು ಹೋಗಲಾಡಿಸುವುದ ಕೋಸ್ಕರ ನಿನ್ನನ್ನು ಪ್ರಾರ್ಥನೆಮಾಡಿ ಪೂಜಿಸುವ ವೇದವಿದರಾದ ಮಹಾತ್ಮರು ಈ ಕಾರಣದಿಂದಲೇ ನಿನ್ನನ್ನು ಕಾಮಧೇನುವೆಂದು ಕರೆಯುವರು. ಬೇಕಾದ ವರಗಳನ್ನು ಕೊಡುವಳಾದ್ದರಿಂದಲೇ ನಿನಗೆ ಈ ಹೆಸರು ಅನ್ವರ್ಥವಾಗಿದೆ. ಎಂಬ ಅರ್ಥವುಳ್ಳ ಮಂತ್ರವನ್ನುಚ್ಚರಿಸಿ, ಶಕ್ತ್ಯನುಸಾರ ದಕ್ಷಿಣೆ ಮತ್ತು ಪರಿಕರ ಗಳೊಡನೆ ಈ ಧೇನುವನ್ನು ಬ್ರಾಹ್ಮಣನಿಗೆ ದಾನಕೊಟ್ಟು ಅವನನ್ನು ಕ್ಷಮಾ ಪ್ರಾರ್ಥನೆ ಮಾಡಬೇಕು.

೧೫. ಎಲೈ ರಾಜಶ್ರೇಷ್ಠನೇ! ಈ ಧೇನುವನ್ನು ದಾನಮಾಡುವ ಕಾಲದಲ್ಲಿ ಇದರ ಯಾವ ಯಾವ ಅವಯವಗಳಲ್ಲಿ ದೇವತೆಗಳು, ಪುಣ್ಯತೀರ್ಥಗಳು, ಮುನಿ ಗಳು ನೆಲೆಸಿರುತ್ತಾರೆಂಬುದನ್ನು ಕೇಳು.

**ನೇತ್ರಯೋಃ ಸೂರ್ಯಶಶಿನೌ ಜಿಹ್ವಾಯಾಂ ತು ಸರಸ್ವತೀ ।**
**ದಂತೇಷು ಮರುತೋ ದೇವಾಃ ಕರ್ಣಯೋಶ್ಚ ತಥಾಶ್ವಿನೌ ॥ ೧೬ ॥**

**ಶೃಂಗಾಗ್ರಗೌ ಸದಾ ಚಾಸ್ಯಾ ದೇವೌ ರುದ್ರಪಿತಾಮಹೌ ।**
**ಗಂಧರ್ವಾಪ್ಸರಸಶ್ಚೈವ ಕಕುದ್ದೇಶಂ ಪ್ರತಿಷ್ಠಿತಾಃ ॥**
**ಕುಕ್ಷೌ ಸಮುದ್ರಾಶ್ಚತ್ವಾರೋ ಯೋನೌ ತ್ರಿಪಥಗಾಮಿನೀ ॥ ೧೭ ॥**

**ಋಷಯೋ ರೋಮಕೂಪೇಷು ಅಪಾನೇ ವಸುಧಾ ಸ್ಥಿತಾ ।**
**ಅಂತ್ರೇಷು ನಾಗಾ ವಿಜ್ಞೇಯಾಃ ಪರ್ವತಾಶ್ಚಾಸ್ಥಿಷು ಸ್ಥಿತಾಃ ॥ ೧೮ ॥**

**ಧರ್ಮಕಾಮಾರ್ಥಮೋಕ್ಷಾಸ್ತು ಪಾದೇಷು ಪರಿಸಂಸ್ಥಿತಾಃ ।**
**ಹುಂಕಾರೇ ಚ ಚತುರ್ವೇದಾಃ ಕಂಠೇ ರುದ್ರಾಃ ಪ್ರತಿಷ್ಠಿತಾ ॥ ೧೯ ॥**

**ಪೃಷ್ಠಭಾಗೇ ಸ್ಥಿತೋ ಮೇರುರ್ವಿಷ್ಣುಃ ಸರ್ವಶರೀರಗಃ ।**
**ಏವಂ ಸರ್ವಮಯೀ ದೇವೀ ಪಾವನೀ ವಿಶ್ವರೂಪಿಣೀ ॥ ೨೦ ॥**

**ಕಾಂಚನೇನ ಕೃತಾ ಧೇನುಃ ಸರ್ವದೇವಮಯೀ ಸ್ಮೃತಾ ।**
**ಯೋ ದದ್ಯಾತ್ತಾದೃಶೀಂ ಧೇನುಂ ಸರ್ವದಾನಪ್ರದೋ ಹಿ ಸಃ ॥ ೨೧ ॥**

---

೧೬-೨೧. ಕಣ್ಣುಗಳಲ್ಲಿ ಸೂರ್ಯಚಂದ್ರರೂ, ನಾಲಗೆಯಲ್ಲಿ ಸರಸ್ವತಿಯೂ, ಹಲ್ಲುಗಳಲ್ಲಿ ಮರುದ್ಗಣಗಳೂ, ಇತರ ದೇವತೆಗಳೂ, ಎರಡು ಕಿವಿಗಳಲ್ಲಿ ಅಶ್ವಿನೀ ದೇವತೆಗಳೂ, ಎರಡು ಕೊಂಬುಗಳ ತುದಿಯಲ್ಲಿ ರುದ್ರ ಮತ್ತು ಬ್ರಹ್ಮ ಇವರೂ, ಹಿಳಲಿನಲ್ಲಿ ಗಂಧರ್ವರೂ, ಅಪ್ಸರಸ್ತ್ರೀಯರೂ, ಹೊಟ್ಟೆಯಲ್ಲಿ ನಾಲ್ಕು ಸಮುದ್ರಗಳೂ, ಯೋನಿಪ್ರದೇಶದಲ್ಲಿ ಗಂಗಾದೇವಿಯೂ, ರೋಮಕೂಪಗಳಲ್ಲಿ ಋಷಿಗಳೂ, ಅಪಾನವಾಯು ಪ್ರದೇಶದಲ್ಲಿ ಭೂದೇವಿಯೂ, ನರಗಳಲ್ಲಿ ಸರ್ಪಗಳೂ, ಮೂಳೆಗಳಲ್ಲಿ ಪರ್ವತಗಳೂ, ನಾಲ್ಕು ಕಾಲುಗಳಲ್ಲಿ ಕ್ರಮವಾಗಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೂ, ಹುಂಕಾರದಲ್ಲಿ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳೂ, ಕುತ್ತಿಗೆಯಲ್ಲಿ ಏಕಾದಶ ರುದ್ರರೂ, ಪೃಷ್ಠಪ್ರದೇಶದಲ್ಲಿ ಮೇರುಪರ್ವತವೂ, ಸರ್ವಾವಯವಗಳಲ್ಲಿ ಮಹಾವಿಷ್ಣುವೂ ನೆಲಸಿರುವರು. ಹೀಗೆ ಸರ್ವದೇವಸ್ವರೂಪಳಾಗಿರುವ ಈ ಗೋಮಾತೆಯು ಪರಮಪವಿತ್ರಳು ಮತ್ತು ಪ್ರಪಂಚಸ್ವರೂಪಳು. ಹಿಂದೆ ಹೇಳಿದಂತೆ ವಿಧಿಪ್ರಕಾರ ಚಿನ್ನದಿಂದ ಧೇನುವನ್ನು ಮಾಡಿಸಿ ಸರ್ವದೇವತಾಸ್ವರೂಪಿಣಿಯಾದ ಈ ಧೇನುವನ್ನು ದಾನಮಾಡಿದರೆ ಸಕಲ ದಾನಗಳನ್ನೂ ಮಾಡಿದಂತೆಯೇ ಆಗುವುದು.

**ಕರ್ಮಭೂಮೌ ಹಿ ಮರ್ತ್ಯಾನಾಂ ದಾನಮೇತತ್ಸುದುರ್ಲಭಂ ।**
**ತಸ್ಮಾದ್ದೇಯಮಿದಂ ಶಕ್ತ್ಯಾ ಸರ್ವಕಲ್ಮಷನಾಶನಂ ॥ ೨೨ ॥**

**ಪಾವನಂ ತಾರಣಂ ಚೈವ ಕೀರ್ತಿದಂ ಶಾನ್ತಿದಂ ತಥಾ ।**
**ವರ್ಷಕೋಟಿಶತಂ ಸಾಗ್ರಂ ಸ್ವರ್ಗಲೋಕೇ ಗತೋ ನರಃ ॥ ೨೩ ॥**

**ನಾರೀ ವಾ ಪೂಜ್ಯತೇ ದೇವೈರ್ವಿಮಾನವರಮಾಸ್ಥಿತಾ ।**
**ಗಂಧರ್ವೈರ್ಗೀಯಮಾನಾತು ಪುಷ್ಪೈರ್ಮಾಲಾವಿಭೂಷಿತೈಃ ॥ ೨೪ ॥**

**ಸರ್ವಾಭರಣಸಂಪನ್ನಃ ಸರ್ವದ್ವಂದ್ವವಿವರ್ಜಿತಃ ।**
**ಸ್ವರ್ಗೇ ಸ್ಥಿತ್ವಾ ಚಿರಂ ಕಾಲಂ ತತೋ ಮರ್ತ್ಯೇಽಭಿಜಾಯತೇ ॥ ೨೫ ॥**

---

೨೨. ಕರ್ಮಭೂಮಿಯೆನಿಸಿದ ಈ ಭರತಖಂಡದಲ್ಲಿ ಮಾನವರಿಗೆ ಈ ಸುವರ್ಣಧೇನು ದಾನವು ತುಂಬಾ ದುರ್ಲಭವಾದುದು. ಆದುದರಿಂದ ಮಾನವರು ತಮ್ಮ ಶಕ್ತ್ಯನುಸಾರ ಈ ಚಿನ್ನದ ಗೋದಾನವನ್ನು ಮಾಡಿದರೆ ಸಕಲ ದಾನಗಳನ್ನೂ ಮಾಡಿದಂತೆಯೇ ಆಗುವುದು.

೨೩. ಪರಮ ಪವಿತ್ರವಾದ ಈ ದಾನವು ದಾತೃವಿನ ಕುಲದವರನ್ನೆಲ್ಲಾ ಉದ್ಧಾರಮಾಡುವುದಲ್ಲದೆ ಒಳ್ಳೆಯ ಕೀರ್ತಿಯನ್ನೂ ಶಾಂತಿಯನ್ನೂ ಸಹ ಉಂಟುಮಾಡುತ್ತದೆ. ಅಲ್ಲದೆ ಆತನು ಸ್ವರ್ಗಲೋಕವನ್ನು ಹೊಂದಿ ನೂರಾರು ಕೋಟಿ ವರ್ಷಗಳವರೆಗೂ ಸಂಪೂರ್ಣವಾಗಿ ಸುಖಿಸುವನು.

೨೪. ಈ ದಾನಮಾಡಿದ ಸ್ತ್ರೀಯು ಪುಷ್ಪಮಾಲೆ ಮತ್ತು ಆಭರಣ ಇವುಗಳಿಂದಲಂಕೃತವಾಗಿರುವ ಉತ್ತಮವಾದ ವಿಮಾನವನ್ನೇರಿ ದೇವತೆಗಳಿಂದ ಪೂಜೆ ಹೊಂದುತ್ತಾ ಗಂಧರ್ವರಿಂದ ದಿವ್ಯವಾದ ಸಂಗೀತವನ್ನು ಕೇಳುವಳಾಗಿ ಸ್ವರ್ಗಕ್ಕೆ ತೆರಳುವಳು.

೨೫. ದಾತ್ರಿಯು ಸ್ವರ್ಗಲೋಕದಲ್ಲಿ ಸರ್ವಾಭರಣಭೂಷಿತೆಯಾಗಿ ಯಾವ ಭೀತಿಯೂ ಇಲ್ಲದೆ ಬಹಳಕಾಲ ಅಲ್ಲಿಯೇ ಸುಖವಾಗಿದ್ದು ಬಳಿಕ ಈ ಮರ್ತ್ಯಲೋಕದಲ್ಲಿ ಜನಿಸುತ್ತಾಳೆ.

**ಆಧಿವ್ಯಾಧಿವಿನಿರ್ಮುಕ್ತೋ ರೂಪವಾನ್ಪ್ರಿಯದರ್ಶನಃ ।**
**ಏವಂ ನರೋ ವಾ ನಾರೀ ವಾ ದತ್ವಾ ದಾನಮಿದಂ ಭುವಿ ॥**
**ಸರ್ವಾನ್ಕಾಮಾನವಾಪ್ನೋತಿ ಜಾಯಮಾನಃ ಪುನಃಪುನಃ ॥ ೨೬ ॥**

**ಆಮಂತ್ರ್ಯ ಸಾಧುಕುಲಶೀಲಗುಣಾನ್ವಿತಾಯ ।**
**ವಿಪ್ರಾಯ ಯಃ ಕನಕಧೇನುಮಿಮಾಂ ಪ್ರದದ್ಯಾತ್ ।**
**ಪ್ರಾಪ್ನೋತಿ ಸಿದ್ಧ ಮುನಿಕಿನ್ನರದೇವಜುಷ್ಟಂ ।**
**ಕನ್ಯಾಶತೈಃ ಪರಿವೃತಂ ಪದಮಿಂದುಮೌಲೇಃ ॥ ೨೭ ॥**

**ಇತೀ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಸುವರ್ಣಧೇನುದಾನವ್ರತವಿಧಿವರ್ಣನಂ ನಾಮಷಟ್ಪಂಚಾಶದುತ್ತರಶತತಮೋಽಧ್ಯಾಯಃ.**

---

೨೬. ಆಗ ಯಾವ ಮನೋವ್ಯಥೆಗಳಾಗಲಿ, ರೋಗರುಜಿನಗಳಾಗಲಿ, ಅವನಿಗೆ ಬಾರದೆ ಸುಂದರವಾದ ರೂಪಿನಿಂದ ಕೂಡಿ ಯಾವಾಗಲೂ ಪ್ರಿಯವಾದ ಮಾತುಗಳನ್ನೇ ಆಡುತ್ತಾ ಸೌಮ್ಯನೆನಿಸುವನು. ಪುರುಷನಾಗಲಿ, ಸ್ತ್ರೀಯಾಗಲಿ ಹೀಗೆ ಭೂಲೋಕದಲ್ಲಿ ಈ ದಾನವನ್ನು ಮಾಡಿ ಸಕಲ ಇಷ್ಟಾರ್ಥಗಳನ್ನೂ ಪಡೆಯುವರಲ್ಲದೆ ಪುನಃ ಪುನಃ ಹೀಗೆಯೇ ಅವತರಿಸಿ ಅದರಂತೆಯೇ ನಡೆದುಕೊಳ್ಳುವರು.

೨೭. ಸಾಧುವೂ, ಸತ್ಕುಲ, ಸದ್ಗುಣ, ಸುಶೀಲ ಇವುಗಳಿಂದ ಯುಕ್ತನೂ ಆದ ಬ್ರಾಹ್ಮಣನನ್ನು ಗೌರವದಿಂದ ಬರಮಾಡಿಕೊಂಡು, ಅವನಿಗೆ ಉಚಿತವಾದ ಪೂಜಾದಿಗಳನ್ನು ಸಲ್ಲಿಸಿ, ಈ ಸುವರ್ಣಮಯವಾದ ಧೇನುವನ್ನು ದಾನಮಾಡುವ ವ್ಯಕ್ತಿಯು; ಸಿದ್ಧರು, ಮುನಿಗಳು, ಕಿನ್ನರರು ಮತ್ತು ದೇವತೆಗಳು ಇವರುಗಳಿಗೆ ಸದಾ ಆಶ್ರಯವಾಗಿಯೂ, ನೂರಾರುಮಂದಿ ಕನ್ಯಕೆಯರಿಂದ ವ್ಯಾಪ್ತವಾಗಿಯೂ ಇರುವ ಪರಮೇಶ್ವರನ ಸ್ಥಾನವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಚಿನ್ನದ ಧೇನುವಿನ ದಾನವ್ರತ ವಿಧಿವರ್ಣನೆಯೆಂಬ ನೂರೈವತ್ತಾರನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಅಥಾತಃ ಸಂಪ್ರವಕ್ಷ್ಯಾಮಿ ದಾನಮನ್ಯತ್ಸುದುರ್ಲಭಂ |
ರತ್ನಧೇನ್ವಿತಿ ವಿಖ್ಯಾತಂ ಗೋಲೋಕಫಲದಂ ನೃಣಾಂ || ೧ ||

ಪುಣ್ಯಂ ದಿನಮಥಾಸಾದ್ಯ ಗೋಮಯೇನೋಪಲೇಪನಂ |
ಕೃತ್ವಾ ಭೂಮೌ ಮಹಾರಾಜ ತತ್ರ ಧೇನುಂ ಪ್ರಕಲ್ಪಯೇತ್ || ೨ ||

ಧೇನುಂ ರತ್ನಮಯೀಂ ಕುರ್ಯಾತ್ತತ್ತತ್ಸಂಕಲ್ಪಪೂರ್ವಿಕಾಂ |
ಸ್ಥಾಪಯೇತ್ಪದ್ಮರಾಗಾಣಾಮೇಕಾಶೀತಿಂ ಮುಖೇ ಬುಧಃ || ೩ ||

---

### ನೂರಐವತ್ತೇಳನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರ! ರತ್ನಧೇನುದಾನಮಹಿಮೆಯನ್ನು ಈಗ ಹೇಳುತ್ತೇನೆ ಕೇಳು; ದುರ್ಲಭವಾದ ಈ ರತ್ನಧೇನುವನ್ನು ದಾನ ಮಾಡಿದರೆ ಮಾನವರಿಗೆ ಗೋಲೋಕಪ್ರಾಪ್ತಿರೂಪವಾದ ಫಲವುಂಟಾಗುವುದು.

೨. ಎಲೈ ಮಹಾರಾಜನೇ! ಒಂದು ಶುಭದಿವಸವನ್ನು ಗೊತ್ತುಮಾಡಿಕೊಂಡು ಆ ದಿನ, ಗೋಮಯದಿಂದ ಭೂಮಿಯನ್ನು ಚೆನ್ನಾಗಿ ಸಾರಿಸಿ, ಆ ಭೂಮಿಯಲ್ಲಿ ರತ್ನಧೇನುವನ್ನು ರಚಿಸಬೇಕು.

೩. ಪಂಡಿತನಾದವನು ರತ್ನಮಯವಾದ ಧೇನುವನ್ನು ರಚಿಸುತ್ತೇನೆಂದು ಮೊದಲು ಸಂಕಲ್ಪಮಾಡಿ, ರತ್ನಗಳಿಂದ ಮೊದಲು ಶರೀರವನ್ನು ರಚಿಸಬೇಕು. ಬಳಿಕ ಎಂಭತ್ತೊಂದು ಪದ್ಮರಾಗಮಣಿಗಳನ್ನು ಜೋಡಿಸಿ ಆ ಧೇನುವಿನ ಮುಖವನ್ನು ರಚಿಸಬೇಕು.

**ಪುಷ್ಪರಾಗಶತಂ ಧೇನೋಃ ಪಾದಯೋಃ ಪರಿಕಲ್ಪಯೇತ್ ।**
**ಲಲಾಟೇ ಹೇಮತಿಲಕಂ ಮುಕ್ತಾಫಲಶತಂ ದೃಶೋಃ ॥ ೪ ॥**

**ಭ್ರೂಯುಗೇ ವಿದ್ರುಮಶತಂ ಶುಕ್ತೀ ಕರ್ಣದ್ವಯೇ ಸ್ಮೃತೇ ।**
**ಕಾಂಚನಾನಿ ಚ ಶೃಂಗಾಣಿ ಶಿರೋ ವಜ್ರಶತಾತ್ಮಕಂ ॥ ೫ ॥**

**ಗ್ರೀವಾಯಾಂ ನೇತ್ರಪುಟಕೇ ಗೋಮೇದಕಶತಂ ತಥಾ ।**
**ಇಂದ್ರನೀಲಶತಂ ಪೃಷ್ಠೇ ವೈಡೂರ್ಯಶತಂ ಪಾರ್ಶ್ವಕೇ ॥ ೬ ॥**

**ಸ್ಫಾಟಿಕೈರುದರಂ ಕಾರ್ಯಂ ಸೌಗಂಧಿಕಶತಂ ಕಟೌ ।**
**ಖುರಾ ಹೇಮಮಯಾಃ ಕಾರ್ಯಾಃ ಪುಚ್ಛಂ ಮುಕ್ತಾವಲೀಮಯಂ ॥ ೭ ॥**

---

೪. ನೂರು ಪುಷ್ಯರಾಗಮಣಿಗಳಿಂದ ಹಸುವಿನ ಪಾದರಚನೆಮಾಡಬೇಕು. ಹಣೆಯಲ್ಲಿ ಚಿನ್ನದ ತಿಲಕವನ್ನೂ, ನೂರು ಮುತ್ತಿನಮಣಿಗಳಿಂದ ಕಣ್ಣುಗಳನ್ನೂ ರಚಿಸಬೇಕು.

೫. ನೂರು ಹವಳಗಳಿಂದ ಎರಡು ಹುಬ್ಬುಗಳನ್ನೂ ಮುತ್ತಿನ ಚಿಪ್ಪುಗಳಿಂದ ಎರಡು ಕಿವಿಗಳನ್ನೂ, ಚಿನ್ನದಿಂದ ಕೊಂಬುಗಳನ್ನೂ, ನೂರು ವಜ್ರಗಳಿಂದ ತಲೆಯನ್ನೂ ರಚಿಸಬೇಕು.

೬. ಕೊರಳಲ್ಲಿಯೂ ಮತ್ತು ಕಣ್ಣುಗಳ ಗುಡ್ಡೆಗಳ ಮೇಲ್ಭಾಗದಲ್ಲಿಯೂ (ಅಂದರೆ ರೆಪ್ಪೆಗಳಲ್ಲಿಯೂ) ನೂರು ಗೋಮೇದಕಮಣಿಗಳನ್ನೂ ಹಾಗೆಯೇ ಪೃಷ್ಠಪ್ರದೇಶದಲ್ಲಿ ನೂರು ಇಂದ್ರನೀಲಮಣಿಗಳನ್ನೂ ಪಾರ್ಶ್ವಪ್ರದೇಶಗಳಲ್ಲಿ ನೂರು ವೈಡೂರ್ಯಮಣಿಗಳನ್ನೂ ಮೆಟ್ಟಿರಬೇಕು.

೭. ಸ್ಫಟಿಕಮಣಿಗಳಿಂದ ಧೇನುವಿನ ಹೊಟ್ಟೆಯನ್ನು ರಚಿಸಿ, ಕಟಿಪ್ರದೇಶದಲ್ಲಿ ನೂರು ಸೌಗಂಧಿಕಮಣಿಗಳನ್ನು ಸ್ಥಾಪಿಸಬೇಕು. ಚಿನ್ನದಿಂದ ಗೊರಸುಗಳನ್ನೂ, ಮುತ್ತಿನಹಾರಗಳಿಂದ ಬಾಲವನ್ನೂ ಮಾಡಬೇಕು.

**ಸೂರ್ಯಕಾಂತೇಂದುಕಾಂತೌ ಚ ಘ್ರಾಣೇ ಕರ್ಪೂರಚಂದನೈಃ ।**
**ಕುಂಕುಮೇನ ಚ ರೋಮಾಣಿ ರೌಪ್ಯಂ ನಾಭಿಂ ಚ ಕಾರಯೇತ್ ॥೮॥**

**ಗಾರುತ್ಮತಶತಂ ತದ್ವದಪಾನೇ ಪರಿಕಲ್ಪಯೇತ್ ।**
**ತಥಾನ್ಯಾನಿ ಚ ರತ್ನಾನಿ ಸ್ಥಾಪಯೇತ್ಸರ್ವಸಂಧಿಷು ॥ ೯ ॥**

**ಕುರ್ಯಾಚ್ಛರ್ಕರಯಾ ಜಿಹ್ವಾಂ ಗೋಮಯಂ ಚ ಗುಡಾತ್ಮಕಂ ।**
**ಗೋಮೂತ್ರಮಾಜ್ಯೇನ ತಥಾ ದಧಿದುಗ್ಧಸ್ವರೂಪತಃ ॥ ೧೦ ॥**

**ಪುಚ್ಛಾಗ್ರೇ ಚಾಮರಂ ದದ್ಯಾತ್ಸ್ತನಯೋಸ್ತಾಮ್ರದೋಹನಂ ।**
**ಕಾರಯೇದೇವಮೇವಂ ತು ಚತುರ್ಥಾಂಶೇನ ವತ್ಸಕಂ ॥ ೧೧ ॥**

**ನಾನಾಫಲಾನಿ ಪಾರ್ಶ್ವೇಷು ಕೃತ್ವಾ ಪೂಜಾಂ ಪ್ರಯತ್ನತಃ ।**
**ಗುಡಧೇನುವದಾವಾಹ್ಯ ಇದಂ ಚೋದಾಹರೇತ್ತತಃ ॥ ೧೨ ॥**

---

೮. ಸೂರ್ಯಕಾಂತ ಮತ್ತು ಚಂದ್ರಕಾಂತಮಣಿಗಳನ್ನು ಮೂಗಿನ ಹೊಳ್ಳೆಗಳಲ್ಲಿ ಸ್ಥಾಪಿಸಿ, ಕರ್ಪೂರ, ಚಂದನ ಮತ್ತು ಕೇಸರಿ ಇವುಗಳಿಂದ ರೋಮಗಳನ್ನು ರಚಿಸಬೇಕು. ಹೊಕ್ಕಳುಪ್ರದೇಶವನ್ನು ಬೆಳ್ಳಿಯಿಂದ ರಚಿಸಬೇಕು.

೯. ಹಾಗೆಯೇ ನೂರು ಗುರುಡಪಚ್ಚೇಮಣಿಗಳಿಂದ ಅಪಾನವಾಯು ಸ್ಥಳವನ್ನು ರಚಿಸಿ, ಸರ್ವ ಅವಯವಗಳ ಸಂಧಿಗಳಲ್ಲಿಯೂ ಬೇರೆಬೇರೆ ರತ್ನಗಳನ್ನು ಸ್ಥಾಪಿಸಬೇಕು.

೧೦. ಸಕ್ಕರೆಯಿಂದ ನಾಲಗೆಯನ್ನು ಮಾಡಿ, ಗೋಮಯವನ್ನು ಬೆಲ್ಲದಿಂದ ರಚಿಸಬೇಕು. ತುಪ್ಪದಿಂದ ಗೋಮೂತ್ರವನ್ನು ರಚಿಸಿ, ಮೊಸರು, ಹಾಲು ಇವುಗಳನ್ನು ಸಾಕ್ಷಾತ್ತಾಗಿ ಸ್ಥಾಪಿಸಬೇಕು.

೧೧. ಬಾಲದ ತುದಿಗಾಗಿ ಚಾಮರವನ್ನು ಕಟ್ಟಿ, ಮೊಲೆಗಳ ಬಳಿ ಹಾಲು ಕರೆಯುವ ಪಾತ್ರೆಯನ್ನು ಸ್ಥಾಪಿಸಬೇಕು. ಬಳಿಕ ಈ ಹಸುವಿನ ನಾಲ್ಕನೆಯ ಒಂದಂಶಪ್ರಮಾಣದಿಂದ ಅದರ ಕರುವನ್ನು ನಿರ್ಮಿಸಬೇಕು.

೧೨. ಅದರ ಪಾರ್ಶ್ವಗಳಲ್ಲಿ ನಾನಾವಿಧವಾದ ಹಣ್ಣುಗಳನ್ನಿಟ್ಟು ಭಕ್ತಿಪೂರ್ವಕವಾಗಿ ಪೂಜೆಮಾಡಬೇಕು. ಗುಡಧೇನುವಿನಂತೆಯೇ ಈ ರತ್ನಧೇನುವನ್ನೂ ಆವಾಹನೆಮಾಡಿ ಈ ವಾಕ್ಯವನ್ನುಚ್ಚರಿಸಬೇಕು.

ತ್ವಾಂ ಸರ್ವದೇವಗಣವಾಸಮಿತಿ ಸ್ತುವಂತಿ ।
ರುದ್ರೇಂದ್ರಚಂದ್ರಕಮಲಾಸನವಾಸುದೇವಾಃ ॥
ತಸ್ಮಾತ್ಸಮಸ್ತಭುವನತ್ರಯ ದೇಹಯುಕ್ತಾ ।
ಮಾಂ ಪಾಹಿ ದೇವಿ ಭವಸಾಗರಮಗ್ನಮಾಶು ॥ ೧೩ ॥

ಏವಮಾಮಂತ್ರ್ಯ ತಾಂ ಧೇನುಂ ವಿಪ್ರಾಯ ಪ್ರತಿಪಾದಯೇತ್ ।
ಸಂಪೂಜ್ಯ ವಸ್ತ್ರಾಭರಣೈರ್ವಿಧಿಜ್ಞಂ ವೇದಪಾರಗಂ ॥ ೧೪ ॥

ತತಶ್ಚ ದಕ್ಷಿಣಾಂ ದತ್ವಾ ಪ್ರಣಿಪತ್ಯ ಕ್ಷಮಾಪಯೇತ್ ।
ಏವಂ ಯಃ ಕುರುತೇ ಪಾರ್ಥ ತಸ್ಯ ಪುಣ್ಯಫಲಂ ಶೃಣು ॥ ೧೫ ॥

ಕಲ್ಪಕೋಟಿಶತಂ ಸಾಗ್ರಂ ಶಿವಲೋಕೇ ಸುಖಂ ವಸೇತ್ ।
ತತಃ ಕಾಲೇ ಬಹುತಿಥೇ ರಾಜರಾಜೋ ಭವೇದಿಹ ॥ ೧೬ ॥

ಸರ್ವಕಾಮಸಮೃದ್ಧಶ್ಚ ಶತ್ರುಪಕ್ಷಕ್ಷಯಂಕರಃ ॥ ೧೭ ॥

---

೧೩. "ದೇವಿ! ರುದ್ರ, ಇಂದ್ರ, ಚಂದ್ರ, ಬ್ರಹ್ಮ ಮತ್ತು ವಿಷ್ಣು ಇವರು ನಿನ್ನನ್ನು ಸಕಲ ದೇವತೆಗಳ ಗಣಗಳಿಗೂ ಆವಾಸಭೂಮಿಯೆಂದು ಸ್ತೋತ್ರ ಮಾಡುವರು. ಆದ್ದರಿಂದ ಸಕಲ ಲೋಕದ ಪ್ರಾಣಿಗಳನ್ನೂ ದೇಹದಲ್ಲೇ ಧರಿಸಿಕೊಂಡಿರುವ ನೀನು, ಸಂಸಾರವೆಂಬ ಸಾಗರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸಿ ಕಾಪಾಡು" ಎಂದು ಹೇಳಬೇಕು.

೧೪. ವೇದವೇದಾಂಗಪಾರಂಗತನೂ ವಿಧಿಯನ್ನರಿತವನೂ ಆದ ಬ್ರಾಹ್ಮಣನನ್ನು ವಸ್ತ್ರಾಭರಣಾದಿಗಳಿಂದ ಪೂಜಿಸಿ, ಆ ಧೇನುವನ್ನು ದಕ್ಷಿಣೆಯೊಡನೆ ಅವನಿಗೆ ಸಮರ್ಪಿಸಿ ಅವನನ್ನು ಕ್ಷಮಾಪಣೆ ಬೇಡಬೇಕು.

೧೫–೧೭. ಅಯ್ಯಾ ಕುಂತೀಪುತ್ರ! ಹೀಗೆ ವಿಧಿಪೂರ್ವಕವಾಗಿ ಈ ರತ್ನಧೇನುವನ್ನು ದಾನಮಾಡುವವನಿಗೆ ಉಂಟಾಗುವ ಫಲಗಳನ್ನು ತಿಳಿಸುವೆನು ಕೇಳು. ನೂರುಕೋಟಿ ಕಲ್ಪಗಳು ಸಂಪೂರ್ಣವಾಗುವ ವರೆಗೆ ಮಾನವನು ಶಿವಲೋಕದಲ್ಲಿ ಸುಖದಿಂದ ವಾಸಮಾಡುವನು. ಆರೀತಿ ಬಹಳಕಾಲ ಕಳೆದ ಮೇಲೆ ಪುನಃ ಭೂಲೋಕಕ್ಕೆ ಬಂದು ಇಲ್ಲಿ ರಾಜಾಧಿರಾಜನಾಗುವನು. ಇವನಿಗೆ ಸಕಲ ಇಷ್ಟಾರ್ಥಗಳೂ ಸಮೃದ್ಧಿಯಾಗಿ ದೊರೆತು, ಯಾವಾಗಲೂ ಇವನು ಶತ್ರುಪಕ್ಷವನ್ನು ನಾಶಪಡಿಸುವನಾಗುತ್ತಾನೆ.

ಇತಿ ಸಕಲವಿಧಿಜ್ಞೋ ರತ್ನಧೇನುಪ್ರದಾನಂ ।
ವಿತರತಿ ಸವಿಮಾನಂ ಪ್ರಾಪ್ಯ ದೇದೀಪ್ಯಮಾನಂ ॥
ಸಕಲಕಲುಷಮುಕ್ತೋ ಬಂಧುಭಿಃ ಪುತ್ರಪೌತ್ರೈಃ ।
ಸ ಹಿ ಮದನಸರೂಪಃ ಸ್ಥಾನಮಭ್ಯೇತಿ ಶಂಭೋಃ ॥ ೧೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ರತ್ನಧೇನು ದಾನವಿಧಿವರ್ಣನಂ ನಾಮಸಪ್ತಪಂಚಾಶದುತ್ತರಶತತಮೋಽಧ್ಯಾಯಃ.



---

೧೮. ಈರೀತಿ ಸಕಲ ವಿಧಿಗಳನ್ನೂ ತಿಳಿದು ಸರಿಯಾಗಿ ರತ್ನಧೇನುವನ್ನು ದಾನಮಾಡುವ ಮಾನವನು ಪ್ರಕಾಶಿಸುತ್ತಿರುವ ವಿಮಾನವನ್ನೇರಿ ತನ್ನ ಬಂಧುಗಳು, ಮಕ್ಕಳು ಮೊಮ್ಮಕ್ಕಳು ಇವರುಗಳೊಡನೆ ತಾನೂ ಪಾಪನಿರ್ಮುಕ್ತನಾಗಿ ಮನ್ಮಥನಿಗೆ ಸಮಾನವಾದ ರೂಪನ್ನು ಹೊಂದಿ ಶಂಭುವಿನ ಸ್ಥಾನವನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ರತ್ನಧೇನು ದಾನವ್ರತವಿಧಿವರ್ಣನೆಯೆಂಬ ನೂರೈವತ್ತೇಳನೆಯ ಅಧ್ಯಾಯ ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಪಂಚಾಶದುತ್ತರಶತತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಪ್ರಸೂಯಮಾನಾ ದಾತವ್ಯಾ ಧೇನುರ್ಬ್ರಾಹ್ಮಣಪುಂಗವೇ |
ವಿಧಿನಾ ಕೇನ ಧರ್ಮಜ್ಞ ದಾನೇ ತಸ್ಯಾಶ್ಚ ಕಿಂ ಫಲಂ || ೧ ||

|| ಶ್ರೀಕೃಷ್ಣ ಉವಾಚ ||

ಪ್ರಸೂಯಮಾನಾತಿಪುಣ್ಯೈಃ ಪ್ರಾಪ್ಯತೇ ಗೌರ್ನೃಪೋತ್ತಮ |
ಪ್ರಾಪ್ನುವಂತಿ ನರಾಃ ಕೇಚಿತ್ಪುಣ್ಯಸಂಭಾರವಿಸ್ತರಾಃ || ೨ ||

---

## ನೂರಐವತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಧರ್ಮಸೂಕ್ಷ್ಮವನ್ನರಿತ ದೇವನೇ! ಕರುವನ್ನು ಹಾಕುತ್ತಿರುವ ಹಸುವನ್ನು ಯಾವ ವಿಧಿಯಿಂದ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು. ಹೀಗೆ ದಾನಮಾಡಿದರೆ ಉಂಟಾಗುವ ಫಲವಾವುದು? ಇದನ್ನು ನನಗೆ ತಿಳಿಸು ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ರಾಜೇಂದ್ರ! ಕರುವನ್ನು ಈನುತ್ತಿರುವ ಹಸುವು ದೊರೆಯುವುದೇ ಒಂದು ಪುಣ್ಯ. ಅತಿಶಯ ಪುಣ್ಯಶಾಲಿಗಳಾದವರಿಗೆ ಮಾತ್ರ ಇದು ದೊರೆಯುವುದು.

**ಯಾವತ್ಪಾದೌ ಯೋನಿಗತೌ ಶಿರಶ್ಚೈವ ಪ್ರದೃಶ್ಯತೇ ।**
**ತಾವದ್ಗೌಃ ಪೃಥಿವೀ ಜ್ಞೇಯಾ ಯಾವದ್ಗರ್ಭಂ ನ ಮುಂಚತಿ ॥ ೩ ॥**

**ಗೌರ್ಯಾವದ್ದ್ವಿಮುಖೀ ಚೈವ ಯಥಾ ಭವತಿ ಭಾರತ ।**
**ತದಾಸೌ ಪೃಥಿವೀ ಜ್ಞೇಯಾ ಸಶೈಲವನಕಾನನಾ ॥ ೪ ॥**

**ದತ್ತ್ವೋಭಯಮುಖೀಂ ರಾಜನ್ಯತ್ಪುಣ್ಯಂ ಪ್ರಾಪ್ಯತೇ ನೃಭಿಃ ।**
**ನ ತದ್ವರ್ಣಯಿತುಂ ಯಾತಿ ಮುಖೇನೈಕೇನ ಕೇನಚಿತ್ ॥ ೫ ॥**

**ಕಿಮಿಷ್ಟೈರ್ಬಹುಭಿರ್ಯಜ್ಞೈರ್ದಾನೈರ್ದತ್ತೈಶ್ಚ ಸತ್ತಮ ।**
**ಪ್ರಸೂಯಮಾನಾಂ ಗಾಮೇಕಾಂ ದೇಹಿ ಕಿಂ ಬಹುನಾ ತವ ॥ ೬ ॥**

---

೩. ಪ್ರಸವಕಾಲದಲ್ಲಿ ಇನ್ನೂ ಕರುವಿನ ಕಾಲುಗಳು ಯೋನಿಯಲ್ಲಿಯೇ ಇದ್ದು ಕೇವಲ ತಲೆಯೊಂದು ಮಾತ್ರ ಕಾಣಿಸುತ್ತಾ ಪೂರ್ಣಪ್ರಸವವು ಆಗದಿರುವ ಆ ಹಸುವನ್ನು ಪೃಥಿವಿಯೆಂದು ತಿಳಿಯಬೇಕು.

೪. ಎಲೈ ಭರತಕುಲಶ್ರೇಷ್ಠನೇ! ಅತ್ತಕಡೆ ಕರುವಿನ ಮುಖ, ಇತ್ತಕಡೆ ತಾಯಿಯ ಮುಖ ಹೀಗೆ ಹಸುವು ಉಭಯ ಮುಖಗಳಿಂದ ಯುಕ್ತವಾಗಿರುವಾಗ, ಆ ಧೇನುವನ್ನು ಪರ್ವತ, ಅರಣ್ಯ ಮುಂತಾದುವುಗಳಿಂದ ಕೂಡಿದ ಭೂಮಿಯೆಂದೇ ಭಾವಿಸಬೇಕು.

೫. ಎಲೈ ರಾಜನೇ! ಈ ಉಭಯಮುಖೀ ಗೋವನ್ನು ದಾನಮಾಡಿದರೆ ಲಭಿಸುವ ಪುಣ್ಯರಾಶಿಯನ್ನು ವರ್ಣಿಸಲು ಯಾರಿಗೆ ತಾನೆ ಸಾಧ್ಯವಾದೀತು.

೬. ಎಲೈ ಸತ್ಪುರುಷಶ್ರೇಷ್ಠನೇ! ಎಷ್ಟು ಯಜ್ಞಗಳನ್ನು ಮಾಡಿದರೂ, ವಿಧವಿಧವಾದ ದಾನಗಳನ್ನು ಮಾಡಿದರೂ ಏನು ಪ್ರಯೋಜನ? ಕರುವನ್ನು ಪ್ರಸವಿಸುವ ಸಮಯದಲ್ಲಿ ಒಂದು ಉಭಯಮುಖೀ ಗೋವನ್ನು ದಾನಮಾಡು. ಅದರ ಸಮಾನವಾದ ದಾನ ಯಾವುದೂ ಇಲ್ಲ.

ಏಕೈವ ಪಾತಿ ನರಕಾತ್ಸುಖಿನೋಕ್ಕೈವ ಕಾರಯೇತ್ ।
ಏಕಾಪಿ ದ್ವಿಮುಖೀ ದತ್ತಾ ಗೌಗೌರ್ಭವತಿ ಭಾರತ || ೭ ||

ಸ್ವರ್ಣಶೃಂಗೀಂ ರೌಪ್ಯಖುರಾಂ ಮುಕ್ತಾಲಾಂಗೂಲಭೂಷಿತಾಂ ।
ಕಾಂಸ್ಯೋಪದೋಹನಾಂ ರಾಜನ್ನಲಂಕೃತ್ಯ ದ್ವಿಜೋತ್ತಮೇ ||
ಪ್ರಸೂಯಮಾನಾಂ ಗಾಂ ದತ್ತ್ವಾ ಮಹತ್ಪುಣ್ಯಫಲಂ ಲಭೇತ್ ||೮||

ಯಾವಂತಿ ಧೇನುರೋಮಾಣಿ ವತ್ಸಸ್ಯಾಪಿ ನರಾಧಿಪ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ || ೯ ||

ಪಿತೄನ್ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾನ್ ।
ಸಮುದ್ಧರತ್ಯಸಂದಿಗ್ಧಂ ನರಕಾದ್ಭೂರಿದಕ್ಷಿಣಃ || ೧೦ ||

---

೭. ಈ ಹಸುವೊಂದೇ ಮಾನವನನ್ನು ನರಕದಿಂದ ಉದ್ಧಾರಮಾಡಿ ಸಕಲ ಸುಖಭಾಜನನ್ನಾಗಿ ಮಾಡುವುದು. ಎಲೈ ಭರತಕುಲಾವತಂಸನೇ! ಈ ಒಂದು ಉಭಯಮುಖೀ ಧೇನುವನ್ನು ದಾನಮಾಡುವುದರಿಂದ ಗೋಲೋಕ ಪ್ರಾಪ್ತಿಯಾಗುವುದು.

೮. ಈ ಧೇನುವಿಗೆ ಚಿನ್ನದ ಅಣಸುಗಳನ್ನೂ ಬೆಳ್ಳಿಯ ಗೊರಸುಗಳನ್ನೂ ಮುತ್ತಿನಹಾರದಿಂದ ಬಾಲವನ್ನೂ ಅಲಂಕರಿಸಿ, ಹಾಲು ಕರೆಯುವುದಕ್ಕೆ ಕಂಚಿನ ಪಾತ್ರೆಯನ್ನೂ ಇರಿಸಿ, ಪ್ರಸವೋನ್ಮುಖಿಯಾಗಿರುವ ಈ ಧೇನುವನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಿದರೆ ಅಪಾರವಾದ ಪುಣ್ಯಪ್ರಾಪ್ತಿಯಾಗುವುದು.

೯. ಆ ಹಸು ಮತ್ತು ಅದರ ಕರು, ಇವುಗಳ ಮೈಮೇಲೆ ಎಷ್ಟು ರೋಮಗಳಿವೆಯೋ ಅಷ್ಟು ಸಹಸ್ರ ವರ್ಷಗಳವರೆಗೆ ದಾತೃವು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

೧೦. ಇದರ ಜತೆಯಲ್ಲಿ ತುಂಬಾ ದಕ್ಷಿಣೆಯನ್ನೂ ಕೊಟ್ಟರೆ, ಆತನ ಪಿತೃ, ಪಿತಾಮಹ, ಪ್ರಪಿತಾಮಹರೆಲ್ಲರೂ ನರಕದಿಂದ ಉದ್ಧಾರವಾಗುತ್ತಾರೆ.

ಘೃತಕ್ಷೀರವಹಾ ನದ್ಯೋ ದಧಿಪಾಯಸಕರ್ದಮಾಃ ।
ತತ್ರ ತೇ ಯಾಂತಿ ಯತ್ರಾಸ್ತಿ ದ್ರುಮಶ್ಚೇಪ್ಸಿತಕಾಮದಃ ॥ ೧೧ ॥

ಯೋ ದದಾತಿ ಸುವರ್ಣೇನ ಬಹುನಾ ಸಹ ಭಾವಿನೀಂ ।
ಗೋಲೋಕಃ ಸುಲಭಸ್ತಸ್ಯ ಬ್ರಹ್ಮಲೋಕಶ್ಚ ಪಾರ್ಥಿವ ॥ ೧೨ ॥

ನ ದೇಯಾ ದುರ್ಬಲಾ ರಾಜನ್ ಧೇನುರ್ನೈವಾಲ್ಪದಕ್ಷಿಣಾ ।
ಕಾಮ್ಯೋಯಂ ವಿಧಿರುದ್ದಿಷ್ಟಃ ಫಲದೋ ವಿಧಿನಾ ಕೃತಃ ॥ ೧೩ ॥

ಸ್ತ್ರಿಯಶ್ಚ ತಂ ಚಂದ್ರಸಮಾನವಕ್ತ್ರಾಃ ।
ಪ್ರತಪ್ತಜಾಂಬೂನದತುಲ್ಯವರ್ಣಾಃ ॥

---

೧೧. ಈ ಧೇನುವನ್ನು ದಾನಮಾಡುವವನು ಹೋಗುವ ಕಡೆ, ತುಪ್ಪ ಮತ್ತು ಹಾಲು ಇವುಗಳಿಂದ ತುಂಬಿದ ನದಿಗಳು, ಪಾಯಸವೆಂಬ ಕೆಸರಿನಿಂದ ಕೂಡಿ ಹರಿಯುವುವು. ಅಲ್ಲದೆ ಸಕಲ ಇಷ್ಟಾರ್ಥಗಳನ್ನೂ ಕೊಡುವ ಕಲ್ಪವೃಕ್ಷಗಳು ಅವರಿರುವ ಸ್ಥಳದಲ್ಲೇ ಇರುತ್ತಾ ಸಕಲ ಸಲಕರಣೆಗಳನ್ನೂ ಒದಗಿಸಿ ಕೊಡುವುವು.

೧೨. ಅಯ್ಯಾ ರಾಜೇಂದ್ರ ! ಆಪಾರವಾದ ಸುವರ್ಣದೊಡನೆ ಈ ಧೇನುವನ್ನು ದಾನಮಾಡುವವನಿಗೆ ಗೋಲೋಕವೂ ಮತ್ತು ಬ್ರಹ್ಮಲೋಕವೂ ಸುಲಭವಾಗಿ ದೊರೆಯುವುವು.

೧೩. ಓ ರಾಜನೇ ! ಬಲಹೀನವಾದ ಹಸುವನ್ನೂ ಕೇವಲ ಅಲ್ಪದಕ್ಷಿಣೆಯನ್ನೂ ದಾನಮಾಡಬಾರದು. ಇದು ಕಾಮ್ಯವಾದ ದಾನ. ವಿಧಿಪೂರ್ವಕವಾಗಿ ಮಾಡಿದರೆ ಯಥೋಕ್ತ ಫಲಗಳೆಲ್ಲಾ ಉಂಟಾಗುವುವು.

೧೪. ಚಂದ್ರನಂತೆ ಮನೋಹರವಾದ ಮುಖ, ಪುಟಹಾಕಿದ ಚಿನ್ನದಂತೆ ಮೈಬಣ್ಣ, ಉನ್ನತವಾದ ನಿತಂಬಪ್ರದೇಶ, ಸೂಕ್ಷ್ಮವಾದ ಸೊಂಟ ಇವುಗಳಿಂದ

ಮಹಾನಿತಂಬಾಸ್ತನುವೃತ್ತಮಧ್ಯಾಃ ।
ಸೇವಂತ್ಯಜಸ್ರಂ ನಲಿನಾಭನೇತ್ರಾಃ ॥ ೧೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಉಭಯಮುಖೀ ಗೋದಾನವ್ರತವಿಧಿವರ್ಣನಂ ನಾಮಾಷ್ಟಪಂಚಾಶದುತ್ತರಶತತಮೋಽಧ್ಯಾಯಃ.



---

ಶೋಭಿಸುತ್ತಿರುವ ಸುಂದರೀಮಣಿಯರು ತಾವರೆಯಂತೆ ಸುಂದರವಾದ ತಮ್ಮ ನೇತ್ರಗಳಿಂದ ದೃಷ್ಟಿಯನ್ನು ಬೀರುತ್ತಾ ಈ ದಾತೃವನ್ನು ಅನವರತವೂ ಸೇವೆ ಮಾಡುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಉಭಯಮುಖೀ ಗೋದಾನವಿಧಿವರ್ಣನೆಯೆಂಬ ನೂರೈವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನಷಷ್ಟ್ಯುತ್ತರಶತತಮೋऽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಗೋಸಹಸ್ರವಿಧಾನಂ ಚ ಕಥಯಸ್ವ ಜನಾರ್ದನ ।
ಕಸ್ಮಿನ್ಕಾಲೇ ಪ್ರದಾತವ್ಯಂ ಕಥಂ ದೇಯಂ ಚ ತದ್ಭವೇತ್ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಗಾವಃ ಪವಿತ್ರಾ ಲೋಕಾನಾಂ ಗಾವ ಏವ ಪರಾಯಣಂ ।
ಬ್ರಹ್ಮಣಾ ಸೃಜತಾ ಲೋಕಾನ್ಸ್ವೃತ್ತಿಹೇತೋಃ ಪ್ರಜೇಶ್ವರ ॥
ಗಾವಃ ಪ್ರಥಮತಃ ಸೃಷ್ಟಾಸ್ತ್ರೈಲೋಕ್ಯಹಿತಕಾಮ್ಯಯಾ ॥ ೨ ॥

---

## ನೂರಐವತ್ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಓ ಜನಾರ್ದನ! ಸಹಸ್ರ ಗೋದಾನದ ವಿಧಿಯನ್ನು ನನಗೆ ಹೇಳು? ಇದನ್ನು ಯಾವ ಕಾಲದಲ್ಲಿ ದಾನ ಮಾಡಬೇಕು? ದಾನಮಾಡುವಾಗ ಅನುಸರಿಸಬೇಕಾದ ವಿಧಿಯಾವುದು? ದಯವಿಟ್ಟು ತಿಳಿಸು ಎಂದನು.

೨-೩. ಶ್ರೀಕೃಷ್ಣನು ಹೇಳುತ್ತಾನೆ—ಲೋಕದಲ್ಲಿ ಹಸುಗಳೇ ಎಲ್ಲಕ್ಕಿಂತಲೂ ಪವಿತ್ರವಾದುವು. ಇವುಗಳಿಗೆ ಉತ್ಕೃಷ್ಟಸ್ಥಾನವೇರ್ಪಟ್ಟಿರುವುದು. ಓ ನರಪತಿಯೇ! ಹಿಂದೆ ಬ್ರಹ್ಮನು ಲೋಕವ್ಯವಹಾರಕ್ಕೋಸ್ಕರ ಪ್ರಜಾಸೃಷ್ಟಿ ಮಾಡುವ ಕಾಲದಲ್ಲಿ ಮೂರು ಲೋಕಗಳಿಗೂ ಹಿತವನ್ನುಂಟುಮಾಡಬೇಕೆಂಬ ಅಪೇಕ್ಷೆಯಿಂದ ಹಸು

**ಯಾಸಾಂ ಮೂತ್ರಪುರೀಷೇಣ ದೇವತಾಯತನಾನ್ಯಪಿ ।**
**ಶುಚೀನಿ ಸಮಜಾಯಂತ ಕಿಂಭೂತಮಧಿಕಂ ತತಃ ॥ ೩ ॥**

**ಮೂಲಂ ಯಜ್ಞಸ್ಯ ಕಾಮ್ಯಸ್ಯ ಸರ್ವದೇವಮಯಾಃ ಶುಭಾಃ ।**
**ಗೋಮಯೇ ವಸತೇ ಲಕ್ಷ್ಮೀಃ ಪರ್ಯಾಪ್ತಂ ತನ್ನಿದರ್ಶನಂ ॥ ೪ ॥**

**ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಕೃತಂ ।**
**ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ॥ ೫ ॥**

**ಯಾಸಾಂ ಪುತ್ರೈರ್ಧೃತಾ ಲೋಕಾ ಧಾರಿತಾಃ ಸರ್ವದೇವತಾಃ ।**
**ತಾಸಾಂ ದಾನವಿಧಾನಂ ಚ ಶೃಣು ತತ್ಪೃಥಿವೀಪತೇ ॥ ೬ ॥**

---

ಗಳನ್ನೇ ಮೊದಲು ಸೃಷ್ಟಿಮಾಡಿದನು. ಈ ಗೋವುಗಳ ಮೂತ್ರ (ಗಂಜಲ) ಮತ್ತು ಪುರೀಷ (ಸಗಣಿ) ಇವುಗಳಿಂದ ದೇವಾಲಯಗಳು ಸಹ ಪರಶುದ್ಧವಾಗುವುವೆಂದ ಮೇಲೆ, ಇನ್ನು ಈ ಗೋವುಗಳ ಪರಿಶುದ್ಧಿಯ ವಿಷಯದಲ್ಲಿ ಹೆಚ್ಚೇನು ಹೇಳಬೇಕು.

೪. ಕಾಮ್ಯಗಳಾದ ಸಕಲ ಯಜ್ಞಗಳಿಗೂ ಈ ಗೋವುಗಳೇ ಮೂಲ ಕಾರಣವಾಗಿರುವುವು. ಶುಭಕರವಾದ ಈ ಗೋವುಗಳು ಸಕಲ ದೇವತಾಸ್ವರೂಪಗಳು. ಸಾಕ್ಷಾನ್ಮಹಾಲಕ್ಷ್ಮೀದೇವಿಯೇ ಈ ಗೋವುಗಳ ಪುರೀಷರೂಪವಾದ ಗೋಮಯದಲ್ಲಿ ನೆಲಸಿರುವಳೆಂದಮೇಲೆ ಇದಕ್ಕಿಂತ ಉತ್ಕೃಷ್ಟವಾದ ನಿದರ್ಶನವೇನು ಬೇಕು.

೫. ಗೋವುಗಳೂ, ಬ್ರಾಹ್ಮಣರೂ ಒಂದೇ ಬುಡಕಟ್ಟಿಗೆ ಸೇರಿದವರು. ಈ ಎರಡು ಭೇದಗಳನ್ನೊಳಗೊಂಡ ಒಂದೇ ವಂಶದ ಒಬ್ಬರಲ್ಲಿ ವೇದಗಳೂ ಇನ್ನೊಂದರಲ್ಲಿ ಹವಿಸ್ಸೂ (ತುಪ್ಪ) ಇರುವುವು.

೬. ಗೋವುಗಳ ಸಂತತಿಯಿಂದಲೇ ಸಕಲ ಲೋಕಗಳೂ ಪೋಷಿತವಾಗಿ ಉದ್ಧಾರವಾಗುತ್ತಿರುವುವು. ಇಂತಹ ಪ್ರಭಾವವುಳ್ಳ ಗೋವಿನ ದಾನವಿಧಿಯನ್ನು ಹೇಳುವೆನು ಕೇಳು.

ಏಕಾಽಪಿ ಗೌರ್ಗುಣೋಪೇತಾ ಕೃತ್ಸ್ನಂ ತಾರಯತೇ ಕುಲಂ ।
ಸುರೂಪಾ ಶೀಲಸಂಪನ್ನಾ ಯುವತಿಃ ಸುಪಯಸ್ವಿನೀ ॥ ೭ ॥

ಸುವತ್ಸಾ ಸುದುಹಾ ಚೈವ ಪಾಪರೋಗವಿವರ್ಜಿತಾ ।
ವಿಧಿವತ್ತ್ವಾದೃಶಾ ದತ್ತಾ ಕೃತ್ಸ್ನಂ ತಾರಯತೇ ಕುಲಂ ॥ ೮ ॥

ಕಿಂಪುನರ್ದಶ ಯೋ ದದ್ಯಾಚ್ಛತಂ ವಾ ವಿಧಿಪೂರ್ವಕಂ ।
ಸಹಸ್ರಂ ತು ಪುನರ್ದದ್ಯಾತ್ತಸ್ಯ ವೈ ಕಿಮಿಹೋಚ್ಯತೇ ॥ ೯ ॥

ಗೋಸಹಸ್ರಂ ಪುರಾ ದತ್ತಂ ನಹುಷೇಣ ಮಹೀಭೃತಾ ।
ಸ ಗತೋ ಬ್ರಹ್ಮಣಃ ಸ್ಥಾನಂ ಯಯಾತಿಶ್ಚ ಮಹಾಮತಿಃ ॥ ೧೦ ॥

---

೭. ಓ ರಾಜೇಂದ್ರ! ಸರ್ವಗುಣಗಳಿಂದ ಕೂಡಿ, ಒಳ್ಳೆಯ ಆಕಾರ, ಸ್ವಭಾವ ಇವುಗಳನ್ನೊಳಗೊಂಡುದೂ, ತುಂಬಾ ಹಾಲುಕೊಡತಕ್ಕದ್ದೂ, ಎಳಕಾಗಿರುವುದೂ ಆದ ಒಂದೇ ಒಂದು ಹಸುವನ್ನು ದಾನಮಾಡುವುದರಿಂದ ದಾತೃವಿನ ವಂಶವೆಲ್ಲವೂ ಉದ್ಧಾರವಾಗುವುದು.

೮. ಒಳ್ಳೆಯ ಕರುವಿನೊಡಗೂಡಿದುದೂ, ಮನೋಹರವಾದ ಕೆಚ್ಚಲಿನಿಂದ ಯುಕ್ತವಾದುದೂ, ತುಂಬಾ ಹಾಲುಕೊಡುವುದೂ, ಕೆಟ್ಟರೋಗ ದೋಷಾದಿಗಳಿಂದ ಬಿಡಲ್ಪಟ್ಟುದೂ ಆದ ಒಂದೇ ಹಸುವನ್ನು ವಿಧಿಪೂರ್ವಕವಾಗಿ ದಾನಮಾಡಿದರೆ, ಯಜಮಾನನ ವಂಶವು ಸಂಪೂರ್ಣವಾಗಿ ಉದ್ಧಾರವಾಗುವುದು.

೯. ಒಂದು ಗೋದಾನಕ್ಕೇ ಇಂತಹ ಅದ್ಭುತ ಫಲಪ್ರಾಪ್ತಿಯಿರುವಾಗ ಹತ್ತು ಗೋದಾನದಿಂದುಂಟಾಗುವ ಫಲವನ್ನು ಹೇಳಲಾದೀತೆ? ನೂರು ಅಥವಾ ಸಾವಿರ ಹಸುಗಳನ್ನು ಒಟ್ಟಿಗೆ ದಾನಮಾಡುವ ಮಹಾಪುರುಷನ ಪುಣ್ಯವನ್ನು ಇಷ್ಟೆಂದು ನಿರ್ಣಯಿಸಲು ತಾನೇ ಸಾಧ್ಯವೇ?

೧೦. ಹಿಂದೆ ನಹುಷಚಕ್ರವರ್ತಿಯು ಸಹಸ್ರ ಗೋವುಗಳನ್ನು ದಾನಮಾಡಿದನು. ಇದರಿಂದ ಅವನಿಗೆ ಬ್ರಹ್ಮಲೋಕವು ದೊರೆಯಿತು. ಮಹಾಮೇಧಾವಿಯಾದ ಯಯಾತಿಯೆಂಬ ರಾಜನೂ ಸಹಸ್ರ ಗೋದಾನಮಾಡಿ ಉತ್ತಮವಾದ ಸ್ಥಾನವನ್ನು ಪಡೆದನು.

**ಗಂಗಾತೀರೇ ಮಹದ್ದತ್ತಂ ಅದಿತ್ಯಾಃಪುತ್ರಕಾಮ್ಯಯಾ ।**
**ಲೇಭೇ ಪುತ್ರಂ ತ್ರಿಲೋಕೇಶಂ ನಾರಾಯಣಮಕಲ್ಮಷಂ　　॥ ೧೧ ॥**

**ಶ್ರೂಯಂತೇ ಪಿತೃಭಿರ್ಗೀತಾ ಗಾಥಾಸ್ತಾಃ ಶೃಣು ಭೂಪತೇ　॥ ೧೨ ॥**

**ಯದಿ ಕಶ್ಚಿತ್ಕುಲೇಽಸ್ಮಾಕಂ ಗೋಸಹಸ್ರಂ ಪ್ರದಾಪಯೇತ್ ।**
**ಯಾಸ್ಯಾಮಃ ಪರಮಾಂ ಸಿದ್ಧಿಂ ಕಾರಿತಾಂ ಪುಣ್ಯಕರ್ಮಣಾ　　॥ ೧೩ ॥**

**ದುಹಿತಾ ವಾ ಕುಲೇ ಕಾಚಿದ್ಗೋಸಹಸ್ರಪ್ರದಾಯಿನೀ ।**
**ಸೋಪಾನಃ ಸುಗತಿರ್ದತ್ತೋ ಭವಿಷ್ಯತಿ ನ ಸಂಶಯಃ　　॥ ೧೪ ॥**

**ಅತಃ ಪರಂ ಪ್ರವಕ್ಷ್ಯಾಮಿ ಯಜ್ಞಂ ವೈ ಸರ್ವಕಾಮಿಕಂ ।**
**ಗೋಸಹಸ್ರಂ ತದಾ ದದ್ಯಾಚ್ಛಾಸ್ತ್ರೋಕ್ತವಿಧಿವನ್ನರಃ　　॥ ೧೫ ॥**

---

೧೧. ಪುತ್ರಸಂತಾನವನ್ನು ಅಪೇಕ್ಷಿಸಿದ ಅದಿತಿದೇವಿಯು ಹಿಂದೆ ಗಂಗಾ ನದಿಯ ದಡದಲ್ಲಿ ಈ ಮಹಾದಾನವನ್ನು ಮಾಡಿದಳು. ಇದರಿಂದ ಪಾಪ ರಹಿತನೂ ಮೂರುಲೋಕಗಳಿಗೊಡೆಯನೂ ಆದ ಶ್ರೀಮನ್ನಾರಾಯಣನೇ ಅವಳಿಗೆ ಪುತ್ರನಾಗಿ ಜನಿಸಿದನು.

೧೨-೧೩. ಓ ರಾಜಶ್ರೇಷ್ಠನೇ! ಈಗಲೂ ನಮ್ಮ ಹಿರಿಯರು, ತಂದೆತಾಯಿಗಳು ಹೇಳುತ್ತಿದ್ದ ಗಾದೆಗಳು ಕೇಳಬರುತ್ತಿವೆ. ಅದನ್ನು ಹೇಳುವೆನು ಕೇಳು. ನಮ್ಮ ವಂಶದಲ್ಲಿ ಯಾರಾದರೂ ಮಹಾತ್ಮರು ಜನಿಸಿ ಸಹಸ್ರ ಗೋದಾನಮಾಡಿಯಾರೇ ! ಈ ಪುಣ್ಯಕಾರ್ಯದಿಂದಲಾದರೂ ನಾವು ಉತ್ತಮವಾದ ಗತಿಯನ್ನು ಹೊಂದಬಹುದು.

೧೪. ಅಥವಾ ನಮ್ಮ ವಂಶದಲ್ಲಿ ಜನಿಸಿದ ಹೆಣ್ಣುಮಗಳಾದರೂ ಸಹಸ್ರ ಗೋದಾನಮಾಡಿದರೆ ಅದರಿಂದಲಾದರೂ ನಮಗೆ ಸದ್ಗತಿಗೆ ಮಾರ್ಗವಾಗುವುದು. ಇದರಲ್ಲಿ ಸಂಶಯವಿಲ್ಲ ಎಂದು ಪಿತೃದೇವತೆಗಳು ಸದಾ ಹಾರೈಸುತ್ತಿರುವರು.

೧೫. ಓ ಯುಧಿಷ್ಠಿರ! ಸರ್ವಕಾಮಿಕವೆಂಬ ಯಜ್ಞವಿಚಾರವನ್ನು ಈಗ ಹೇಳುವೆನು ಕೇಳು. ಈ ಯಜ್ಞದಲ್ಲಿ ಮಾನವನು ವಿಧಿಪೂರ್ವಕವಾಗಿ ಸಹಸ್ರ ಗೋದಾನಮಾಡಬೇಕು.

**ತೀರ್ಥೇ ಗೋಷ್ಠೇ ಗೃಹೇ ವಾಪಿ ಮಂಡಪಂ ಕಾರಯೇಚ್ಛುಭಂ ।**
**ದಶದ್ವಾದಶಹಸ್ತಂ ವಾ ಚತುರ್ವಕ್ತ್ರಂ ಸತೋರಣಂ ॥ ೧೬ ॥**

**ತನ್ಮಧ್ಯೇ ಕಾರಯೇದ್ವೇದಿಂ ಚತುರ್ಹಸ್ತಾಮನೂಪಮಾಂ ।**
**ಹಸ್ತಮಾತ್ರಪ್ರಮಾಣೇನ ಹಸ್ತೇನ ಸಮಲಂಕೃತಾಂ ॥ ೧೭ ॥**

**ಪೂರ್ವೋತ್ತರೇಽಥ ದಿಗ್ಭಾಗೇ ಗ್ರಹವೇದಿಂ ಪ್ರಕಲ್ಪಯೇತ್ ।**
**ಗ್ರಹಯಜ್ಞವಿಧಾನೇನ ಗ್ರಹಾಂಸ್ತತ್ರ ಕ್ರಮಾದ್ಯಜೇತ್ ॥ ೧೮ ॥**

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಪೂಜ್ಯಾಃ ಪ್ರಥಮಮೇವ ಹಿ ।**
**ಋತ್ವಿಜಃ ಪರಿಕರ್ತವ್ಯಾ ಷೋಡಶಾಷ್ಟೌ ಚ ಶೋಭನಾಃ ॥ ೧೯ ॥**

**ಚತ್ವಾರೋ ವಾ ಮಹಾರಾಜ ಉಪಾಧ್ಯಾಯಶ್ಚ ಪಂಚಮಃ ।**
**ಸರ್ವಾಭರಣಸಂಪನ್ನಾಃ ಕರ್ಣವೇಷ್ಟಾಂಗುಲೀಯಕೈಃ ॥ ೨೦ ॥**

---

೧೬. ಪುಣ್ಯತೀರ್ಥಕ್ಷೇತ್ರ, ದನಗಳ ಕೊಟ್ಟಿಗೆ, ಅಥವಾ ಮನೆ ಇವುಗಳಲ್ಲಿ ಎಲ್ಲಿಯಾದರೂ ಹನ್ನೆರಡು ಹಸ್ತಪರಿಮಾಣವುಳ್ಳ ಒಂದು ಚೌಕನಾದ ಮಂಟಪ ವನ್ನು ರಚಿಸಬೇಕು. ಇದಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಬಾಗಿಲನ್ನಿಟ್ಟು ತೋರಣಗಳಿಂದ ಅಲಂಕರಿಸಬೇಕು.

೧೭–೧೮. ಈ ಮಂಟಪಮಧ್ಯದಲ್ಲಿ ನಾಲ್ಕು ಹಸ್ತಪ್ರಮಾಣವುಳ್ಳ ಒಂದು ಅಸದೃಶವಾದ ವೇದಿಕೆಯನ್ನು ನಿರ್ಮಿಸಬೇಕು. ಇದರ ಪೂರ್ವ ಮತ್ತು ಉತ್ತರ ದಿಕ್ಕುಗಳಮಧ್ಯ ಒಂದು ಹಸ್ತಪ್ರಮಾಣದಿಂದ ಗ್ರಹಾರಾಧನೆಗಾಗಿ ವೇದಿಕೆ ಕಲ್ಪಿಸಿ ಅದನ್ನು ಅಲಂಕರಿಸಬೇಕು. ಅದರಲ್ಲಿ ಗ್ರಹಯಜ್ಞವಿಧಿಗನುಸಾರವಾಗಿ ಗ್ರಹ ಗಳನ್ನಾವಾಹನೆಮಾಡಿ ಕ್ರಮವಾಗಿ ಪೂಜಿಸಬೇಕು.

೧೯. ಬಳಿಕ ಬ್ರಹ್ಮ, ವಿಷ್ಣು, ರುದ್ರ ಈ ದೇವತೆಗಳನ್ನು ಮೊದಲು ಪೂಜಿಸಬೇಕು. ಇದಕ್ಕೆ ಹದಿನಾರು ಅಥವಾ ಎಂಟು ಮಂದಿಯನ್ನಾದರೂ ಶುಭಲಕ್ಷಣರಾದ ಋತ್ವಿಕ್ಕುಗಳನ್ನು ನಿಯಮಿಸಬೇಕು.

೨೦–೨೧. ಅಷ್ಟು ಮಾಡಲು ಸಾಧ್ಯವಿಲ್ಲದಿದ್ದರೆ ನಾಲ್ಕು ಮಂದಿಯ ನ್ನಾದರೂ ನಿಯಮಿಸಿಕೊಳ್ಳಬೇಕು. ಐದನೆಯವನನ್ನಾಗಿ ಒಬ್ಬ ಆಚಾರ್ಯ

**ಶೋಭಿತಾಶ್ಛತ್ರಸಂಪನ್ನಾಸ್ತಾಮ್ರಪಾತ್ರದ್ವಯಾನ್ವಿತಾಃ ।**
**ಗ್ರಹಯಜ್ಞೋಕ್ತವಿಧಿನಾ ಹೋಮಂ ಹವ್ಯಂ ಸಮಾಚರೇತ್ ॥ ೨೧ ॥**

**ವೇದ್ಯಾಃ ಪೂರ್ವೋತ್ತರೇ ಭಾಗೇ ಶಿವಕುಂಡಂ ನಿಯೋಜಯೇತ್ ।**
**ಕುಂಭದ್ವಯಂ ಚ ದ್ವಾರೇಷು ಪಂಚರತ್ನಂ ಸಪಲ್ಲವಂ ॥ ೨೨ ॥**

**ಕಾರ್ಯಂ ಕುರುಕುಲಶ್ರೇಷ್ಠ ತತೋ ಹೋಮಂ ಸಮಾರಭೇತ್ ।**
**ಲೋಕಪಾಲಬಲಿಂ ದದ್ಯಾತ್ತುಲಾ ಪುರುಷದಾನವತ್ ॥ ೨೩ ॥**

**ಗೋಸಹಸ್ರಾದ್ವಿನಿಷ್ಕೃಷ್ಯ ಸವತ್ಸಂ ದಶಕಂ ಗವಾಂ ।**
**ಗೋಸಹಸ್ರಾದ್ಬಹಿಷ್ಕುರ್ಯಾದ್ವಸ್ತ್ರಮಾಲ್ಯವಿಭೂಷಣಂ ॥**
**ಅಂತಃ ಪ್ರವೇಶ್ಯ ದಶಕಂ ವಸ್ತ್ರೈರ್ಮಾಲ್ಯೈಶ್ಚ ಪೂಜಯೇತ್ ॥ ೨೪ ॥**

---

ನನ್ನು ಆರಿಸಿಕೊಳ್ಳಬೇಕು. ಇವರೆಲ್ಲರೂ ಕರ್ಣಾಭರಣ, ಉಂಗುರ ಮುಂತಾದ ಆಭರಣಗಳಿಂದ ಅಲಂಕೃತರಾಗಿರಬೇಕು. ಪ್ರತಿಯೊಬ್ಬರಲ್ಲೂ ಛತ್ರಿ ಮತ್ತು ಎರಡೆರಡು ತಾಮ್ರಪಾತ್ರೆಗಳು ಇದ್ದು ಗ್ರಹಯಜ್ಞದಲ್ಲಿ ಹೇಳಿದ ವಿಧಿಗನುಸಾರವಾಗಿ ಹೋಮವನ್ನು ಆಚರಿಸಬೇಕು.

೨೨–೨೩. ವೇದಿಕೆಯ ಪೂರ್ವ ಮತ್ತು ಉತ್ತರ ದಿಕ್ಕುಗಳ ಮಧ್ಯೆ ಶಿವಕುಂಡವನ್ನು ಸ್ಥಾಪಿಸಬೇಕು. ಬಾಗಿಲುಗಳಲ್ಲಿ ಎರಡು ಕುಂಭಗಳನ್ನು ಸ್ಥಾಪಿಸಿ ಅವುಗಳ ಮೂಲದಲ್ಲಿ ಪಂಚರತ್ನಗಳನ್ನೂ, ಚಿಗುರುಗಳನ್ನೂ ಇಟ್ಟು ಅಲಂಕರಿಸಬೇಕು. ಎಲೈ ಕುರುಕುಲಶ್ರೇಷ್ಠನೇ! ಅನಂತರ ಹೋಮವನ್ನು ಆರಂಭಿಸಬೇಕು. ತಕ್ಕಡಿಯನ್ನು ಹಿಡಿದ ಮನುಷ್ಯನು ಒಂಬೇಸಮನಾಗಿ ತೂಕಮಾಡುವಂತೆ ಲೋಕಪಾಲಕರಿಗೆಲ್ಲಾ ಒಂದೇ ಸಮನಾಗಿ ಬಲಿಯನ್ನು ಸಮರ್ಪಿಸಬೇಕು.

೨೪. ಅನಂತರ ವಸ್ತ್ರ, ಹೂಮಾಲೆ ಮತ್ತು ಆಭರಣ ಇವುಗಳಿಂದ ಅಲಂಕೃತವಾಗಿರುವ ಸಹಸ್ರ ಗೋವುಗಳ ಮಧ್ಯದಿಂದ ಹತ್ತು ಎಳಗರುವಿನ ಹಸುಗಳನ್ನು ಬೇರೆಮಾಡಿ, ಅವುಗಳನ್ನು ಮಂಟಪದೊಳಗೆ ತೆಗೆದುಕೊಂಡು ಹೋಗಿ ವಸ್ತ್ರ, ಪುಷ್ಪಮಾಲಿಕೆ ಮುಂತಾದುವುಗಳಿಂದ ಪೂಜೆಮಾಡಬೇಕು.

ಸುವರ್ಣಘಂಟಿಕಾಯುಕ್ತಂ ತಾಮ್ರದೋಹನಕಾನ್ವಿತಂ ।
ಸುವರ್ಣತಿಲಕೋಪೇತಂ ಖುರೈ ರೌಪ್ಯೈರಲಂಕೃತೈಃ ॥
ಹೇಮರತ್ನಮಯೈಃ ಶೃಂಗೈಶ್ಚಾಮರೈಶ್ಚೋಪಶೋಭಿತಂ ॥ ೨೫ ॥

ಮುನಯಃ ಕೇಚಿದಿಚ್ಛಂತಿ ಕಾಂಚನಂ ನಂದಿಕೇಶ್ವರಂ ।
ಲವಣದ್ರೋಣಶಿಖರೇ ಭಕ್ತ್ಯಾ ತಮಪಿ ಕಾರಯೇತ್ ॥ ೨೬ ॥

ಏಕಾ ಪ್ರತ್ಯಕ್ಷಮೃಷಭೇ ಕೇಷಾಂಚಿದ್ದಾನಮಿಷ್ಯತೇ ।
ಗ್ರಹಾನ್ ಸುರಾಂಶ್ಚ ಸಂಪೂಜ್ಯ ಮಾಲ್ಯವಸ್ತ್ರಫಲಾಕ್ಷತೈಃ ॥ ೨೭ ॥

ಪತಾಕಾಭಿರಲಂಕೃತ್ಯ ದೇವತಾಯತನಾನಿ ಚ ।
ಗೋಶತೇಽಪಿ ದಶಾಂಶೇನ ಸರ್ವಮೇತತ್ಪ್ರಕಲ್ಪಯೇತ್ ॥ ೨೮ ॥

---

೨೫. ಚಿನ್ನದ ಘಂಟೆ, ಹಾಲುಕರೆಯುವ ಪಾತ್ರೆ, ಚಿನ್ನದಿಂದ ರಚಿಸಿದ ತಿಲಕ, ಬೆಳ್ಳಿಯ ಗೊರಸುಗಳು, ಚಿನ್ನ ಮತ್ತು ರತ್ನ ಇವುಗಳಿಂದಲಂಕೃತವಾದ ಕೊಂಬುಗಳು ಮತ್ತು ಚಾಮರಗಳು ಇವುಗಳಿಂದ ಶೋಭಿಸುವಂತೆ ಮಾಡಬೇಕು.

೨೬. ಚಿನ್ನದಿಂದ ನಂದಿಕೇಶ್ವರನನ್ನು ಮಾಡಿಸಬೇಕೆಂದು ಕೆಲವರು ಮಹರ್ಷಿಗಳು ಅಭಿಪ್ರಾಯಪಡುವರು. ಒಂದು ದ್ರೋಣ (ಬಳ್ಳ) ಪರಿಮಾಣದ ಉಪ್ಪಿನ ರಾಶಿಯ ಮೇಲೆ ಆ ನಂದಿಕೇಶ್ವರನನ್ನಿರಿಸಿ ಭಕ್ತಿಯಿಂದ ಪೂಜಿಸಬೇಕು.

೨೭. ಕೆಲವರು ಪ್ರತ್ಯಕ್ಷವಾದ ವೃಷಭವನ್ನೇ ಎದುರಿಗೆ ಇಟ್ಟುಕೊಂಡು ಆ ಗೋವುಗಳೊಡನೆ ಈ ವೃಷಭವನ್ನೂ ದಾನಮಾಡಬೇಕೆಂದು ಅಭಿಪ್ರಾಯಪಡುತ್ತಾರೆ. ಆಗ ಆದಿತ್ಯಾದಿ ಗ್ರಹಗಳನ್ನೂ, ದೇವತೆಗಳನ್ನೂ ಹೂ, ವಸ್ತ್ರ, ಆಭರಣ, ಅಕ್ಷತೆ ಮುಂತಾದುವುಗಳಿಂದ ಪೂಜಿಸಬೇಕು.

೨೮. ಆದಿನ ದೇವಾಲಯಗಳನ್ನು ಬಾವುಟ, ತೋರಣ ಮುಂತಾದುವುಗಳಿಂದ ಅಲಂಕರಿಸಬೇಕು. ನೂರು ಗೋದಾನ ಮಾಡುವಾಗಲೂ ಹತ್ತು ಗೋದಾನ ಮಾಡುವಾಗಲೂ ಸಹ ಇದೇರೀತಿ ಮಾಡಬೇಕು.

**ಯದಿ ಸರ್ವಾ ನ ವಿದ್ಯಂತೇ ಗಾವಃ ಸರ್ವಗುಣೋತ್ತಮಾಃ ।**
**ದಶಕಂ ಪೂಜ್ಯ ಯತ್ನೇನ ಇತರಃ ಪರಿಕಲ್ಪಯೇತ್ ॥ ೨೯ ॥**

**ಪುಷ್ಪಕಾಲಮಥೋ ವಾದ್ಯಗೀತಮಂಗಲನಿಃಸ್ವನೈಃ ।**
**ಸರ್ವೌಷಧ್ಯುದಕಸ್ನಾತಃ ಸ್ನಪಿತೋ ದ್ವಿಜಪುಂಗವೈಃ ॥**
**ಇಮಮುಚ್ಚಾರಯೇನ್ಮಂತ್ರಂ ಗೃಹೀತಕುಸುಮಾಂಜಲಿಃ ॥ ೩೦ ॥**

**ನಮೋ ವೋ ವಿಶ್ವಮೂರ್ತಿಭ್ಯೋ ವಿಶ್ವಮಾತೃಭ್ಯ ಏವ ಚ ।**
**ಲೋಕಾಧಿವಾಸಿನೀಭ್ಯಸ್ತು ರೋಹಿಣೀಭ್ಯೋ ನಮೋನಮಃ ॥ ೩೧ ॥**

**ಗವಾಮಂಗೇಷು ತಿಷ್ಠಂತಿ ಭುವನಾನ್ಯೇಕವಿಶಂತಿಃ ।**
**ಬ್ರಹ್ಮಾದಯಸ್ತಥಾ ದೇವಾ ರೋಹಿಣ್ಯಃ ಪಾಂತು ಮಾತರಃ ॥ ೩೨ ॥**

---

೨೯. ಗೋವುಗಳಲ್ಲಿ ಎಲ್ಲವೂ ಸಕಲ ಗುಣಗಳಿಂದ ಯುಕ್ತವಾದವುಗಳು ದೊರಕದ ಪಕ್ಷದಲ್ಲಿ ಹತ್ತನ್ನಾದರೂ ಪ್ರಯತ್ನಪೂರ್ವಕವಾಗಿ ಆರಿಸಿ ವಿಧಿಪ್ರಕಾರ ಪೂಜಿಸಿ ಮಿಕ್ಕವುಗಳನ್ನು ಹಾಗೆಯೇ ಕೊಡಬೇಕು.

೩೦. ಹೂವುಗಳರಳುವ ಸಮಯದಲ್ಲಿ ಯಜಮಾನನು ನಾನಾವಿಧವಾದ ಮಂಗಳವಾದ್ಯ, ಮತ್ತು ಸಂಗೀತ, ಬ್ರಾಹ್ಮಣರಿಂದ ವೇದಘೋಷ ಇವುಗಳು ನಡೆಯುತ್ತಿರುವಾಗ ಸಕಲ ಮೂಲಿಕೆಗಳಿಂದ ಸಮೇತವಾದ ತೀರ್ಥಗಳ ನೀರಿನಿಂದ ಸ್ನಾನಮಾಡಿ, ಅನಂತರ ಬೊಗಸೆಯಲ್ಲಿ ಹೂವುಗಳನ್ನು ಹಿಡಿದುಕೊಂಡು ಮುಂದೆ ಹೇಳುವ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೩೧. ಪ್ರಪಂಚಸ್ವರೂಪಿಣಿಯರೂ, ಜಗನ್ಮಾತೆಯರೂ, ಸರ್ವಲೋಕ ನಿವಾಸಿನಿಯರೂ ಆದ ರೋಹಿಣೀಧೇನುಗಳಿಗೆ ನಮಸ್ಕಾರ.

೩೨. ಇಪ್ಪತ್ತೊಂದು ಲೋಕಗಳೂ ನಿಮ್ಮ ಅವಯವಗಳಲ್ಲಿ ನೆಲಸಿರುವುವು. ಬ್ರಹ್ಮಾದಿ ದೇವತೆಗಳೂ ನಿಮ್ಮ ಶರೀರದಲ್ಲೇ ಐಕ್ಯವಾಗಿರುವರು. ಈರೀತಿ ಸರ್ವಲೋಕಗಳನ್ನೂ ಮತ್ತು ದೇವತೆಗಳನ್ನೂ ದೇಹದಲ್ಲಿ ಧರಿಸಿರುವ ರೋಹಿಣೀ ದೇವಿಯರೇ ! ನಮ್ಮನ್ನು ಕಾಪಾಡಿ.

ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಸರ್ವತಃ ಸಂತು ಗವಾಂ ಮಧ್ಯೇ ವಸಾಮ್ಯಹಂ ॥ ೩೩ ॥

ಯಸ್ಮಾತ್ತ್ವಂ ವೃಷರೂಪೇಣ ಧರ್ಮಶ್ಚೈವ ಸನಾತನಃ ।
ಅಷ್ಟಮೂರ್ತೇರಧಿಷ್ಠಾನಮತಃ ಪಾಹಿ ಸನಾತನಃ ॥ ೩೪ ॥

ಇತ್ಯಾಮಂತ್ರ್ಯ ತತೋ ದದ್ಯಾದ್ಗುರವೇ ನಂದಿಕೇಶ್ವರಂ ।
ಸರ್ವೋಪಸ್ಕರಣೋಪೇತಂ ಗೋಯುತಂ ಚ ವಿಶೇಷತಃ ॥ ೩೫ ॥

ಗವಾಂ ಶತಮಥೈಕೈಕಂ ತದರ್ಧಂ ಚಾಪಿ ವಿಂಶತಿಃ ।
ದಶಪಂಚತ್ರಯಂ ದದ್ಯಾದ್ಬಹುಭ್ಯಸ್ತದನುಜ್ಞಯಾ ॥ ೩೬ ॥

---

೩೩. ನನ್ನ ಮುಂಭಾಗದಲ್ಲಿಯೂ, ನನ್ನ ಹಿಂದುಗಡೆಯಲ್ಲಿಯೂ ಮತ್ತು ನನ್ನ ಸುತ್ತಮುತ್ತ ಎಲ್ಲಾ ಕಡೆಯಲ್ಲಿಯೂ ಗೋವುಗಳು ನೆಲಸಲಿ. ನಾನು ಯಾವಾಗಲೂ ಗೋವುಗಳ ಮಧ್ಯದಲ್ಲೇ ವಾಸಮಾಡುವೆನು.

೩೪. ಎಲೈ ದೇವನೇ! ಧರ್ಮಸ್ವರೂಪನಾದ ನೀನು ವೃಷಭರೂಪವನ್ನು ಧರಿಸಿ, ಅಷ್ಟಮೂರ್ತಿಯೆನಿಸಿದ ಶಿವನ ವಾಹನವಾಗಿರುವೆ. ಇಂಥ ನೀನು ನನ್ನನ್ನು ಕಾಪಾಡು.

೩೫. ಎಂಬ ಅರ್ಥದ ಮಂತ್ರಗಳನ್ನು ಹೇಳಿ, ಸಕಲ ಪರಿಕರಗಳೊಡಗೂಡಿದ ಹಸುಗಳೊಡನೆ ಆ ನಂದಿಕೇಶ್ವರನನ್ನು ಗುರುವಾದ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೩೬. ಅನಂತರ ಆ ಗುರುವಿನ ಅಪ್ಪಣೆಯನ್ನು ಪಡೆದು, ನೂರು ಗೋವನ್ನೋ ಐವತ್ತು ಗೋವನ್ನೋ ಅಥವಾ ಹತ್ತು ಗೋವನ್ನೋ ಐದು ಗೋವನ್ನೋ, ಕೊನೆಯಪಕ್ಷ ಮೂರು ಗೋವನ್ನೋ ಸತ್ಪಾತ್ರರಾದ ಇತರ ಬ್ರಾಹ್ಮಣರಿಗೆ ದಕ್ಷಿಣಾ ಸಮೇತವಾಗಿ ದಾನಮಾಡಬೇಕು.

ನೈಕಾ ಬಹುಭ್ಯೋ ದಾತವ್ಯಾ ದಾತಾ ದೋಷಕರೋ ಭವೇತ್ ।
ಬಹ್ವ್ಯಸ್ತ್ವೇಕಸ್ಯ ದಾತವ್ಯಾಃ ಶ್ರೀಮದಾರೋಗ್ಯವೃದ್ಧಯೇ ॥ ೩೭ ॥

ಪಯೋವ್ರತಸ್ತತಸ್ತಿಷ್ಠೇದೇಕಾಹಂ ಗೋಸಹಸ್ರದಃ ।
ತಥೈವ ಬ್ರಹ್ಮಚಾರೀ ಸ್ಯಾದ್ಯ ಇಚ್ಛೇದ್ವಿಪುಲಾಂ ಶ್ರಿಯಂ ॥ ೩೮ ॥

ನ ದೇಯಾ ದುರ್ಬಲಾ ಧೇನುರ್ನಾಲ್ಪಕ್ಷೀರಾ ನ ರೋಗಿಣೀ ।
ನ ಜೀರ್ಣಾ ಜೀರ್ಣವಸ್ತ್ರಾ ವಾ ನಾಪತ್ಯಗತಚೇತನಾ ॥ ೩೯ ॥

ಅನೇನ ವಿಧಿನಾ ಯಸ್ತು ಗೋಸಹಸ್ರಪ್ರದೋ ಭವೇತ್ ।
ಸರ್ವಪಾಪವಿನಿರ್ಮುಕ್ತಃ ಸಿದ್ಧಚಾರಣಸೇವಿತಃ ॥ ೪೦ ॥

---

೩೭. ಒಂದು ಹಸುವನ್ನು ಅನೇಕ ಮಂದಿಗೆ ದಾನಮಾಡಬಾರದು. ಹೀಗೆ ಮಾಡಿದರೆ ದಾನಮಾಡುವವನಿಗೆ ತುಂಬಾ ದೋಷ. ಬೇಕಾದರೆ ಒಬ್ಬನಿಗೆ ಅನೇಕ ಹಸುಗಳನ್ನು ದಾನಮಾಡಬಹುದು. ಇದರಿಂದ ಯಜಮಾನನಿಗೆ ಐಶ್ವರ್ಯವೂ ಮತ್ತು ಆರೋಗ್ಯವೂ ಅಭಿವೃದ್ಧಿಯಾಗುವುವು.

೩೮. ಹೀಗೆ ಸಹಸ್ರ ಗೋದಾನಮಾಡಿದವನು ದಾನಕೊಟ್ಟ ದಿನ ದೇಹ ಧಾರಣೆಗೆ ಆವಶ್ಯಕವಾದಷ್ಟು ಕೇವಲ ಹಾಲಿನ ಆಹಾರದಲ್ಲೇ ಇರಬೇಕು. ಅಪಾರವಾದ ಐಶ್ವರ್ಯವನ್ನಪೇಕ್ಷಿಸುವವನು ಆದಿನ ಬ್ರಹ್ಮಚರ್ಯದಿಂದ ಇರಬೇಕು.

೩೯. ಬಲಹೀನವಾದುದೂ, ಸ್ವಲ್ಪವೇ ಹಾಲುಕೊಡುವುದೂ, ರೋಗದಿಂದ ನರಳುತ್ತಿರುವುದೂ, ಮುದಿಯಾದುದೂ, ನರ, ಮಾಂಸಖಂಡ, ಎಲ್ಲಾ ಸುಕ್ಕಿ, ಬಲಹೀನವಾಗಿರುವುದೂ, ಕರುವಿಲ್ಲದೇ ಇರುವುದೂ ಇಂತಹ ಕೆಟ್ಟ ಲಕ್ಷಣಗಳಿಂದ ಕೂಡಿದ ಹಸುವನ್ನು ಎಂದಿಗೂ ದಾನಮಾಡಬಾರದು.

೪೦–೪೧. ಈರೀತಿ ವಿಧಿಯನ್ನನುಸರಿಸಿ ಸಹಸ್ರ ಗೋದಾನ ಮಾಡುವವನು ತನ್ನ ಸಕಲ ಪಾಪಗಳನ್ನೂ ಕಳೆದುಕೊಂಡು ಸಿದ್ಧ, ಚಾರಣಾದಿಗಳಿಂದ ಸೇವಿಸಲ್ಪಡುತ್ತಾ, ಕಿರುಘಂಟೆಯ ಮಾಲೆಗಳ ಮನೋಹರವಾದ ನಾದಯುಕ್ತವಾಗಿ

ವಿಮಾನೇನಾರ್ಕವರ್ಣೇನ ಕಿಂಕಿಣೀಜಾಲಮಾಲಿನಾ ।
ಸರ್ವೇಷಾಂ ಲೋಕಪಾಲಾನಾಂ ಲೋಕೈ ಸಂಪೂಜ್ಯತೇ ಸುರೈಃ ॥೪೦॥

ಸಪ್ತಾವರಾ ಸಪ್ತ ಪರಾನ್ಸಪ್ತ ಚೈವ ಪರಾವರಾನ್ ।
ಪುರುಷಾನುದ್ಧರೇದ್ದತ್ವಾ ಗೋಸಹಸ್ರಂ ವಿಧಾನತಃ ॥ ೪೨ ॥

ಸ್ವರ್ಗಲೋಕಾಚ್ಚ್ಯುತೋ ವಾಽಥ ನಾರೀ ವಾ ಸತ್ಪರಾಯಣಾ ।
ಸಪ್ತ ಜನ್ಮಾನಿ ರಾಜ್ಞೀ ಸ್ಯಾತ್ಸ್ತೂಯಮಾನಾ ಪುನಃಪುನಃ ॥ ೪೩ ॥

ನ ತ್ವೇವೇದಂ ದಾನಮಾತ್ರಂ ಪ್ರಶಸ್ತಂ ।
ಪಾತ್ರಂ ಕಾಲೋ ಗೋವಿಶೇಷೋ ವಿಧಿಶ್ಚ ॥
ತಸ್ಮಾದೇತಾಃ ಸರ್ವಭೂಷಾಸಮೇತಾಃ ।
ಪಾತ್ರೇ ಕಾಲೇ ಕ್ಷೀರವತ್ಯೋ ವಿಧಾನಾತ್ ॥ ೪೪ ॥

---

ಸೂರ್ಯನಂತೆ ಸ್ವಚ್ಛವರ್ಣದಿಂದ ಕೂಡಿದ ವಿಮಾನದ ಮೇಲೆ ಕುಳಿತು, ಸಕಲ ಲೋಕಪಾಲಕರಿಂದಲೂ ಮತ್ತು ದೇವತೆಗಳಿಂದಲೂ ಸಹ ಪೂಜೆಹೊಂದುವನು.

೪೨. ವಿಧಿಪೂರ್ವಕವಾಗಿ ಸಹಸ್ರ ಗೋದಾನ ಮಾಡುವವನು ತನ್ನ ವಂಶದಲ್ಲಿ ಹಿಂದಿನ ಮತ್ತು ಮುಂದಿನ ಏಳು ತಲೆಮಾರಿನವರು ಮಾತ್ರವಲ್ಲದೆ ಅದಕ್ಕಿಂತಲೂ ಹಿಂದಿನ ಮತ್ತು ಮುಂದಿನ ಏಳು ತಲೆಯವರನ್ನೂ ಉದ್ಧಾರ ಮಾಡುತ್ತಾನೆ.

೪೩. ಆತನು ಅನೇಕ ವರ್ಷಕಾಲ ಸ್ವರ್ಗಲೋಕದಲ್ಲಿಯೇ ವಾಸಿಸುತ್ತಾ ಅನಂತರ ಭೂಲೋಕದಲ್ಲಿ ಜನಿಸಿ ರಾಜನಾಗಿ ಎಲ್ಲರಿಂದಲೂ ಸ್ತೋತ್ರಾರ್ಹನಾಗುವನು. ದಾನಮಾಡಿದವಳು ಸ್ತ್ರೀಯಾಗಿದ್ದರೆ ಏಳು ಜನ್ಮಗಳಲ್ಲಿ ಮಹಾರಾಣಿಯಾಗಿ ಜನಿಸಿ ಸಕಲ ಪ್ರಜೆಗಳಿಂದಲೂ ಸ್ತುತಿಮಾಡಲ್ಪಡುವಳು.

೪೪. ಕೇವಲ ಗೋದಾನಮಾಡುವುದೊಂದೇ ಪ್ರಶಸ್ತವೆಂದು ಭಾವಿಸಬಾರದು. ದಾನವನ್ನು ತೆಗೆದುಕೊಳ್ಳುವವನು, ದಾನಮಾಡುವ ಕಾಲ, ದಾನಾರ್ಹವಾದ ಗೋವಿಶೇಷ ಮತ್ತು ದಾನವಿಧಿ ಎಲ್ಲವೂ ಪ್ರಶಸ್ತವಾಗಿರಬೇಕು ಆದುದರಿಂದ ಸಕಲಾಭರಣಗಳಿಂದಲಂಕೃತವಾದ ಗೋವುಗಳನ್ನು ಸತ್ಪಾತ್ರನಾದವನಿಗೆ ಉತ್ತಮವಾದ ಪುಣ್ಯಕಾಲಗಳಲ್ಲಿ ವಿಧಿಪೂರ್ವಕವಾಗಿ ದಾನಮಾಡಿದರೆ ಒಳ್ಳೆಯ ಫಲಗಳನ್ನುಂಟುಮಾಡುವುವು.

**ಏಕಾಪಿ ಗೌರ್ಬಹುಗುಣಾ ಗುಣಿನೇ ಪ್ರದತ್ತಾ ।**
**ದಾತುಃ ಕುಲಂ ತ್ರಿಪುರುಷಂ ವಿಧಿವತ್ಪುನಾತಿ ॥**
**ಯಃ ಶ್ರದ್ಧಯಾ ವಿತರತೀಹ ಗವಾಂ ಸಹಸ್ರಂ ।**
**ಶಕ್ಯಂ ಫಲಂ ನ ನೃಪತೇಽಸ್ಯ ಮಯಾಭಿಧಾತುಂ ॥ ೪೫ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಗೋಸಹಸ್ರ ಪ್ರದಾನವಿಧಿ ವ್ರತವರ್ಣನಂ ನಾಮ್ನೈಕೋನಷಷ್ಟ್ಯುತ್ತರಶತತಮೋಽಧ್ಯಾಯಃ.**



---

೪೫. ಎಲೈ ಯುಧಿಷ್ಠಿರನೇ! ಒಳ್ಳೆಯ ಗುಣಗಳಿಂದ ಕೂಡಿದ ಒಂದು ಹಸುವನ್ನು ಯೋಗ್ಯನೂ ಗುಣವಂತನೂ ಆದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ದಾನಮಾಡಿದರೆ, ಕರ್ತೃವಿನ ವಂಶದಲ್ಲಿ ಮೂರುಮಂದಿಯನ್ನು ಪವಿತ್ರರನ್ನಾಗಿ ಮಾಡುವುದು. ಹೀಗಿರುವಾಗ ಶ್ರದ್ಧೆಯಿಂದ ಸಹಸ್ರ ಗೋವುಗಳನ್ನು ದಾನಮಾಡುವವನಿಗೆ ದೊರೆಯುವ ಪುಣ್ಯಫಲಗಳನ್ನು ಹೇಳುವುದಕ್ಕೆ ನನ್ನಿಂದ ಅಸಾಧ್ಯವಾಗಿರುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಸಹಸ್ರ ಗೋದಾನವಿಧಿ ವರ್ಣನೆಯೆಂಬ ನೂರೈವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಷ್ಟ್ಯುತ್ತರಶತತಮೋऽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯುಷ್ಮದ್ವಾಕ್ಯಾಮೃತಮಿದಂ ಶೃಣ್ವಾನೋऽಹಂ ಜನಾರ್ದನ ।
ನ ತೃಪ್ತಿಮಧಿಗಚ್ಛಾಮಿ ಜಾತಂ ಕೌತೂಹಲಂ ಹಿ ಮೇ ॥ ೧ ॥

ಗೋಪತಿಃ ಕಿಲ ಗೋವಿಂದಸ್ತ್ರಿಷು ಲೋಕೇಷು ವಿಶ್ರುತಃ ।
ಗೋವೃಷಸ್ಯ ಪ್ರದಾನೇನ ತ್ರೈಲೋಕ್ಯಮಭಿನಂದತಿ ॥ ೨ ॥

॥ ಶ್ರೀಕೃಷ್ಣ ಉವಾಚ ॥

ತದ್ಗೋವೃಷಭದಾತಸ್ಯ ಫಲಂ ಮೇ ಕಥಯಾऽಚ್ಯುತ ।
ವೃಷದಾನಫಲಂ ಪುಣ್ಯಂ ಶೃಣುಷ್ವ ಕಥಯಾಮಿ ತೇ ॥ ೩ ॥

---

### ನೂರಅರವತ್ತನೆಯ ಅಧ್ಯಾಯ

೧-೨. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಜನಾರ್ದನನೇ ! ಅಮೃತಕ್ಕೆ ಸಮಾನವಾದ ನಿನ್ನ ವಾಕ್ಯಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೇ ಉಂಟಾಗುತ್ತಿಲ್ಲ. ಗೋವಿಂದನು ಗೋವುಗಳಿಗೆ ಸ್ವಾಮಿಯೆಂದು ಮೂರುಲೋಕದಲ್ಲಿಯೂ ಪ್ರಸಿದ್ಧನಾಗಿರುವನು. ಉತ್ತಮವಾದ ವೃಷಭದಾನ ಮಾಡುವುದರಿಂದ ಗೋವಿಂದನಿಗೆ ಸಂತೋಷವಲ್ಲವೆ? ಈ ವೃಷಭದಾನ ಮಾಡುವ ರೀತಿಯನ್ನೂ ಅದರ ಫಲಗಳನ್ನೂ ನನಗೆ ತಿಳಿಸು.

೩-೪. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರನೇ! ಪುಣ್ಯಕರವಾದ ವೃಷಭದಾನದಿಂದುಂಟಾಗುವ ಫಲಗಳನ್ನು ಕೇಳು. ಇದು ಪವಿತ್ರವೂ,

**ಪವಿತ್ರಂ ಪಾವನಂ ಚೈವ ಸರ್ವದಾನೋತ್ತಮೋತ್ತಮಂ ।**
**ದಶಧೇನುಸಮೋಽನಡ್ವಾನೇಕಶ್ಚೈಕಧುರಂಧರಃ ॥**
**ದಶಧೇನುಪ್ರದಾನಾದ್ಧಿ ಸ ಏವೈಕೋ ವಿಶಿಷ್ಯತೇ ॥ ೪ ॥**

**ಯೋ ಹೃಷ್ಟಶ್ಚಾತಿಪುಷ್ಟಾಂಗೋ ಹ್ಯರೋಗಃ ಪಾಂಡುನಂದನ ।**
**ಯುವಾ ಭದ್ರಃ ಸುಶೀಲಶ್ಚ ಸರ್ವದೋಷವಿವರ್ಜಿತಃ ॥ ೫ ॥**

**ಧುರಂಧರಃ ಸ್ಥಾಪಯತೇ ಏಕ ಏವ ಕುಲಂ ಮಹತ್ ।**
**ತ್ರಾತಾ ಭವತಿ ಸಂಸಾರೇ ನಾತ್ರ ಕಾರ್ಯಾ ವಿಚಾರಣಾ ॥ ೬ ॥**

**ಅಲಂಕೃತ್ಯ ವೃಷಂ ಶಾಂತಂ ಪುಣ್ಯಕಾಲ ಉಪಸ್ಥಿತೇ ।**
**ರೌಪ್ಯಲಾಂಗೂಲಸಂಯುಕ್ತಂ ಬ್ರಾಹ್ಮಣಾಯ ನಿವೇದಯೇತ್ ॥ ೭ ॥**

---

ಪರಮಪಾವನವೂ ಸರ್ವದಾನಗಳಿಗಿಂತ ಉತ್ತಮವೂ ಎನಿಸಿರುವುದು. ಭಾರವನ್ನು ಹೊರಲು ಸಮರ್ಥವಾದ ಒಂದು ಎತ್ತು, ಹತ್ತು ಹಸುಗಳಿಗೆ ಸಮಾನ ಈ ಒಂದು ವೃಷಭವನ್ನು ದಾನಮಾಡುವುದರಿಂದ ಹತ್ತು ಗೋದಾನಮಾಡಿದ್ದಕ್ಕಿಂತ ಅಧಿಕವಾದ ಫಲವುಂಟಾಗುವುದು.

೫–೬ ಯಾವಾಗಲೂ ಆನಂದಯುಕ್ತವೂ, ಚೆನ್ನಾಗಿ ಕೊಬ್ಬಿದ ಮೈಕಟ್ಟುಳ್ಳದ್ದೂ, ರೋಗಾದಿಗಳಿಂದ ಬಿಡಲ್ಪಟ್ಟದ್ದೂ, ಯಾವ ಕೆಟ್ಟಲಕ್ಷಣಗಳೂ ಇಲ್ಲದೆ ಒಳ್ಳೆಯ ಗುಣಗಳಿಂದ ಯುಕ್ತವೂ ಶುಭಲಕ್ಷಣಯುತವೂ, ಪ್ರಾಯ ಸಮರ್ಥವೂ ಆದ ಒಂದೇ ಒಂದು ಗೂಳಿಯನ್ನು ದಾನಮಾಡಿದರೆ ದಾನ ಮಾಡುವವನ ದೊಡ್ಡವಂಶವನ್ನೆಲ್ಲಾ ತಾನೇ ಶಿರಸಾವಹಿಸಿ ಉದ್ಧಾರಮಾಡುವುದು. ಎಲೈ ಪಾಂಡುನಂದನನೇ! ಅಲ್ಲದೆ ಈ ಸಂಸಾರಸಾಗರದಲ್ಲಿ ಸದಾ ಬಿದ್ದು ನರಳುತ್ತಿರುವ ಮಾನವರನ್ನು ತಪ್ಪದೆ ಉದ್ಧಾರಮಾಡುವುದು. ಇದು ನಿರ್ವಿವಾದವಾದ ವಿಷಯ.

೭. ಒಳ್ಳೆಯ ಪುಣ್ಯಕಾಲಗಳು ಪ್ರಾಪ್ತವಾದಾಗ ಶಾಂತಸ್ವಭಾವವುಳ್ಳ ವೃಷಭವನ್ನು ಚೆನ್ನಾಗಿ ಅಲಂಕಾರಮಾಡಿ, ಅದಕ್ಕೆ ಬೆಳ್ಳಿಯ ಬಾಲವನ್ನು ಧರಿಸಿ ಬ್ರಾಹ್ಮಣನಿಗೆ ದಾನಮಾಡಬೇಕು.

ಮಂತ್ರೇಣಾನೇನ ರಾಜೇಂದ್ರ ತಂ ಶೃಣುಷ್ವ ವದಾಮಿ ತೇ ॥ ೮ ॥

ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕಃ ।
ಅಷ್ಟಮೂರ್ತೇರಧಿಷ್ಠಾನಮತಃ ಪಾಹಿ ಸನಾತನ ॥ ೯ ॥

ದತ್ತ್ವೈವಂ ದಕ್ಷಿಣಾಯುಕ್ತಂ ಪ್ರಣಿಪತ್ಯ ವಿಸರ್ಜಯೇತ್ ।
ಸಪ್ತಜನ್ಮಕೃತಂ ಪಾಪಂ ವಾಙ್ಮನಃ ಕಾಯಕರ್ಮಣಾಂ ॥
ತತ್ಸರ್ವಂ ವಿಲಯಂ ಯಾತಿ ಗೋದಾನಸುಕೃತೇನ ಚ ॥ ೧೦ ॥

ಯಾನಂ ವೃಷಭಸಂಯುಕ್ತಂ ದೀಪ್ಯಮಾನಂ ಸುಶೋಭನಂ ।
ಆರುಹ್ಯ ಕಾಮಗಂ ದಿವ್ಯಂ ಸ್ವರ್ಲೋಕಮಧಿರೋಹತಿ ॥ ೧೧ ॥

ಯಾವಂತಿ ತಸ್ಯ ರೋಮಾಣಿ ಗೋವೃಷಸ್ಯ ಮಹೀಪತೇ ।
ತಾವದ್ವರ್ಷಸಹಸ್ರಾಣಿ ಗವಾಂ ಲೋಕೇ ಮಹೀಯತೇ ॥ ೧೨ ॥

---

೮–೧೦. ಎಲೈ ರಾಜೇಂದ್ರ! ದಾನಮಾಡುವಾಗ 'ಎಲೈ ಧರ್ಮಸ್ವರೂಪವಾದ ಪ್ರಭುವೇ! ನೀನು ಈ ವೃಷಭರೂಪವನ್ನು ಧರಿಸಿ ಜಗತ್ತಿಗೆಲ್ಲಾ ಆನಂದವನ್ನುಂಟುಮಾಡುತ್ತಿರುವೆ. ಅಲ್ಲದೆ ನೀನು ಅಷ್ಟಮೂರ್ತಿಯೆನಿಸಿದ ಪರಮೇಶ್ವರನಿಗೆ ವಾಹನವಾಗಿರುವೆ' ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿ ಆ ವೃಷಭವನ್ನು ಪ್ರದಕ್ಷಿಣೆಮಾಡಿ ತನ್ನ ಯೋಗ್ಯತಾನುಸಾರ ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು. ಈರೀತಿ ವೃಷಭದಾನ ಮಾಡುವವರಿಗೆ ತಾವು ಏಳು ಜನ್ಮಗಳಲ್ಲಿ ಮಾಡಿದ್ದ ವಾಕ್ಕು, ಮನಸ್ಸು, ಕಾಯ ಇವುಗಳಿಂದುತ್ಪನ್ನವಾದ ಪಾಪಗಳೂ ಸಹ ನಾಶವಾಗುವುವು.

೧೧. ದಾತೃವು ವೃಷಭದಿಂದ ಯುಕ್ತವೂ ತೇಜೋಮಯವೂ ಮಂಗಳಕರವೂ, ತನ್ನ ಇಚ್ಛೆಯಂತೆ ಬೇಕಾದಕಡೆ ಸಂಚರಿಸಬಲ್ಲುದೂ ಆದ, ದಿವ್ಯ ವಿಮಾನವನ್ನೇರಿ ಸ್ವರ್ಗಲೋಕವನ್ನು ಹೊಂದುವನು.

೧೨. ಈ ದಾನಮಾಡಿದ ವೃಷಭದ ಮೈಮೇಲೆ ಎಷ್ಟು ರೋಮಗಳಿವೆಯೋ ಅಷ್ಟು ಸಾವಿರ ವರ್ಷಗಳಕಾಲ ಗೋಲೋಕದಲ್ಲಿ ವಾಸಿಸುತ್ತಾ ಸಕಲರಿಂದಲೂ ಪೂಜಿತನಾಗುವನು.

**ಗೋಲೋಕಾದವತೀರ್ಣಸ್ತು ಇಹಲೋಕೇ ದ್ವಿಜೋ ಭವೇತ್ ।**
**ಯಜ್ಞಯಾಜೀ ಮಹಾತೇಜಾಃ ಸರ್ವಬ್ರಾಹ್ಮಣಪೂಜಿತಃ ॥ ೧೩ ॥**

**ಯಥೋಕ್ತಂ ತೇ ಮಹಾರಾಜ ಕಸ್ಯದೇಯೋ ವೃಷೋತ್ತಮಃ ।**
**ತದಹಂ ತೇ ಪ್ರವಕ್ಷ್ಯಾಮಿ ಪಾತ್ರಂ ತ್ರಾಣಪ್ರದಂ ನೃಣಾಂ ॥ ೧೪ ॥**

**ಯೇ ಕ್ಷಾಂತದಾಂತಾಃ ಶ್ರುತಿಪೂರ್ಣಕರ್ಣಾಃ ।**
**ಜಿತೇಂದ್ರಿಯಾಃ ಪ್ರಾಣಿವಧಾನ್ನಿವೃತ್ತಾಃ ॥**
**ಪ್ರತಿಗ್ರಹೇ ಸಂಕುಚಿತಾ ಗೃಹಸ್ಥಾಃ ।**
**ತೇ ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ ॥ ೧೫ ॥**

**ಊರ್ಜಸ್ವಿನಂ ಭರಸಹಂ ದೃಢಕಂಧರಂ ಚ ।**
**ಯಚ್ಛಂತಿ ಯೇ ವೃಷಮಶೇಷಗುಣೋಪಪನ್ನಂ ॥**

---

೧೩. ಎಲೈ ರಾಜನೇ! ಆ ಬಳಿಕ ಈ ಭೂಲೋಕದಲ್ಲಿ ಬ್ರಾಹ್ಮಣನಾಗಿ ಜನಿಸಿ ಮಹಾತೇಜಸ್ವಿಯೂ, ಸರ್ವಬ್ರಾಹ್ಮಣರಿಂದ ಪೂಜಿತನೂ ಆಗಿ ಯಜ್ಞಯಾಗಾದಿ ಸತ್ಕರ್ಮತತ್ಪರನಾಗುತ್ತಾನೆ.

೧೪. ಎಲೈ ಯುಧಿಷ್ಠಿರ! ನೀನು ಪ್ರಶ್ನೆಮಾಡಿದಂತೆ ಈ ವೃಷಭರಾಜನನ್ನು ಯಾರಿಗೆ ದಾನಮಾಡಬೇಕು. ಇದನ್ನು ಸ್ವೀಕರಿಸಿ ಕಾಪಾಡಲು ಯೋಗ್ಯರಾದ ಸತ್ಪಾತ್ರರಾರು ಎಂಬುದನ್ನು ನಿನಗೆ ತಿಳಿಸುವೆನು ಕೇಳು.

೧೫. ದಯಾವಂತರೂ, ಜಿತೇಂದ್ರಿಯರೂ ಸದಾ ವೇದಾಧ್ಯಯನ ಪರಾಯಣರೂ, ಪ್ರಾಣಿಹಿಂಸೆಗೆ ಯಾವಾಗಲೂ ಹಿಂಜರಿಯುವರೂ, ಮತ್ತು ದಾನಪ್ರತಿಗ್ರಹಮಾಡುವುದರಲ್ಲಿ ಸಂಕೋಚದಿಂದ ವರ್ತಿಸುವವರೂ ಆದ ಗೃಹಸ್ಥ ಬ್ರಾಹ್ಮಣರು ಮಾತ್ರ ಈ ಗೋವೃಷಭವನ್ನು ಸ್ವೀಕರಿಸಿ ಕಾಪಾಡಲು ಸಮರ್ಥರು.

೧೬. ಮದದಿಂದ ಕೂಡಿದುದೂ, ಭಾರವನ್ನು ಹೊರಲು ಯೋಗ್ಯವಾದುದೂ, ದೃಢವಾದ ಹೆಗಲುಳ್ಳದೂ ಸಕಲ ಸದ್ಗುಣಯುಕ್ತವೂ ಆದ

**ದತ್ತೇನ ಯದ್ಭವತಿ ಗೋದಶಕೇನ ಪುಣ್ಯಂ ।**
**ಸತ್ಯಂ ಭವಂತಿ ಭುವಿ ತತ್ಫಲಭಾಗಿನಸ್ತೇ ॥ ೧೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ವೃಷಭದಾನ ವ್ರತವರ್ಣನಂ ನಾಮಷಷ್ಟ್ಯುತ್ತರಶತತಮೋಽಧ್ಯಾಯಃ.**



---

ವೃಷಭಶ್ರೇಷ್ಠವನ್ನು ದಾನಮಾಡುವ ಮಾನವರು, ಹತ್ತು ಗೋದಾನಮಾಡಿದ ಪುಣ್ಯಕ್ಕೆ ಸಮಾನವಾದ ಪುಣ್ಯವನ್ನು ಹೊಂದಿ ಈ ಭೂಲೋಕದಲ್ಲಿ ವಿರಾಜಿಸುವರು. ಇದು ಸತ್ಯವು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ವೃಷಭದಾನ ವ್ರತನಿರೂಪಣೆಯೆಂಬ ನೂರರವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀ ||

## ಅಥ ಶ್ರೀ ಭವಿಷ್ಯೇ ಮಹಾಪುರಾಣೇ
### ಉತ್ತರಪರ್ವಣಿ
## ಏಕಷಷ್ಟ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಕಪಿಲಾದಾನಮಹಾತ್ಮ್ಯಂ ಕಥಯಸ್ವ ಜಗತ್ಪತೇ ।
ಪುಣ್ಯಂ ಯತ್ಸರ್ವದಾನಾನಾಂ ಸರ್ವಪಾತಕನಾಶನಂ || ೧ ||

|| ಶ್ರೀಕೃಷ್ಣ ಉವಾಚ ||

ತತ್ರೇಽಹಂ ಸಂಪ್ರವಕ್ಷ್ಯಾಮಿ ವಿನತಾಶ್ವೇನ ಯತ್ಪುರಾ ।
ಕಥಿತಂ ಕಪಿಲಾದಾನಂ ತಚ್ಛೃಣುಷ್ವ ಮಹಾಮತೇ ||
ತದಹಂ ಸಂಪ್ರವಕ್ಷ್ಯಾಮಿ ನವಪುಣ್ಯಫಲಂ ಚ ಯತ್ || ೨ ||

---

### ನೂರಅರವತ್ತೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಜಗದೊಡೆಯನೇ! ಸಕಲ ಪಾಪಗಳನ್ನೂ ನಾಶಮಾಡುವುದೂ, ಪುಣ್ಯಕರವೂ ಮತ್ತು ಎಲ್ಲಾ ದಾನಗಳಿಗಿಂತಲೂ ಶ್ರೇಷ್ಠವೂ ಆಗಿರುವ ಕಪಿಲವರ್ಣದ ಗೋದಾನದ ಮಹಿಮೆಯನ್ನು ನನಗೆ ತಿಳಿಸು ಎಂದನು.

೨-೩. ಹಿಂದೆ ವಿನತಾಶ್ವನು ತನಗೆ ಹೇಳಿದ್ದ ಇದೇ ವಿಷಯವನ್ನು ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಪ್ರಾಜ್ಞನಾದ ಮಹಾರಾಜನೇ! ವರಾಹರೂಪಿಯಾದ ಶ್ರೀಮನ್ನಾರಾಯಣನು ಹಿಂದೆ ಭೂದೇವಿಗೆ ತಿಳಿಸಿದ್ದ ಉಭಯಮುಖೀ ಗೋದಾನಮಹಿಮೆಯನ್ನು ವಿನತಾಶ್ವನು ನನಗೆ ಎಂದೋ ತಿಳಿಸಿದ್ದನು.

|| ವಿನತಾಕ್ಷ ಉವಾಚ ||

ಅತಃ ಪರಂ ಮಹಾರಾಜೋಭಯಮುಖ್ಯಾಃ ಸಮಾಸತಃ |
ವಿಧಾನಂ ಯದ್ವರಾಹೇಣ ಧರಣ್ಯೈ ಕಥಿತಂ ಪುರಾ || ೩ ||

|| ಧರಣ್ಯುವಾಚ ||

ಯತ್ತ್ವಯಾ ಕಪಿಲಾನಾಮ ಪೂರ್ವಮುತ್ಪಾದಿತಾ ವಿಭೋ || ೪ ||

ಹೋಮಧೇನುಃ ಸದಾ ಪುಣ್ಯಾ ಧೇನುರ್ಯಜ್ಞಾವತಾರಭೂಃ |
ಸಾ ಕಥಂ ಬ್ರಾಹ್ಮಣೇಭ್ಯೋ ಹಿ ದೇಯಾ ಕಸ್ಮಿನ್ದಿನೇऽಪಿ ಚ || ೫ ||

ಕೀದೃಶಾಯ ಚ ವಿಪ್ರಾಯ ದಾತವ್ಯಾ ಪುಣ್ಯಲಕ್ಷಣಾ |
ಕತಿ ವಾ ಕಪಿಲಾಃ ಪ್ರೋಕ್ತಾಃ ಸ್ವಯಮೇವ ಸ್ವಯಂಭುವಾ || ೬ ||

ತಾಸಾಂ ಪ್ರಯತ್ನಾದ್ದಾನೇನ ಕಿಂಪುಣ್ಯಂ ಸ್ಯಾಚ್ಚ ಮಾಧವ |
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರಾನ್ಮಧುಸೂದನ || ೭ ||

---

ಅದನ್ನೇ ಮೇಧಾವಿಯಾದ ನಿನಗೆ ಈಗ ತಿಳಿಸುವೆನು ಕೇಳು. ಈ ಕಪಿಲಾ ಗೋದಾನವು ಹೊಸ ಹೊಸ ಪುಣ್ಯಗಳನ್ನುಂಟುಮಾಡುವುದು.

೪–೭. ಭೂದೇವಿಯು ವರಾಹರೂಪಿಯಾದ ಮಹಾವಿಷ್ಣುವನ್ನು ಪ್ರಾರ್ಥಿಸುವಳಾಗಿ—ಓ ಸರ್ವಜ್ಞನಾದ ಮಾಧವನೇ! ಪುಣ್ಯಕರವೂ, ಯಜ್ಞಯಾಗಾದ್ಯನುಷ್ಠಾನಕ್ಕೆ ಆಶ್ರಯಪ್ರದವೂ ಆದ ಹೋಮಧೇನುವನ್ನು ಹಿಂದೆ ನೀನು ಸೃಷ್ಟಿಮಾಡಿದೆಯಷ್ಟೆ. ಆ ಕಪಿಲಾಗೋವನ್ನು ಯಾವ ದಿವಸ, ಯಾವ ವಿಧಿಯಿಂದ ಬ್ರಾಹ್ಮಣರಿಗೆ ದಾನಮಾಡಬೇಕು? ಎಂತಹ ಬ್ರಾಹ್ಮಣರಿಗೆ ದಾನಮಾಡಬೇಕು? ಕಪಿಲಾಗೋವುಗಳೆಷ್ಟು ವಿಧವೆಂದು ಸ್ವಾಯಂಭುವ ಪ್ರಜಾಪತಿಯು ಹೇಳಿರುವನು. ಓ ಮಾಧವನೇ! ಇವುಗಳನ್ನು ಪ್ರಯತ್ನಪೂರ್ವಕವಾಗಿ ದಾನಮಾಡುವುದರಿಂದ ಏನು ಫಲವುಂಟಾಗುವುದು? ಇವೆಲ್ಲವನ್ನೂ ವಿಸ್ತಾರವಾಗಿ ಕೇಳಬೇಕೆಂದು ಕುತೂಹಲವುಂಟಾಗಿದೆ. ಎಲೈ ಮಧುಸೂದನ! ದಯವಿಟ್ಟು ಈ ವಿಷಯವನ್ನು ನನಗೆ ತಿಳಿಸಬೇಕು ಎಂದಳು.

|| ವರಾಹ ಉವಾಚ ||

**ಶೃಣುಷ್ವ ಭದ್ರೇ ತತ್ತ್ವೇನ ಪವಿತ್ರಂ ಪಾಪನಾಶನಂ ।**
**ಕೃತ್ವಾ ಯತ್ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ || ೮ ||**

**ಕಪಿಲಾ ಅಗ್ನಿಹೋತ್ರಾರ್ಥಂ ಯಜ್ಞಾರ್ಥೇ ಚ ವರಾನನೇ ।**
**ಉದ್ಧೃತ್ಯ ಸರ್ವತೇಜಾಂಸಿ ಬ್ರಹ್ಮಣಾ ನಿರ್ಮಿತಾ ಪುರಾ || ೯ ||**

**ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಂ ।**
**ಪುಣ್ಯಾನಾಂ ಪರಮಂ ಪುಣ್ಯಂ ಕಪಿಲಾ ಚ ವರಾನನೇ || ೧೦ ||**

**ತಪಸಸ್ತ್ವವ ಏವಾಗ್ರ್ಯಂ ವ್ರತಾನಾಮುತ್ತಮಂ ವ್ರತಂ ।**
**ದಾನಾನಾಮುತ್ತಮಂ ದಾನಂ ವಿಧಿನಾ ಹ್ಯೇತದಕ್ಷಯಂ || ೧೧ ||**

---

೮. ವರಾಹಸ್ವಾಮಿಯು ಹೇಳುತ್ತಾನೆ—ಎಲೌ ಮಂಗಳಾಂಗಿಯೇ ! ಪವಿತ್ರವೂ ಪಾಪನಾಶಕವೂ ಆದ ಈ ಕಪಿಲಾಧೇನು ಮಹಿಮೆಯು ತತ್ವಸ್ವರೂಪವೆಂದು ತಿಳಿ; ಇದನ್ನು ದಾನಮಾಡುವುದರಿಂದ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ.

೯. ಎಲೌ ಸುಂದರವಾದ ಮುಖವುಳ್ಳ ಭೂದೇವಿಯೇ ! ಹಿಂದೆ ಬ್ರಹ್ಮನು ಅಗ್ನಿಹೋತ್ರಕ್ಕೋಸ್ಕರವಾಗಿಯೂ, ಯಜ್ಞಕ್ಕೋಸ್ಕರವಾಗಿಯೂ ಸಹ, ಸಕಲ ತೇಜಸ್ಸುಗಳನ್ನೂ ಒಂದುಕಡೆ ಸೇರಿಸಿ ಈ ಕಪಿಲಾಧೇನುವನ್ನು ನಿರ್ಮಿಸಿದನು.

೧೦. ಎಲೌ ಮಂಗಳಾಂಗಿಯೇ ! ಈ ಕಪಿಲಾಧೇನುವು ಪವಿತ್ರವಾದ ವಸ್ತುಗಳೆಲ್ಲಕ್ಕಿಂತ ತುಂಬಾ ಪವಿತ್ರವು. ಮಂಗಳಕರವಾದ ವಸ್ತುಗಳೆಲ್ಲಕ್ಕೂ ಮಂಗಳಕರವೂ ಪುಣ್ಯಪ್ರದವಾದುವುಗಳಲ್ಲೆಲ್ಲಾ ಉತ್ಕೃಷ್ಟಪುಣ್ಯಪ್ರದವೂ ಆಗಿದೆ.

೧೧. ಈ ಕಪಿಲಾಧೇನುವನ್ನು ವಿಧಿಪೂರ್ವಕವಾಗಿ ದಾನಮಾಡುವುದರಿಂದ ಅಕ್ಷಯವಾದ ಫಲವನ್ನುಂಟುಮಾಡುವುದು. ತಪಸ್ಸು, ವ್ರತಗಳು, ದಾನಗಳು ಇವೆಲ್ಲಕ್ಕಿಂತಲೂ ಇದೇ ಉತ್ಕೃಷ್ಟವಾದುದು.

**ಪೃಥಿವ್ಯಾಂ ಯಾನಿ ತೀರ್ಥಾನಿ ಗುಹ್ಯಾನ್ಯಾಯತನಾನಿ ಚ ।**
**ಪವಿತ್ರಾಣಿ ಚ ಪುಣ್ಯಾನಿ ಸರ್ವಲೋಕೇ ವಸುಂಧರೇ ॥ ೧೨ ॥**

**ಹೋತವ್ಯಾನ್ಯಗ್ನಿಹೋತ್ರಾಣಿ ಸಾಯಂ ಪ್ರಾತರ್ದ್ವಿಜಾತಿಭಿಃ ।**
**ಕಪಿಲಾಯಾ ಘೃತೇನೇಹ ದಧ್ನಾ ಕ್ಷೀರೇಣ ವಾ ಪುನಃ ॥ ೧೩ ॥**

**ಯಜಂತೇ ಯೇಽಗ್ನಿಹೋತ್ರಾಣಿ ಅನ್ನೈಶ್ಚ ವಿವಿಧೈಃ ಸದಾ ।**
**ಪೂಜಯಂತ್ಯತಿಥೀಂಶ್ಚೈವ ಪರಾಂ ಭಕ್ತಿಮುಪಾಗತಾಃ ॥ ೧೪ ॥**

**ತೇಷಾಂ ತ್ವಾದಿತ್ಯವರ್ಣೈಶ್ಚ ವಿಮಾನೈರ್ಜಾಯತೇ ಗತಿಃ ।**
**ಸೂರ್ಯಮಂಡಲಮಧ್ಯೇ ಚ ಬ್ರಹ್ಮಣಾ ನಿರ್ಮಿತಾ ಪುರಾ ॥ ೧೫ ॥**

**ಕಪಿಲಾಯಾಃ ಶಿರೋ ಗ್ರೀವಾಂ ಸರ್ವತೀರ್ಥಾನಿ ಭಾಮಿನಿ ।**
**ಪಿತಾಮಹನಿಯೋಗಾಚ್ಚ ನಿವಸಂತಿ ಹಿ ನಿತ್ಯಶಃ ॥ ೧೬ ॥**

---

೧೨. ಎಲೌ ಭೂದೇವಿಯೇ! ಈ ಭೂಮಂಡಲದಲ್ಲಿ ಎಷ್ಟು ತೀರ್ಥ ಕ್ಷೇತ್ರಗಳಿರುವುವೋ, ರಮ್ಯವಾದ ಎಷ್ಟು ದೇವಾಲಯಗಳಿರುವುವೋ ಮತ್ತು ಸಕಲ ಲೋಕಗಳಲ್ಲಿಯೂ ಪವಿತ್ರವೂ ಪುಣ್ಯಕರವೂ ಆದ ಎಷ್ಟು ಪ್ರದೇಶಗಳಿರುವುವೋ ಅವೆಲ್ಲವೂ ಈ ಕಪಿಲಾಗೋವಿನಲ್ಲಿಯೇ ಅಡಕವಾಗಿರುವುವು.

೧೩. ಬ್ರಾಹ್ಮಣರು ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಕಪಿಲಾಗೋವಿನ ತುಪ್ಪ, ಮೊಸರು ಮತ್ತು ಹಾಲುಗಳಿಂದಲೇ ಅಗ್ನಿಹೋತ್ರವನ್ನು ಆಚರಿಸಬೇಕು.

೧೪-೧೫. ಸದಾ ಅಗ್ನಿಹೋತ್ರಗಳನ್ನು ತಪ್ಪದೆ ಆಚರಿಸುತ್ತಾ ವಿಧವಿಧವಾದ ಅನ್ನಗಳಿಂದ ಪ್ರತಿನಿತ್ಯವೂ ಅತಿಥಿಗಳನ್ನು ಭಕ್ತಿಯಿಂದ ಪೂಜೆಮಾಡಿ ಸಂತೋಷಗೊಳಿಸುವ ಮಾನವರು ಸೂರ್ಯನಂತೆ ತೇಜೋಮಯವಾದ ವಿಮಾನಗಳಲ್ಲಿ ಕುಳಿತು ಹಿಂದೆ ಬ್ರಹ್ಮನು ನಿರ್ಮಿಸಿರುವ ಉತ್ತಮವಾದ ಲೋಕವನ್ನು ಸೇರುವರು.

೧೬. ಬ್ರಹ್ಮನ ಅಪ್ಪಣೆಯ ಪ್ರಕಾರ ಕಪಿಲಾಗೋವಿನ ತಲೆಯಿಂದ ಕುತ್ತಿಗೆಯ ವರೆಗಿನ ಅವಯವಗಳಲ್ಲಿ ಸಕಲ ತೀರ್ಥಗಳೂ ಶಾಶ್ವತವಾಗಿ ನೆಲಸಿರುವುವು.

**ಪ್ರಾತರುತ್ಥಾಯ ಯೋ ಮರ್ತ್ಯಃ ಕಪಿಲಾಗಲಮಸ್ತಕಾತ್ ।**
**ಚ್ಯುತಂ ತು ಭಕ್ತ್ಯಾ ಪಾನೀಯಂ ಶಿರಸಾ ಧಾರಯೇನ್ನರಃ ॥ ೧೭ ॥**

**ಸ ತೇನ ಪುಣ್ಯೇನೋಪೇತಸ್ತತ್ಕ್ಷಣಾದ್ಗತಕಿಲ್ಬಿಷಃ ।**
**ತ್ರಿಂಶದ್ವರ್ಷಕೃತಂ ಪಾಪಂ ದಹತ್ಯಗ್ನಿರಿವೇಂಧನಂ ॥ ೧೮ ॥**

**ಕಲ್ಯ ಉತ್ಥಾಯ ಯೋ ಮರ್ತ್ಯಃ ಕುರ್ಯಾತ್ತಾಸಾಂ ಪ್ರದಕ್ಷಿಣಂ ।**
**ಪ್ರದಕ್ಷಿಣೀಕೃತಾ ತೇನ ಪೃಥಿವೀ ಸ್ಯಾದ್ವಸುಂಧರೇ ॥ ೧೯ ॥**

**ಪ್ರದಕ್ಷಿಣಾಯಾಂ ಚೈಕಾಯಾಂ ಕೃತಾಯಾಂ ಚ ವಸುಂಧರೇ ।**
**ದಶವರ್ಷಕೃತಂ ಪಾಪಂ ನಶ್ಯತೇ ನಾತ್ರ ಸಂಶಯಃ ॥ ೨೦ ॥**

**ಕಪಿಲಾಯಾಸ್ತು ಮೂತ್ರೇಣ ಸ್ನಾಯಾದ್ಯೋ ಯಃ ಶುಚಿವ್ರತಃ ।**
**ಸ ಗಂಗಾದ್ಯೇಷು ತೀರ್ಥೇಷು ಸ್ನಾತೋ ಭವತಿ ಮಾನವಃ ॥ ೨೧ ॥**

---

೧೭-೧೮. ಎಲೌ ಭಾಮಿನಿಯೇ! ಬೆಳಗ್ಗೆ ಎದ್ದು ಯಾವ ಮಾನವನು ಕಪಿಲಾಹಸುವಿನ ಕುತ್ತಿಗೆಯಿಂದಲೂ ತಲೆಯಿಂದಲೂ ತೊಟ್ಟಿಕ್ಕುವ ನೀರನ್ನು ಭಕ್ತಿಯಿಂದ ತಲೆಯಲ್ಲಿ ಧಾರಣೆಮಾಡುವನೋ ಅವನಿಗೆ ಸಕಲ ತೀರ್ಥಗಳಲ್ಲಿ ಸ್ನಾನಮಾಡಿದ ಫಲ ದೊರೆತು ಆವರೆಗೆ ಸಂಘಟಿಸಿದ್ದ ಪಾಪಗಳನ್ನೆಲ್ಲಾ ಕಳೆದು ಕೊಳ್ಳುವನು. ಬೆಂಕಿಯು ಕಟ್ಟಿಗೆಯನ್ನು ಸುಟ್ಟು ಭಸ್ಮಮಾಡುವಂತೆ ಈ ಜಲವು ಮೂವತ್ತು ವರ್ಷಗಳಿಂದ ಬಂದಿರುವ ಪಾಪಗಳನ್ನೆಲ್ಲಾ ನಾಶಪಡಿಸುವುದು.

೧೯. ಓ ಭೂದೇವಿ! ಬೆಳಗಾಗುವುದಕ್ಕೆ ಮುಂಚಿತವಾಗಿಯೇ ಎದ್ದು ಈ ಕಪಿಲಾಧೇನುವನ್ನು ಪ್ರದಕ್ಷಿಣೆಮಾಡಿದರೆ ಅವನು ಸಕಲ ಭೂಮಂಡಲವನ್ನೂ ಒಂದುಬಾರಿ ಪ್ರದಕ್ಷಿಣೆಮಾಡಿದಂತೆ ಆಗುವುದು.

೨೦. ಒಂದುಸಲ ಕಪಿಲಾಗೋ ಪ್ರದಕ್ಷಿಣೆಮಾಡಿದರೆ ಹತ್ತು ವರ್ಷಗಳಿಂದ ಮಾಡಿದ ಪಾಪಗಳೆಲ್ಲಾ ನಿಶ್ಚಯವಾಗಿ ನಾಶವಾಗುವುವು.

೨೧. ಶುಚಿಯಾಗಿ ವ್ರತನಿಯಮವನ್ನಾಚರಿಸುವ ಮಾನವನು ಕಪಿಲಾ ಗೋವಿನ ಗಂಜಲದಿಂದ ಸ್ನಾನಮಾಡಬೇಕು. ಹೀಗೆ ಮಾಡಿದರೆ ಆ ಮನುಜನು ಗಂಗಾದಿ ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದಂತೆ ಆಗುವುದು.

**ಯೇನ ಸ್ನಾನೇನ ಚೈಕೇನ ಭವಮುಕ್ತೋ ಭವೇನ್ನರಃ ।**
**ಯಾವಜ್ಜೀವಕೃತಾತ್ಪಾಪಾತ್ತತ್ಕ್ಷಣಾದೇವ ಮುಚ್ಯತೇ ॥ ೨೨ ॥**

**ಗೋಸಹಸ್ರಂ ಚ ಯೋ ದದ್ಯಾದೇಕಾಂ ವಾ ಕಪಿಲಾಂ ನರಃ ।**
**ಸಮಮೇತತ್ಪುರಾ ಪ್ರಾಹ ಬ್ರಹ್ಮಲೋಕೇ ಪಿತಾಮಹಃ ॥ ೨೩ ॥**

**ಯಶ್ಚೈಕಾಂ ಕಪಿಲಾಂ ಹನ್ಯಾನ್ನರೋ ರಜ್ಜುಕರೋ ಯದಿ ।**
**ಗೋಸಹಸ್ರಂ ಹತಂ ತೇನ ಭವತೀಹ ನ ಸಂಶಯಃ ॥ ೨೪ ॥**

**ಗವಾಂ ಸ್ಥಿತಿಂ ಕಲ್ಪಯೇತ ಘೃತಂ ಗವ್ಯಂ ನ ದೂಷಯೇತ್ ।**
**ಯಾವದ್ಧಿ ವರ್ಧತೇ ಗವ್ಯಂ ತಾವತ್ಪಾಪೈಸ್ತು ಪೂಯತೇ ॥ ೨೫ ॥**

---

೨೨. ಈ ಕಪಿಲಾಗೋಮೂತ್ರಸ್ನಾನವನ್ನು ಒಂದುಬಾರಿ ಮಾಡಿದರೂ ಮಾನವನು ಈ ಸಂಸಾರಬಂಧನಗಳಿಂದ ಮುಕ್ತನಾಗುವನು. ಅಲ್ಲದೆ ತಾನು ಬದುಕಿರುವವರೆಗೂ ಮುಂದೆ ಮಾಡುವ ಮತ್ತು ಹಿಂದೆ ಮಾಡಿರುವ ಸಕಲ ಪಾಪಗಳಿಂದಲೂ ಕೂಡಲೆ ಬಿಡುಗಡೆಹೊಂದುವನು.

೨೩. ಒಂದು ಕಪಿಲಾಗೋದಾನವು ಒಂದುಸಾವಿರ ಗೋದಾನಗಳಿಗೆ ಸಮಾನವಾದುದೆಂದು ಹಿಂದೆ ಬ್ರಹ್ಮಲೋಕದಲ್ಲಿ ಚತುರ್ಮುಖನು ಹೇಳಿದ್ದನು.

೨೪. ಒಂದು ಕಪಿಲಾಗೋವನ್ನು ಹಗ್ಗದಿಂದ ಬಂಧಿಸಿ ತಂದರೂ ಅಥವಾ ಹೊಡೆದರೂ ಆ ಮಾನವನು ಸಾವಿರ ಗೋಹತ್ಯಮಾಡಿದ ಪಾಪಕ್ಕೆ ಗುರಿಯಾಗುವನು. ಇದರಲ್ಲಿ ಸಂಶಯವಿಲ್ಲ.

೨೫. ಗೋವುಗಳು ನಿಲ್ಲುವುದಕ್ಕೂ ಮತ್ತು ಮೇಯುವುದಕ್ಕೂ ಉತ್ತಮವಾದ ಸ್ಥಾನವನ್ನು ಕಲ್ಪಿಸಬೇಕು. ಯಾವಾಗಲೂ ಹಸುವಿನ ತುಪ್ಪವನ್ನು ನಿಂದೆಮಾಡಬಾರದು. ಗೋವುಗಳ ರಸದ್ರವ್ಯವು ಅಭಿವೃದ್ಧಿಯಾದಹಾಗೆಲ್ಲಾ ಮಾನವನು ಪಾಪಗಳಿಂದ ಪರಿಶುದ್ಧನಾಗುವನು.

**ಗವಾಂ ಕಂಡೂಯನಂ ಶ್ರೇಷ್ಠಂ ತಥಾ ಚ ಪ್ರತಿಪಾಲನಂ ।**
**ತುಲ್ಯಂ ಗೋಘೃತದಾನಸ್ಯ ಭಯರೋಗಾದಿಪಾಲನಂ ॥ ೨೬ ॥**

**ತೃಣಾದಿಭಕ್ಷಣಾರ್ಥಂ ಚ ಗವಾಂ ದದ್ಯಾದ್ಧರಾದಿಕಂ ।**
**ಸ್ವರ್ಗವಾಸಫಲಂ ದಿವ್ಯಂ ಲಭತೇ ಮಾನವೋತ್ತಮಃ ॥ ೨೭ ॥**

**ದಶೇಹ ಕಪಿಲಾಃ ಪ್ರೋಕ್ತಾಃ ಸ್ವಯಮೇವ ಸ್ವಯಂಭುವಾ ।**
**ಯೋ ದದ್ಯಾಚ್ಛ್ರೋತ್ರಿಯಸ್ಯೈವ ಸ್ವರ್ಗಂ ಗತ್ವಾ ಸ ಮಾನವಃ ॥೨೮॥**

**ವಿಮಾನೈರ್ವಿವಿಧೈರ್ದಿವ್ಯೈರ್ದಿವ್ಯಕನ್ಯಾಭಿರರ್ಚಿತಃ ।**
**ಸೇವ್ಯಮಾನಸ್ತು ಗಂಧರ್ವೈರ್ದೀಪ್ಯಮಾನಾ ಯಥಾಗ್ನಯಃ ॥ ೨೯ ॥**

---

೨೬. ಗೋವುಗಳ ಮೈತುರಿಸುವುದು ಮತ್ತು ಸರಿಯಾದ ಮೇವು, ತಿಂಡಿ, ಮುಂತಾದವನ್ನು ಕೊಟ್ಟು ಕಾಪಾಡುವುದು, ಅವುಗಳಿಗೆ ರೋಗಬಾರದಂತೆ ನೋಡಿಕೊಳ್ಳುವುದು, ಅಕಸ್ಮಾತ್ತಾಗಿ ರೋಗಸಂಭವಿಸಿದರೆ ಯೋಗ್ಯವಾದ ಚಿಕಿತ್ಸೆಗಳನ್ನು ನಡೆಸಿ ಚೆನ್ನಾಗಿ ಉಪಚರಿಸುವುದು. ಇವೆಲ್ಲವೂ ಹಸುವಿನ ತುಪ್ಪವನ್ನು ದಾನಮಾಡುವುದರಿಂದುಂಟಾಗುವ ಪುಣ್ಯಕ್ಕೆ ಸಮನಾದ ಫಲಗಳನ್ನು ಕೊಡುವುದು.

೨೭. ಚೆನ್ನಾಗಿ ಬೆಳೆದ ಹುಲ್ಲನ್ನು ಮೇಯುವುದಕ್ಕೋಸ್ಕರ ಗೋವುಗಳಿಗೆ ಧರ್ಮಾರ್ಥವಾಗಿ ಹುಲ್ಲುಗಾವಲುಗಳನ್ನು ಬಿಡುವ ಮಾನವಶ್ರೇಷ್ಠನು ದಿವ್ಯವಾದ ಸ್ವರ್ಗವಾಸವನ್ನು ಪಡೆಯುವನು.

೨೮–೨೯. ಕಪಿಲಾಧೇನುಗಳು ಹತ್ತುವಿಧವೆಂದು ಸ್ವಯಂಭುವ ಪ್ರಜಾಪತಿಯು ಹೇಳಿರುವನು. ಈ ಕಪಿಲಾಧೇನುಗಳನ್ನು ಶ್ರೋತ್ರಿಯನಾದ ಬ್ರಾಹ್ಮಣನಿಗೆ ದಾನಮಾಡುವ ಮಾನವನು ವಿವಿಧವಾದ ದಿವ್ಯ ವಿಮಾನಗಳನ್ನೇರಿ ದೇವಕನ್ಯೆಯರಿಂದ ಸೇವಿಸಲ್ಪಡುತ್ತಾ ಸ್ವರ್ಗಲೋಕವನ್ನು ಹೊಂದಿ ಅಲ್ಲಿ ಗಂಧರ್ವರಿಂದ ಸೇವೆಯನ್ನು ಕೈಗೊಳ್ಳುತ್ತಾ ಅಗ್ನಿಯಂತೆ ತೇಜೋಮಯನಾಗಿರುವನು.

ಸುವರ್ಣಕಪಿಲಾ ಪೂರ್ವಾ ದ್ವಿತೀಯಾ ಗೌರಪಿಂಗಲಾ ।
ಆಶಾ ಚೈವ ತೃತೀಯಾ ಸ್ಯಾದಗ್ನಿಜ್ವಾಲಾ ಚತುರ್ಥಿಕಾ ॥ ೩೦ ॥

ಪಂಚಮೀ ಜುಹುವರ್ಣಾಸ್ಯಾತ್ ಷಷ್ಠೀ ತು ಘೃತಪಿಂಗಲಾ ।
ಸಪ್ತಮೀ ಶ್ವೇತಪಿಂಗಾ ಸ್ಯಾದಷ್ಟಮೀ ಕ್ಷೀರಪಿಂಗಲಾ ॥ ೩೧ ॥

ನವಮೀ ಪಾಟಲಾ ಜ್ಞೇಯಾ ದಶಮೀ ಪುಷ್ಪಪಿಂಗಲಾ ।
ಏತಾ ದಶ ಸಮಾಖ್ಯಾತಾಃ ಕಪಿಲಾಶ್ಚ ವಸುಂಧರೇ ॥ ೩೨ ॥

ಸರ್ವಾಹ್ಯೇತಾ ಮಹಾಭಾಗಾಸ್ತಾರಯಂತಿ ನ ಸಂಶಯಃ ।
ಸಂಗಮೇಷು ಪ್ರಶಸ್ತಾಶ್ಚ ಸರ್ವಪಾಪಪ್ರಣಾಶನಾಃ ॥ ೩೩ ॥

---

೩೦–೩೨. ಎಲೌ ಭೂದೇವಿಯೇ! ಕಪಿಲಾಧೇನುಗಳಲ್ಲಿ ಮೊದಲನೆಯದು ಚಿನ್ನದಂತೆ ಬಣ್ಣವುಳ್ಳದ್ದು, ಎರಡನೆಯದು ಬಿಳುಪುಮಿಶ್ರವಾದ ಗೋರೋಚನದ ಬಣ್ಣದಿಂದ ಕೂಡಿದುದು, ಮೂರನೆಯದು ಆಶಾ ಎನಿಸಿಕೊಂಡು ದಿಕ್ಕುಗಳಂತೆ ಬಣ್ಣವುಳ್ಳದ್ದು, ನಾಲ್ಕನೆಯದು ಬೆಂಕಿಯು ಜ್ವಾಲೆಯಂತೆ ಕಾಂತಿಯುಳ್ಳದ್ದು, ಐದನೆಯದು ಜುಹುವಿನ ಬಣ್ಣದ್ದು, ಆರನೆಯದು ತುಪ್ಪ ಮತ್ತು ಗೋರೋಚನ ಇವುಗಳೆರಡರ ಬಣ್ಣಗಳಿಂದ ಮಿಶ್ರವಾದುದು, ಏಳನೆಯದು ಬಿಳುಪು ಮತ್ತು ಗೋರೋಚನಬಣ್ಣ ಇವುಗಳಿಂದ ಕೂಡಿದುದು, ಎಂಟನೆಯದು ಹಾಲು ಮತ್ತು ಗೋರೋಚನ ಇವುಗಳೆರಡರ ಬಣ್ಣದಿಂದ ಬೆರೆದ ವರ್ಣವುಳ್ಳದ್ದು, ಒಂಭತ್ತನೆಯದು ಕೆಂಪು ಮತ್ತು ಬಿಳುಪು ವರ್ಣಗಳಿಂದ ಯುಕ್ತವಾದುದು. ಹತ್ತನೆಯದು ಹೂವಿನಬಣ್ಣ ಗೋರೋಚನವರ್ಣ ಇವುಗಳೆರಡರಿಂದಲೂ ಯುಕ್ತವಾದುದು. ಎಲೌ ವಸುಂಧರಾದೇವಿ! ಈರೀತಿ ಕಪಿಲಾಧೇನುಗಳು ಹತ್ತು ಬಗೆಯಾಗಿವೆಯೆಂದು ಬ್ರಹ್ಮನು ಹೇಳಿರುವನು.

೩೩. ಚಂದ್ರಸೂರ್ಯರಗ್ರಹಣ ಮುಂತಾದ ಪರ್ವಕಾಲಗಳಲ್ಲಿ ಅಥವಾ ನದಿಗಳ ಸಂಗಮಕ್ಷೇತ್ರದಲ್ಲಿ ಈ ಪ್ರಶಸ್ತವಾದ ಕಪಿಲಾಧೇನುಗಳನ್ನು ದಾನ ಮಾಡಿದರೆ ಎಲ್ಲಾ ಪಾಪಗಳೂ ನಾಶವಾಗಿ ಆತನ ವಂಶೀಯರೆಲ್ಲರೂ ಸಂಶಯವಿಲ್ಲದೆ ಉದ್ಧಾರವಾಗುವರು.

ಏವಮೇತಾಸ್ತು ಕಪಿಲಾಃ ಪಾಪಘ್ನ್ಯಶ್ಚ ವಸುಂಧರೇ ।
ಆಶಾ ಚೈವ ತು ಯಾ ಪ್ರೋಕ್ತಾ ಅಗ್ನಿಗರ್ಭಾನಲಪ್ರಭಾ ॥ ೩೪ ॥

ಅಗ್ನಿಜ್ವಾಲೋಜ್ವಲೈಃ ಶೃಂಗೈಃ ಪ್ರದೀಪ್ತಾಂಗಾರಲೋಚನಾ ।
ಅಗ್ನಿಪುಷ್ಪಾ ಅಗ್ನಿಲೋಮಾ ತಥಾನ್ಯಾ ಚಾನಲಪ್ರಭಾ ॥ ೩೫ ॥

ತಾಮಾಗ್ನೇಯ್ಯಾಂ ಸದಾ ದದ್ಯಾದ್ಬ್ರಾಹ್ಮಣಾಯೇತರೈಃ ಸದಾ ।
ಗೃಹೀತ್ವಾ ಕಪಿಲಾಂ ಶೂದ್ರಃ ಕಾಮತಸ್ತತ್ಪಯಃ ಪಿಬೇತ್ ॥ ೩೬ ॥

ಪತಿತಶ್ಚ ಭವೇನ್ನಿತ್ಯಂ ಚಂಡಾಲಸದೃಶಃ ಪುಮಾನ್ ।
ತಸ್ಮಾನ್ನ ಪ್ರತಿಗೃಹ್ಣೀಯಾಚ್ಛಬಲಾಂ ಗಾಂ ಕಥಂಚನ ॥ ೩೭ ॥

ದ್ವಾರಾಂತೇ ಪರಿಹರ್ತವ್ಯಾ ಕಪಿಲಾ ಗೌರ್ದ್ವಿಜೇತರೈಃ ।
ಲೋಕೇಷು ತೇ ಮೂಢತಮಾಃ ಕಪಿಲಾಕ್ಷೀರಭೋಜನಾಃ ॥ ೩೮ ॥

---

೩೪–೩೭. ಎಲೌ ಭೂದೇವಿಯೇ! ಈ ಎಲ್ಲಾ ಕಪಿಲಾಧೇನುಗಳ ದಾನವೂ ಪಾಪನಾಶಕರವೇ. ಇವುಗಳಲ್ಲಿ ಮೂರನೆಯದಾದ ಆಶಾಯೆಂಬುದರ ಗರ್ಭದಲ್ಲಿ ಅಗ್ನಿಯು ಇರುವುದು. ಅದು ಬೆಂಕಿಯ ಕಾಂತಿಯಂತೆ ಬಣ್ಣವುಳ್ಳುದು. ಇದರ ಕೊಂಬುಗಳು ಅಗ್ನಿಜ್ವಾಲೆಗಳಂತೆ ಉಜ್ಜ್ವಲವಾಗಿ ಹೊಳೆಯುವುವು. ಇದರ ಕಣ್ಣುಗಳು ಕೆಂಡಗಳಂತೆ ಪ್ರಜ್ವಲಿಸುವುವು. ಇದರ ಮಚ್ಚೆಗಳು, ಕೂದಲುಗಳು ಮುಂತಾದುವೆಲ್ಲಾ ಬೆಂಕಿಯ ಜ್ವಾಲೆಯಂತೆ ಹೊಳೆಯುವುವು. ಈ ಆಶಾನಾಮಕ ಕಪಿಲಾಧೇನುವನ್ನು ಶೂದ್ರಾದಿ ಜನಗಳು ಇಟ್ಟುಕೊಳ್ಳುವುದು ಕಡಿಮೆ. ಅವರಲ್ಲಿ ತಿಳಿದವರು ಆಗ್ನೇಯ ದಿಕ್ಕಿನಲ್ಲಿ ನಿಲ್ಲಿಸಿ ಬ್ರಾಹ್ಮಣನಿಗೆ ದಾನಮಾಡಬೇಕು. ಹಾಗೆ ದಾನಮಾಡದೆ ತಾನೇ ಆಸೆಯಿಂದ ಆ ಕಪಿಲಾಧೇನುವನ್ನು ಇಟ್ಟುಕೊಂಡು ಅದರ ಹಾಲನ್ನು ಪಾನಮಾಡಿದರೆ ಅವನು ಪತಿತನಾಗಿ ಚಂಡಾಲನಿಗೆ ಸಮಾನನಾಗುವನು. ಆದುದರಿಂದ ಇಂಥಾ ಕಪಿಲಾಗೋವನ್ನು ಬ್ರಾಹ್ಮಣೇತರರು ಇಟ್ಟುಕೊಳ್ಳಲಾರರು.

೩೮. ಶಾಸ್ತ್ರದಲ್ಲಿ ಪ್ರತ್ಯಯವುಳ್ಳ ದ್ವಿಜೇತರರು ಈ ಕಪಿಲಾಧೇನುವನ್ನು ಮನೆಗೆ ತರುವುದಕ್ಕೇ ಸಮ್ಮತಿಸುವುದಿಲ್ಲ. ಹೀಗೆ ಮಾಡದೆ ತಿಳಿದೂ ತಿಳಿಯೂ ಅಂಥ ಕಪಿಲಾಗೋವಿನ ಹಾಲನ್ನು ಬೇಕಾಗಿ ಬಳಸುವರು ನಿಜವಾಗಿಯೂ ಮೂಢರೇ ಸರಿ.

**ಅಸಂಭಾಷ್ಯಾಶ್ಚ ಪತಿತಾಃ ಶೂದ್ರಾಸ್ತೇ ಪಾಪಕರ್ಮಿಣಃ ।**
**ಪಿಬಂತಿ ಯಾವತ್ಕಪಿಲಾಂ ತಾವತ್ತೇಷಾಂ ಪಿತಾಮಹಾಃ ॥**
**ಅಮೇಧ್ಯಂ ಭುಂಜತೇಽತಸ್ತಾಂ ನೋಪಜೀವೇದ್ದ್ವಿಜೇತರಃ ॥ ೩೯ ॥**

**ತಾಸಾಂ ಘೃತಂ ಚ ಕ್ಷೀರಂ ವಾ ನವನೀತಮಥಾಪಿ ವಾ ।**
**ಉಪಜೀವಂತಿ ಯೇ ಶೂದ್ರಾಸ್ತೇ ಪ್ರಯಾಂತಿ ಯಮಾಲಯಂ ॥೪೦॥**

**ಕಪಿಲಾಜೀವಿನಃ ಶೂದ್ರಾಃ ಸರ್ವೇ ಗಚ್ಛಂತಿ ರೌರವಂ ।**
**ರೌರವೇ ಭುಂಜತೇ ದುಃಖಂ ವರ್ಷಕೋಟಿಶತೋಷಿತಾಃ ॥ ೪೧ ॥**

**ತತೋ ವಿಮುಕ್ತಾಃ ಕಾಲೇನ ಜಾಯಂತೇ ಶ್ವಾನಯೋನಿಷು ।**
**ಶ್ವಾನಯೋನೇರ್ವಿಮುಕ್ತಾಸ್ತೇ ವಿಷ್ಠಾಯಾಂ ಕೃಮಿಯೋನಿಗಾಃ॥೪೨॥**

**ವಿಷ್ಠಾಸ್ವೇವ ಚ ಪಾಪಿಷ್ಠಾ ದುರ್ಗಂಧೇಷು ಚ ನಿತ್ಯಶಃ ।**
**ಭೂಯೋಽಪಿ ಜಾಯಮಾನಾಸ್ತೇ ತತ್ರೋತ್ತಾರೋ ನ ವಿದ್ಯತೇ ॥೪೩॥**

---

೩೯–೪೦. ಇಂತಹ ಕಪಿಲಾಗೋಕ್ಷೀರವನ್ನು ಅವರು ಪಾನಮಾಡಿದರೆ ಪಾಪಕೃತ್ಯಮಾಡಿದಂತಾಗುವುದರಿಂದ ಅವರು ಸಂಭಾಷಣೆಗೆ ಕೂಡ ಅನರ್ಹರೆನಿಸಿದ ಪತಿತರಾಗುವರು. ಕಪಿಲಾಗೋವಿನ ಹಾಲನ್ನು ಪಾನಮಾಡುವ ಬ್ರಾಹ್ಮಣೇತರನ ಸ್ವರ್ಗಸ್ಥತಂದೆ ಮತ್ತು ಅಜ್ಜಂದಿರು ಪರಲೋಕದಲ್ಲಿ ಅಮೇಧ್ಯವನ್ನು ಸೇವಿಸಬೇಕಾಗುವುದು. ಆದ್ದರಿಂದ ಬ್ರಾಹ್ಮಣೇತರರು ಕಪಿಲಾಗೋವಿನ ಹಾಲು, ಮೊಸರು ಮುಂತಾದ ಯಾವ ಪದಾರ್ಥಗಳನ್ನೂ ಉಪಯೋಗಿಸಬಾರದು. ಈ ಕಪಿಲಾಹಸುವಿನ ತುಪ್ಪ, ಹಾಲು ಮತ್ತು ಬೆಣ್ಣೆ ಇವುಗಳನ್ನುಪಭೋಗಿಸುವ ದ್ವಿಜೇತರರು ನಿಜವಾಗಿಯೂ ಯಮಲೋಕವನ್ನೈದುವರು.

೪೧–೪೩. ಈ ಕಪಿಲಾಧೇನುವಿನ ಗೋರಸವನ್ನು ಸೇವಿಸುವ ದ್ವಿಜೇತರರು ರೌರವನರಕವನ್ನು ಹೊಂದುವರು. ಅಲ್ಲಿ ಅನೇಕಕೋಟಿ ವರ್ಷಗಳ ಕಾಲ ದುಃಖವನ್ನನುಭವಿಸಿ ಬಳಿಕ ನಾಯಿಯ ಜನ್ಮವನ್ನು ಪಡೆಯುವರು. ಅಲ್ಲಿಂದ ಬಿಡುಗಡೆ ಹೊಂದಿದ ಮೇಲೆ ಅಮೇಧ್ಯವರ್ತಿಗಳಾದ ಕ್ರಿಮಿಗಳ ಜನ್ಮವನ್ನು ಮತ್ತೆ ಪಡೆಯುವರು. ಇವರಿಗೆ ಮಾತ್ರ ಉದ್ಧಾರವೇ ಇಲ್ಲ.

ಬ್ರಾಹ್ಮಣಶ್ಚೈವ ಯೋ ದೇವಿ ಕುರ್ಯಾತ್ತೇಷಾಂ ಪ್ರತಿಗ್ರಹಂ ।
ತತಃ ಪ್ರಭೃತ್ಯಮೇಧ್ಯಾಯಾಂ ಪಿತರಸ್ತಸ್ಯ ಶೇರತೇ ॥ ೪೪ ॥

ತಂ ವಿಪ್ರಂ ನಾನುಭಾಷೇತ ನ ಚಾಪ್ಯೇಕಾಸನೇ ವಿಶೇತ್ ।
ಸ ನಿತ್ಯಂ ವರ್ಜನೀಯೋ ನೈ ದೂರಾತ್ತು ಬ್ರಾಹ್ಮಣಾಧಮಃ ॥ ೪೫ ॥

ಯಸ್ತೇನ ಸಹ ಭಾಷೇತ ಪ್ರಾಯಶ್ಚಿತ್ತೀ ಭವೇದ್ದ್ವಿಜಃ ।
ಏಕಸ್ಯ ಗೋಪ್ರದಾನಸ್ಯ ಸಹಸ್ರಾಂಶೋ ನ ಪೂರ್ಯತೇ ॥ ೪೬ ॥

ಕಿಮನ್ಯೈರ್ಬಹುಭಿರ್ದಾನೈಃ ಕೋಟಿಸಂಖ್ಯಾತವಿಸ್ತರೈಃ ॥ ೪೭ ॥

ಶ್ರೋತ್ರಿಯಾಯ ದರಿದ್ರಾಯ ಸುವೃತ್ತಾಯಾಹಿತಾಗ್ನಯೇ ।
ದತ್ತ್ವೈಕಾಂ ಕಪಿಲಾಂ ಧೇನುಂ ಸರ್ವಪಾಪೈಃ ಪ್ರಮುಚ್ಯತೇ ॥ ೪೮ ॥

---

೪೪. ಇಂತಹ ಪಾಪಿಗಳು ಕೊಟ್ಟ ದಾನವನ್ನು ಸ್ವೀಕರಿಸುವ ಬ್ರಾಹ್ಮಣನ ಪಿತೃಗಳು ಸಹ, ಅದನ್ನು ಸ್ವೀಕಾರಮಾಡಿದ ದಿನದಿಂದ ಅಮೇಧ್ಯದಲ್ಲಿ ಬಿದ್ದು ನರಳಬೇಕಾಗುವುದು.

೪೫. ಇಂತಹ ಬ್ರಾಹ್ಮಣನು ಸಂಭಾಷಣೆಗೆ ಸಹ ಅನರ್ಹನು. ಮತ್ತು ಇವನ ಜತೆಯಲ್ಲಿ ಕುಳಿತುಕೊಳ್ಳಲೂ ಕೂಡದು. ಇಂಥವನನ್ನು ದೂರದಲ್ಲೇ ಇಡಬೇಕು.

೪೬–೪೭. ಇವನೊಡನೆ ಮಾತನಾಡುವ ಬ್ರಾಹ್ಮಣನು ಪ್ರಾಯಶ್ಚಿತ್ತಕ್ಕೆ ಗುರಿಯಾಗುವನು. ಇಂತಹ ಪ್ರಾಯಶ್ಚಿತ್ತದಿಂದ ಒಂದು ಗೋದಾನ ಸ್ವೀಕಾರದಲ್ಲಿ ಸಾವಿರದ ಒಂದುಪಾಲುದೋಷವೂ ಹೋಗಲಾರದು. ಹೀಗಿರುವಾಗ ಕೋಟ್ಯಂತರ ಗೋದಾನಗಳನ್ನು ಸ್ವೀಕರಿಸುವವನ ವಿಷಯದಲ್ಲಿ ಹೇಳಬೇಕಾದ್ದೇ ಇಲ್ಲ.

೪೮. ಇಂತಹ ಅಪಾರವಾದ ಪಾಪಕ್ಕೆ ಗುರಿಯಾದವನು ತತ್ಪರಿಹಾರಕ್ಕಾಗಿ ಶ್ರೋತ್ರಿಯನೂ, ಬಡವನೂ ಮತ್ತು ಒಳ್ಳೆಯ ನಡತೆಯುಳ್ಳವನೂ ಆದ ಸದ್ಬ್ರಾಹ್ಮಣನಿಗೆ ಒಂದು ಕಪಿಲವರ್ಣದ ಗೋವನ್ನು ದಾನಮಾಡಿದರೆ ಅವನ ಸಕಲ ಪಾಪಗಳೂ ತೊಲಗುವುವು.

ಮಾಸೇ ಪ್ರಸವಿನೀಂ ಧೇನುಂ ದಾನಾರ್ಥೀ ಪ್ರತಿಪಾಲಯೇತ್ ।
ಆತ್ಮಾರ್ಥೇ ನ ಪ್ರಪಾಲ್ಯಾ ಹಿ ಸದಾ ನರಕಭೀರುಭಿಃ ॥ ೪೯ ॥

ಕಪಿಲ್ಯಾರ್ಧಪ್ರಸೂತಾ ಚ ದಾತವ್ಯಾ ಹಿ ದ್ವಿಜನ್ಮನೇ ।
ಜಾಯಮಾನಸ್ಯ ವತ್ಸಸ್ಯ ಮುಖಂ ಯೋನ್ಯಾಂ ಪ್ರದೃಶ್ಯತೇ ॥ ೫೦ ॥

ತಾವತ್ಸಾ ಪೃಥಿವೀ ಜ್ಞೇಯಾ ಯಾವದ್ಗರ್ಭಂ ನ ಮುಂಚತಿ ॥ ೫೧ ॥

ಧೇನೋರ್ಯಾವಂತಿ ರೋಮಾಣಿಸವತ್ಸಾಯಾ ವಸುಂಧರೇ ।
ಭೂಮ್ಯಾಂ ತು ಪಾಂಸವೋ ಯಾವದ್ಯಾವನ್ನಕ್ಷತ್ರತಾರಕಾಃ ॥ ೫೨ ॥

ತಾವದ್ವರ್ಷಸಹಸ್ರಾಣಿ ಬ್ರಹ್ಮೇಶಾದಿಭಿರರ್ಚಿತಃ ।
ಬ್ರಹ್ಮಲೋಕೇ ನಿವಸತಿ ಯಶ್ಚೈಕಕಪಿಲಾಪ್ರದಃ ॥ ೫೩ ॥

---

೪೯. ಒಂದು ತಿಂಗಳಲ್ಲಿ ಕರುಹಾಕುವ ಹಸುವನ್ನು ಹುಡುಕಿ ತಂದು ಪ್ರಸವಕಾಲದಲ್ಲಿ ದಾನಮಾಡುವುದಕ್ಕೋಸ್ಕರಲೇ ಕಾಪಾಡಬೇಕು. ನರಕಕ್ಕೆ ಭಯಪಡುವ ಮಾನವನು ದಾನಕ್ಕಾಗಿ ತಂದ ಹಸುವನ್ನು ತಾನು ಇಟ್ಟುಕೊಳ್ಳಬಾರದು.

೫೦–೫೧. ಅರ್ಧ ಪ್ರಸವವಾಗಿರುವ ಅಂದರೆ ಕರುವಿನ ಮುಖಮಾತ್ರ ಹೊರಗೆ ಕಾಣುತ್ತಿರುವ ಪ್ರಸವಸ್ಥಿತಿಯಿಂದ ಕೂಡಿದ ಹಸುವಿನ ದಾನವು ಪೃಥಿವೀ ದಾನಕ್ಕೆ ಸಮಾನವಾದುದು. ಹೀಗೆ ಕರುಹಾಕುವ ಸ್ಥಿತಿಯಲ್ಲಿ ಉಭಯಮುಖಗಳಿಂದ ಕೂಡಿರುವ ಹಸುವನ್ನು ಭೂಮಿಗೆ ಸಮಾನವೆಂದು ಹೇಳುತ್ತಾರೆ. ಇಂತಹ ಉಭಯಮುಖೀ ಕಪಿಲಾಧೇನುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೫೨–೫೩. ಇಂತಹ ಒಂದು ಕಪಿಲಾಧೇನುವನ್ನು ದಾನಮಾಡುವ ಮಾನವನು ತಾನು ದಾನಮಾಡುವ ಹಸುವಿನ ಮತ್ತು ಪ್ರಸವವಾಗುತ್ತಿರುವ ಕರುವಿನ ಮೈಗಳಲ್ಲಿ ಎಷ್ಟು ರೋಮಗಳಿವೆಯೋ ಅಷ್ಟುಸಾವಿರ ವರ್ಷಗಳಕಾಲ ಅಲ್ಲದೆ ಭೂಮಿಯ ಮೇಲೆ ಮರಳು ಮತ್ತು ನಕ್ಷತ್ರಗಳು, ತಾರೆಗಳು ಇರುವ ಪರ್ಯಂತ ಬ್ರಹ್ಮ, ರುದ್ರಾದಿ ದೇತೆಗಳಿಂದ ಪೂಜ್ಯನಾಗಿ ಬ್ರಹ್ಮಲೋಕದಲ್ಲಿ ವಾಸಮಾಡುತ್ತಾನೆ.

**ಸುವರ್ಣಶೃಂಗೀಂ ಯಃ ಕೃತ್ವಾ ಖುರೈರೌಪ್ಯೈಃ ಸಮರ್ಚಿತಾಂ ।**
**ಬ್ರಾಹ್ಮಣಸ್ಯ ಕರೇ ದತ್ವಾ ಸುವರ್ಣಂ ರೌಪ್ಯಮೇವ ಚ ॥ ೫೪ ॥**

**ಕಪಿಲಾಯಾಸ್ತದಾ ಪುತ್ರಂ ಬ್ರಾಹ್ಮಣಸ್ಯ ಕರೇ ನ್ಯಸೇತ್ ।**
**ಉದಕಂ ಚ ಕರೇ ದತ್ವಾ ವಾಚಯೇತ ಸ್ವಶಕ್ತಿತಃ ॥ ೫೫ ॥**

**ಸುವರ್ಣೈಸ್ತು ಚತುರ್ಭಿಶ್ಚ ತ್ರಿಭಿರ್ದ್ವಾಭ್ಯಾಮಥಾಪಿ ವಾ ।**
**ಏಕಹೀನಾ ನ ದಾತವ್ಯಾ ಯದೀಚ್ಛೇಚ್ಛುಭಮಾತ್ಮನಃ ॥ ೫೬ ॥**

**ಸ ಸಮುದ್ರವಸನೋಪೇತಾ ಸಶೈಲವನಕಾನನಾ ।**
**ರತ್ನಪೂರ್ಣಾ ಭವೇದ್ದತ್ತಾ ಪೃಥಿವೀ ನಾತ್ರ ಸಂಶಯಃ ॥ ೫೭ ॥**

**ಪೃಥಿವೀದಾನತುಲ್ಯೇನ ದಾನೇನೈತೇನ ವೈ ನರಃ ।**
**ತಾರಿತೋ ಯಾತಿ ಪಿತೃಭಿರ್ವೈಷ್ಣವಂ ಯತ್ಪದಂ ಪರಂ ॥ ೫೮ ॥**

---

೫೪–೫೬. ಚಿನ್ನದ ಕೊಂಬನ್ನೂ ಮತ್ತು ಬೆಳ್ಳಿಯ ಗೊರಸನ್ನು ಮಾಡಿಸಿ ಅವುಗಳನ್ನು ಧರಿಸಿ ಪೂಜಿಸಿ ಅವುಗಳನ್ನೂ ಮತ್ತು ಚಿನ್ನ ಮತ್ತು ಬೆಳ್ಳಿಯ ಎರಡೋ ಮೂರೋ ಅಥವಾ ನಾಲ್ಕೋ ನಾಣ್ಯಗಳನ್ನೂ ಬ್ರಾಹ್ಮಣನ ಕೈಲಿ ಕೊಟ್ಟು ಬಳಿಕ ಕಪಿಲಾಗೋವಿನ ಕರುವನ್ನು ಕೈಲಿ ಹಿಡಿದುಕೊಳ್ಳುವಂತೆ ಮಾಡಿ ಅವನಿಗೆ ಸಮರ್ಪಿಸಬೇಕು. ಅನಂತರ ತನ್ನ ಶಕ್ತ್ಯನುಸಾರ ಎರಡಕ್ಕಿಂತ ಕಡಿಮೆಯಿಲ್ಲದಂತೆ ಸುವರ್ಣ ನಾಣ್ಯಗಳನ್ನು ದಾನಮಾಡಿ ಅವನಿಂದ ಸ್ವಸ್ತಿವಚನವನ್ನು ಹೇಳಿಸಬೇಕು. ತನಗೆ ಹಿತವನ್ನಪೇಕ್ಷಿಸುವ ಮಾನವನು ಒಂದು ನಾಣ್ಯವನ್ನು ಎಂದಿಗೂ ಕೊಡಬಾರದು. ಅದಕ್ಕಿಂತಲೂ ಹೆಚ್ಚಾಗಿಯೇ ದಾನಮಾಡಬೇಕು.

೫೭. ಮಾನವನು ಹೀಗೆ ದಾನಮಾಡುವುದರಿಂದ ಸಕಲ ಸಮುದ್ರಗಳು, ಅರಣ್ಯಗಳು, ಬೆಟ್ಟಗುಡ್ಡಗಳು ಇವುಗಳ ಸಮೇತವೂ ನಾನಾ ರತ್ನಗಳಿಂದ ಪರಿಪೂರ್ಣವೂ ಆದ ಭೂಮಿಯನ್ನೇ ದಾನಮಾಡಿದಂತಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

೫೮. ಪೃಥಿವೀದಾನಕ್ಕೆ ಸಮಾನವಾದ ಈ ಒಂದು ಉಭಯಮುಖೀ ಕಪಿಲಾಗೋವಿನ ದಾನದಿಂದ, ಮಾನವನು ತಾನೂ ಉದ್ಧಾರವಾಗಿ, ತನ್ನ ಪಿತೃಗಳನ್ನೂ ಉದ್ಧಾರಮಾಡಿ, ಕೊನೆಗೆ ಉತ್ಕೃಷ್ಟವಾದ ವೈಕುಂಠವನ್ನು ಸೇರುತ್ತಾನೆ.

**ಬ್ರಹ್ಮಸ್ವಹರಣೋ ಗೋಘ್ನೋ ಭ್ರೂಣಹಾ ಬ್ರಹ್ಮಘಾತಕಃ ।**
**ಪಾಪಕೃಚ್ಚೋಭಯಮುಖೀಂ ದದ್ಯಾತ್ಸಕನಕಾನ್ವಿತಾಂ ॥**
**ತದ್ದಿನಂ ಚ ಪಯೋಭೋಜೀ ಸಂಯತಶ್ಚಾತಿವಾಹಯೇತ್ ॥ ೫೯ ॥**

**ಗೋಮಯೇನೋಪಲಿಪ್ಯಾಥ ಮಂಡಲಂ ವಿಧಿಪೂರ್ವಕಂ ।**
**ಸ್ವಶಾಖೋಕ್ತೇನ ಮಂತ್ರೇಣ ಹೋಮಯೇತ್ತು ವಿಚಕ್ಷಣಃ ॥ ೬೦ ॥**

**ವ್ಯಾಹೃತ್ಯಾ ಹೋಮಯೇತ್ಪೂರ್ವಂ ಪಂಚವಾರುಣಕಂ ತಥಾ ।**
**ಇರಾವತೀ ಧೇನುಮತೀ ದೇವಸ್ಯ ತ್ವೇತಿ ವಾ ಪುನಃ ॥ ೬೧ ॥**

**ಸ್ಯೋನಾಪೃಥಿವಿ ಮಂತ್ರೇಣ ಗೌರ್ವತ್ಸಸಹಿತಾ ನವಾ ।**
**ನಿಕಾಮಫಲದಾ ಧೇನುಃ ಸಾ ಸ್ಯಾತ್ಸುರಭಿನಂದಿನೀ ॥ ೬೨ ॥**

---

೫೯. ಬ್ರಾಹ್ಮಣದ್ರವ್ಯವನ್ನು ಅಪಹರಿಸಿದವನೂ, ಗೋಹತ್ಯ, ಶಿಶುಹತ್ಯ, ಬ್ರಹ್ಮಹತ್ಯ, ಮಹಾಪಾಪ ಇವುಗಳನ್ನು ಮಾಡಿದವನೂ ಸಹ ಈ ಉಭಯಮುಖೀ ಕಪಿಲಾಧೇನುವನ್ನು ಸುವರ್ಣದೊಡನೆ ದಾನಮಾಡಬೇಕು. ದಾನಮಾಡಿದ ದಿವಸ ಕೇವಲ ಹಾಲನ್ನೇ ಆಹಾರವಾಗಿ ಸೇವಿಸಬೇಕು.

೬೦. ಬುದ್ಧಿವಂತನು ಈ ಶಾಂತಿಯ ಅಂಗವಾಗಿ ನೆಲವನ್ನು ಗೋಮಯದಿಂದ ಸಾರಿಸಿ ಅಲ್ಲಿ ವಿಧಿಪೂರ್ವಕವಾಗಿ ಮಂಡಲವನ್ನು ರಚಿಸಿ, ತನ್ನ ಶಾಖೆಯಲ್ಲಿ ಹೇಳಿರುವ ಮಂತ್ರದಿಂದ ಹೋಮಮಾಡಬೇಕು.

೬೧–೬೨. ಮೊದಲು ವ್ಯಾಹೃತಿಪೂರ್ವಕವಾಗಿ ಐದುಸಲ ವರುಣಮಂತ್ರ ಹೇಳಿ ಹೋಮಮಾಡಬೇಕು. ಮತ್ತು 'ಇರಾವತೀ ಧೇನುಮತೀ' ಎಂಬ ಮಂತ್ರವನ್ನೂ, 'ದೇವಸ್ಯತ್ವಾ ಸವಿತುಃ ಪ್ರಸವೇ' ಎಂಬ ಮಂತ್ರವನ್ನೂ, 'ಸ್ಯೋನಾ ಪೃಥಿವೀ ಭವ' ಎಂಬ ಮಂತ್ರವನ್ನೂ ಹೇಳಬೇಕು. ಹಸುವು ಕರುವಿನೊಡಗೂಡಿರಲಿ ಅಥವಾ ಇಲ್ಲದಿರಲಿ ಕಾಮಧೇನುವಿನ ಸಂತತಿಯಾದ ಈ ಗೋದಾನವು ಅತಿಶಯವಾದ ಫಲವನ್ನು ಕೊಡುವುದು.

**ಯಾ ತೇ ಸರಸ್ವತೀ ದೇವೀ ವಿಷ್ಣುನಾ ಚ ತಥಾ ಮಹೀ ।**
**ಗೌರೀವಿಷ್ಣುಪದಂ ಚೋಕ್ತ್ವಾ ಶಾಂತಿಕರ್ಮಣಿ ವಾಚಯೇತ್ ॥೬೩॥**

**ಯಾವದ್ವತ್ಸಸ್ಯ ದ್ವೌ ಪಾದೌ ಶಿರಶ್ಚೈವ ಪ್ರದೃಶ್ಯತೇ ।**
**ತಾವದ್ಧೈ ಪೃಥಿವೀ ಜ್ಞೇಯಾ ಯಾವದ್ಗರ್ಭಂ ನ ಮುಂಚತಿ ॥**
**ತಸ್ಮಿನ್ಕಾಲೇ ಪ್ರದಾತವ್ಯಾ ಬ್ರಾಹ್ಮಣಾಯ ವಸುಂಧರೇ ॥ ೬೪ ॥**

**ಸುವರ್ಣಶೃಂಗೀಂ ರೌಪ್ಯಖುರಾಂ ಕಾಂಸ್ಯದೋಹಾಂ ಸತಾಮ್ರಕಾಂ ।**
**ಸವಸ್ತ್ರಘಂಟಾಭರಣಾಂ ಗಂಧಪುಷ್ಪೈರಲಂಕೃತಾಂ ॥**
**ವಸ್ತ್ರಾಕ್ಷತೈಃ ಸಮಭ್ಯರ್ಚ್ಯ ಬ್ರಾಹ್ಮಣಾಯ ಸಮರ್ಪಯೇತ್ ॥ ೬೫ ॥**

**ಸುವರ್ಣಸ್ಯ ಸಹಸ್ರೇಣ ತದರ್ಧೇನಾಪಿ ಭಾಮಿನಿ ।**
**ತಸ್ಯಾಪ್ಯರ್ಧೇನ ಶಕ್ತ್ಯಾಥ ತಸ್ಯಾಪ್ಯರ್ಧೇನ ವಾ ಪುನಃ ॥ ೬೬ ॥**

---

೬೩. 'ಯಾ ತೇ ಸರಸ್ವತೀ ದೇವೀ ವಿಷ್ಣುನಾಚ ತಥಾ ಮಹೀ' ಗೌರೀ ಎಂಬ ಮಂತ್ರವನ್ನೂ ವಿಷ್ಣುಸೂಕ್ತವನ್ನೂ ಶಾಂತಿಕರ್ಮದಲ್ಲಿ ಬ್ರಾಹ್ಮಣರಿಂದ ಹೇಳಿಸಿ ಅವರಿಂದ ಮಂಗಳಾಶೀರ್ವಾದವನ್ನು ಪಡೆಯಬೇಕು.

೬೪. ಪೂರ್ಣ ಪ್ರಸವವಾಗದೆ ಕರುವಿನ ಎರಡು ಕಾಲುಗಳೂ ಮತ್ತು ತಲೆಯೂ ಮಾತ್ರ ಹೊರಗೆ ಕಾಣುತ್ತಿದ್ದರೆ, ಆ ಸಮಯದಲ್ಲಿ ಆ ಪಸುವು ಸಾಕ್ಷಾತ್ ಭೂಮಿಯೆನಿಸುವುದು. ಎಲೌ ಭೂದೇವಿಯೇ! ಆ ಸಮಯದಲ್ಲಿಯೇ ಈ ಗೋವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೬೫. ಆಗ ಚಿನ್ನದ ಕೊಂಬುಗಳು, ಬೆಳ್ಳಿಯ ಗೊರಸುಗಳು, ತಾಮ್ರ ದಿಂದೊಡಗೂಡಿದ ಕಂಚಿನ ಹಾಲುಕರೆಯುವ ಪಾತ್ರೆ, ವಸ್ತ್ರ, ಘಂಟೆ ಮತ್ತು ಒಡವೆಗಳು, ಗಂಧ, ಪುಷ್ಪ, ಅಕ್ಷತೆ ಮುಂತಾದುವುಗಳಿಂದಲಂಕರಿಸಿದ ಈ ಕಪಿಲಾ ಗೋವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೬೬-೬೭. ಎಲೌ ಭಾಮಿನಿ! ಸಾವಿರ, ಐನೂರು, ಇನ್ನೂರೈವತ್ತು, ನೂರಿಪ್ಪತ್ತೈದು ಅಥವಾ ಅದಕ್ಕಿಂತಲೂ ಕಡಿಮೆ ತನ್ನ ಶಕ್ತ್ಯನುಸಾರ ಸುವರ್ಣ

**ಯಥಾ ಶಕ್ತ್ಯಾ ಪ್ರದಾತವ್ಯಾ ವಿತ್ತಶಾಠ್ಯವಿವರ್ಜಿತೈಃ ।**
**ಕರೇ ದದ್ಯಾತ್ ಸುವರ್ಣಂ ಚ ಅಥವಾ ರೂಪ್ಯಮೇವ ಚ ॥ ೭೭ ॥**

**ಗೃಹಾಣೇಮಾಂ ಮಹಾಧೇನುಂ ಭವತ್ರಾತಾ ಮಮಾಶು ವೈ ।**
**ಸರ್ವಪಾಪಕ್ಷಯಂ ಕೃತ್ವಾ ಸದಾ ಸ್ವಸ್ತಿಕರೋ ಭವ ॥ ೭೮ ॥**

**ಇರಾವತೀ ಧೇನುಮತೀ ಜಾಹ್ನವೀ ವೇದನಂತರಂ ।**
**ಪ್ರತಿದಾಸ್ಯಾಮಿ ತೇ ಧೇನುಂ ಕುಟುಂಬಾರ್ಥೇ ವಿಶೇಷತಃ ॥ ೭೯ ॥**

**ಭವತಾತ್ಸ್ವಸ್ತಿ ಮೇ ನಿತ್ಯಂ ಸುಖಂ ಚಾನುತ್ತಮಂ ತಥಾ ।**
**ದತ್ತಾ ತು ಪೃಥಿವೀ ದೇವೀ ಕ್ಷಯೋಯಂ ಪ್ರತಿಗೃಹ್ಯತಾಂ ॥ ೮೦ ॥**

---

ನಾಣ್ಯ ಅಥವಾ ಬೆಳ್ಳಿಯ ನಾಣ್ಯಗಳನ್ನು ದಕ್ಷಿಣೆಯನ್ನಾಗಿಟ್ಟು ದಾನಕೊಡಬೇಕು. ದುಡ್ಡಿದ್ದೂ ಎಂದಿಗೂ ಜಿಪುಣತನಮಾಡಬಾರದು.

೭೮. ಅನಂತರ ಎಲೈ ಬ್ರಾಹ್ಮಣೋತ್ತಮನೇ! ಈ ಮಹಾಧೇನುವನ್ನು ಸ್ವೀಕರಿಸಿ ನನ್ನನ್ನು ಉದ್ಧಾರಮಾಡು. ಮಹಾನುಭಾವ! ಜಾಗ್ರತೆ ನನ್ನ ಪಾಪಗಳನ್ನೆಲ್ಲಾ ನಾಶಪಡಿಸಿ ನನಗೆ ಮಂಗಳವನ್ನುಂಟುಮಾಡು ಎಂದು ಹೇಳಬೇಕು.

೭೯. ಅನಂತರ ಎಲೌ ಇರಾವತೀ, ಧೇನುಮತೀ ಮತ್ತು ಜಾಹ್ನವೀ ದೇವತೆಗಳಿರಾ! ವಿಶೇಷವಾಗಿ ಕುಟುಂಬಸಂರಕ್ಷಣೆಗೋಸ್ಕರ ಈ ಧೇನುವನ್ನು ಬ್ರಾಹ್ಮಣನಿಗೆ ದಾನಮಾಡುತ್ತಿರುವೆನು.

೮೦. ಎಲೌ ಪೃಥಿವೀದೇವಿಯೇ! ನೀನು ಕೊಟ್ಟಿದ್ದ ಈ ಧೇನುವನ್ನು ನಿನಗೋಸ್ಕರಲೇ ದಾನಮಾಡುತ್ತಿರುವೆನು. ನೀನೇ ಇದನ್ನು ಸ್ವೀಕರಿಸು; ನಿನ್ನಿಂದ ನನಗೆ ನಿತ್ಯಶುಭವೂ ಮತ್ತು ಉತ್ತಮವಾದ ಸುಖವೂ ಸಹ ದೊರೆಯಲಿ ಎಂದು ಹೇಳಬೇಕು.

**ಕೋಽದಾದಿತಿ ಚ ವೈ ಮಂತ್ರೋ ಜಪಿತವ್ಯೋ ದ್ವಿಜೇನ ಚ ।**
**ವಿಸೃಜ್ಯ ಬ್ರಾಹ್ಮಣಂ ಸೋಽಪಿ ತಾಂ ಧೇನುಂ ಸ್ವಗೃಹಂ ನಯೇತ್ ॥**

**ಏವಂ ಪ್ರಸೂಯಮಾನಾಂ ಗಾಂ ಯೋ ದದಾತಿ ವಸುಂಧರೇ ।**
**ಸಾ ಸಮುದ್ರವನೋಪೇತಾ ಸಶೈಲವನಕಾನನಾ ॥**
**ರತ್ನಪೂರ್ಣಾ ಭವೇದ್ದತ್ತಾ ಪೃಥಿವೀ ನಾತ್ರ ಸಂಶಯಃ ॥ ೭೨ ॥**

**ಪ್ರತಪ್ತಜಾಂಬೂನದತುಲ್ಯವರ್ಣಾಂ**
**ಮಹಾನಿತಂಬಾಂ ತನುವೃತ್ತಮಧ್ಯಾಂ ।**
**ಅರ್ಧಪ್ರಸೂತಾಂ ದ್ವಿಮುಖೀಂ ಸುಶೀಲಾಂ ॥**
**ಸೇವಂತ್ಯಜಸ್ರಂ ಕಪಿಲಾಂ ಹಿ ದೇವಾಃ ॥ ೭೩ ॥**

**ಪ್ರಾತರುತ್ಥಾಯ ಯೋ ಭಕ್ತ್ಯಾ ಧೇನುಕಲ್ಪಂ ನರೋ ಭುವಿ ।**
**ಜಿತೇಂದ್ರಿಯಃ ಶುಚಿರ್ಭೂತ್ವಾ ಪಠೇದ್ಭಕ್ತ್ಯಾ ಸಮನ್ವಿತಃ ॥ ೭೪ ॥**

---

೭೧. ಸ್ವೀಕರಿಸುವ ಬ್ರಾಹ್ಮಣನು 'ಕೋಽದಾತ್' ಎಂಬ ಮಂತ್ರವನ್ನು ಜಪಿಸಬೇಕು. ಬಳಿಕ ಆ ಬ್ರಾಹ್ಮಣನನ್ನು ಬೀಳ್ಕೊಡಬೇಕು. ದಾನಮಾಡಿದ ಹಸುವನ್ನು ಆ ಬ್ರಾಹ್ಮಣನು ತನ್ನ ಮನೆಗೆ ತೆಗೆದುಕೊಂಡು ಬರಬೇಕು.

೭೨. ಎಲೌ ಭೂದೇವಿಯೇ! ಹೀಗೆ ಕರುವನ್ನು ಹಾಕುತ್ತಿರುವ ಗೋವನ್ನು ದಾನಮಾಡಿದರೆ, ಆ ಮಾನವನು ಸಮುದ್ರ, ಬೆಟ್ಟಗುಡ್ಡಗಳು, ಕಾಡು ಇವುಗಳಿಂದ ಕೂಡಿದ ರತ್ನಭರಿತವಾದ ಭೂಮಿಯನ್ನೇ ದಾನಮಾಡಿದಂತಾಗುತ್ತದೆ ಇದರಲ್ಲಿ ಸಂದೇಹವೇ ಇಲ್ಲ.

೭೩. ಚೆನ್ನಾಗಿ ಕಾದ ಚಿನ್ನದಂತೆ ಬಣ್ಣವುಳ್ಳ ಉನ್ನತವಾದ ನಿತಂಬ ಪ್ರದೇಶ, ಸೂಕ್ಷ್ಮವಾಗಿ ದುಂಡಾಗಿರುವ ಸೊಂಟ ಇವುಗಳಿಂದ ಕೂಡಿದ್ದೂ ಅರ್ಧ ಪ್ರಸವವಾಗಿರುವುದೂ ಸಾಧುಗುಣವುಳ್ಳದ್ದೂ ಆದ ಉಭಯಮುಖೀ ಕಪಿಲಾ ಗೋವನ್ನು ದೇವತೆಗಳು ಯಾವಾಗಲೂ ಸೇವೆಮಾಡುತ್ತಿರುವರು.

೭೪–೭೫. ಮಾನವನು ಪ್ರಾತಃಕಾಲದಲ್ಲಿ ಎದ್ದು ಜಿತೇಂದ್ರಿಯನಾಗಿ ಶುಚಿಯಾದ ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಈ ಧೇನುಕಲ್ಪವನ್ನು ಪಾರಾಯಣ

ತ್ರಿಕಾಲಂ ಪಠತೇ ಯಸ್ತು ಪಾಪಂ ವರ್ಷಶತೋದ್ಭವಂ ।
ನಶ್ಯತ್ಯೇಕಕ್ಷಣಾದೇವ ವಾಯುನಾ ಪಾಂಸವೋ ಯಥಾ ॥ ೭೫ ॥

ಶ್ರಾದ್ಧಕಾಲೇ ಪಠೇದ್ಯಸ್ತು ಇದಂ ಪಾವನಮುತ್ತಮಂ ।
ತಸ್ಯಾನ್ನಂ ಸಂಸ್ಕೃತಂ ತದ್ವೈ ಪಿತರೋಽಶ್ನಂತಿ ಧೀಮತಃ ॥ ೭೬ ॥

ಅಮಾವಾಸ್ಯಾಂ ಚ ಯೋ ವಿದ್ವಾನ್ದ್ವಿಜಾನಾಮಗ್ರತಃ ಪಠೇತ್ ।
ಪಿತರಸ್ತಸ್ಯ ತುಷ್ಯಂತಿ ವರ್ಷಾಣಾಂ ಶತಮೇವ ಚ ॥ ೭೭ ॥

ಶುಚಿಃ ಶೃಣುಯಾತ್ಪುಣ್ಯಂ ತದ್ಗತೇನಾಂತರಾತ್ಮನಾ ।
ಸಂವತ್ಸರಕೃತಾತ್ಪಾಪಾತ್ತತ್ಕ್ಷಣಾದೇವ ಮುಚ್ಯತೇ ॥ ೭೮ ॥

---

ಮಾಡಬೇಕು. ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಮೂರು ಕಾಲಗಳಲ್ಲಿಯೂ ಭಕ್ತಿಯಿಂದ ಈ ಧೇನುಕಲ್ಪವನ್ನು ಪಠಿಸುವವನಿಗೆ ಒಂದು ವರ್ಷದಲ್ಲಿ ಉಂಟಾಗಿರುವ ಪಾಪಗಳೆಲ್ಲಾ ಗಾಳಿಯು ಧೂಳುಗಳನ್ನು ಹೊತ್ತುಕೊಂಡು ಹೋಗುವಂತೆ ಕ್ಷಣದಲ್ಲಿ ಧ್ವಂಸವಾಗುವುವು.

೭೬. ಶ್ರಾದ್ಧಕಾಲದಲ್ಲಿ ಈ ಪರಮಪವಿತ್ರವಾದ ಧೇನುಕಲ್ಪವನ್ನು ಪಠನ ಮಾಡಿದರೆ ಆ ಶ್ರಾದ್ಧಭೋಜನದ ಅನ್ನವು ಸಂಸ್ಕಾರಹೊಂದಿ ಅದನ್ನು ಪಿತೃದೇವತೆಗಳು ಪ್ರೀತಿಯಿಂದ ಪರಿಗ್ರಹಿಸುವರು.

೭೭. ಅಮಾವಾಸ್ಯೆಯ ದಿನ ಬ್ರಾಹ್ಮಣರ ಸಮ್ಮುಖದಲ್ಲಿ ಈ ಧೇನುಕಲ್ಪವನ್ನು ಪಠಿಸುವ ವಿದ್ವಾಂಸನು ತನ್ನ ಪಿತೃಗಳಿಗೆ ನೂರು ವರ್ಷಗಳಕಾಲ ಸಂತೋಷವನ್ನುಂಟುಮಾಡುವನು.

೭೮. ಪುಣ್ಯಕರವಾದ ಈ ಧೇನುಕಲ್ಪವನ್ನು ತಲ್ಲೀನವಾದ ಮನಸ್ಸಿನಿಂದ ಕೇಳುವ ಮಾನವನಿಗೆ ಒಂದುವರ್ಷ ಮಾಡಿದ ಪಾಪವೆಲ್ಲವೂ ಉತ್ತರಕ್ಷಣದಲ್ಲಿಯೇ ನಾಶವಾಗುವುದು.

ಇದಂ ರಹಸ್ಯಂ ರಾಜೇಂದ್ರ ವರಾಹಮುಖನಿರ್ಗತಂ ।
ಧರಣ್ಯೈ ಕಥಿತಂ ಪೂರ್ವಂ ಸರ್ವಪಾಪಪ್ರಣಾಶನಂ ॥ ೭೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಕಪಿಲಾದಾನಮಾಹಾತ್ಮ್ಯ ವರ್ಣನಂ ನಾಮಏಕಷಷ್ಟ್ಯುತ್ತರಶತತಮೋಽಧ್ಯಾಯಃ.



೭೯. ಎಲೈ ರಾಜೇಂದ್ರ! ವರಾಹಸ್ವಾಮಿಯು ಪೂರ್ವದಲ್ಲಿ ಭೂದೇವಿಗೆ ತಿಳಿಸಿದ್ದ ರಹಸ್ಯವಾದ ಈ ಧೇನುಕಲ್ಪವು ಸಕಲ ಪಾಪಗಳನ್ನೂ ನಾಶ ಮಾಡುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಕಪಿಲಾ ದಾನಮಾಹಾತ್ಮ್ಯ ವರ್ಣನೆಯೆಂಬ ನೂರರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಮಹಿಷೀದಾನಮಾಹಾತ್ಮ್ಯಂ ಕಥಯಾಮಿ ಯುಧಿಷ್ಠಿರ ।
ಪುಣ್ಯಂ ಪಾಪವಿನಾಶಂ ಚ ಆಯುಷ್ಯಂ ಸರ್ವಕಾಮದಂ ॥

ಚಂದ್ರಸೂರ್ಯಗ್ರಹೇ ಪುಣ್ಯೇ ಕಾರ್ತಿಕ್ಯಾಮಯನೇ ತಥಾ ।
ಶುಕ್ಲಪಕ್ಷೇ ಚತುರ್ದಶ್ಯಾಂ ಸೂರ್ಯಸಂಕ್ರಾಂತಿವಾಸರೇ ॥ ೨ ॥

ಯದಾ ವಾ ಜಾಯತೇ ಚಿತ್ತಂ ವಿತ್ತಂ ಚ ಕುರುನಂದನ ।
ತದೈವ ದೇಯಾ ಮಹಿಷೀ ಸಂಸಾರಭಯಭೀರುಣಾ ॥ ೩ ॥

---

## ನೂರಅರವತ್ತೆರಡನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರ! ಪುಣ್ಯಪ್ರದವೂ, ಸಕಲ ಪಾಪಗಳನ್ನು ಹೋಗಲಾಡಿಸತಕ್ಕುದೂ, ಆರೋಗ್ಯ, ಆಯುಸ್ಸು ಮೊದಲಾದ ಇಷ್ಟಾರ್ಥಗಳನ್ನು ಕೊಡುವುದೂ ಆದ ಮಹಿಷದಾನ ಮಹಿಮೆಯನ್ನು ಹೇಳುವೆನು ಕೇಳು.

೨–೩. ಸಂಸಾರದ ಭಯದಿಂದ ಭ್ರಾಂತನಾಗಿ ಹೆದರುವ ಮಾನವನು ಪುಣ್ಯಕರಗಳೆನಿಸಿದ ಚಂದ್ರಸೂರ್ಯಗ್ರಹಣ ಕಾಲಗಳು, ಕಾರ್ತಿಕಮಾಸ, ದಕ್ಷಿಣಾಯನಪುಣ್ಯಕಾಲ, ಉತ್ತರಾಯಣಪುಣ್ಯಕಾಲ, ಇತರ ಪುಣ್ಯಕಾಲ, ಶುಕ್ಲಪಕ್ಷದ ಚತುರ್ದಶೀ, ಸೂರ್ಯಸಂಕ್ರಮಣಗಳು ಈ ದಿನಗಳಲ್ಲಿ ಎಮ್ಮೆಯನ್ನು ದಾನ ಮಾಡಬೇಕು. ಈ ತಿಥಿಗಳೊದಗುವುದೇ ಮುಖ್ಯವಲ್ಲ. ತನಗೆ ದ್ರವ್ಯಾನುಕೂಲ ಮತ್ತು ಉದಾರಮನಸ್ಸು ಎರಡೂ ಉಂಟಾದ ಸಮಯದಲ್ಲಿ ಯಾವ ತಿಥಿ ವಾರಾದಿಗಳನ್ನೂ ಗಣನೆಮಾಡದೆ ಮಹಿಷೀದಾನ ಮಾಡಬಹುದು.

ಸುಪಯೋಧರಶೋಭಾಢ್ಯಾ ಸುಶೃಂಗೀ ಸುಖುರಾ ತಥಾ ।
ಪ್ರಥಮಪ್ರಸೂತಾ ತರುಣೀ ಸುಶೀಲಾ ದೋಷವರ್ಜಿತಾ ॥ ೪ ॥

ಸುವರ್ಣಶೃಂಗತಿಲಕಾ ಘಂಟಾಭರಣಭೂಷಿತಾ ।
ರಕ್ತವಸ್ತ್ರಾವೃತಾ ರಮ್ಯಾ ಕಾಂಸ್ಯದೋಹನಕಾನ್ವಿತಾ ॥ ೫ ॥

ಪಿಣ್ಯಾಕಪಿಟಕೋಪೇತಾ ಸಹಿರಣ್ಯಾ ಚ ಶಕ್ತಿತಃ ।
ಸಪ್ತಧಾನ್ಯಯುತಾ ದೇಯಾ ಬ್ರಾಹ್ಮಣೇ ವೇದಪಾರಗೇ ॥ ೬ ॥

ಪುರಾಣ ಪಾಠಕೇ ತದ್ವಜ್ಜ್ಯೋತಿಃಶಾಸ್ತ್ರವಿದೇ ತಥಾ ।
ದೇಯಾ ನ ವೇದರಹಿತೇ ನ ಚ ಕುವ್ರತಿನೇ ಕ್ವಚಿತ್ ॥ ೭ ॥

---

೪. ಒಳ್ಳೆಯ ಕೆಚ್ಚಲಿನಿಂದ ಕೂಡಿ ಶೋಭಿಸುತ್ತಿರುವುದೂ, ಅಂದವಾದ ಕೊಂಬು ಮತ್ತು ಗೊರಸುಗಳಿಂದ ಯುಕ್ತವಾಗಿರುವುದೂ, ಮೊದಲನೆಯಸಲ ಕರುವನ್ನು ಹಾಕಿರುವುದೂ, ಎಳಕಾದುದೂ ಮತ್ತು ಯಾವ ಕೆಟ್ಟಗುಣಗಳೂ ಇಲ್ಲದೆ ಒಳ್ಳೆಯ ಸ್ವಭಾವಗಳಿಂದ ಕೂಡಿದುದೂ ಆದ ಎಮ್ಮೆಯನ್ನು ದಾನ ಮಾಡಬೇಕು.

೫-೬. ದಾನಮಾಡುವಾಗ ಚಿನ್ನದ ಕೊಂಬು ಮತ್ತು ತಿಲಕಗಳಿಂದಲೂ ಘಂಟೆ ಮತ್ತು ಆಭರಣಗಳಿಂದಲೂ ಅಲಂಕಾರಮಾಡಬೇಕು. ಬೆನ್ನಿನ ಮೇಲೆ ಕೆಂಪು ವಸ್ತ್ರವನ್ನು ಹೊದಿಸಿ ಮನೋಹರವಾಗಿ ಕಾಣುವಂತೆ ಸಿಂಗರಿಸಬೇಕು. ಜತೆಯಲ್ಲಿ ಕಂಚಿನ ಕರೆಯುವ ಪಾತ್ರೆ, ಹಿಂಡಿಯ ಪೆಟ್ಟಿಗೆ, ಯಥಾಶಕ್ತಿ ಸುವರ್ಣ ಇವುಗಳನ್ನೂ, ಸಪ್ತಧಾನ್ಯಗಳನ್ನೂ ಇಟ್ಟು ಎಮ್ಮೆಯನ್ನು ವೇದಪಾರಂಗತನಾದ ಬ್ರಾಹ್ಮಣನಿಗೆ ದಾನಮಾಡಬೇಕು.

೭. ಪುರಾಣವನ್ನು ಓದುವವನಿಗೋ ಅಥವಾ ಹೇಳುವವನಿಗೋ ಇಲ್ಲವೇ ಜ್ಯೋತಿಃಶಾಸ್ತ್ರವನ್ನು ತಿಳಿದ ಬ್ರಾಹ್ಮಣನಿಗೋ ಈ ಎಮ್ಮೆಯನ್ನು ದಾನಮಾಡಬಹುದು. ಆದರೆ ವೇದಾಭ್ಯಾಸಮಾಡದವನಿಗೂ, ದುರಾಚಾರಿಯಾದವನಿಗೂ ಎಂದಿಗೂ ದಾನಮಾಡಬಾರದು.

**ದ್ರವ್ಯೈರೇಭಿಃ ಸಮಾಯುಕ್ತಾಂ ಪುಣ್ಯೇಽಹ್ನಿ ವಿಧಿಪೂರ್ವಕಂ ।**
**ದದ್ಯಾನ್ಮಂತ್ರೇಣ ರಾಜೇಂದ್ರ ಪುರಾಣಪಠಿತೇನ ತು ॥ ೮ ॥**

**ಇಂದ್ರಾದಿಲೋಕಪಾಲಾನಾಂ ಯಾ ರಾಜಮಹಿಷೀ ಶುಭಾ ॥**
**ಮಹಿಷೀದಾನಮಾಹಾತ್ಮ್ಯಾತ್ಸಾಸ್ತು ಮೇ ಸರ್ವ ಕಾಮದಾ ॥ ೯ ॥**

**ಧರ್ಮರಾಜಸ್ಯ ಸಾಹಾಯ್ಯೇ ಯಸ್ಯಾಃ ಪುತ್ರಃ ಪ್ರತಿಷ್ಠಿತಃ ।**
**ಮಹಿಷಾಸುರಸ್ಯ ಜನನೀ ಯಾ ಸಾಸ್ತು ವರದಾ ಮಮ ॥ ೧೦ ॥**

**(ಇತಿ ದಾನಮಂತ್ರಃ)**

**ದದ್ಯಾತ್ಪ್ರದಕ್ಷಿಣೀಕೃತ್ಯ ಬ್ರಾಹ್ಮಣೇ ತಾಂ ಪಯಸ್ವಿನೀಂ ।**
**ಪ್ರತಿಗ್ರಹಃ ಸ್ಮೃತಸ್ತಸ್ಯಾಃ ಪೃಷ್ಠದೇಶೇ ಸ್ವಯಂಭುವಾ ॥ ೧೧ ॥**

---

೮. ಹಿಂದೆ ಹೇಳಿದ ದ್ರವ್ಯಗಳನ್ನೆಲ್ಲಾ ಸಂಗ್ರಹಿಸಿಟ್ಟುಕೊಂಡು ಶುಭ ದಿವಸದಲ್ಲಿ ವಿಧಿಪೂರ್ವಕವಾಗಿ ಪುರಾಣದಲ್ಲಿ ಹೇಳಿದ ಮಂತ್ರವನ್ನುಚ್ಚರಿಸುತ್ತಾ ಈ ಮಹಿಷಿಯನ್ನು ದಾನಮಾಡಬೇಕು.

೯–೧೦. ಎಲೈ ರಾಜೇಂದ್ರ ! "ಇಂದ್ರಾದಿ ಲೋಕಪಾಲಕರಿಗೆಲ್ಲಾ ರಾಜಮಹಿಷಿಯಾಗಿರುವ ದೇವಿಯು ಈ ಎಮ್ಮೆಯ ದಾನದ ಮಹಿಮೆಯಿಂದ ನನಗೆ ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡಲಿ. ಈ ಮಹಿಷಿಯ ಪುತ್ರನಾದ ಕೋಣವು ಧರ್ಮರಾಜನೆನಿಸಿದ ಯಮನಿಗೆ ಸಹಾಯಕವಾಗಿ ಸದಾ ಅವನ ವಾಹನವಾಗಿರುವನು. ಅಲ್ಲದೆ ಈ ಮಹಿಷಿಯು ಮಹಿಷಾಸುರನಿಗೆ ತಾಯಿಯಾಗಿರುವಳು. ಇಂತಹ ಪ್ರಭಾವವುಳ್ಳ ಈ ಮಹಿಷೀದೇವಿಯು ನನಗೆ ವರವನ್ನನುಗ್ರಹಿಸಲಿ" ಎಂಬ ಅರ್ಥವುಳ್ಳ ಮಂತ್ರವನ್ನು ದಾನಕೊಡುವಾಗ ಹೇಳಬೇಕು.

೧೧. ತುಂಬಾ ಹಾಲುಕೊಡುವ ಆ ಎಮ್ಮೆಯನ್ನು ಪ್ರದಕ್ಷಿಣೆಮಾಡಿ ಬ್ರಾಹ್ಮಣನಿಗೆ ದಾನಮಾಡಬೇಕು. ಆತನು ಎಮ್ಮೆಯನ್ನು ಪೃಷ್ಠಪ್ರದೇಶದಿಂದ ಪ್ರತಿಗ್ರಹಮಾಡಬೇಕು. ಇದು ಬ್ರಹ್ಮನಿಂದ ಉಕ್ತವಾಗಿದೆ.

**ಏವಂ ದತ್ವಾ ವಿಧಾನೇನ ಬ್ರಾಹ್ಮಣಸ್ಯ ಗೃಹಂ ನಯೇತ್ ।**
**ವಸ್ತ್ರೈರಾಭರಣೈಃ ಪೂಜ್ಯ ಭಕ್ತ್ಯಾ ಚ ಕುರುನಂದನ ॥ ೧೨ ॥**

**ಸಂಪಾದಿತಾ ಮಯಾ ತುಭ್ಯಂ ಸಂತುಷ್ಟೋ ಮೇ ಭವ ದ್ವಿಜ ॥ ೧೩ ॥**

**ಅನೇನ ವಿಧಿನಾ ದತ್ವಾ ಮಹಿಷೀಂ ದ್ವಿಜಪುಂಗವೇ ।**
**ಸರ್ವಾನ್ ಕಾಮಾನವಾಪ್ನೋತಿ ಇಹ ಲೋಕೇ ಪರತ್ರ ಚ ॥ ೧೪ ॥**

**ಯಾ ಸಾ ದದಾತಿ ಮಹಿಷೀಂ ಸಾ ರಾಜಮಹಿಷೀ ಭವೇತ್ ।**
**ಮಹಾರಾಜಃ ಪುಮಾನ್ರಾಜನ್ವ್ಯಾಸಸ್ಯ ವಚನಂ ಯಥಾ ॥ ೧೫ ॥**

**ಯಜ್ಞಯಾಜೀ ಭವೇದ್ವಿಪ್ರಃ ಕ್ಷತ್ರಿಯೋ ವಿಜಯೀ ಭವೇತ್ ।**
**ಭವೇದ್ವೈಶ್ಯಸ್ತು ಧನವಾನ್ ಶೂದ್ರಃ ಸರ್ವಾರ್ಥ ಸಂಯುತಃ ॥ ೧೬ ॥**

---

೧೨. ಎಲೈ ಕುರುನಂದನನೇ! ವಸ್ತ್ರ ಮತ್ತು ಆಭರಣ ಮುಂತಾದವುಗಳಿಂದ ಭಕ್ತಿಪೂರ್ವಕವಾಗಿ ಪೂಜೆಮಾಡಿದನಂತರ ಈ ಎಮ್ಮೆಯನ್ನು ವಿಧಿಪೂರ್ವಕವಾಗಿ ಬ್ರಾಹ್ಮಣನಿಗೆ ಕೊಟ್ಟು ಅವನ ಮನೆಗೆ ತಲಪಿಸಬೇಕು.

೧೩-೧೪. ದಾನಮಾಡುವಾಗ ಎಲೈ ಬ್ರಾಹ್ಮಣನೇ! ನಾನು ಸಂಪಾದಿಸಿದ್ದ ಈ ಎಮ್ಮೆಯನ್ನು ನಿನಗೆ ದಾನಮಾಡುತ್ತಿರುವೆನು. ಇದನ್ನು ಸ್ವೀಕರಿಸಿ ನನ್ನಲ್ಲಿ ಅನುಗ್ರಹವನ್ನು ಮಾಡು ಎಂದು ಹೇಳಬೇಕು. ಈರೀತಿ ವಿಧಿಪೂರ್ವಕವಾಗಿ ಬ್ರಾಹ್ಮಣೋತ್ತಮನಿಗೆ ಎಮ್ಮೆಯನ್ನು ದಾನಮಾಡಿದ ಮಾನವನು ಇಹಪರಗಳೆರಡರಲ್ಲೂ ಸಕಲ ಇಷ್ಟಾರ್ಥಗಳನ್ನೂ ಹೊಂದುವನು.

೧೫. ಸ್ತ್ರೀಯು ಈ ಎಮ್ಮೆಯನ್ನು ದಾನಮಾಡಿದರೆ ಪಟ್ಟದರಾಣಿಯಾಗುವಳೆಂದೂ ಪುರುಷನು ದಾನಮಾಡಿದರೆ ಮಹಾರಾಜನಾಗುವನೆಂದೂ ವ್ಯಾಸರ ವಚನವಿರುವುದು.

೧೬. ಬ್ರಾಹ್ಮಣನು ದಾನಮಾಡಿದರೆ ಯಜ್ಞಯಾಗಾದಿಗಳನ್ನು ಮಾಡುವನು. ಕ್ಷತ್ರಿಯನು ದಾನಮಾಡಿದರೆ ವಿಜಯಶಾಲಿಯಾಗುವನು. ವೈಶ್ಯನು ಈ ಮಹಿಷೀ ದಾನಮಾಡಿದರೆ ತುಂಬಾ ದ್ರವ್ಯವನ್ನು ಪಡೆಯುವನು. ಮತ್ತು ಶೂದ್ರನು ದಾನಮಾಡಿದರೆ ಅವನ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು.

ತಸ್ಮಾನ್ನರೇಣ ದಾತವ್ಯಾ ಮಹಿಷೀ ವಿಭವೇ ಸತಿ ।
ಪುತ್ರಪೌತ್ರಪ್ರಪೌತ್ರಾರ್ಥಂ ಆತ್ಮನಃ ಶುಭಮಿಚ್ಛತಾ ॥ ೧೭ ॥

ದಶಧೇನುಸಮಾಂ ರಾಜನ್ಮಹಿಷೀಂ ನಾರದೋಽಬ್ರವೀತ್ ।
ವಿಂಶತಿಗೋಸಮಾಂ ವ್ಯಾಸಃ ಸರ್ವದಾನೋತ್ತಮಂ ರವಿಃ ॥ ೧೮ ॥

ಸಗರೇಣ ಕಕುತ್ಸ್ಥೇನ ಧುಂಧುಮಾರೇಣ ಗಾಧಿನಾ ।
ದತ್ತಾಃ ಸಂಪೂಜ್ಯ ವಿಪ್ರೇಭ್ಯೋ ಮಹಿಷ್ಯಃ ಸರ್ವಕಾಮದಾಃ ॥ ೧೯ ॥

ಮಹಿಷೀದಾನಮಾಹಾತ್ಮ್ಯಂ ಯಃ ಶೃಣೋತಿ ಸದಾ ನರಃ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕೇ ಮಹೀಯತೇ ॥ ೨೦ ॥

---

೧೭. ತನ್ನ ಮಕ್ಕಳು ಮೊಮ್ಮಕ್ಕಳುಗಳಿಗೂ ಮತ್ತು ತನಗೂ ಸಹ ಶುಭವನ್ನಪೇಕ್ಷಿಸುವ ಮಾನವನು ತನಗೆ ಐಶ್ವರ್ಯವೊದಗಿದಾಗ ಈ ಮಹಿಷೀ ದಾನವನ್ನು ತಪ್ಪದೆ ಮಾಡಬೇಕು.

೧೮. ಎಲೈ ಧರ್ಮರಾಜನೇ! ಒಂದು ಎಮ್ಮೆಯ ದಾನವು ಹತ್ತು ಹಸುಗಳ ದಾನಕ್ಕೆ ಸಮಾನವಾದುದೆಂದು ನಾರದರು ಹೇಳಿರುವರು. ವ್ಯಾಸರಾದರೋ ಇಪ್ಪತ್ತು ಹಸುಗಳ ದಾನವು ಒಂದು ಎಮ್ಮೆಯ ದಾನಕ್ಕೆ ಸಮನಾಗುವುದೆಂದು ಹೇಳಿರುವರು. ಸೂರ್ಯನಾದರೋ ಸರ್ವದಾನಗಳಿಗಿಂತಲೂ ಎಮ್ಮೆಯ ದಾನವು ತುಂಬಾ ಉತ್ತಮವೆನಿಸುವುದೆಂದು ಹೇಳಿರುವನು.

೧೯. ಸಗರ, ಕಕುತ್ಸ್ಥ, ಧುಂಧುಮಾರ, ಗಾಧಿ ಮುಂತಾದ ರಾಜರು ತಮ್ಮ ಮನೋರಥಗಳು ಈಡೇರುವುದಕ್ಕಾಗಿ ಈ ಎಮ್ಮೆಗಳನ್ನು ಪೂಜೆಮಾಡಿ ಬ್ರಾಹ್ಮಣರಿಗೆ ದಾನಮಾಡಿರುತ್ತಾರೆ.

೨೦. ಈ ಎಮ್ಮೆಯ ದಾನದ ಮಹಿಮೆಯನ್ನು ಸದಾ ಕೇಳುವ ಮಾನವನು ಸಕಲ ಪಾಪಗಳಿಂದಲೂ ಬಿಡುಗಡೆಹೊಂದಿ ಶಿವಲೋಕವನ್ನು ಪಡೆದು ಅಲ್ಲಿ ಪೂಜ್ಯನಾಗುತ್ತಾನೆ.

**ದುಗ್ಧಾಧಿಕಾಂ ಹಿ ಮಹಿಷೀಂ ಜಲಮೇಘವರ್ಣಾಂ ।**
**ಸಂಪುಷ್ಟಪಟ್ಟಕವತೀಂ ಜಘನಾಭಿರಾಮಾಂ ।**
**ದತ್ವಾ ಸುವರ್ಣತಿಲಕಾಂ ದ್ವಿಜಪುಂಗವಾಯ ॥**
**ಲೋಕದ್ವಯಂ ವಿಜಯತೇ ಕಿಮು ತತ್ರ ಚಿತ್ರಂ ॥ ೨೧ ॥**

**ಇತೀ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಮಹಿಷೀದಾನವ್ರತವಿಧಿ ವರ್ಣನಂ ನಾಮದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ.**



---

೨೧. ಜಲಾಂಶಪೂರಿತವಾದ, ಮೇಘದಂತೆ ಕಪ್ಪಾದ ಬಣ್ಣವುಳ್ಳುದೂ ತುಂಬಾ ಹಾಲುಕೊಡುವುದೂ, ಪುಷ್ಟವಾದ ಹಣೆ ಮತ್ತು ಜಘನಪ್ರದೇಶ ಇವುಗಳಿಂದ ಮನೋಹರವಾಗಿರುವುದೂ, ಚಿನ್ನದ ತಿಲಕದಿಂದ ಕೂಡಿದುದೂ ಆದ ಎಮ್ಮೆಯನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಿದ ಮಾನವನು ಇಹಲೋಕ ಪರಲೋಕಗಳಲ್ಲಿ ಯಶಸ್ವಿಯಾಗುವನೆಂಬುದರಲ್ಲಿ ಆಶ್ಚರ್ಯವೇನು? ಈ ದಾನ ಮಹಿಮೆಯಿಂದ ಆ ಮಾನವನಿಗೆ ಇಹಪರಗಳೆರಡರಲ್ಲೂ ಜಯವುಂಟಾಗುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಮಹಿಷೀದಾನವ್ರತವಿಧಿವರ್ಣನೆಯೆಂಬ ನೂರರವತ್ತೆರಡನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಶೃಣುಪಾರ್ಥ ಪರಂ ದಾನಂ ಸರ್ವಕಿಲ್ಬಿಷನಾಶನಂ ।
ಯದ್ದತ್ವಾ ತ್ರಿವಿಧಂ ಪಾಪಂ ಸದ್ಯೋ ವಿಲಯಮೃಚ್ಛತಿ ॥ ೧ ॥

ಸುವರ್ಣರೋಮಾಂ ಸೌವರ್ಣೀಂ ಪ್ರತ್ಯಕ್ಷಾವಿಂ ಸುಶೋಭನಾಂ ।
ಸುವರ್ಣತಿಲಕೋಪೇತಾಂ ಸರ್ವಾಲಂಕಾರಭೂಷಿತಾಂ ॥ ೨ ॥

---

## ನೂರಅರವತ್ತಮೂರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಪಾರ್ಥನೇ! ಮನೋವಾಕ್ಕಾಯ ಕರ್ಮಗಳಿಂದುಂಟಾದ ಮೂರುಬಗೆಯ ಪಾಪಗಳನ್ನೂ ಮತ್ತು ಇತರ ಸಕಲ ಪಾಪಗಳನ್ನೂ ನಾಶಮಾಡತಕ್ಕದ್ದೂ, ಉತ್ಕೃಷ್ಟವೂ ಆದ ದಾನವನ್ನು ಹೇಳುವೆನು ಕೇಳು.

೨-೪. ಚಿನ್ನದ ರೋಮಗಳಿಂದ ಯುಕ್ತವಾದ ಚಿನ್ನದ ಆಡನ್ನೋ ಅಥವಾ ಮನೋಹರವಾಗಿರುವ ಪ್ರತ್ಯಕ್ಷವಾದ ಆಡನ್ನೋ ತಂದು ಅದಕ್ಕೆ ಚಿನ್ನದಿಂದ ತಿಲಕವನ್ನೂ ಸಕಲ ಆಭರಣಗಳನ್ನೂ ಮಾಡಿಸಿ ಇಟ್ಟು ಅಲಂಕಾರ ಮಾಡಬೇಕು. ರೇಷ್ಮೆಯ ಮೇಲುಹೊದಿಕೆ ಹೊದ್ದಿಸಿ ದಿವ್ಯವಾದ ಚಂದನ ಗಂಧವನ್ನು ಮೈಗೆ ಲೇಪಿಸಬೇಕು. ನಾನಾವಿಧವಾದ ದಿವ್ಯಪರಿಮಳಯುಕ್ತವಾದ

**ಕೌಶೇಯಪರಿಧಾನಾಂ ಚ ದಿವ್ಯಚಂದನಭೂಷಿತಾಂ ।**
**ದಿವ್ಯಪುಷ್ಪೋಪಹಾರಾಂ ಚ ಸರ್ವಧಾತುರಸೈರ್ಯುತಾಂ ॥**
**ಸಪ್ತಧಾನ್ಯಸಮಾಯುಕ್ತಾಂ ಫಲಪುಷ್ಪವತೀಂ ತಥಾ ॥ ೩ ॥**

**ಶತೇನ ಕಾರಯೇತ್ತಾಂ ಚ ಸುವರ್ಣಸ್ಯ ಪ್ರಯತ್ನತಃ ।**
**ಯಥಾ ಶಕ್ತ್ಯಾಥ ವಾ ಕುರ್ಯಾದ್ವಿತ್ತಶಾಠ್ಯಂ ನ ಕಾರಯೇತ್ ॥ ೪ ॥**

**ಅಯನೇ ವಿಷುವೇ ಚೈವ ಗ್ರಹಣೇ ಶಶಿಸೂರ್ಯಯೋಃ ।**
**ದುಃಸ್ವಪ್ನದರ್ಶನೇ ಚೈವ ಜನ್ಮರ್ಕ್ಷೇ ಪಿತೃಸಂಕ್ಷಯೇ ॥ ೫ ॥**

**ಯದಾ ವಾ ಜಾಯತೇ ವಿತ್ತಂ ಚಿತ್ತಂ ಶ್ರದ್ಧಾಸಮನ್ವಿತಂ ।**
**ತದೈವ ದಾನಕಾಲಃ ಸ್ಯಾದ್ಯತೋಽನಿತ್ಯಂ ಹಿ ಜೀವಿತಂ ॥ ೬ ॥**

---

ಹೂಮಾಲೆಗಳು ಮತ್ತು ಧೂಪ ಇವುಗಳನ್ನೂ ಸಕಲವಿಧವಾದ ಉಪಹಾರಗಳನ್ನೂ ಸಮರ್ಪಿಸಿ, ಸಕಲ ಧಾತುರಸಗಳು, ಸಪ್ತಧಾನ್ಯಗಳು ಉತ್ತಮವಾದ ಹೂ ಹಣ್ಣುಗಳು ಇವುಗಳೊಡನೆ ಈ ಆಡನ್ನು ದಾನಮಾಡಬೇಕು. ಚಿನ್ನದಿಂದ ಮಾಡಿಸುವಾಗ ನೂರುತೊಲ ಚಿನ್ನದಿಂದ ಮಾಡಿಸಬೇಕು. ಅಷ್ಟು ಸಾಧ್ಯವಾಗದಿದ್ದರೆ ಜಿಪುಣತನಮಾಡದೆ ತನ್ನ ಶಕ್ತ್ಯನುಸಾರಪ್ರಮಾಣದ ಚಿನ್ನದಿಂದ ಮಾಡಿಸಬೇಕು.

೫–೬. ದಕ್ಷಿಣಾಯನ, ಉತ್ತರಾಯಣ, ವಿಷುವತ್ಪುಣ್ಯಕಾಲ, ಸೂರ್ಯಚಂದ್ರಗ್ರಹಣಗಳು ಮತ್ತು ಕೆಟ್ಟಸ್ವಪ್ನವನ್ನು ನೋಡಿದಾಗ, ತನ್ನ ಜನ್ಮನಕ್ಷತ್ರದ ದಿನ, ಮಾತಾಪಿತೃಗಳ ಶ್ರಾದ್ಧದಿನ ಈ ಸನ್ನಿವೇಶಗಳಲ್ಲಿಯಾಗಲಿ ಅಥವಾ ತಾನಾಗಿಯೇ ದಾನಮಾಡಬೇಕೆಂಬ ಬುದ್ಧಿಯುಂಟಾಗಿ ತನಗೆ ದುಡ್ಡು ಒದಗಿದಾಗಲಾಗಲಿ ಶ್ರದ್ಧಾಯುಕ್ತನಾಗಿ ಈ ದಾನವನ್ನು ಮಾಡಬಹುದು. ಮಾನವನ ಜೀವಿತಕಾಲವು ಶಾಶ್ವತವಲ್ಲವಾದುದರಿಂದ ಅದಕ್ಕೆ ಅರ್ಹವಾದ ಕಾಲವನ್ನೇ ಕಾಯದೆ ಮಾನವನು ತನಗೆ ತೋರಿದ ಸಮಯದಲ್ಲಿ ಶ್ರದ್ಧಾಭಕ್ತಿಸಮನ್ವಿತನಾಗಿ ಈ ಅಜದಾನವನ್ನು ಮಾಡಬಹುದು.

**ದದ್ಯಾತ್ತೀರ್ಥೇ ಗೃಹೇ ವಾಪಿ ಯತ್ರ ವಾ ರಮತೇ ಮನಃ ॥ ೭ ॥**

**ತತ್ರ ಸಂಸ್ಥಾಪ್ಯ ದೇವೇಶಮುಮಯಾ ಸಹ ಶಂಕರಂ ।**
**ಬ್ರಹ್ಮಾಣಂ ಸಹ ಗಾಯತ್ರ್ಯಾ ಸಶ್ರೀಕಂ ಶ್ರೀಧರಂ ತಥಾ ॥ ೮ ॥**

**ರತ್ಯಾಸಹ ತಥಾನಂಗಂ ಲೋಕಪಾಲಾನ್ಗ್ರಹಾನಪಿ ।**
**ಸಂಪೂಜ್ಯ ಚ ವಿಧಾನೇನ ಗಂಧಪುಷ್ಪನಿವೇದನೈಃ ॥ ೯ ॥**

**ತದಗ್ರೇ ಕಾರಯೇದ್ಧೋಮಂ ತಿಲಾಜ್ಯೇನ ಮಹೀಪತೇ ।**
**ಅಲಂಕೃತ್ಯ ದ್ವಿಜಂ ಶಾಂತಂ ವಾಸೋಭಿಃ ಪ್ರತಿಪೂಜ್ಯ ಚ ॥ ೧೦ ॥**

**ತಲ್ಲಿಂಗಮಂತ್ರೈರ್ಹೋಮೈಶ್ಚ ಕರ್ತವ್ಯೋ ಜ್ವಲಿತೇಽನಲೇ ।**
**ತತಸ್ತಾಂ ತಿಲಕುಂಭಸ್ಥಾಂ ಲವಣಾಂತಮುಪಸ್ಥಿತಾಂ ॥ ೧೧ ॥**

---

೭-೧೦. ಪ್ರಸಿದ್ಧವಾದ ತೀರ್ಥಕ್ಷೇತ್ರಗಳು ಅಥವಾ ಜಲಾಶಯ ಸಮೀಪ, ಮನೆ ಮುಂತಾದ ಎಲ್ಲಿಯಾದರೂ ಸರಿ, ಉಮಾಸಹಿತನಾದ ಶಂಕರನನ್ನೂ, ಗಾಯತ್ರೀಸಹಿತನಾದ ಬ್ರಹ್ಮನನ್ನೂ, ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನನ್ನೂ, ರತಿಸಹಿತನಾದ ಮನ್ಮಥನನ್ನೂ, ಲೋಕಪಾಲಕರನ್ನೂ ಆದಿತ್ಯಾದಿ ನವಗ್ರಹಗಳನ್ನೂ ಸ್ಥಾಪಿಸಿ ಗಂಧ, ಪುಷ್ಪ, ನೈವೇದ್ಯ ಮುಂತಾದವುಗಳಿಂದ ವಿಧಿಪೂರ್ವಕವಾಗಿ ಪೂಜಿಸಿ, ಅಗ್ನಿಪ್ರತಿಷ್ಠೆ ಮಾಡಿ ಎಳ್ಳು, ತುಪ್ಪ ಮುಂತಾದ ಹವಿಸ್ಸುಗಳಿಂದ ಹೋಮಮಾಡಬೇಕು. ಎಲೈ ರಾಜನೇ! ಈ ದಾನಕೊಡು ಪ್ರದಕ್ಕೆ ಮುಂಚೆ ಶಾಂತನಾದ ಬ್ರಾಹ್ಮಣನನ್ನು ಕರೆದು ವಸ್ತ್ರಾದಿಗಳಿಂದ ಅಲಂಕರಿಸಿ ಪೂಜೆಮಾಡಬೇಕು.

೧೧-೧೪. ಆವಾಹಿಸಿ ಪೂಜಿಸಿರುವ ಆಯಾ ದೇವತೆಗಳಿಗೆ ವಿಹಿತವಾಗಿರುವ ಮಂತ್ರಪೂರ್ವಕವಾಗಿ ಆ ದೇವತೆಗಳನ್ನು ಉದ್ದೇಶಿಸಿ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಲ್ಲಿ ಹೋಮಮಾಡಬೇಕು. ಅನಂತರ ಉಪ್ಪಿನ ಮೇಲೆ ಸ್ಥಾಪಿಸಿರುವ ತಿಲಪಾತ್ರೆಯಲ್ಲಿ ಹೆಣ್ಣುಮೇಕೆಯ ಪ್ರತಿಮೆಯನ್ನು ವಿಧಿಪೂರ್ವಕವಾಗಿ ಪೂಜಿಸಿ, ಆ ಮೇಕೆಯನ್ನು ಕುರಿತು—"ಎಲೈ ಹೆಣ್ಣುಮೇಕೆಯೆ! ರೋಮ, ಚರ್ಮ, ಮಾಂಸ, ಮೇದಸ್ಸು ಮುಂತಾದ ಸಕಲ ಉಪಕರಣಗಳಿಂದಲೂ ನೀನು

ಪೂಜಯಿತ್ವಾ ವಿಧಾನೇನ ಮಂತ್ರಮೇತಮುದೀರಯೇತ್ ।
ರೋಮತ್ವಙ್ಮಾಂಸಮಜ್ಜಾದ್ಯೈಃ ಸರ್ವೋಪಕರಣೈಃ ಸದಾ ॥
ಜಗತಃ ಸಂಪ್ರವೃದ್ಧಾಸಿ ತ್ವಾಮತಃ ಪ್ರಾರ್ಥಯೇ ಸ್ಥಿತಾಂ ॥ ೧೨ ॥

ವಾಙ್ಮನಃಕಾಯಜನಿತಂ ಯತ್ಕಿಂಚಿನ್ಮಮ ದುಷ್ಕೃತಂ ।
ತತ್ಸರ್ವಂ ವಿಲಯಂ ಯಾತು ತವದಾನಾತ್ಪ್ರಸೇವಿತಂ ॥ ೧೩ ॥

ಏವಮುಚ್ಚಾರ್ಯ ತಾಂ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ।
ನಾಭಿಭಾಷೇತ ತಂ ದತ್ವಾ ವದನಂ ನಾವಲೋಕಯೇತ್ ॥ ೧೪ ॥

ದುಷ್ಟಪ್ರತಿಗ್ರಹಪತೋ ವಿಪ್ರೋ ಭವತಿ ಪಾತಕೀ ॥ ೧೫ ॥

ನೋ ದದ್ಯಾದ್ದಕ್ಷಿಣಾಹೀನಾಂ ದಾತವ್ಯಾ ಸಾ ವಿಧಾನತಃ ।
ದಕ್ಷಿಣಾವಿಧಿನಾ ಹೀನಾ ದುಃಖಶೋಕಾವಹಾ ಭವೇತ್ ॥ ೧೬ ॥

---

ಈ ಪ್ರಪಂಚದಲ್ಲಿ ಅಭಿವೃದ್ಧಿಹೊಂದಿರುವೆ. ಆದುದರಿಂದ ಇಲ್ಲಿ ನೆಲಸಿರುವ ನಿನ್ನನ್ನು ಪ್ರಾರ್ಥಿಸುತ್ತಿರುವೆನು" ಎಲೌ ತಾಯೇ! ನಿನ್ನನ್ನು ಪೂಜಿಸಿ ದಾನ ಮಾಡಿದುದರಿಂದ ನನ್ನ ವಾಕ್, ಮನಸ್ಸು ಮತ್ತು ಕಾಯ ಇವುಗಳಿಂದುಂಟಾಗಿರುವ ಅಲ್ಪಪಾಪ ಮತ್ತು ಮಹಾಪಾಪಗಳೆಲ್ಲವೂ ನಾಶವಾಗಿ ಹೋಗಲಿ" ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಿ ಸಂಸಾರಿಯಾದ ಬ್ರಾಹ್ಮಣನಿಗೆ ದಾನ ಮಾಡಬೇಕು.

೧೫. ದಾನಮಾಡಿದನಂತರ ಆ ಬ್ರಾಹ್ಮಣನೊಡನೆ ಸಂಭಾಷಣೆ ಮಾಡಕೂಡದು. ಸಾಧ್ಯವಿದ್ದರೆ ದಾನ ಸ್ವೀಕರಿಸಿದ ಬ್ರಾಹ್ಮಣನ ಮುಖವನ್ನು ಸಹ ನೋಡಬಾರದು. ದುರ್ದಾನವನ್ನು ಸ್ವೀಕರಿಸಿದರೆ ಮಾನವನು ಪಾಪಿಯೆನಿಸುವನು. ಆದುದರಿಂದ ಈರೀತಿ ಆಚರಿಸುವುದು ರೂಢಿ.

೧೬. ತಕ್ಕಷ್ಟು ದಕ್ಷಿಣೆಯಿಲ್ಲದೆಯೂ ಮತ್ತು ವಿಧಿಯನ್ನನುಸರಿಸದೆಯೂ ಎಂದಿಗೂ ಈ ದಾನವನ್ನು ಮಾಡಬಾರದು. ಒಂದುವೇಳೆ ಹಾಗೆ ಮಾಡಿದರೆ ಅಂಥವನು ದುಃಖ ಮತ್ತು ಶೋಕ ಇವುಗಳಿಂದ ಯಾವಾಗಲೂ ಪೀಡಿತನಾಗುವನು.

ಪುರಾ ದತ್ತಮಿದಂ ದಾನಂ ಗೌರ್ಯಾ ಶಂಕರಕಾಮ್ಯಯಾ ।
ತೇನ ಶಂಭುಃ ಪತಿರ್ಲಬ್ಧಃ ಸರ್ವದೇವನಮಸ್ಕೃತಃ ॥ ೧೭ ॥

ಇಂದ್ರಾಣ್ಯಾ ಸ್ವರ್ಣರೋಮಾಣಾಂ ಶತಂ ದತ್ತಂ ವಿಧಾನತಃ ।
ಸರ್ವದೇವಪತಿಂ ಪ್ರಾಪ್ಯ ಪತಿಂ ಸಾದ್ಯಾಪಿ ಮೋದತೇ ॥ ೧೮ ॥

ನಲೇನ ದತ್ತಮೇತದ್ಧಿ ರಾಜ್ಯಂ ಕೃತ್ವಾ ದಿವಂ ಗತಃ ।
ರುಕ್ಮಿಣ್ಯಾಹಂ ಪತಿರ್ಲಬ್ಧಃ ಸೌಭಾಗ್ಯಮತುಲಂ ತಥಾ ॥ ೧೯ ॥

ದಾನಸ್ಯಾಸ್ಯ ಪ್ರಭಾವೇಣ ಪುತ್ರಾ ಬಹುಬಲಾನ್ವಿತಾಃ ।
ಅಪುತ್ರೋ ಲಭತೇ ಪುತ್ರಮಧನೋ ಲಭತೇ ಧನಂ ॥ ೨೦ ॥

---

೧೭. ಹಿಂದೆ ಗೌರಿಯು ಶಂಕರನನ್ನು ಪತಿಯನ್ನಾಗಿ ಪಡೆಯಬೇಕೆಂಬ ಅಪೇಕ್ಷೆಯಿಂದ ಈ ಮೇಕೆಯನ್ನು ದಾನಮಾಡಿ ಇಷ್ಟಾರ್ಥಸಿದ್ಧಿಹೊಂದಿದಳು.

೧೮. ಶಚೀದೇವಿಯು ಸುವರ್ಣರೋಮಯುಕ್ತವಾದ ನೂರು ಹೆಣ್ಣುಮೇಕೆಗಳನ್ನು ವಿಧಿಪೂರ್ವಕವಾಗಿ ದಾನಮಾಡಿ, ಸರ್ವದೇವತೆಗಳಿಗೂ ಒಡೆಯನಾದ ಇಂದ್ರನನ್ನೇ ಪತಿಯನ್ನಾಗಿ ಪಡೆದು ಈಗಲೂ ಸಂತೋಷದಿಂದ ಕಾಲಕಳೆಯುತ್ತಿರುವಳು.

೧೯. ನಳಮಹಾರಾಜನು ಈ ದಾನಮಾಡಿ ನಷ್ಟವಾಗಿದ್ದ ರಾಜ್ಯವನ್ನು ಪುನಃ ಪಡೆದು ಸುಖವಾಗಿ ರಾಜ್ಯವಾಳಿ ಕೊನೆಗೆ ಸ್ವರ್ಗವನ್ನು ಹೊಂದಿದನು. ರುಕ್ಮಿಣೀದೇವಿಯೂ ಸಹ ಈ ದಾನವನ್ನೇ ಭಕ್ತಿಪೂರ್ವಕವಾಗಿ ಮಾಡಿ ನನ್ನನ್ನು (ಕೃಷ್ಣನನ್ನು) ಪತಿಯನ್ನಾಗಿ ಪಡೆದುದಲ್ಲದೆ ಸಕಲ ಸೌಭಾಗ್ಯಗಳನ್ನೂ ಪಡೆದಳು.

೨೦–೨೧. ಎಲೈ ಯುಧಿಷ್ಠಿರನೇ! ಈ ಮಹಿಷೀದಾನ ಮಹಿಮೆಯಿಂದ ಮಕ್ಕಳು ದೃಢಕಾಯರಾಗುವರು. ಮಕ್ಕಳಿಲ್ಲದವನಿಗೆ ಪುತ್ರಸಂತಾನವಾಗುವುದು. ದರಿದ್ರನು ಹಣವನ್ನು ಪಡೆಯುವನು. ಮತ್ತು ಈ ದಾನಮಹಿಮೆಯಿಂದ ಮಾನವನಿಗೆ ಸರ್ವ ಮಂಗಳವೂ, ತುಂಬಾ ಕಾಂತಿವಿಶೇಷವೂ ಉಂಟಾಗುವುದು. ಅಲ್ಲದೆ ಅಪಾರವಾದ ಸಂಪತ್ತು ದೊರೆಯುವುದು. ಉತ್ತಮೋತ್ತಮವಾದ ಈ

**ದತ್ತ್ವಾಂ ದಾನಂ ಶುಭಾಂ ಕಾಂತಿಂ ವಿಪುಲಾಂ ಚ ತಥಾ ಶ್ರಿಯಂ ।**
**ಯ ಇಮಂ ಶೃಣುಯಾನ್ನಿತ್ಯಂ ದಾನಕಲ್ಪಮನುತ್ತಮಂ ॥**
**ಅಹೋರಾತ್ರಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೨೦ ॥**

**ಮೇಷೀ ವಿಶೇಷಕಲುಷಾಪಹರಾತಿಶಸ್ತಾ ।**
**ದಾನೇ ಸದೈವ ರಸಧಾತುಯುತಾ ಸಧಾನ್ಯಾ ।**
**ತಾಮಾದರೇಣ ಕುರುನಂದನ ದೇಹಿ ದತ್ವಾ ।**
**ಯೇನಾಸ್ತಪಾಪತಿಮಿರಃ ಸವಿತೇವ ಭಾಸಿ ॥ ೨೧ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಅವಿದಾನವ್ರತವಿಧಿವರ್ಣನಂ ನಾಮತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ.**



ಹೆಣ್ಣುಮೇಕೆಯ ದಾನಕಲ್ಪವನ್ನು ನಿತ್ಯವೂ ಭಕ್ತಿಯಿಂದ ಕೇಳುವ ಮಾನವನಿಗೆ ಆಯಾಯ ದಿನಗಳಲ್ಲಿ ಎಂದರೆ ಅಹೋರಾತ್ರಿಗಳಲ್ಲಿ ಉಂಟಾದ ಪಾಪಗಳೆಲ್ಲಾ ಆಗಲೇ ಪರಿಹಾರವಾಗುವುವು. ಇದರಲ್ಲಿ ಸಂಶಯವಿಲ್ಲ.

೨೨. ಸರ್ವರಸಗಳು, ಧಾತುವಿಶೇಷಗಳು, ಸಪ್ತಧಾನ್ಯಗಳು ಇವುಗಳ ಸಮೇತ ಹೆಣ್ಣು ಆಡನ್ನು ಆಗಾಗ್ಯೆ ಮಾನವನು ದಾನಮಾಡುವುದರಿಂದ ಅವನ ಸಕಲ ಪಾಪಗಳೂ ನಾಶವಾಗಿ ಶ್ರೇಷ್ಠನೆನಿಸುವನು. ಆದುದರಿಂದ ಎಲೈ ಕುರುನಂದನನೇ! ನೀನೂ ಆಡನ್ನು ದಾನಮಾಡು. ಇದರಿಂದ ನಿನ್ನ ಅಜ್ಞಾನಾಂಧಕಾರವೆಲ್ಲಾ ನಾಶವಾಗಿ ಸೂರ್ಯನಂತೆ ಪ್ರಕಾಶಿಸುತ್ತೀ ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಅವಿದಾನವ್ರತವಿಧಿವರ್ಣನೆಯೆಂಬ ನೂರರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುಷ್ಷಷ್ಟ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಭೂಮಿದಾನಮತೋ ವಕ್ಷ್ಯೇ ಸರ್ವಪಾಪಪ್ರಣಾಶನಂ ।
ಯೋ ಪ್ರಯಚ್ಛಂತಿ ವಿಪ್ರೇಭ್ಯೋ ಭೂಮಿದಾನಂ ಸದಕ್ಷಿಣಂ ॥ ೧ ॥
ಶ್ರೋತ್ರಿಯಾಯ ದರಿದ್ರಾಯ ಅಗ್ನಿಹೋತ್ರರತಾಯ ಚ ।
ಸ ಸರ್ವಕಾಮತೃಪ್ತಾತ್ಮಾ ಸರ್ವರತ್ನೈರ್ವಿಭೂಷಿತಃ ॥ ೨ ॥
ಸರ್ವಪಾಪವಿನಿರ್ಮುಕ್ತೋ ದೀಪ್ಯಮಾನೋ ರವಿರ್ಯಥಾ ।
ಬಾಲಸೂರ್ಯಪ್ರಭಾಭಾಸೈರ್ವಾದಿತ್ರಧ್ವಜಶೋಭಿತೈಃ ॥ ೩ ॥
ವಿಮಾನೈರ್ಭಾಸ್ವರೈರ್ದಿವ್ಯೈರ್ವಿಷ್ಣುಲೋಕಂ ಸ ಗಚ್ಛತಿ ॥ ೪ ॥

---

### ನೂರಅರವತ್ತನಾಲ್ಕನೆಯ ಅಧ್ಯಾಯ

೧-೪. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಸಕಲ ಪಾಪಗಳನ್ನೂ ನಾಶಮಾಡುವ ಭೂಮಿದಾನವನ್ನು ಈಗ ಹೇಳುತ್ತೇನೆ ಕೇಳು. ಅಗ್ನಿಹೋತ್ರವನ್ನು ತಪ್ಪದೆ ಅನುಷ್ಠಾನಮಾಡುವವನೂ, ಶ್ರೋತ್ರಿಯನೂ ಮತ್ತು ಬಡವನೂ ಆದ ಬ್ರಾಹ್ಮಣನಿಗೆ ಈ ಭೂಮಿಯನ್ನು ದಾನಮಾಡಿದವರು ಸರ್ವ ಇಷ್ಟಾರ್ಥಗಳನ್ನೂ ಪಡೆದು, ಸಕಲ ರತ್ನಗಳಿಂದ ಅಲಂಕೃತರೂ, ಸಕಲ ಪಾಪಗಳನ್ನು ಕಳೆದುಕೊಂಡವರೂ, ಸೂರ್ಯನಂತೆ ದಿವ್ಯತೇಜಸ್ಸಿನಿಂದ ಪ್ರಕಾಶಿಸುವರೂ ಆಗಿ ಬಾಲಸೂರ್ಯನಂತೆ ಕಾಂತಿಯುಕ್ತವೂ, ವಾದಿತ್ರವೆಂಬ ವಾದ್ಯದ ಧ್ವನಿಯಿಂದ ಕೂಡಿದುದೂ, ದಿವ್ಯವಾದ ತೇಜಸ್ಸಿನಿಂದ ಬೆಳಗುತ್ತಿರುವುದೂ, ಧ್ವಜಗಳಿಂದ ಅಲಂಕೃತವೂ ಆಗಿರುವ ವಿಮಾನಗಳಲ್ಲಿ ಕುಳಿತು ವಿಷ್ಣುಲೋಕವನ್ನು ಸೇರುವನು.

**ತತ್ರ ದಿವ್ಯಾಂಗನಾಭಿಶ್ಚ ಸೇವ್ಯಮಾನೋ ಯಥಾಸುಖಂ ।**
**ಕಾಮಗಃ ಕಾಮರೂಪೀ ಚ ಕ್ರೀಡತ್ಯಾನಂದಮಕ್ಷಯಂ　　॥ ೫ ॥**

**ಯಾವದ್ಧಾರಯತೇ ಲೋಕಾನ್ ಭೂರಂಕುರಸಮುದ್ಭವಾ ।**
**ತಾವದ್ಭೂಮಿಪ್ರದಃ ಕಾಮಂ ವಿಷ್ಣುಲೋಕೇ ಮಹೀಯತೇ　　॥ ೬ ॥**

**ನ ಹಿ ಭೂಮಿಪ್ರದಾನಾದ್ವೈ ದಾನಮನ್ಯದ್ವಿಶಿಷ್ಯತೇ ।**
**ದಿಶೋ ದಶಾನುಗೃಹ್ಣಾತಿ ಹರ್ತಾ ತಾ ದಶ ಹಂತಿ ಚ　　॥ ೭ ॥**

**ದಾನಾನ್ಯನ್ಯಾನಿ ಕ್ಷೀಯಂತೇ ಕಾಲೇನ ಪುರುಷರ್ಷಭ ।**
**ಭೂಮಿಪ್ರದಾನಪುಣ್ಯಸ್ಯ ಕ್ಷಯೋ ನೈವೋಪಪದ್ಯತೇ　　॥ ೮ ॥**

**ಸರ್ವಪಾಪಾನಿ ಕ್ಷೀಯಂತೇ ಕಾಲಯೋಗಕ್ರಮೇಣ ತು ।**
**ಭೂಮಿಹರ್ತುಶ್ಚ ರಾಜೇಂದ್ರ ದುಃಖಸ್ಯಾಂತೋ ನ ವಿದ್ಯತೇ　　॥ ೯ ॥**

---

೫-೬. ಅಲ್ಲಿ ದೇವತಾಸ್ತ್ರೀಯರಿಂದ ತನ್ನ ಇಚ್ಛಾನುಗುಣವಾದ ಸೇವೆಯನ್ನು ಕೈಕೊಂಡು ಸುಖವನ್ನು ಅನುಭವಿಸುತ್ತಾ, ಮನಬಂದಂತೆ ರೂಪನ್ನು ಧರಿಸಿ, ಶಾಶ್ವತವಾದ ಆನಂದವನ್ನನುಭವಿಸುತ್ತಾ ವಿಹರಿಸುವನು. ಈ ಭೂದಾನ ಮಾಡಿದ ಮಾನವನು, ಮೊಳಕೆಯಿಂದ ಮೊದಲ್ಗೊಂಡು ದೊಡ್ಡ ಮರಗಿಡಗಳವರೆಗೂ ಬೆಳೆದಿರುವ ವೃಕ್ಷರಾಜಿಗಳಿಂದ ಯುಕ್ತವಾದ ಈ ಭೂಮಿಯು ಈ ಲೋಕಗಳನ್ನು ಧರಿಸಿರುವವರೆಗೂ ವಿಷ್ಣುಲೋಕದಲ್ಲಿ ಪೂಜಿಸಲ್ಪಡುತ್ತಾ ಸ್ವಚ್ಛಂದವಾಗಿರುವನು.

೭. ಭೂದಾನಕ್ಕಿಂತಲೂ ಉತ್ಕೃಷ್ಟವಾದ ದಾನವು ಬೇರೆ ಯಾವುದೂ ಇಲ್ಲ. ಮೃತರಾಗಿ ಹತ್ತು ದಿಕ್ಕುಗಳಲ್ಲಿಯೂ ದುರ್ಗತಿಹೊಂದಿರುವ ಹತ್ತು ತಲೆಮಾರಿನವರನ್ನು ಇದು ಉದ್ಧಾರಮಾಡಿ ಅನುಗ್ರಹಿಸುವುದು.

೮. ಎಲೈ ಪುರುಷಶ್ರೇಷ್ಠನೇ! ಮಿಕ್ಕ ಎಲ್ಲಾ ದಾನಗಳೂ ಕಾಲಕ್ರಮದಲ್ಲಿ ಅಗೋಚರವಾಗುವುವು. ಆದರೆ ಈ ಭೂಮಿ ದಾನಮಾಡುವುದರಿಂದುಂಟಾಗುವ ಪುಣ್ಯವು ಮಾತ್ರ ಎಂದಿಗೂ ನಾಶವಾಗಲಾರದು.

೯. ಓ ರಾಜೇಂದ್ರ! ಕಾಲಕ್ರಮವನ್ನನುಸರಿಸಿ ಎಲ್ಲಾ ಪಾಪಗಳಿಗೂ ಪರಿಹಾರವು ಏರ್ಪಟ್ಟಿರುವುದು. ಆದರೆ ಭೂಮಿಯನ್ನು ಅಪಹರಿಸಿದವನ ಪಾಪಕ್ಕೂ ಅದರಿಂದುಂಟಾಗುವ ದುಃಖಕ್ಕೂ ಪಾರವೇ ಇಲ್ಲ.

**ಬ್ರಾಹ್ಮಣಾಯ ಸುಶೀಲಾಯ ಭೂಮಿಂ ದತ್ತ್ವಾ ತು ಯೋ ನರಃ ।**
**ನ ಹಿ ತಾಮುಪಜೀವೇದ್ಯಃ ಸ ಮಹತ್ಪುಣ್ಯಮಾಪ್ನುಯಾತ್ ॥ ೧೦ ॥**

**ಹಲಕೃಷ್ಟಾಂ ಮಹೀಂ ಕೃತ್ವಾ ಸಬೀಜಾಂ ಸಸ್ಯಮಾಲಿನೀಂ ।**
**ಯಾವತ್ಸೂರ್ಯಕೃತಾಲೋಕಸ್ತಾವತ್ಸ್ವರ್ಗೇ ಮಹೀಯತೇ ॥ ೧೧ ॥**

**ಧನಂ ಧಾನ್ಯಂ ಹಿರಣ್ಯಂ ಚ ರತ್ನಾನ್ಯಾಭರಣಾನಿ ಚ ।**
**ಸರ್ವದಾನಾನಿ ರಾಜೇಂದ್ರ ದದಾತಿ ವಸುಧಾಂ ದದತ್ ॥ ೧೨ ॥**

**ಸಾಗರಾನ್ಸರಿತಃ ಶೈಲಾನ್ಸಮಾನಿ ವಿಷಮಾಣಿ ಚ ।**
**ಸರ್ವಗಂಧರಸಾನ್ ಸ್ನೇಹಾನ್ ದದಾತಿ ವಸುಧಾಂ ದದತ್ ॥ ೧೩ ॥**

---

೧೦. ಒಳ್ಳೆಯ ನಡತೆಯಿಂದೊಪ್ಪುವ ಬ್ರಾಹ್ಮಣನಿಗೆ ಭೂಮಿಯನ್ನು ದಾನಮಾಡಿದಮೇಲೆ ಆ ಭೂಮಿಯಲ್ಲಿ ಬೆಳೆಯುವ ದವಸಧಾನ್ಯಗಳನ್ನೂ ಹುಲ್ಲು ಕಡ್ಡಿ ಮೊದಲಾದವುಗಳನ್ನೂ ಪುನಃ ತಾನು ಯಾವ ವಿಧದಲ್ಲೂ ಉಪಯೋಗಿಸದೆ ಇರುವ ಮಾನವನು ಅಪಾರ ಪುಣ್ಯವನ್ನು ಹೊಂದುವನು.

೧೧. ನೇಗಿಲಿನಿಂದ ಉತ್ತು ಬೀಜವನ್ನು ಹಾಕಿ ಸಸ್ಯಗಳಿಂದ ಶೋಭಿಸುತ್ತಿರುವ ಭೂಮಿಯನ್ನು ದಾನಮಾಡುವ ಮಾನವನು, ಆಚಂದ್ರಾರ್ಕವಾಗಿ ಸ್ವರ್ಗಲೋಕದಲ್ಲಿ ಪೂಜಿತನಾಗುವನು.

೧೨. ಓ ರಾಜೇಂದ್ರ! ಈ ಭೂದಾನಮಾಡಿದರೆ ಧನ, ಧಾನ್ಯ, ಚಿನ್ನ, ರತ್ನ, ಆಭರಣ ಮುಂತಾದ ಸಕಲದಾನಗಳನ್ನೂ ಮಾಡಿದಂತೆ ಆಗುವುದು.

೧೩. ಈ ಭೂಮಿದಾನಮಾಡುವವನು ಸಕಲ ಸಾಗರಗಳು, ನದಿಗಳು, ಬೆಟ್ಟಗುಡ್ಡಗಳು, ಹಳ್ಳತಿಟ್ಟಾದ ಸಕಲ ಪ್ರದೇಶಗಳು, ಸಕಲ ಸುಗಂಧವಸ್ತುಗಳು, ರಸಪದಾರ್ಥಗಳು ಮತ್ತು ಸ್ನಿಗ್ಧಪದಾರ್ಥಗಳು ಇವೆಲ್ಲವನ್ನೂ ದಾನಮಾಡಿದಂತೆ ಆಗುವುದು.

ಓಷಧೀಃ ಕ್ಷೀರಸಂಪನ್ನಾ ನಾನಾಪುಷ್ಪಫಲೋಪಗಾಃ ।
ಕಮಲೋತ್ಪಲಖಂಡಾಶ್ಚ ದದಾತಿ ವಸುಧಾಂ ದದತ್　　　॥ ೧೪ ॥

ಅಗ್ನಿಷ್ಟೋಮಾದಿಭಿರ್ಯಜ್ಞೈರ್ಯೇ ಯಜಂತಿ ಸದಕ್ಷಿಣೈಃ ।
ಪ್ರಾಪ್ನುವಂತಿ ಚ ತತ್ಪುಣ್ಯಂ ಭೂಮಿದಾನಾದ್ಯದಾಪ್ಯತೇ　　　॥ ೧೫ ॥

ಶ್ರೋತ್ರಿಯಾಯ ಮಹೀಂ ದತ್ತ್ವಾ ಯೇ ಹರಂತಿ ನ ಮಾನವಾಃ ।
ತಾವತ್ತೇಷಾಂ ಭವೇತ್ಸ್ವರ್ಗೋ ಯಾವಲ್ಲೋಕಾಃ ಪ್ರತಿಷ್ಠಿತಾಃ॥೧೬॥

ಸಸ್ಯಪೂರ್ಣಾಂ ಮಹೀಂ ಯಸ್ತು ಶ್ರೋತ್ರಿಯಾಯ ಪ್ರಯಚ್ಛತಿ ।
ಪಿತರಸ್ತಸ್ಯ ತುಷ್ಯಂತಿ ಯಾವದಾಭೂತಸಂಪ್ಲವಂ　　　॥ ೧೭ ॥

---

೧೪. ಈ ಭೂದಾನಮಾಡುವ ಮಾನವನು, ಮುರಿದರೆ ಹಾಲುಬರುವ ಲತೆಗಳು, ನಾನಾವಿಧವಾದ ಹೂಗಳು, ಹಣ್ಣುಗಳು, ಕಮಲ, ಕನ್ನೈದಿಲೆ ಮುಂತಾದ ಪುಷ್ಪಗಳು, ಗೆಡ್ಡೆ ಮತ್ತು ನಾಳಗಳು ಇವೆಲ್ಲವನ್ನೂ ದಾನಮಾಡಿ ದಂತೆ ಆಗುವುದು.

೧೫. ಯಥೋಕ್ತ ದಕ್ಷಿಣಾಸಹಿತವಾಗಿ ಅಗ್ನಿಷ್ಟೋಮಾದಿ ಯಾಗಗಳನ್ನು ಮಾಡುವುದರಿಂದುಂಟಾಗುವ ಫಲವು ಈ ಭೂದಾನಮಾಡುವುದರಿಂದ ಉಂಟಾ ಗುವುದು.

೧೬. ಶ್ರೋತ್ರಿಯನಾದ ಬ್ರಾಹ್ಮಣನಿಗೆ ಈ ಭೂದಾನವನ್ನು ಮಾಡಿದ ಮೇಲೆ ದತ್ತಾಪಹಾರಮಾಡದೆ ಇರುವ ಮಾನವರು, ಈ ಸಮಸ್ತಲೋಕಗಳೂ ನೆಲಸಿರುವವರೆಗೂ ಸ್ವರ್ಗಲೋಕದಲ್ಲಿ ಪೂಜಿತರಾಗುತ್ತಾರೆ.

೧೭. ಪೈರುಪಚ್ಚೆಗಳಿಂದ ಪರಿಪೂರ್ಣವಾಗಿರುವ ಭೂಮಿಯನ್ನು ಶ್ರೋತ್ರಿ ಯನಾದ ಬ್ರಾಹ್ಮಣನಿಗೆ ದಾನಮಾಡುವವನ ಪಿತೃದೇವತೆಗಳು ಕಲ್ಪಾಂತ ವಾಗುವವರೆಗೂ ಸಂತೋಷಯುಕ್ತರಾಗಿರುತ್ತಾರೆ.

ಯತ್ಕಿಂಚಿತ್ಕುರುತೇ ಪಾಪಂ ಪುರುಷೋ ವೃತ್ತಿಕರ್ಶಿತಃ ।
ಅಪಿ ಗೋಚರ್ಮಮಾತ್ರೇಣ ಭೂಮಿದಾನೇನ ಶುದ್ಧ್ಯತಿ ॥ ೧೮ ॥

ಸುವರ್ಣಾನಾಂ ಸಹಸ್ರೇಣ ಯತ್ಪುಣ್ಯಂ ಸಮುದಾಹೃತಂ ।
ಭೂಮಿಗೋಚರ್ಮಮಾತ್ರೇಣ ತತ್ಫಲಂ ಪ್ರಾಪ್ನುಯಾನ್ನರಃ ॥ ೧೯ ॥

ಕಪಿಲಾನಾಂ ಸಹಸ್ರೇಭ್ಯೋ ಯದ್ದತ್ತೇಽನ್ನಂ ನರೋತ್ತಮ ।
ಭೂಮಿಗೋಚರ್ಮಮಾತ್ರೇಣ ತತ್ಫಲಂ ಲಭತೇ ನರಃ ॥ ೨೦ ॥

ಮಧ್ಯಮಸ್ಯ ಮನುಷ್ಯಸ್ಯ ವ್ಯಾಸೇನ ಪರಿಸಂಖ್ಯಯಾ ।
ತ್ರಿಂಶದ್ದಂಡಾಂಶ್ಚ ಗೋಚರ್ಮ ದತ್ತ್ವಾ ಸ್ವರ್ಗೇ ಮಹೀಯತೇ ॥೨೧॥

---

೧೮. ಗೋವಿನ ಚರ್ಮದಷ್ಟು ವಿಸ್ತಾರವಾದ ಭೂಮಿಯನ್ನು ದಾನ ಮಾಡಿದ ಮಾತ್ರದಿಂದ ತನ್ನ ಜೀವನ ನಿರ್ವಾಹಕ್ಕೋಸ್ಕರ ಮಾಡಿರುವ ಸಮಸ್ತ ವಾದ ಪಾಪವೂ ಪರಿಹರವಾಗುವುದು.

೧೯. ಸಹಸ್ರ ಸುವರ್ಣಗಳನ್ನು ದಾನಮಾಡಿದರೆ ಉಂಟಾಗುವ ಫಲವು ಕೇವಲ ಗೋಚರ್ಮಪ್ರಮಾಣದ ಭೂಮಿಯನ್ನು ದಾನಮಾಡುವುದರಿಂದಲೇ ಉಂಟಾಗುವುದು.

೨೦. ಎಲೈ ಮಾನವಶ್ರೇಷ್ಠನೇ! ಸಾವಿರ ಕಪಿಲಾಗೋವುಗಳಿಗೆ ಆಹಾರ ವನ್ನು ಹಾಕಿದುದರಿಂದ ಉಂಟಾಗುವಷ್ಟು ಫಲವು ಗೋಚರ್ಮಪ್ರಮಾಣದ ಭೂಮಿಯನ್ನು ದಾನಮಾಡುವುದರಿಂದಲೇ ಪ್ರಾಪ್ತವಾಗುವುದು.

೨೧. ಸಾಮಾನ್ಯವಾದ ಆಕಾರವುಳ್ಳ ಮಾನವನ ಪ್ರಮಾಣವನ್ನು ಒಂದು ದಾರದಿಂದ ಅಳತೆಹಾಕಿ ಮಾನದಂಡವನ್ನಾಗಿ ಮಾಡಿ ಅಂಥ ಮೂವತ್ತು ಮಾನದಂಡಪ್ರಮಾಣಕ್ಕೆ ಒಂದು ಗೋಚರ್ಮ ಪ್ರಮಾಣ ಎಂದು ವಿಧಿಸಿದ್ದಾರೆ. ಇಷ್ಟು ಪರಿಮಾಣ ಭೂಮಿಯನ್ನು ದಾನಮಾಡಿದರೆ ಮಾನವನಿಗೆ ನಿಸ್ಸಂಶಯವಾಗಿ ಸ್ವರ್ಗಲೋಕ ಪ್ರಾಪ್ತಿಯಾಗುವುದು.

**ಬಹುಭಿರ್ವಸುಧಾ ಭುಕ್ತಾ ರಾಜಭಿಃ ಸಗರಾದಿಭಿಃ ।**
**ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಲಂ ॥ ೨೨ ॥**

**ಕಿಂಕರಾ ಮೃತ್ಯುದಂಡಾಶ್ಚ ಅಸಿಪತ್ರವನಾದಯಃ ।**
**ಘೋರಾಶ್ಚ ವಾರುಣಾಃ ಪಾಶಾ ನೋಪಸರ್ಪಂತಿ ಭೂಮಿದಂ ॥ ೨೩ ॥**

**ನಿರಯಾ ರೌರವಾದ್ಯಾಶ್ಚ ಕುಂಭೀಪಾಕಃ ಸುದುಸ್ಸಹಃ ।**
**ತಥಾ ಚ ಯಾತನಾಃ ಕಷ್ಟಾ ನೋಪಸರ್ಪಂತಿ ಭೂಮಿದಂ ॥ ೨೪ ॥**

**ಚಿತ್ರಗುಪ್ತಶ್ಚ ಕಾಲಶ್ಚ ಕೃತಾಂತೋ ಮೃತ್ಯುರೇವ ಚ ।**
**ಯಮಶ್ಚಾಪಿ ಸ್ವಯಂ ರಾಜಾ ಸಂಪೂಜಯತಿ ಭೂಮಿದಂ ॥ ೨೫ ॥**

---

೨೨. ಸಗರನೇ ಮುಂತಾದ ಅನೇಕಮಂದಿ ರಾಜರುಗಳು ಹಲವುಕಾಲ ಭೂಮಿಯನ್ನು ಆಳಿ ಸ್ವರ್ಗವನ್ನೈದಿದರು. ಯಾರ ಯಾರ ಕಾಲದಲ್ಲಿ ಆ ಭೂಮಿಯು ಯಾರ ಅಧೀನದಲ್ಲಿದ್ದಿತೋ ಆ ಭೂದಾನದ ಫಲವು ಆವರವರಿಗೆ ಸಲ್ಲುತ್ತದೆ.

೨೩. ಯಮಭಟರೂ, ಯಮನ ದಂಡಾಯುಧವೂ, ಅಸಿಪತ್ರವನವೇ ಮುಂತಾದ ನರಕಗಳೂ, ಭಯಂಕರವಾದ ವರುಣನ ಪಾಶಾಯುಧವೂ ಸಹ ಈ ಭೂಮಿದಾನಮಾಡಿದವನನ್ನು ತೊಂದರೆಪಡಿಸಲಾರವು. ಕೊನೆಗೆ ಅವನ ಹತ್ತಿರಕ್ಕೂ ಸುಳಿಯಲಾರವು.

೨೪. ರೌರವ, ಕುಂಭೀಪಾಕಾದಿ ಭಯಂಕರವಾದ ನರಕಗಳಾಗಲಿ ಸಹಿಸಲಸಾಧ್ಯವೂ ಕಷ್ಟಕರವೂ ಆದ ಯಾತನೆಗಳಾಗಲಿ ಈ ಭೂಮಿದಾನ ಮಾಡಿದವನಿಗೆ ಉಂಟಾಗುವುದಿಲ್ಲ.

೨೫. ಚಿತ್ರಗುಪ್ತ, ಕಾಲ, ಕೃತಾಂತ ಮತ್ತು ಮೃತ್ಯು ಇವರು ಈ ಭೂಮಿದಾನಮಾಡಿದ ಮಾನವನ ಹತ್ತಿರಕ್ಕೆ ಸಹ ಬರಲಾರರು. ಈ ಭೂದಾನಮಾಡಿದ ಮಹಾನುಭಾವನನ್ನು ಸಾಕ್ಷಾತ್ ಯಮರಾಜನು ಪೂಜೆಮಾಡುವನು.

ರುದ್ರಃ ಪ್ರಜಾಪತಿಃ ಶಕ್ರೋ ದೇವಾಸುರಗಣಾಸ್ತಥಾ ।
ಅಹಂ ಚ ಪರಮಪ್ರೀತ್ಯಾ ಪೂಜಯಾಮೀಹ ಭೂಮಿದಂ ॥ ೨೬ ॥

ಷಟ್ಕರ್ಮಕೃತ್ಸುವೃತ್ತಾಯ ಕೃಶಾಯ ಚ ಪ್ರಿಯಾರ್ಥಿನೇ ।
ಭೂಮಿರ್ದೇಯಾ ನರವ್ಯಾಘ್ರ ಸನ್ನಿಧಿಶ್ಚಾಕ್ಷಯೋ ಭವೇತ್ ॥ ೨೭ ॥

ಸೀದಮಾನಕುಟುಂಬಾಯ ಶ್ರೋತಿಯಾಯಾಹಿತಾಗ್ನಯೇ ।
ವೃತ್ತಸ್ಥಾಯ ದರಿದ್ರಾಯ ಭೂಮಿರ್ದೇಯಾ ನರೇಶ್ವರ ॥ ೨೮ ॥

ಯಥಾ ಜನಿತ್ರೀ ಕ್ಷೀರೇಣ ಪುತ್ರಂ ಸಂವರ್ಧಯೇತ್ಸದಾ ।
ತಥಾ ಭೂಮಿಪ್ರದಂ ಭೂಮಿಃ ಸರ್ವಕಾಮೈಸ್ತು ತರ್ಪತಿ ॥ ೨೯ ॥

---

೨೬. ರುದ್ರ, ಬ್ರಹ್ಮ, ದೇವೇಂದ್ರ, ದೇವರಾಕ್ಷಸ ಸಮೂಹಗಳು ಮತ್ತು ನಾನೂ (ಶ್ರೀಕೃಷ್ಣ) ಸಹ ಭೂಮಿದಾನಮಾಡಿದವನನ್ನು ತುಂಬಾ ಪ್ರೀತಿಯಿಂದ ಪೂಜಿಮಾಡುವೆವು.

೨೭. ಓ ನರಶ್ರೇಷ್ಠನಾದ ಯುಧಿಷ್ಠಿರ! ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಆರು ಕರ್ಮಗಳನ್ನೂ ಸರಿಯಾಗಿ ನಡೆಸಿಕೊಂಡು ಬರುವವನೂ, ಒಳ್ಳೆಯ ನಡತೆಯುಳ್ಳವನೂ, ಸ್ಥೂಲಕಾಯವಿಲ್ಲದೆ ಕೃಶನಾಗಿರುವನೂ, ಯಾವಾಗಲೂ ಮತ್ತೊಬ್ಬರಿಗೆ ಹಿತವನ್ನೇ ಬಯಸುವನೂ ಆಗಿರುವ ಬ್ರಾಹ್ಮಣನಿಗೆ ಭೂದಾನಮಾಡಬೇಕು. ಇದರಿಂದ ಶಾಶ್ವತ ಬ್ರಹ್ಮಲೋಕವು ಲಭಿಸುವುದು.

೨೮. ಅಯ್ಯಾ ನರಾಧಿಪನೇ! ಯಾವಾಗಲೂ ದೊಡ್ಡ ಸಂಸಾರತಾಪತ್ರಯಕ್ಕೊಳಗಾಗಿ ತೊಳಲುತ್ತಿರುವನು ಶ್ರೋತ್ರಿಯನು, ಆಹಿತಾಗ್ನಿ, ಒಳ್ಳೆಯ ನಡೆನುಡಿಯುಳ್ಳವನು ಮತ್ತು ದರಿದ್ರನು ಇಂತಹ ಬ್ರಾಹ್ಮಣನಿಗೆ ಭೂದಾನ ಮಾಡಬೇಕು.

೨೯. ಹೆತ್ತತಾಯಿಯು ಯಾವಾಗಲೂ ತನ್ನ ಮಗುವಿಗೆ ಹಾಲನ್ನು ಕೊಟ್ಟು ಪೋಷಣೆಮಾಡುತ್ತಾ ಅಭಿವೃದ್ಧಿಗೆ ತರುವ ಹಾಗೆ, ಈ ಭೂದೇವಿಯು ಸಹ ಭೂದಾನಮಾಡಿದವನಿಗೆ ಸಕಲ ಮನೋರಥಗಳನ್ನೂ ಸಲ್ಲಿಸಿ ಸಂತೋಷಗೊಳಿಸುವಳು.

ಯಥಾ ಗೌರ್ಭರತೇ ವತ್ಸಂ ಕ್ಷೀರೇಣ ಕ್ಷೀರಮುತ್ಸೃಜೇತ್ ।
ತಥಾ ಸರ್ವರಸೋಪೇತಾ ಭೂಮಿರ್ಭರತಿ ಭೂಮಿದಂ ॥ ೩೦ ॥

ಯಥಾ ಬೀಜಾನಿ ರೋಹಂತಿ ಜಲಸಿಕ್ತಾನಿ ಭೂತಲೇ ।
ತಥಾ ಕಾಮಾಃ ಪ್ರರೋಹಂತಿ ಭೂಮಿದಸ್ಯ ದಿನೇದಿನೇ ॥ ೩೧ ॥

ಯಥೋದಯನ್ಸಹಸ್ರಾಂಶುಃ ತಮಸ್ಸರ್ವಂ ವ್ಯಪೋಹತಿ ।
ತಥಾ ಭೂಮಿಪ್ರದಾನಂ ತು ಸರ್ವಪಾಪಂ ವ್ಯಪೋಹತಿ ॥ ೩೨ ॥

ಪರದತ್ತಾಂ ತು ಯೋ ಭೂಮಿಮುಪಹಿಂಸೇತ್ಕದಾಚನ ।
ಸ ಬದ್ಧೋ ವಾರುಣೈಃ ಪಾಶೈಃ ಕ್ಷಿಪ್ಯತೇ ಪೂಯಶೋಣಿತೇ ॥ ೩೩ ॥

---

೩೦. ಹಸುವು ಹಾಲನ್ನು ಕೊಟ್ಟು ತನ್ನ ಕರುವನ್ನು ಪ್ರೀತಿಯಿಂದ ಕಾಪಾಡುವಂತೆ ಸಕಲ ರಸಪರಿಪೂರ್ಣಳಾಗಿರುವ ಈ ಭೂದೇವಿಯು, ಭೂದಾನ ಮಾಡುವವನ್ನು ಪ್ರೀತಿಯಿಂದ ಸಲಹುತ್ತಾಳೆ.

೩೧. ಬಿತ್ತನೆಮಾಡಿ ಜಲಸೇಚನಮಾಡಿದ ಭೂಮಿಯಲ್ಲಿ ಬೀಜಗಳು ಚೆನ್ನಾಗಿ ಮೊಳಕೆ ಹೊರಟು ದಿನದಿನಕ್ಕೆ ಹೊರವಾಗಿ ಬೆಳೆಯುವಂತೆ ಈ ಭೂದಾನ ಮಾಡಿದ ಮಾನವನ ಇಷ್ಟಾರ್ಥಗಳೆಲ್ಲ ದಿನದಿನದಲ್ಲೂ ಸಿದ್ಧಿಹೊಂದುತ್ತವೆ.

೩೨. ಸೂರ್ಯನು ಉದಯಿಸಿದೊಡನೆ ಕತ್ತಲೆಯನ್ನೆಲ್ಲಾ ಹೊಡೆದೋಡಿಸುವಂತೆ ಈ ಭೂದಾನವು ದಾನಿಯ ಸಕಲ ಪಾಪಗಳನ್ನೂ ನಾಶಪಡಿಸುವುದು.

೩೩. ಮತ್ತೊಬ್ಬರಿಗೆ ದಾನಮಾಡಿದ ಭೂಮಿಯನ್ನು ತಾನು ಯಾವಾಗಲಾದರೂ ಉಪಭೋಗ ಮಾಡಿದರೂ ಪ್ರತಿಗೃಹೀತೃವನ್ನು ಹಿಂಸೆಪಡಿಸಿದರೂ ಆ ಮಾನವನು ವರುಣನ ಪಾಶಾಯುಧದಿಂದ ಬಂಧಿತನಾಗಿ ಕೀವು, ರಕ್ತ ಮುಂತಾದವುಗಳ ಮಡುಗಳಲ್ಲಿ ಎಸೆಯಲ್ಪಡುತ್ತಾನೆ.

ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ ।
ಸ ನರೋ ನರಕೇ ಘೋರೇ ಕ್ಲಿಶ್ಯತ್ಯಾಪ್ರಲಯಾಂತಕಂ ॥ ೩೪ ॥

ರುದತಾಂ ವೃತ್ತಿನಾಶೇನ ಯೇ ಪತಂತ್ಯಶ್ರುಬಿಂದವಃ ।
ತಾವದ್ವರ್ಷಸಹಸ್ರಾಣಿ ನರಕೇ ಪಚ್ಯತೇ ತು ಸಃ ॥ ೩೫ ॥

ಬ್ರಾಹ್ಮಣಾನಾಂ ಹೃತೇ ಕ್ಷೇತ್ರೇ ಹರ್ತುಸ್ತ್ರಿಪುರುಷಂ ಕುಲಂ ।
ದತ್ತ್ವಾ ಭೂಮಿಂ ತು ವಿಪ್ರಾಯ ಉಪಹಿಂಸೇದ್ಯದಾ ಪುನಃ ॥
ಅಧೋಮುಖಶ್ಚ ದುಷ್ಟಾತ್ಮಾ ಕುಂಭೀಪಾಕೇ ಸ ಪಚ್ಯತೇ ॥ ೩೬ ॥

ದಿವ್ಯವರ್ಷಸಹಸ್ರಾಂತೇ ಕುಂಭೀಪಾಕಾದ್ವಿನಿಸ್ಸೃತಃ ।
ಇಹ ಲೋಕೇ ಭವೇಚ್ಛೂದ್ರೋ ಸಪ್ತ ಜನ್ಮಾನಿ ಪಾರ್ಥಿವ ॥ ೩೭ ॥

---

೩೪. ತಾನು ದಾನಮಾಡಿದ ಅಥವಾ ಮತ್ತೊಬ್ಬರು ದಾನಮಾಡಿದ ಭೂಮಿಯನ್ನು ಅಪಹರಿಸುವ ಮಾನವರು ಭಯಂಕರವಾದ ನರಕದಲ್ಲಿ ಬಿದ್ದು ಪ್ರಳಯಕಾಲದವರೆಗೂ ಕ್ಲೇಶಪಡುವನು.

೩೫. ಇವನು ಭೂಮಿಯನ್ನು ಅಪಹರಿಸಿದ್ದರಿಂದ ಅದನ್ನನುಭವಿಸುತ್ತಿದ್ದವರು “ ಅಯ್ಯೋ! ನಮ್ಮ ಕ್ಷೇತ್ರಾರಾಮಾದಿಗಳು ನಾಶವಾಯಿತು. ನಮ್ಮ ಜೀವನಕ್ಕೆ ಕಲ್ಲುಬಿದ್ದಿತೆಂ ”ದು ಗೋಳಿಡುವರು. ಆಗ ಅವರ ಕಣ್ಣುಗಳಿಂದ ಎಷ್ಟುಹನಿ ನೀರು ಬೀಳುವುವೋ ಅಷ್ಟು ಸಾವಿರ ವರ್ಷಗಳಕಾಲ ಅಪಹರಿಸಿದವನು ನರಕದಲ್ಲಿ ಬಿದ್ದು ನರಳುವನು.

೩೬. ಬ್ರಾಹ್ಮಣರ ಜಮೀನನ್ನು ಅಪಹರಿಸಿದವನ ಕುಲದಲ್ಲಿ ಹಿಂದಿನ ಮೂರು ತಲೆಮಾರಿನವರೂ, ಮುಂದಿನ ಮೂರು ತಲೆಮಾರಿನವರೂ ಈ ದೋಷದ ಪರಿಹಾರಕ್ಕೋಸ್ಕರ ಬ್ರಾಹ್ಮಣನಿಗೆ ತಾವು ಭೂದಾನಮಾಡಬೇಕು. ಕೊಟ್ಟ ಮೇಲೆ ತಾನೂ ತಮ್ಮ ಹಿಂದಿನವರಂತೆ ಅದನ್ನೇನಾದರೂ ತೊಂದರೆಪಡಿಸಿದರೆ ಪಾಪಿಯಾದ ಆ ಮಾನವನು ಕುಂಭೀಪಾಕ ನರಕದಲ್ಲಿ ಅಧೋಮುಖನಾಗಿ ಬಿದ್ದು ನರಳಬೇಕಾಗುತ್ತದೆ.

೩೭. ಆ ಕುಂಭೀಪಾಕದಲ್ಲಿ ದೇವಮಾನದ ಸಾವಿರ ವರ್ಷಗಳವರೆಗೆ ಬಿದ್ದು ನರಳಿ, ಅನಂತರ ಮುಂದಿನ ಏಳುಜನ್ಮಗಳಲ್ಲಿಯೂ ಈ ಲೋಕದಲ್ಲಿ ಶೂದ್ರನಾಗಿ ಹುಟ್ಟಬೇಕಾಗುತ್ತದೆ.

**ಸ್ವದತ್ತಾಂ ಪರದತ್ತಾಂ ವಾ ಯತ್ನಾದ್ರಕ್ಷೇದ್ಯುಧಿಷ್ಠಿರ ।
ಮಹೀಂ ಮಹೀಭೃತಾಂ ಶ್ರೇಷ್ಠ ದಾನಾಚ್ಛ್ರೇಯೋಽನುಪಾಲನಂ ॥
ಸ್ವದತ್ತಾದ್ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ　　॥ ೩೮ ॥**

**ತೋಯಹೀನೇಷ್ವರಣ್ಯೇಷು ಶುಷ್ಕಕೋಟರವಾಸಿನಃ ।
ಕೃಷ್ಣಾಹಯೋಽಭಿಜಾಯಂತೇ ನರಾ ಬ್ರಹ್ಮಸ್ವಹಾರಿಣಃ　　॥ ೩೯ ॥**

**ಏವಂ ದತ್ವಾ ಮಹೀಂ ರಾಜನ್ಪ್ರಹೃಷ್ಟೇನಾಂತರಾತ್ಮನಾ ।
ಸರ್ವಾನ್ಕಾಮಾನವಾಪ್ನೋತಿ ಮನಸಾ ಚಿಂತಿತಾನ್ನರಃ　　॥ ೪೦ ॥**

**ಭೂಮಿದಾನಾತ್ಪರಂ ನಾಸ್ತಿ ಸುಖಂ ವಾಮುಷ್ಮಿಕಂ ಮಹತ್ ।
ನ ಚಾಪಿ ಭೂಮಿಹರಣಾದನ್ಯತ್ಪಾತಕಮುಚ್ಯತೇ　　॥ ೪೧ ॥**

---

೩೮. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ತಾನು ದಾನಮಾಡಿದ ಭೂಮಿಯನ್ನು ಅಥವಾ ಪರರು ದಾನಮಾಡಿದ ಭೂಮಿಯನ್ನು ಪ್ರಯತ್ನ ಪೂರ್ವಕವಾಗಿ ಉಳಿಸಿಕೊಡಬೇಕು. ಭೂದಾನಮಾಡಿದ ಫಲಕ್ಕಿಂತಲೂ ದತ್ತಾನುಪಾಲನ ಮಾಡಿದ ಫಲವು ಉತ್ತಮವಾದದು. "ಸ್ವದತ್ತಾತ್ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ" ಎಂದು ಆರ್ಯೋಕ್ತಿ ಇದೆ.

೩೯. ಬ್ರಾಹ್ಮಣರ ದ್ರವ್ಯವನ್ನಾಗಲಿ ಅಥವಾ ಸ್ವತ್ತನ್ನಾಗಲಿ ಅಪಹಾರ ಮಾಡಿದವರು ನೀರು, ನೆರಳುಗಳಿಲ್ಲದ ಘೋರವಾದ ಕಾಡುಗಳಲ್ಲಿ ಒಣಮರದ ಪೊಟರೆಗಳಲ್ಲಿ ವಾಸಮಾಡುವ ಕೃಷ್ಣಸರ್ಪಗಳಾಗಿ ಹುಟ್ಟುವರು.

೪೦. ಅಯ್ಯಾ ರಾಜನೇ! ಸಂತೋಷಯುಕ್ತವಾದ ಮನಸ್ಸಿನಿಂದ ಭೂಮಿಯನ್ನು ಬ್ರಾಹ್ಮಣನಿಗೆ ದಾನಮಾಡುವವನಿಗೆ ಅವನ ಮನೋರಥ ಗಳೆಲ್ಲವೂ ಈಡೇರುವುವು.

೪೧. ಈ ಲೋಕದಲ್ಲಿ ಭೂದಾನಕ್ಕಿಂತಲೂ ಉತ್ಕೃಷ್ಟವೂ ಮಹತ್ವವೂ ಆದ ಸುಖದಾಯಕವಾದ್ದು ಬೇರೆ ಯಾವುದೂ ಇಲ್ಲ. ದಾನಮಾಡಿದ ಭೂಮಿ ಯನ್ನು ಅಪಹರಿಸುವುದಕ್ಕಿಂತ ಮಿಗಿಲಾದ ಪಾಪವೂ ಬೇರೊಂದಿಲ್ಲ.

ಯಚ್ಛಂತಿ ಯೇ ದ್ವಿಜವರಾಯ ಮಹೀಂ ಸುಕೃಷ್ಟಾಂ ।
ತೇ ಯಾಂತಿ ಶಕ್ರಸದನಂ ಸುವಿಶುದ್ಧದೇಹಾಃ ।
ಯೇ ಲೋಪಯಂತ್ಯತಿಬಲಾದಥ ಕಾಮಲೋಭಾ ।
ತ್ತೇ ರೌರವಾತಿಗಹನಾನ್ನ ಸಮುತ್ತರಂತಿ ॥ ೪೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಭೂಮಿದಾನಮಹಾತ್ಮ್ಯ ವರ್ಣನಂ ನಾಮದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ.



೪೨. ಚೆನ್ನಾಗಿ ಉತ್ತು, ಪೈರು ಹಾಕಿದ ಭೂಮಿಯನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡುವ ಮಾನವರು ಪರಿಶುದ್ಧವಾದ ದೇಹವನ್ನು ಪಡೆದವರಾಗಿ ಇಂದ್ರಲೋಕವನ್ನು ಹೊಂದುವರು. ತಾನು ಬಲಶಾಲಿ ಎಂಬ ಗರ್ವದಿಂದಲೂ ಅತ್ಯಾಸೆಯಿಂದಲೂ ದಾನಮಾಡಿದ ಭೂಮಿಯನ್ನು ಅಪಹರಿಸುವ ಆಲೋಚನೆ ಕೆಲವರಿಗೆ ಬರಬಹುದು ಅಂಥ ಮಾನವರು ರೌರವ ನರಕಹೊಂದುವರು. ಬಳಿಕ ಎಂದಿಗೂ ಉದ್ಧಾರವಾಗಲಾರರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಭೂದಾನಮಹಾತ್ಮ್ಯ ವರ್ಣನೆಯೆಂಬ ನೂರರವತ್ತನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಭೂಮಿದಾನಂ ಕ್ಷತ್ರಿಯಾಣಾಂ ನಾನ್ಯೇಷಾಮುಪಪದ್ಯತೇ ।
ತೇ ಹ್ಯುಪಾರ್ಜಯಿತುಂ ಶಕ್ತಾಃ ದಾತುಂ ಪಾಲಯಿತುಂ ಯಥಾ ॥ ೧ ॥

ಭೂಮಿದಾನಸಮಂ ಕಿಂಚಿದನ್ಯತ್ಕಥಯ ಯಾದವ ।
ಸಂಪ್ರಾಪ್ತವಿತ್ತೈರ್ಯಚ್ಛಕ್ಯಂ ಸಂಸಾರಭಯಭೀರುಭಿಃ ॥ ೨ ॥

---

## ನೂರಅರವತ್ತೈದನೆಯ ಅಧ್ಯಾಯ

೧–೨. ಯುಧಿಷ್ಠಿರನು ಪ್ರಶ್ನೆಮಾಡುವನಾಗಿ—ಎಲೈ ಯದುವಂಶ ಶ್ರೇಷ್ಠನೇ! ನೀನು ಹೇಳಿದ ಈ ಭೂದಾನವು ಕೇವಲ ಕ್ಷತ್ರಿಯರಿಗೆ ಸಾಧ್ಯವೇ ಹೊರತು, ಮಿಕ್ಕವರಿಗೆ ಅಸಾಧ್ಯವೆಂದು ತೋರುವುದು. ಭೂಮಿಯನ್ನು ಸಂಪಾದಿಸುವುದಕ್ಕೂ ಮತ್ತು ರಕ್ಷಣೆಮಾಡುವುದಕ್ಕೂ ಅವರೇ ನಿಜವಾಗಿ ಸಮರ್ಥರು. ಆದುದರಿಂದ ಎಲೈ ಸ್ವಾಮಿಯೇ! ಈ ಭೂದಾನಕ್ಕೆ ಸಮಾನವಾದ ಬೇರೆಯ ದಾನವೂ ಇರಬಹುದು. ಸಂಸಾರದಲ್ಲಿ ಭಯಗ್ರಸ್ತರಾಗಿರುವ ಈ ಮಾನವರು ಸಾಮಾನ್ಯವಾಗಿ ಸಂಪಾದಿಸಿದ ದ್ರವ್ಯದಿಂದ ಆಚರಿಸಲು ಸಾಧ್ಯವಿರುವಂತಹ ದಾನವನ್ನು ತಿಳಿಸು ಎಂದನು.

॥ ಶ್ರೀ ಕೃಷ್ಣ ಉವಾಚ ॥

ಸೌವರ್ಣೀಂ ವಿಧಿವತ್ಕೃತ್ವಾ ಸಾದ್ರಿದ್ರುಮವತೀಂ ಶುಭಾಂ ।
ಮಹೀಂ ಪ್ರಯಚ್ಛ ವಿಪ್ರಾಣಾಂ ತತ್ತುಲ್ಯಾ ಸಾ ನಿಗದ್ಯತೇ ॥ ೩ ॥

ಶೃಣುಷ್ವೈಕಮನಾ ಭೂತ್ವಾ ಮಹಾದಾನಂ ನರೋತ್ತಮ ।
ಸವಿಧಾನಂ ಪ್ರವಕ್ಷ್ಯಾಮಿ ಫಲಂ ಯತ್ನೇನ ಯದ್ಭವೇತ್ ॥ ೪ ॥

ಚಂದ್ರಸೂರ್ಯೋಪರಾಗೇ ಚ ಜನ್ಮರ್ಕ್ಷೇ ವಿಷುವೇ ತಥಾ ।
ಯುಗಾದಿಷು ಚ ದಾತವ್ಯಮಯನೇ ಚ ವಿಧಾನತಃ ॥ ೫ ॥

ಅನ್ಯೇಷ್ವಪಿ ಚ ಕಾಲೇಷು ಪ್ರಶಸ್ತೇ ಧನಸಂಚಯೇ ।
ಪಾಪಕ್ಷಯಾಯ ದಾತವ್ಯಂ ಯಶೋಽರ್ಥೇ ವಾ ನರೈರ್ಭುವಿ ॥ ೬ ॥

---

೩. ಓ ಯುಧಿಷ್ಠಿರ! ಬೆಟ್ಟ, ಮರ, ನದಿ ಮುಂತಾದುವುಗಳನ್ನು ಕೆತ್ತಿದ ಚಿನ್ನದ ಭೂಪ್ರತಿಮೆಯನ್ನು ಮಾಡಿಸಿ, ವಿಧಿಪ್ರಕಾರವಾಗಿ ಶುಭಕರವಾದ ಈ ಸುವರ್ಣಪ್ರತಿಮೆಯನ್ನು ಬ್ರಾಹ್ಮಣರಿಗೆ ದಾನಮಾಡು. ಇದು ಆ ಭೂದಾನಕ್ಕೆ ಸಮಾನವೆನಿಸುವುದು.

೪. ಓ ಮಾನವಶ್ರೇಷ್ಠನೇ! ಈ ಮಹಾದಾನಮಹಿಮೆಯನ್ನೂ, ಅದರ ವಿಧಿಯನ್ನೂ, ಅದರಿಂದುಂಟಾಗುವ ಫಲವನ್ನೂ ವಿಸ್ತಾರವಾಗಿ ಹೇಳುವೆನು ಸಾವಧಾನದಿಂದ ಲಾಲಿಸು.

೫–೬. ಚಂದ್ರಸೂರ್ಯ ಗ್ರಹಣಗಳು, ತನ್ನ ಜನ್ಮನಕ್ಷತ್ರದ ದಿನ, ವಿಷುವ ತ್ಪುಣ್ಯಕಾಲ, ಯುಗಪ್ರಾರಂಭ ದಿನಗಳು, ದಕ್ಷಿಣಾಯನ ಮತ್ತು ಉತ್ತರಾಯಣ ಕಾಲಗಳು, ಈ ಕಾಲದಲ್ಲಿ ವಿಧಿಪ್ರಕಾರ ಈ ಸುವರ್ಣ ಪ್ರತಿಮಾರೂಪವಾದ ಭೂದಾನವನ್ನು ಮಾಡಬೇಕು. ಪ್ರಶಸ್ತವಾದ ಬೇರೆ ಕಾಲಗಳಲ್ಲಿಯೂ ತನಗೆ ದ್ರವ್ಯಾನುಕೂಲ ಒದಗಿದಾಗಲೂ ಸಹ ತನ್ನ ಪಾಪಪರಿಹಾರಾರ್ಥವಾಗಿಯೋ ಕೀರ್ತಿಸಂಪಾದನೆಗಾಗಿಯೋ ಮಾನವನು ಚಿನ್ನದಿಂದ ಮಾಡಿಸಿದ ಭೂಮಿ ಪ್ರತಿಮೆಯನ್ನು ದಾನಮಾಡಬೇಕು.

**ಹೇಮ್ನಃ ಪಲಶತೇನೋಕ್ತಾ ತದರ್ಧೇನಾಪಿ ಶಕ್ತಿತಃ ।**
**ಕುರ್ಯಾತ್ಪಂಚಪಲಾದೂರ್ಧ್ವಮಸಮರ್ಥೋಽಪಿ ಭಕ್ತಿಮಾನ್ ॥ ೭ ॥**

**ಕಾರಯೇತ್ಪೃಥಿವೀಂ ಹೈಮೀಂ ಜಂಬುದ್ವೀಪಾನುಕಾರಿಣೀಂ ।**
**ಮರ್ಯಾದಾಪರ್ವತವತೀಂ ಮಧ್ಯೇ ಮೇರುಸಮನ್ವಿತಾಂ ॥ ೮ ॥**

**ಲೋಕಪಾಲಾಷ್ಟಕೋಪೇತಾಂ ಬ್ರಹ್ಮವಿಷ್ಣ್ವೀಶಸಂಯುತಾಂ ।**
**ನಾನಾ ಪರ್ವತಪೂರ್ಣಾಂ ಚ ರತ್ನಾಭರಣಭೂಷಿತಾಂ ॥ ೯ ॥**

**ಸರ್ವಸಸ್ಯವಿಚಿತ್ರಾಂಗೀಂ ಸರ್ವಗಂಧಾಧಿವಾಸಿತಾಂ ।**
**ಈದೃಶೀಂ ತು ಮಹೀಂ ಕೃತ್ವಾ ಕಾರಯೇನ್ಮಂಡಪಂ ತತಃ ॥ ೧೦ ॥**

**ದಶದ್ವಾದಶಹಸ್ತಂ ಚ ಚತುರ್ವಕ್ತ್ರಂ ಸತೋರಣಂ ।**
**ಮಧ್ಯೇ ಚ ವೇದಿಕಾಂ ಕುರ್ಯಾದ್ಧನುರ್ಹಸ್ತಾಂ ಪ್ರಮಾಣತಃ ॥ ೧೧ ॥**

---

೭. ಈ ಪ್ರತಿಮೆಯನ್ನು ನೂರುತೊಲ ಚಿನ್ನದಿಂದ ಮಾಡಿಸಬೇಕು. ಅಥವಾ ಐವತ್ತು ತೊಲದಲ್ಲಾದರೂ ಮಾಡಿಸಬೇಕು. ಇಷ್ಟೂ ಸಾಧ್ಯವಿಲ್ಲದವನು ಐದು ತೊಲಕ್ಕಿಂತ ಮೇಲ್ಪಟ್ಟು ತನ್ನ ಶಕ್ತ್ಯನುಸಾರವಾಗಿ ಎಷ್ಟು ತೊಲಗಳಲ್ಲಾದರೂ ಭಕ್ತಿಯಿಂದ ಮಾಡಿಸಬಹುದು.

೮-೧೦. ಜಂಬೂದ್ವೀಪವನ್ನು ಹೋಲುತ್ತಿರುವಂತೆ ಚಿನ್ನದಿಂದ ಭೂಮಿಯನ್ನು ಮಾಡಿಸಬೇಕು. ಇದರ ಎಲ್ಲೆಗಳಲ್ಲಿ ಪರ್ವತಗಳನ್ನು ರಚಿಸಬೇಕು. ಮಧ್ಯದಲ್ಲಿ ಮೇರುಪರ್ವತವನ್ನು ಕೆತ್ತಬೇಕು. ಇಂದ್ರಾದಿ ಲೋಕಪಾಲಕರನ್ನೂ ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳನ್ನೂ ಆ ಮೇರುವಿನಲ್ಲಿ ಕೆತ್ತಬೇಕು. ಆ ಪ್ರತಿಮೆ ನಾನಾಪರ್ವತಗಳಿಂದಃಪರಿಪೂರ್ಣವೂ, ರತ್ನಗಳಿಂದ ಅಲಂಕೃತವೂ ಆಗಿರಬೇಕು. ಮತ್ತು ಸಕಲ ಸಸ್ಯಗಳೆಂಬ ಚಿತ್ರವಿಚಿತ್ರವಾದ ಅವಯವಗಳಿಂದ ತೋರುತ್ತಾ ಸರ್ವಸುಗಂಧದ್ರವ್ಯಗಳಿಂದ ಸುವಾಸನೆಯಾಗಿರಬೇಕು. ಹೀಗೆ ಪ್ರತಿಮೆಯನ್ನು ಚಿನ್ನದಿಂದ ಮಾಡಿಸಿ ಅನಂತರ ಈ ಕಾರ್ಯಾಂಗವಾಗಿ ಮಂಟಪವನ್ನು ಕಟ್ಟಿಸಬೇಕು.

೧೧. ಈ ಮಂಟಪವು ಹತ್ತುಹಸ್ತ ಪ್ರಮಾಣ ಅಗಲ, ಹನ್ನೆರಡುಹಸ್ತ ಪ್ರಮಾಣ ಉದ್ದವಾಗಿರಬೇಕು. ಇದಕ್ಕೆ ನಾಲ್ಕು ಬಾಗಿಲುಗಳನ್ನೂ ತೋರಣವನ್ನೂ ನಿರ್ಮಿಸಬೇಕು. ಇದರ ಮಧ್ಯದಲ್ಲಿ ಧನುರ್ಧಾರಿಯಾದ ಮಾನವನ ಹಸ್ತಪ್ರಮಾಣವನ್ನನುಸರಿಸಿ ವೇದಿಕೆಯನ್ನು ರಚಿಸಬೇಕು.

ಐಶಾನ್ಯಾಂ ಸುರಸಂಸ್ಥಾನಂ ಆಗ್ನೇಯ್ಯಾಂ ಕುಂಡಮೇವ ಚ ।
ಪತಾಕಾಭಿರಲಂಕೃತ್ಯ ದೇವತಾಯತನಾನ್ಯಥ ॥ ೧೨ ॥

ಲೋಕಪಾಲಾ ಗ್ರಹಾಶ್ಚೈವ ಪೂಜ್ಯಾ ಮಾಲ್ಯವಿಲೇಪನೈಃ ।
ಹೋಮಂ ಕುರ್ಯುರ್ದ್ವಿಜಾಃ ಶಾನ್ತಾಶ್ಚಾತುಶ್ಚರಣಿಕಾಃ ಶುಭಾಃ ॥೧೩॥

ಸಾಲಂಕಾರಾಃ ಸವಸ್ತ್ರಾಶ್ಚ ಮಾಲ್ಯಚಂದನಭೂಷಿತಾಃ ।
ಅಗ್ನಿಸಂಸ್ಥಾಪನಂ ತತ್ರ ಕೃತ್ವಾ ಪೂರ್ವಂ ತತೋ ಮಹೀಂ ॥ ೧೪ ॥

ಆನಯೇಯುರ್ದ್ವಿಜಾ ರಾಜನ್ಬ್ರಹ್ಮಘೋಷಪುರಃಸರಂ ।
ಶಂಖತೂರ್ಯನಿನಾದೈಶ್ಚ ಗೇಯಮಂಗಲನಿಸ್ವನೈಃ ॥ ೧೫ ॥

೧೨. ಈಶಾನ್ಯದಿಕ್ಕಿನಲ್ಲಿ ದೇವತೆಗಳನ್ನು ಸ್ಥಾಪಿಸಬೇಕು. ಆಗ್ನೇಯ ದಿಕ್ಕಿನಲ್ಲಿ ಕುಂಡವನ್ನು ರಚಿಸಬೇಕು. ಅನಂತರ ದೇವತೆಗಳ ಆಲಯಗಳನ್ನೂ ಮತ್ತು ಮಂಟಪವನ್ನೂ ಧ್ವಜಗಳಿಂದಲಂಕರಿಸಬೇಕು.

೧೩. ಆ ಮೇಲೆ ಅಷ್ಟದಿಕ್ಪಾಲಕರನ್ನೂ ನವಗ್ರಹಗಳನ್ನೂ ಪುಷ್ಪಗಂಧಾದಿಗಳಿಂದ ಪೂಜಿಸಿ, ಅನಂತರ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನಧ್ಯಯನಮಾಡಿದವರೂ ನಿತ್ಯಕರ್ಮಾನುಷ್ಠಾನತತ್ಪರರೂ ಆದ ಬ್ರಾಹ್ಮಣರು ಶಾಂತವಾದ ಮನಸ್ಸಿನಿಂದ ಹೋಮವನ್ನು ಮಾಡಬೇಕು.

೧೪. ಈ ಬ್ರಾಹ್ಮಣರೆಲ್ಲರೂ ವಸ್ತ್ರ, ಮಾಲ್ಯ, ಭೂಷಣಾದಿಗಳಿಂದಲಂಕೃತರಾಗಿ ಮೊದಲು ಅಗ್ನಿಪ್ರತಿಷ್ಠೆಯನ್ನು ಮಾಡಿದ ನಂತರ ಭೂಮಿಪ್ರತಿಮೆಯನ್ನು ವೇದಿಕೆಗೆ ತರುವಂತೆ ಮಾಡಬೇಕು.

೧೫. ಎಲೈ ರಾಜನೇ! ಯಜಮಾನನು ಬ್ರಾಹ್ಮಣರನ್ನು ಬ್ರಹ್ಮಘೋಷಪುರಸ್ಸರವಾಗಿಯೂ ಶಂಖ, ತೂರ್ಯ, ಮುಂತಾದ ಮಂಗಳವಾದ್ಯಘೋಷಗಳೊಡನೆಯೂ, ಸಂಗೀತದ ಮಧುರಧ್ವನಿಗಳೊಡನೆಯೂ ಪ್ರತಿಮಾಸಮೇತ ಕರೆದುಕೊಂಡು ಬರಬೇಕು.

ತಿಲೈಃ ಪ್ರಚ್ಛಾದಿತಾಂ ವೇದಿಂ ಕೃತ್ವಾ ತತ್ರಾಧಿವಾಸಯೇತ್ ।
ಅಥಾಷ್ಟಾದಶಧಾನ್ಯಾನಿ ರಸಾಂಶ್ಚ ಲವಣಾದಿಕಾನ್ ॥ ೧೬ ॥

ತಥಾಷ್ಟೌಪೂರ್ಣಕಲಶಾನ್ಸಮಂತಾತ್ಸ್ಥಾಪಯೇಚ್ಛುಭಾನ್ ।
ವಿತಾನಕಂ ಚ ಕೌಶೇಯಂ ಫಲಾನಿ ವಿವಿಧಾನಿ ಚ ॥ ೧೭ ॥

ಅಂಶುಕಾನಿ ವಿಚಿತ್ರಾಣಿ ಶ್ರೀಖಂಡಶಕಲಾನಿ ಚ ।
ಇತ್ಯೇವಂ ರಚಯಿತ್ವಾ ತಾಮಧಿವಾಸನಪೂರ್ವಕಂ ॥ ೧೮ ॥

ತತೋ ಹೋಮಾವಸಾನೇಷು ನಿಷ್ಪನ್ನೇ ಸರ್ವಶಾಂತಿಕೇ ।
ಶುಕ್ಲಮಾಲ್ಯಾಂಬರಧರೋ ಯಜಮಾನಃ ಸ್ವಯಂ ತತಃ ॥ ೧೯ ॥

ಕೃತ್ವಾ ಪ್ರದಕ್ಷಿಣಂ ಪೃಥ್ವೀಂ ಗೃಹೀತ್ವಾ ಕುಸುಮಾಂಜಲಿಂ ।
ಪುಣ್ಯಕಾಲಮಥಾಸಾದ್ಯ ಮಂತ್ರಾನೇತಾನುದೀರಯೇತ್ ॥ ೨೦ ॥

---

೧೬. ಈ ಬ್ರಾಹ್ಮಣರು ವೇದಿಕೆಯ ಮೇಲೆ ಎಳ್ಳನ್ನು ಹರಡಿ, ಅಲ್ಲಿ ಹದಿನೆಂಟು ಬಗೆಯ ಧಾನ್ಯಗಳನ್ನೂ, ಲವಣವೇ ಮೊದಲಾದ ಆರು ರಸದ್ರವ್ಯಗಳನ್ನೂ ಇರಿಸಬೇಕು.

೧೭–೧೮. ಹಾಗೆಯೇ ಜಲಪೂರ್ಣವಾದ ಎಂಟು ಕಲಶಗಳನ್ನು ಸುತ್ತಲೂ ಸ್ಥಾಪಿಸಬೇಕು. ಮತ್ತು ರೇಷ್ಮೆಯ ವಿತಾನ (ಮೇಲ್ಕಟ್ಟು) ವನ್ನು ಕಟ್ಟಿ ಬಗೆಬಗೆಯ ಹಣ್ಣುಹಂಪಲುಗಳನ್ನೂ, ಚಿತ್ರವಿಚಿತ್ರವಾದ ಬಟ್ಟೆಗಳನ್ನೂ, ಶ್ರೀಗಂಧದ ಚಕ್ಕೆಗಳನ್ನೂ, ಸಿದ್ಧಪಡಿಸಿ ಆ ಭೂಮಿಪ್ರತಿಮೆಯನ್ನು ಅಧಿವಾಸ ಮಾಡಬೇಕು.

೧೯–೨೦. ಬಳಿಕ ಯಥೋಕ್ತವಾದ ಹೋಮಗಳೆಲ್ಲಾ ಮುಗಿದು ಸಕಲ ಶಾಂತಿಕರ್ಮಗಳೂ ಆದ ಬಳಿಕ ಯಜಮಾನನು ಬಿಳಿಯ ಬಟ್ಟೆಗಳನ್ನು ಧರಿಸಿ, ತಾನೇ ಕೈಯಲ್ಲಿ ಹೂವು ಮಂತ್ರಾಕ್ಷತೆಗಳನ್ನು ಹಿಡಿದು ಕೈಮುಗಿದುಕೊಂಡು ಭೂಮಿಪ್ರತಿಮೆಯನ್ನು ಪ್ರದಕ್ಷಿಣೆಮಾಡಿ, ಮುಂದೆ ಹೇಳುವ ಅರ್ಥವುಳ್ಳ ಮಂತ್ರಗಳನ್ನು ಹೇಳಬೇಕು.

ನಮಸ್ತೇ ಸರ್ವದೇವಾನಾಂ ತ್ವಮೇವ ಭವನಂ ಯತಃ ।
ಧಾತ್ರೀ ತ್ವಮಸಿ ಭೂತಾನಾಮತಃ ಪಾಹಿ ವಸುಂಧರೇ ॥ ೨೦ ॥

ವಸು ಧಾರಯಸೇ ಯಸ್ಮಾತ್ಸರ್ವಸೌಖ್ಯಪ್ರದಾಯಕಂ ।
ವಸುಂಧರಾ ತತೋ ಜಾತಾ ತಸ್ಮಾತ್ಪಾಹಿ ಭಯಾದಲಂ ॥ ೨೨ ॥

ಚತುರ್ಮುಖೋऽಪಿ ನೋ ಗಚ್ಛೇದ್ಯಸ್ಮಾದಂತಂ ತವಾಚಲೇ ।
ಅನಂತಾಯೈ ನಮಸ್ತುಭ್ಯಂ ಪಾಹಿ ಸಂಸಾರಕರ್ದಮಾತ್ ॥ ೨೩ ॥

ತ್ವಮೇವ ಲಕ್ಷ್ಮೀರ್ಗೋವಿಂದೇ ಶಿವೇ ಗೌರೀತಿ ಸಂಸ್ಥಿತಾ ।
ಗಾಯತ್ರೀ ಬ್ರಹ್ಮಣಃ ಪಾರ್ಶ್ವೇ ಜ್ಯೋತ್ಸ್ನಾ ಚಂದ್ರೇ ರವೌ ಪ್ರಭಾ॥೨೪॥

ಬುದ್ಧಿರ್ಬೃಹಸ್ಪತೌ ಖ್ಯಾತಾ ಮೇಧಾ ಮುನಿಷು ಸಂಸ್ಥಿತಾ ।
ವಿಶ್ವಂ ಪ್ರಾಪ್ಯ ಸ್ಥಿತಾ ಯಸ್ಮಾತ್ತತೋ ವಿಶ್ವಂಭರಾ ಮತಾ ॥ ೨೫ ॥

---

೨೧. ಸರ್ವ ದೇವತೆಗಳಿಗೂ ನೀನೇ ಆಶ್ರಯಳಾಗಿರುವೆ. ಅಲ್ಲದೆ ಸಕಲ ಭೂತಗಳಿಗೂ ರಕ್ಷಕಳಾಗಿರುವೆ. ಆದ್ದರಿಂದ ಎಲೈ ವಸುಂಧರೆಯೇ! ನಿನಗೆ ನಾನು ನಮಸ್ಕಾರಮಾಡುವೆನು ನನ್ನನ್ನು ಕಾಪಾಡು.

೨೨. ಸಕಲ ಸಂಪತ್ತನ್ನು ಉಂಟುಮಾಡುವ ವಸು (ರತ್ನ) ಗಳನ್ನು ನೀನು ಧಾರಣೆಮಾಡಿರುವುದರಿಂದ ನಿನಗೆ ವಸುಂಧರೆಯೆಂಬ ಹೆಸರು ಪ್ರಸಿದ್ಧ ವಾಗಿದೆ. ಆದ್ದರಿಂದ ಎಲೌ ತಾಯೇ! ಈ ಸಂಸಾರವೆಂಬ ದುಃಖದಿಂದ ಪಾರುಮಾಡಿ ನಮ್ಮನ್ನು ಸಲಹು.

೨೩. ನಿನ್ನ ಅಂತವನ್ನು ಕಂಡುಹಿಡಿಯಲು ನಾಲ್ಕು ಮುಖವುಳ್ಳ ಬ್ರಹ್ಮನೂ ಅಸಮರ್ಥನು. ಆದ್ದರಿಂದ ಎಲೌ ಸ್ಥಿರಳಾದ ಭೂದೇವಿಯೇ! ಕೊನೆ ಯಿಲ್ಲದ ನಿನಗೆ ನಮಸ್ಕಾರಮಾಡುವೆನು. ಈ ಸಂಸಾರವೆಂಬ ಕೆಸರಿನಿಂದ ನನ್ನನ್ನು ಉದ್ಧಾರಮಾಡಿ ರಕ್ಷಿಸು.

೨೪-೨೬. ನೀನೇ ಗೋವಿಂದನಲ್ಲಿ ಲಕ್ಷ್ಮಿಯೆಂದೂ, ಶಿವನಲ್ಲಿ ಗೌರಿ ಯೆಂದೂ, ಬ್ರಹ್ಮನ ಪಾರ್ಶ್ವದಲ್ಲಿ ಗಾಯತ್ರಿಯೆಂದೂ, ಚಂದ್ರನಲ್ಲಿ ಬೆಳದಿಂಗ ಳೆಂದೂ, ಸೂರ್ಯನಲ್ಲಿ ಪ್ರಭೆಯೆಂದೂ, ಬೃಹಸ್ಪತಿಯಲ್ಲಿ ಬುದ್ಧಿಯೆಂದೂ, ಮಹರ್ಷಿಗಳಲ್ಲಿ ಮೇಧಾ ಎಂದೂ, ಬೇರೆಬೇರೆಯ ನಾಮಾಂತರಗಳಿಂದ ಪ್ರಪಂಚ

ಧೃತಿಃ ಕ್ಷಿತಿಃ ಕ್ಷಮಾ ಕ್ಷೋಣೀ ಪೃಥಿವೀ ವಸುಧಾ ಮಹೀ ।
ಏತಾಭಿರ್ಮೂರ್ತಿಭಿಃ ಪಾಹಿ ದೇವಿ ಸಂಸಾರಸಾಗರಾತ್ ॥ ೨೬ ॥

ಏವಮುಚ್ಚಾರ್ಯ ತಾಂ ದೇವೀಂ ಬ್ರಾಹ್ಮಣೇಭ್ಯೋ ನಿವೇದಯೇತ್ ।
ಧರಾರ್ಧ್ಧಂ ವಾ ಚತುರ್ಭಾಗಂ ಗುರವೇ ಪ್ರತಿಪಾದಯೇತ್ ॥ ೨೭ ॥

ಅನೇನ ವಿಧಿನಾ ಯಸ್ತು ದದ್ಯಾದ್ದೇವೀಂ ಧರಾಂ ಬುಧಃ ।
ಪುಣ್ಯಕಾಲೇ ಚ ಸಂಪ್ರಾಪ್ತೇ ಸ ಪದಂ ಯಾತಿ ವೈಷ್ಣವಂ ॥ ೨೮ ॥

ಯದಿ ಕರ್ತುಂ ನ ಶಕ್ನೋತಿ ಪುಣ್ಯೇಽಹ್ನಿ ಬಹುವಿಸ್ತರಂ ।
ಸಂಸ್ಥಾಪ್ಯ ಶೋಭನೇ ಸ್ಥಾನೇ ಮಹೀಮೇವ ಪ್ರದಾಪಯೇತ್ ॥ ೨೯ ॥

---

ವನ್ನೆಲ್ಲಾ ವ್ಯಾಪಿಸಿರುವೆ. ಆದುದರಿಂದಲೇ ನಿನ್ನನ್ನು ವಿಶ್ವಂಭರಾ ಎಂದು ಕರೆಯುವರು. ಎಲೌ ಭೂದೇವಿಯೇ! ಧೃತಿ, ಕ್ಷಿತಿ, ಕ್ಷಮಾ, ಕ್ಷೋಣೀ, ಪೃಥಿವೀ, ವಸುಧಾ ಮತ್ತು ಮಹೀ ಎಂಬ ಮೂರ್ತಿಸ್ವರೂಪಳಾದ ನೀನು ಈ ಸಂಸಾರವೆಂಬ ಸಾಗರದಿಂದ ನನ್ನನ್ನು ಉದ್ಧಾರಮಾಡಿ ಕಾಪಾಡು.

೨೭. ಈ ಪ್ರಕಾರ ಮಂತ್ರವನ್ನುಚ್ಚರಿಸಿ ಆ ಭೂಪ್ರತಿಮೆಯನ್ನು ಬ್ರಾಹ್ಮಣರಿಗೆ ಸಮರ್ಪಿಸಬೇಕು. ತನ್ನ ಭೂಮಿಯಲ್ಲಿ ಅರ್ಧಭಾಗವನ್ನೋ ಅಥವಾ ನಾಲ್ಕನೆಯ ಒಂದುಭಾಗವನ್ನೋ ತನ್ನ ಗುರುವಿಗೆ ಕೊಡಬೇಕು.

೨೮. ಪುಣ್ಯಕಾಲಗಳೊದಗಿದ ವೇಳೆಯಲ್ಲಿ ವಿಧಿಪೂರ್ವಕವಾಗಿ ಭೂಮಿಯನ್ನು ದಾನಮಾಡುವ ಪಂಡಿತನು ವಿಷ್ಣುಲೋಕವನ್ನೈದುವನು.

೨೯. ಇಂತಹ ಪುಣ್ಯದಿನಗಳಲ್ಲಿ ಈರೀತಿ ಎಲ್ಲವನ್ನೂ ವಿಸ್ತಾರವಾಗಿ ಮಾಡಲು ಸಾಮರ್ಥ್ಯವಿಲ್ಲದಿದ್ದರೆ ಉತ್ತಮವಾದ ಸ್ಥಳದಲ್ಲಿ ಈ ಚಿನ್ನದ ಭೂಮಿಯನ್ನು ಸ್ಥಾಪಿಸಿ ಅದನ್ನೇ ಬ್ರಾಹ್ಮಣರಿಗೆ ದಾನಮಾಡಬೇಕು.

ವಿಮಾನೇನಾರ್ಕವರ್ಣೇನ ಕಿಂಕಿಣೀಜಾಲಮಾಲಿನಾ ।
ನಾರಾಯಣಪುರಂ ಗತ್ವಾ ಕಲ್ಪತ್ರಯಮಥಾವಸೇತ್ ॥ ೩೦ ॥

ಕ್ಷೀಣಪುಣ್ಯ ಇಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।
ವಿಜಯೀ ಶತ್ರುದಮನೋ ಬಹುಭೃತ್ಯಪರಿಚ್ಛದಃ ॥ ೩೧ ॥

ಶತಕೋಟ್ಯಧಿಪಃ ಶೂರಶ್ಚಕ್ರವರ್ತೀ ಮಹಾಬಲಃ ।
ಸಪ್ತಜನ್ಮಾನಿ ದಾನಸ್ಯ ಮಾಹಾತ್ಮ್ಯಾದ್ರಾಜ್ಯಮಾಪ್ನುಯಾತ್ ॥ ೩೨ ॥

ದ್ವೀಪಾವಿಕರ್ಷವಿಷಮಾಂ ವಿಧಿವದ್ವಿಧಾಯ ।
ಹೈಮೀಂ ಮಹೀಂ ಸುರಮಹೀಮಿವ ವಿಂಧ್ಯಮಧ್ಯಾಂ ।

---

೩೦. ಹೀಗೆ ಮಾಡಿದವರು ಧ್ವನಿಮಾಡುವ ಕಿರುಗಂಟೆಗಳ ಮಾಲೆಗಳಿಂದ ಅಲಂಕೃತವಾಗಿ ಸೂರ್ಯನಂತೆ ತೇಜೋಮಯವಾದ ವಿಮಾನದಲ್ಲಿ ಕುಳಿತು ವಿಷ್ಣುಲೋಕವನ್ನು ಸೇರಿ ಅಲ್ಲಿ ಮೂರು ಕಲ್ಪಗಳು ಕಳೆಯುವವರೆಗೂ ವಾಸ ಮಾಡುವನು.

೩೧–೩೨. ಆ ಪುಣ್ಯವೆಲ್ಲಾ ಕಳೆದನಂತರ ಈ ಭೂಲೋಕಕ್ಕೆ ಪುನಃ ಬಂದು ಧರ್ಮಿಷ್ಠನಾದ ರಾಜನಾಗುವನು. ಆಗ ಇವನು ಯಾವಾಗಲೂ ಜಯಶೀಲನೂ, ಶತ್ರುಗಳನ್ನು ನಿಗ್ರಹಿಸುವವನೂ, ಅನೇಕಕೋಟಿ ಭೃತ್ಯ ಸಮೂಹವುಳ್ಳವನೂ, ನೂರುಕೋಟಿ ಪ್ರಜೆಗಳಿಗೆ ಸ್ವಾಮಿಯೂ, ಶೂರನೂ, ಬಲಶಾಲಿಯೂ ಆದ ಚಕ್ರವರ್ತಿಯೆನಿಸುವನು. ಈ ಸುವರ್ಣಭೂದಾನ ಮಹಿಮೆಯಿಂದ ಮಾನವನು ಏಳುಜನ್ಮಗಳಲ್ಲಿ ರಾಜನಾಗಿ ರಾಜ್ಯಸುಖವನ್ನನು ಭವಿಸುವನು.

೩೩. ಎಲೈ ಪಾರ್ಥನೇ! ಜಂಬು ಪ್ಲಕ್ಷಾದಿ ದ್ವೀಪಗಳಿಂದ ವಿಷಮವಾಗಿರುವ ಭೂಮಿಯನ್ನು ಚಿನ್ನದಿಂದ ಸಾಕ್ಷಾದ್ದೇವಭೂಮಿಯಂತೆಯೇ ವಿಧಿಪ್ರಕಾರವಾಗಿ ಮಾಡಿಸಿ, ಅದರ ಮಧ್ಯದಲ್ಲಿ ವಿಂಧ್ಯಪರ್ವತವನ್ನು ರಚಿಸಿ ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ಅಷ್ಟದಿಕ್ಪಾಲಕರನ್ನೂ, ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಇವರುಗಳನ್ನೂ ಆ ಭೂಮಿಯಲ್ಲಿ

ಲೋಕೇಶಧಾತೃಶಿವಕೇಶವಸಂಯುತಾಂ ಚ ।
ಪ್ರಾಯಚ್ಛ ಪಾರ್ಥ ತವ ಕಿಂ ಬಹುನೋದಿತೇನ ॥ ೩೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ಪೃಥಿವೀದಾನ ವಿಧಿವರ್ಣನಂ
ನಾಮ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ.



---

ಆವಾಹಿಸಿ ನೀನು ಭಕ್ತಿಯಿಂದ ಬ್ರಾಹ್ಮಣನಿಗೆ ದಾನಮಾಡು. ನಿನಗೆ ಇದಕ್ಕಿಂತ ಹೆಚ್ಚಿಗೆ ಹೇಳಬೇಕಾದ್ದೇನೂ ಇಲ್ಲವೆಂದು ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ
ಸಂವಾದದಲ್ಲಿ ಸುವರ್ಣಪೃಥಿವೀದಾನವಿಧಿ ವರ್ಣನೆಯೆಂಬ
ನೂರರವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ದಾನಮತ್ಯದ್ಭುತಂ ತವ ।
ಯೇನ ದತ್ತೇನ ರಾಜೇಂದ್ರ ಸರ್ವದಾನಪ್ರದೋ ಭವೇತ್ || ೧ ||

ಸರ್ವಪಾಪಪ್ರಶಮನಂ ಸರ್ವಸೌಖ್ಯಪ್ರದಾಯಕಂ ।
ಪ್ರಯುಕ್ತಂ ಹಲಪಂಕ್ತ್ಯಾ ಚ ಸರ್ವದಾನಫಲಪ್ರದಂ || ೨ ||

ಪಂಕ್ತಿರ್ದಶಹಲಾ ಪ್ರೋಕ್ತಾ ಹಲಂ ಸ್ಯಾತ್ತು ಚತುರ್ಗವಂ ।
ಸಾರದಾರುಮಯಾನ್ಯಾಹುರ್ಹಲಾನಿ ದಶ ಪಂಡಿತಾಃ || ೩ ||

---

## ನೂರಅರವತ್ತಾರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ರಾಜೇಂದ್ರನೇ! ಈಗ ಅದ್ಭುತವಾದ ಒಂದು ದಾನವಿಷಯವನ್ನು ಹೇಳುವೆನು ಕೇಳು. ಈ ದಾನಮಾಡುವುದರಿಂದ ಸಕಲ ದಾನಗಳನ್ನೂ ಮಾಡಿದಂತೆಯೇ ಆಗುವುದು.

೨. ಹತ್ತು ನೇಗಿಲಿನ ಪಂಕ್ತಿಗಳಿಂದ ಯುಕ್ತವಾದ ದಾನವನ್ನು ಮಾಡಿದರೆ, ಸಕಲ ಪಾಪಗಳೂ ನಾಶವಾಗಿ ಸರ್ವದಾನಗಳನ್ನೂ ಮಾಡಿದ ಫಲವುಂಟಾಗುವುದು.

೩. ಹತ್ತು ನೇಗಿಲಿನ ಸಮೂಹಕ್ಕೆ ಪಂಕ್ತಿಯೆಂದೂ, ನಾಲ್ಕು ವೃಷಭಗಳಿಗೆ ಒಂದು ಹಲ ಅಥವಾ ನೇಗಿಲೆಂದೂ, ಪಂಡಿತರು ಹೇಳುವರು. ಈ ನೇಗಿಲುಗಳು ಗಟ್ಟಿಯಾದ ಮರದ ದಿಮ್ಮಿಗಳಿಂದ ರಚಿತವಾಗಿರಬೇಕು.

ಸೌವರ್ಣಪಟ್ಟಸನ್ನದ್ಧರತ್ನವಂತಿ ಶುಭಾನಿ ಚ ।
ಯೂನಶ್ಚ ಬಲಿನೋ ಭವ್ಯಾನ್ಸ್ವಂಗಹೀನಾನ್ಸ್ವಲಂಕೃತಾನ್ ॥ ೪ ॥

ವಸ್ತ್ರಕಾಂಚನಪುಷ್ಪೈಶ್ಚ ಚಂದನೈರ್ದಿಗ್ಧಮಸ್ತಕಾನ್ ।
ಅಭಗ್ನಾನ್ಯೋಜಯೇತ್ತೇಷು ಲಾಂಗಲೇಷು ವೃಷಾಞ್ಛುಭಾನ್ ॥ ೫ ॥

ಯೋಕ್ತ್ರಾಣಿ ಯುಗಲಗ್ನಾನಿ ಸವೃಷಾಣಿ ಚ ಕಾರಯೇತ್ ।
ಪ್ರತೋದ ಕೀಲಕಾಬಂಧ ಸರ್ವೋಪಕರಣಾನ್ವಿತಾಂ ॥ ೬ ॥

ಏವಂವಿಧಹಲೈಃ ಕುರ್ಯಾತ್ಸಂಯುಕ್ತಾಂ ಹಲಪಂಕ್ತಿಕಾಂ ।
ಕರ್ಕಟಂ ಖೇಟಕಂ ಚಾಪಿ ಗ್ರಾಮಂ ವಾ ಸಸ್ಯಮಾಲಿನಂ ॥ ೭ ॥

---

೪-೫. ವೃಷಭದ ಹಣೆಯ ಮೇಲೆ ಅಲಂಕರಿಸುವ ಚಿನ್ನದ ಪಟ್ಟಗಳನ್ನು ಮಾಡಿಸಿ ಅದಕ್ಕೆ ಶುಭಕರವಾದ ರತ್ನಗಳನ್ನು ಕೆತ್ತಿಸಬೇಕು. ಯಾವ ಅವಯವ ಗಳು ಊನವಾಗದೆ ಇರುವುದೂ, ಪ್ರಾಯಸಮರ್ಥವಾದುದೂ, ಶುಭಲಕ್ಷಣಗಳಿಂದ ಯುಕ್ತವೂ ಆದ ವೃಷಭಗಳನ್ನು ತೆಗೆದುಕೊಂಡು ಬಂದು, ಅವುಗಳಿಗೆ ವಿವಿಧವಾದ ವಸ್ತ್ರಗಳು, ಚಿನ್ನದ ಆಭರಣಗಳು ಮತ್ತು ಹೂವು ಇವುಗಳಿಂದ ಅಲಂಕರಿಸಿ ಅವುಗಳ ಹಣೆಯ ಮೇಲೆ ಚಂದನವನ್ನು ಬಳಿಯಬೇಕು. ಆ ಮೇಲೆ ಆ ವೃಷಭ ಗಳನ್ನು ಆ ನೇಗಿಲುಗಳಿಗೆ ಕಟ್ಟಬೇಕು.

೬-೭. ಉಳುವ ಹಗ್ಗವನ್ನು ನೊಗಕ್ಕೂ ಮತ್ತು ಎತ್ತುಗಳಿಗೂ ಜೋಡಿಸಿ ಎತ್ತುಗಳು ಮುಂದೆ ಹೋದರೆ ನೇಗಿಲು ಅದನ್ನನುಸರಿಸಿ ಹೋಗುವಂತೆ ಮಾಡ ಬೇಕು. ಜತೆಯಲ್ಲಿ ಪ್ರತೋದ (?) ಕೀಲಕಾಬಂಧ (ಜೊತ್ತಿಗೆ) ಮುಂತಾದ ಸಕಲ ಪರಿಕರಯುಕ್ತವಾಗಿರುವಂತೆ ಸಿದ್ಧಪಡಿಸಬೇಕು. ಹೀಗೆ ಸಿದ್ಧಪಡಿಸಿದ ನೇಗಿಲುಗಳಿಂದ ಹಿಂದೆ ಹೇಳಿದಂತೆ ನೇಗಿಲಿನ ಪಂಕ್ತಿಯನ್ನು ರಚಿಸಬೇಕು. ಮತ್ತು ಸಸ್ಯಪರಿಪೂರ್ಣವಾದ ಕರ್ಕಟ, (ಖರ್ವಡ) ಖೇಟಕ (ಖೇಟ) ಗ್ರಾಮ ಇವುಗಳಲ್ಲಿ ಒಂದನ್ನು ಆರಂಬಕ್ಕೋಸ್ಕರವೂ ಮತ್ತು ಆ ವೃಷಭಗಳ ನಿವಾಸ ಕ್ಕೋಸ್ಕರವೂ (ಕಟ್ಟಬೇಕು.)

ನಿವರ್ತನಶತಂ ವಾಪಿ ತದರ್ಧಂ ವಾ ಪ್ರಕಲ್ಪಯೇತ್ ।
ಏವಂ ವಿಧಾಃ ಪರ್ವಕಾಲೇ ದದ್ಯಾತ್ಪ್ರಯತಮಾನಸಃ ॥ ೮ ॥

ಕಾರ್ತಿಕ್ಯಾಂ ಚಾಥ ವೈಶಾಖ್ಯಾಂ ಉತ್ತರೇ ವ್ಯಾಯನೇ ತಥಾ ।
ಜನ್ಮರ್ಕ್ಷೇ ಗ್ರಹಣೇ ವಾಪಿ ವಿಷುವೇ ವಾ ಪ್ರದಾಪಯೇತ್ ॥ ೯ ॥

ಬ್ರಾಹ್ಮಣಾನ್ವೇದಸಂಪನ್ನಾನ್ವ್ಯಂಗಹೀನಾನಲಂಕೃತಾನ್ ।
ಶ್ರೋತ್ರಿಯಾಂಶ್ಚ ವಿನೀತಾಂಶ್ಚ ಹಲಸಂಖ್ಯಾನ್ನಿಮಂತ್ರಯೇತ್ ॥೧೦॥

ದಶಹಸ್ತಪ್ರಮಾಣೇನ ಮಂಡಪಂ ಕಾರಯೇದ್ಬುಧಃ ।
ಪೂರ್ವೇ ದ್ವಿಕುಂಡಮೇಕಂ ವಾ ಹಸ್ತಮಾತ್ರಂ ಸುಶೋಭನಂ ॥ ೧೧ ॥

---

೮. ಒಂದುವೇಳೆ ಗ್ರಾಮವನ್ನು ಬಿಡಲು ಸಾಧ್ಯವಿಲ್ಲದಿದ್ದರೆ ನೂರು ಅಥವಾ ಐವತ್ತು ನಿವೇಶನಗಳಷ್ಟು ಪ್ರಮಾಣವುಳ್ಳ (ಇಲ್ಲಿ ನಿವರ್ತನವೆಂದರೆ ಎಕರೆಯೋ ಅಥವಾ ಗುಂಟೆಯೋ ಎಂದರ್ಥ.) ಒಂದು ಸ್ಥಳವನ್ನಾದರೂ ಏರ್ಪಡಿಸಬೇಕು. ಹೀಗೆ ಎಲ್ಲವೂ ಸಿದ್ಧವಾದ ಮೇಲೆ ಪರ್ವಕಾಲಗಳಲ್ಲಿ ಒಳ್ಳೆಯ ಮನಸ್ಸಿನಿಂದ ಹಿಂದೆ ಹೇಳಿದ ಪರಿಕರಗಳೊಡನೆ ನೇಗಿಲಿನ ಪಂಕ್ತಿಗಳನ್ನು ದಾನ ಮಾಡಬೇಕು.

೯. ಕಾರ್ತಿಕ, ವೈಶಾಖ ಈ ತಿಂಗಳ ಪೂರ್ಣಿಮೆಗಳು, ಉತ್ತರಾಯಣ ಪುಣ್ಯಕಾಲ, ಕರ್ತನ ಜನ್ಮನಕ್ಷತ್ರದ ದಿನ, ಗ್ರಹಣಕಾಲಗಳು ಮತ್ತು ವಿಷುವತ್ಪುಣ್ಯಕಾಲ ಇಂತಹ ದಿನಗಳಲ್ಲಿ ದಾನಮಾಡಬಹುದು.

೧೦. ವೇದವೇದಾಂಗಪಾರಂಗತರೂ ಅಂಗವಿಕಲರಲ್ಲದವರೂ ಶ್ರೋತ್ರಿಯರೂ ವಿನೀತರೂ ಆದ ಬ್ರಾಹ್ಮಣರನ್ನು ಈ ದಾನಕ್ಕೆ ಬರಮಾಡಿಕೊಳ್ಳಬೇಕು. ಈ ಬ್ರಾಹ್ಮಣರ ಸಂಖ್ಯೆಯು ತಾನು ದಾನಮಾಡುವ ನೇಗಿಲಿನ ಸಂಖ್ಯೆಗೆ ಸಮನಾಗಿದ್ದು ಎಲ್ಲರೂ ಅಲಂಕಾರಸಹಿತರಾಗಿರಬೇಕು.

೧೧. ಪಂಡಿತನಾದವನು ಈ ಕಾರ್ಯಕ್ಕಾಗಿ ಹತ್ತುಹಸ್ತ ಪ್ರಮಾಣದಲ್ಲಿ ಶುಭಕರವಾದ ಒಂದು ಮಂಡಪವನ್ನು ರಚಿಸಬೇಕು. ಆ ಮಂಟಪದ ಪೂರ್ವ ದಿಕ್ಕಿನಲ್ಲಿ ಒಂದುಹಸ್ತ ಪ್ರಮಾಣದಲ್ಲಿ ಒಂದೋ ಅಥವಾ ಎರಡೋ ಸುಂದರವಾದ ಕುಂಡಗಳನ್ನು ಮಾಡಿಸಬೇಕು.

**ತತ್ರವ್ಯಾಹೃತಿಭಿರ್ಹೋಮಂ ಕುರ್ಯುಸ್ತೇ ದ್ವಿಜಸತ್ತಮಾಃ ।**
**ಪರ್ಜನ್ಯಾದಿತ್ಯರುದ್ರೇಭ್ಯಃ ಪಾಯಸೇನ ಯಜೇದ್ಬುಧಃ ॥ ೧೨ ॥**

**ಪಾಲಾಶ್ಯಃ ಸಮಿಧಸ್ತತ್ರ ಹ್ಯಾಜ್ಯಂ ಕೃಷ್ಣಾಸ್ತಿಲಾಸ್ತಥಾ ।**
**ಅಧಿವಾಸ್ಯ ಚ ತಾಂ ಪಂಕ್ತಿಂ ಧಾನ್ಯಮಧ್ಯಗತಾಂ ಶುಭಾಂ ॥ ೧೩ ॥**

**ತತಃ ಸರಃಸಮೀಪೇ ತು ಸ್ನಾತಃ ಶುಕ್ಲಾಂಬರಃ ಶುಚಿಃ ।**
**ಹಲಪಂಕ್ತಿಂ ಯೋಜಯಿತ್ವಾ ಯಜಮಾನಃ ಸಮಾಹಿತಃ ॥ ೧೪ ॥**

**ತೂರ್ಯಶಂಖನಿನಾದೈಶ್ಚ ಬ್ರಹ್ಮಘೋಷೈಃ ಸುಪುಷ್ಕಲೈಃ ।**
**ಇಮಮುಚ್ಚಾರಯೇನ್ಮಂತ್ರಂ ಗೃಹೀತಕುಸುಮಾಂಜಲಿಃ ॥ ೧೫ ॥**

**ಯಸ್ಮಾದ್ದೇವಗಣಾಃ ಸರ್ವೇ ಹಲೇ ತಿಷ್ಠಂತಿ ಸರ್ವದಾ ।**
**ವೃಷಸ್ಕಂಧೇ ಸನ್ನಿಹಿತಾಸ್ತಸ್ಮಾದ್ಭಕ್ತಿಃ ಶಿವೇಽಸ್ತು ಮೇ ॥ ೧೬ ॥**

---

೧೨. ಅನಂತರ ಆಹೂತರಾಗಿ ಬಂದಿರುವ ಆ ಬ್ರಾಹ್ಮಣೋತ್ತಮರು ಆ ಕುಂಡಗಳಲ್ಲಿ ವ್ಯಾಹೃತಿಪೂರ್ವಕವಾಗಿ ಹೋಮಮಾಡಬೇಕು. ಪಂಡಿತನಾದವನು ಪರ್ಜನ್ಯ, ಆದಿತ್ಯ ಮತ್ತು ರುದ್ರ ಈ ದೇವತೆಗಳಿಗೆ ಪಾಯಸದ ಆಹುತಿ ಕೊಡಬೇಕು.

೧೩–೧೫. ಮುತ್ತುಗದ ಸಮಿತ್ತುಗಳು, ತುಪ್ಪ, ಕರಿಎಳ್ಳು ಇವುಗಳ ಹವಿಸ್ಸಿನಿಂದ ಸಾಮಾನ್ಯವಾಗಿ ಎಲ್ಲಾ ದೇವತೆಗಳಿಗೂ ಹೋಮಮಾಡಬೇಕು. ನೆಲದ ಮೇಲೆ ಧಾನ್ಯವನ್ನು ಹಾಸಿ (ಹರಡಿ) ಅದರ ಮಧ್ಯದಲ್ಲಿ ಶುಭಕರವಾದ ಆ ನೇಗಿಲಿನ ಸಮೂಹವನ್ನು ಅಧಿವಾಸಮಾಡಿಸಬೇಕು. ಅನಂತರ ಯಜಮಾನನು ಸರಸ್ಸಿಗೆ ಹೋಗಿ ಸ್ನಾನಮಾಡಿ ಬಿಳಿಯ ಬಟ್ಟೆಗಳನ್ನುಟ್ಟು ಶುಚಿಯಾಗಿ ಒಳ್ಳೆಯ ಮನಸ್ಸಿನಿಂದ ಈ ನೇಗಿಲಿನ ಪಂಕ್ತಿಯನ್ನು ಸರಿಯಾಗಿ ಜೋಡಿಸಬೇಕು. ಹೀಗೆ ಎಲ್ಲವನ್ನೂ ಜೋಡಿಸಿದ ಮೇಲೆ ತೂರ್ಯನಾದ, ಶಂಖಧ್ವನಿ, ವೇದಘೋಷ ಇವುಗಳಾಗುತ್ತಿರಲು ತಾನು ಬೊಗಸೆಯಲ್ಲಿ ಹೂವುಗಳನ್ನು ಹಿಡಿದುಕೊಂಡು ಈ ಅರ್ಥವುಳ್ಳ ಮಂತ್ರವನ್ನು ಉಚ್ಚರಿಸಬೇಕು.

೧೬–೧೭. ದೇವಗಣವೆಲ್ಲವೂ ನೇಗಿಲಿನಲ್ಲಿಯೂ ಮತ್ತು ವೃಷಭಗಳ ಭುಜಗಳಲ್ಲಿಯೂ ಸನ್ನಿಹಿತರಾಗಿ ನೆಲಸಿರುವುದರಿಂದ ನಾನು ಈ ನೇಗಿಲು ಮತ್ತು

ಯಸ್ಮಾಚ್ಚ ಭೂಮಿದಾನಸ್ಯ ಕಲಾಂ ನಾರ್ಹಂತಿಷೋಡಶೀಂ ।
ದಾನಾನ್ಯನ್ಯಾನಿ ಮೇ ಭಕ್ತಿರ್ಧರ್ಮೇ ಚಾಸ್ತು ದೃಢಾ ಸದಾ ॥ ೧೭ ॥

ಏವಮುಕ್ತೇ ತತಃ ಪಂಕ್ತಿಂ ಪ್ರೇರಯೇಯುರ್ದ್ವಿಜೋತ್ತಮಾಃ ।
ಬೀಜಾನಿ ಸರ್ವರತ್ನಾನಿ ಸುವರ್ಣಂ ರಜತಂ ತಥಾ ॥ ೧೮ ॥

ಸ್ವಯಂ ಪಶ್ಚಾದ್ಧಲೇ ಲಗ್ನೋ ವಿಪ್ರಹಸ್ತೇಷು ನಿರ್ವಪೇತ್ ।
ಯಾಯಾನ್ನಿವರ್ತನಂ ಯಾವತ್ತತಸ್ತು ವಿರಮೇದ್ಬುಧಃ ॥ ೧೯ ॥

ಪ್ರದಕ್ಷಿಣಂ ತತಃ ಕೃತ್ವಾ ವಿಪ್ರಾಣಾಂ ಪ್ರತಿಪಾದ್ಯ ಚ ।
ಸದಕ್ಷಿಣಾಂ ವಿಧಾನೇನ ಪ್ರಣಿಪತ್ಯ ವಿಸರ್ಜಯೇತ್ ॥ ೨೦ ॥

---

ವೃಷಭಗಳು ಇವುಗಳಲ್ಲಿಟ್ಟಿರುವ ಭಕ್ತಿಯು ಪರಮೇಶ್ವರನಿಗೆ ಸಲ್ಲಲಿ. ಇತರ ಸಕಲದಾನಗಳೂ ಭೂದಾನದ ಹದಿನಾರನೆಯ ಒಂದು ಕಲೆಯನ್ನು ಸಹ ಹೋಲುವುದಿಲ್ಲವಾದ್ದರಿಂದ, ನನ್ನ ಭಕ್ತಿಯು ಇಂತಹ ಭೂದಾನರೂಪವಾದ ಧರ್ಮಕಾರ್ಯದಲ್ಲಿ ದೃಢವಾಗಿ ನೆಲಸಲಿ. (ಇದು ಮಂತ್ರಾರ್ಥ.)

೧೮-೧೯. ಕರ್ತೃವು ಹೀಗೆ ಮಂತ್ರವನ್ನುಚ್ಚರಿಸಿದನಂತರ, ಆ ಬ್ರಾಹ್ಮಣೋತ್ತಮರು ನೇಗಿಲಿನ ಎತ್ತುಗಳು ಮುಂದಕ್ಕೆ ಹೋಗುವಂತೆ ಹೊಡೆಯಬೇಕು. ಯಜಮಾನನೂ ಸಹ ನೇಗಿಲನ್ನು ಹಿಡಿದುಕೊಂಡು ಹಿಂದುಗಡೆಯಿಂದ ನಾನಾವಿಧವಾದ ಬೀಜಗಳನ್ನೂ, ಸಕಲ ರತ್ನಗಳನ್ನೂ, ಚಿನ್ನ ಮತ್ತು ಬೆಳ್ಳಿಯ ಚೂರುಗಳನ್ನೂ ಸಹ ಬೆರಸಿ ಬ್ರಾಹ್ಮಣರ ಕೈಗಳಿಂದ ಬಿತ್ತಿಸಬೇಕು. ತಾನು ಸಂಕಲ್ಪಮಾಡಿ ಎಷ್ಟುದೂರ ಭೂಮಿಯನ್ನು ಬಿಟ್ಟಿರುವನೋ ಅಲ್ಲಿಯವರೆಗೆ ಮಾತ್ರ ಹೋಗಿ ಅನಂತರ ಉಳುವುದನ್ನೂ ಮತ್ತು ಬಿತ್ತುವುದನ್ನೂ ನಿಲ್ಲಿಸಬೇಕು.

೨೦ ಯಜಮಾನನು ಅನಂತರ ಆ ಬ್ರಾಹ್ಮಣರಿಗೆ ಪ್ರದಕ್ಷಿಣೆಯನ್ನು ಮಾಡಿ ವಿಧಿಪೂರ್ವಕವಾಗಿ ದಕ್ಷಿಣೆಯನ್ನು ಕೊಟ್ಟು ನಮಸ್ಕಾರ ಮಾಡಿದನಂತರ ಅವರನ್ನು ಬೀಳ್ಕೊಡಬೇಕು.

**ಅನೇನ ವಿಧಿನಾ ಯಸ್ತು ದಾನಮೇತತ್ಪ್ರಯಚ್ಛತಿ ।**
**ಏಕವಿಂಶತ್ಕುಲೋಪೇತಃ ಸ್ವರ್ಗಲೋಕೇ ಮಹೀಯತೇ ॥ ೨೧ ॥**

**ಸಪ್ತಜನ್ಮಸು ದಾರಿದ್ರ್ಯಂ ದೌರ್ಭಾಗ್ಯಂ ವ್ಯಾಧಯಸ್ತಥಾ ।**
**ನ ಪಶ್ಯತಿ ಚ ಭೂಮೇಸ್ತು ತಥೈವಾಧಿಪತಿರ್ಭವೇತ್ ॥ ೨೨ ॥**

**ದೃಷ್ಟ್ವಾ ತದ್ದೀಯಮಾನಂ ತು ದಾನಮೇತದ್ಯುಧಿಷ್ಠಿರ ।**
**ಆಜನ್ಮನಃ ಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೨೩ ॥**

**ದಾನಮೇತತ್ಪ್ರದತ್ತಂ ಹಿ ದಿಲೀಪೇನ ಯಯಾತಿನಾ ।**
**ಶಿಬಿನಾ ನಿಮಿನಾ ಚೈವ ಭರತೇನ ಚ ಧೀಮತಾ ॥ ೨೪ ॥**

---

೨೧. ಈರೀತಿ ವಿಧಿಪೂರ್ವಕವಾಗಿ ಈ ಹಲದಾನಮಾಡುವವನು ತನ್ನ ಇಪ್ಪತ್ತೊಂದು ತಲೆಮಾರಿನವರೊಡನೆ ಸ್ವರ್ಗಲೋಕವನ್ನು ಹೊಂದಿ ಅಲ್ಲಿ ಪೂಜಿಸಲ್ಪಡುವನು.

೨೨. ಮತ್ತು ಇವನಿಗೆ ತನ್ನ ಮುಂದಿನ ಏಳುಜನ್ಮಗಳಲ್ಲಿಯೂ ಬಡತನ, ಹೀನಸ್ಥಿತಿ ಮತ್ತು ರೋಗಾದಿಗಳು ಇವು ಬರಲಾರದು. ಆ ಬಳಿಕ ಜನಿಸಿದ ಈ ಮಾನವನು ರಾಜನಾಗುವನು

೨೩. ಎಲೈ ಯುಧಿಷ್ಠಿರನೇ ! ಈರೀತಿ ದಾನಮಾಡುತ್ತಿರುವುದನ್ನು ಭಕ್ತಿಯಿಂದ ನೋಡಿದ ಮಾನವನಿಗೆ ತಾನು ಹುಟ್ಟಿದಾರಭ್ಯ ಅಲ್ಲಿಯವರೆಗೆ ಸಂಭವಿಸಿದ ಪಾಪಗಳೆಲ್ಲಾ ತಪ್ಪದೆ ನಾಶವಾಗುವುವು.

೨೪-೨೫. ದಿಲೀಪ, ಯಯಾತಿ, ಶಿಬಿ, ನಿಮಿ ಮತ್ತು ಬುದ್ಧಿಶಾಲಿಯಾದ ಭರತ ಮುಂತಾದ ರಾಜರೆಲ್ಲರೂ ಈ ಹಲದಾನ ಮಾಡಿರುವರು. ಈ ಮಹಾನುಭಾವರು ಆ ಹಲದಾನಮಹಿಮೆಯಿಂದ ಇನ್ನೂ ಸ್ವರ್ಗದಲ್ಲಿ ಸಂತೋಷವನ್ನನು

ತೇಽದ್ಯಾಪಿ ದಿವಿ ಮೋದಂತೇ ದಾನಸ್ಯಾಸ್ಯ ಪ್ರಭಾವತಃ ।
ತಸ್ಮಾತ್ಸರ್ವಪ್ರಯತ್ನೇನ ದಾನಮೇತನ್ನೃಪೋತ್ತಮ ॥ ೨೫ ॥

ದಾತವ್ಯಂ ಭಕ್ತಿಯುಕ್ತೇನ ಸ್ತ್ರಿಯಾ ವಾ ಪುರುಷೇಣ ವಾ ।
ಯದಿ ಪಂಕ್ತಿರ್ನ ವಿದ್ಯೇತ ಪಂಚ ವಾ ಚತುರೋಽಥ ವಾ ॥ ೨೬ ॥

ಏಕಮಪ್ಯುಕ್ತವಿಧಿನಾ ಹಲಂ ದೇಯಂ ವಿಚಕ್ಷಣೈಃ ॥ ೨೭ ॥

ಯೇ ಸಂತಿ ಲಾಂಗಲಮುಖೋತ್ಥ ರಜೋವಿಕಾರಾ ।
ಯಾವಂತಿ ತದ್ಗತಧುರಂಧರ ರೋಮಕಾಣಿ ॥
ತಾವಂತಿ ಶಂಕರಪುರೇ ತ್ರಿಯುಗಾನಿ ತಿಷ್ಠೇತ್ ।
ಪಂಕ್ತಿಪ್ರದಾನಮಿಹ ಯತ್ಕುರುತೇ ಮನುಷ್ಯಃ ॥ ೨೮ ॥

ಯುಕ್ತಾಂ ವೃಷೈರತಿಬಲೈರ್ಹಲಪಂಕ್ತಿಮೇತಾಂ ।
ಪುಣ್ಯೇಽಹ್ನಿ ಭಕ್ತಿಸಹಿತಾನ್ದ್ವಿಜಪುಂಗವೇಭ್ಯಃ ॥

---

ಭವಿಸುತ್ತಾರೆ ಇರುವರು. ಅಯ್ಯಾ ಯುಧಿಷ್ಠಿರ! ನೀನೂ ಈ ಹಲದಾನವನ್ನು ಅವಶ್ಯವಾಗಿ ಮಾಡು.

೨೬–೨೭. ದಾನಮಾಡಲು ಹತ್ತು ನೇಗಿಲು ಪಂಕ್ತಿಯು ದೊರೆಯದೇ ಹೋದರೆ, ಭಕ್ತಿಯಿಂದ ಐದೋ, ನಾಲ್ಕೋ ಅಥವಾ ಒಂದನ್ನಾದರೂ ವಿಧಿ ಪೂರ್ವಕವಾಗಿ ದಾನಮಾಡಬಹುದು. ಈ ಕಾರ್ಯವನ್ನು ಸ್ತ್ರೀಯಾಗಲಿ ಪುರುಷ ನಾಗಲಿ ಯಾರು ಬೇಕಾದರೂ ಮಾಡಬಹುದು.

೨೮. ನೇಗಿಲಿನ ಸಾಲಿನಲ್ಲಿ ಎದ್ದ ಧೂಳಿನ ಕಣಗಳು ಎಷ್ಟಿರುವವೋ ಮತ್ತು ಆ ನೇಗಿಲಿನ ಭಾರವನ್ನು ಧರಿಸಿರುವ ವೃಷಭಗಳ ಮೈಯ್ಯಲ್ಲಿ ಎಷ್ಟು ರೋಮಗಳಿರುವುವೋ ಅಷ್ಟು ಯುಗಗಳ ವರೆಗೂ ಈ ನೇಗಿಲಿನ ಪಂಕ್ತಿಯನ್ನು ದಾನಮಾಡಿದ ಮಾನವನು ಶಿವಲೋಕದಲ್ಲಿ ವಾಸಿಸುವನು.

೨೯. ಬಲಶಾಲಿಗಳಾದ ಎತ್ತುಗಳಿಂದ ಯುಕ್ತವಾದ ನೇಗಿಲಿನ ಪಂಕ್ತಿಯ ಸಮೇತವಾದ ಭೂಮಿಯನ್ನು ಪುಣ್ಯದಿನದಲ್ಲಿ ಬ್ರಾಹ್ಮಣೋತ್ತಮರಿಗೆ ವಿಧಿಯನ್ನ

ಯಚ್ಛಂತಿ ಯೇ ಸುಕೃತಿನೋ ವಸುಧಾಸಮೇತಾಂ ।
ತೇ ಭೂಭುಜೋ ಭುವನಮುಪೇತ್ಯ ಭವಂತಿ ಭವ್ಯಾಃ　　॥ ೨೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಹಲಪಂಕ್ತಿದಾನ ವಿಧಿವರ್ಣನಂ
ನಾಮ ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ.



---

ನುಸರಿಸಿ ಭಕ್ತಿಪೂರ್ವಕವಾಗಿ ದಾನಮಾಡುವ ಪುಣ್ಯಶಾಲಿಗಳು ಮುಂದಿನ ಜನ್ಮಗಳಲ್ಲಿ ಭೂಮಂಡಲದಲ್ಲಿ ರಾಜರಾಗಿ ಜನಿಸುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ
ಸಂವಾದದಲ್ಲಿ ಹಲಪಂಕ್ತಿ ದಾನವಿಧಿವರ್ಣನೆಯೆಂಬ
ನೂರರವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ತನ್ಮೇ ಕಥಯ ದೇವೇಶ ಯೇನ ದತ್ತೇನ ಮಾನವಃ ।
ಬಹುಪುತ್ರೋ ಬಹುಧನೋ ಬಹುಭೃತ್ಯಶ್ಚ ಜಾಯತೇ || ೧ ||

|| ಶ್ರೀಕೃಷ್ಣ ಉವಾಚ ||

ಪುರಾ ಭಾರತವಂಶೇಽಸ್ಮಿನ್ರಾಜಾಸೀದ್ಧವ್ಯವಾಹನಃ ।
ಪಿತೃಪೈತಾಮಹಂ ತೇನ ರಾಜ್ಯಂ ಪ್ರಾಪ್ತಮಕಂಟಕಂ || ೨ ||

---

### ನೂರಅರವತ್ತೇಳನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಎಲೈ ದೇವದೇವನೇ! ಅನೇಕಮಂದಿ ಪುತ್ರರೂ, ತುಂಬಾ ದ್ರವ್ಯವೂ, ಬಹಳಜನ ಸೇವಕರೂ ದೊರೆಯಬೇಕಾದರೆ ಮಾನವನು ಯಾವ ದಾನಮಾಡಬೇಕು? ಎಂಬುದನ್ನು ದಯಪಿಟ್ಟು ನನಗೆ ತಿಳಿಸು.

೨. ಶ್ರೀಕೃಷ್ಣನು ಹೇಳುತ್ತಾನೆ— ಓ ಯುಧಿಷ್ಠಿರ! ಹಿಂದೆ ಈ ಭರತ ವಂಶದಲ್ಲಿ ಹವ್ಯವಾಹನನೆಂಬ ರಾಜನಿದ್ದನು. ತನ್ನ ತಂದೆ ತಾತಂದಿರ ಕಾಲ ದಿಂದಲೂ ನಿರಾತಂಕವಾಗಿ ಪಾಲಿತವಾದ ರಾಜ್ಯಕ್ಕೆ ಆತನು ದೊರೆಯಾದನು. ಇವನು ಸರಿಯಾದ ರೀತಿಯಲ್ಲಿ ರಾಜ್ಯಭಾರಮಾಡುತ್ತಾ ಪ್ರಜಾಪರಿಪಾಲನೆ ಮಾಡುತ್ತಿದ್ದನು.

ನ ತಸ್ಯ ರಾಜ್ಯೇ ವಿಧ್ವಂಸೋ ನ ವೈರಿಜನಿತಂ ಭಯಂ |
ಶರೀರೋತ್ಥಮಹಾವ್ಯಾಧಿರ್ನಚೈವಾಂತರದಾಯಕಃ || ೩ ||

ತಸ್ಯೈವಂ ಕುರ್ವತೋ ರಾಜ್ಯಂ ಪೂರ್ವಕರ್ಮಾರ್ಜಿತಾಶುಭಾತ್ |
ನಾಸ್ತಿ ಭೃತ್ಯೋ ಭಾರಸಹಃ ಸರ್ವರಾಜ್ಯಧುರಂಧರಃ || ೪ ||

ನ ಪುತ್ರಃ ಪ್ರಿಯಕೃತ್ಕಶ್ಚಿನ್ನ ಮಂತ್ರೀ ಮಧುರಾಕ್ಷರಃ |
ನ ಮಿತ್ರಂ ಕಾರ್ಯಕರಣೇ ಸಮರ್ಥೋ ನ ಸುಹೃತ್ತಥಾ || ೫ ||

ನ ಭೋಜ್ಯಸಮಯೇ ಪ್ರಾಪ್ತೇ ಭೋಜನಂ ಸಾರ್ವಕಾಮಿಕಂ |
ನ ಪೂಗಫಲಸಂಯುಕ್ತಂ ತಾಂಬೂಲಂ ವಸನಂ ನ ಚ || ೬ ||

ನ ಧನಂ ಜನಸಂಬಂಧಕಾರಕೋ ರತ್ನಸಂಚಯಃ |
ತಸ್ಯೈವಂ ಕುರ್ವತೋ ರಾಜ್ಯಮವ್ಯಾಹತಮಚೇಷ್ಟಿತಂ || ೭ ||

ಅಥೈಕಸ್ಮಿನ್ದಿನೇ ವಿಪ್ರಃ ಪಿಪ್ಪಲಾದೋಽತಿವಿಶ್ರುತಃ |
ಆಜಗಾಮ ಮಹಾಯೋಗೀ ರಾಜ್ಞಃ ಪಾರ್ಶ್ವಂ ಮಹಾದ್ಯುತಿಃ || ೮ ||

---

೩. ಇವನ ರಾಜ್ಯದಲ್ಲಿ ಕೊಳ್ಳೆ, ಶತ್ರುಭಯ, ಶರೀರ ಸಂಬಂಧವಾದ ರೋಗಗಳು ಇತರ ವಿಧವಾದ ಉಪದ್ರವಗಳು ಯಾವುವೂ ಇರಲಿಲ್ಲ.

೪–೭. ಹೀಗೆ ಯಾವ ತೊಂದರೆಯೂ ಇಲ್ಲದೆ ಈ ರಾಜನು ರಾಜ್ಯಭಾರ ನಡೆಸುತ್ತಿದ್ದರೂ ಇವನ ಪೂರ್ವಜನ್ಮದಲ್ಲಿ ಮಾಡಿದ್ದ ಪಾಪಕರ್ಮದ ದೆಸೆಯಿಂದ, ಇವನಿಗೆ ಸರ್ವರಾಜ್ಯಕಾರ್ಯಗಳ ಭಾರವನ್ನೂ ಆಸಕ್ತಿಯಿಂದ ವಹಿಸಿ ನಿರ್ವಂಚನೆಯಾಗಿ ಕೆಲಸಮಾಡುವ ಭೃತ್ಯರೂ, ಪ್ರಿಯನಾದ ಪುತ್ರನೂ, ಮಧುರ ವಾಕ್ಯಗಳನ್ನಾಡುತ್ತಾ ಸಂತೋಷಪಡಿಸುವ ಒಬ್ಬ ಮಂತ್ರಿಯೂ, ಎಲ್ಲಾ ಕಾರ್ಯಗಳಲ್ಲೂ ನೆರವು ನೀಡುವ ಸಾಮರ್ಥ್ಯವುಳ್ಳ ಒಬ್ಬಸ್ನೇಹಿತನೂ ಇರಲಿಲ್ಲ. ಕೊನೆಗೆ ಮನಸ್ಸಿಗೆ ಆಪ್ಯಾಯನವಾಗುವ ಊಟ, ಒಳ್ಳೆಯ ತಾಂಬೂಲ, ಉತ್ತಮವಾದ ವಸ್ತ್ರಗಳು, ದ್ರವ್ಯರಾಶಿ, ಜನಗಳ ಮನಸ್ಸನ್ನು ವಿಶೇಷವಾಗಿ ವಶಮಾಡಿಕೊಳ್ಳುವ ರತ್ನ ಸಮೂಹ ಮತ್ತು ಇತರ ಶಾಂತಿಕರವಾದ ಸನ್ನಿವೇಶಗಳು ಇವು ಸಹ ಈ ರಾಜನಿಗೆ ಇರಲಿಲ್ಲ.

೮. ಹೀಗೆಯೇ ಅನೇಕ ದಿವಸಗಳು ಕಳೆದುವು. ಒಂದುದಿನ ಪಿಪ್ಪಲಾದನೆಂಬ ಅತಿ ಪ್ರಸಿದ್ಧನಾದ ಬ್ರಾಹ್ಮಣನೊಬ್ಬನು ಈ ಹವ್ಯವಾಹನನ ಸಮೀಪಕ್ಕೆ ಬಂದನು. ಆತನು ಮಹಾಯೋಗಿಯೂ ತುಂಬಾ ತೇಜಸ್ವಿಯೂ ಆಗಿದ್ದನು.

ತಮಾಗತಂ ಮುನಿಂ ದೃಷ್ಟ್ವಾ ರಾಜಪತ್ನೀ ಶುಭಾವತೀ ।
ಪಾದ್ಯಾರ್ಘ್ಯಾಸನದಾನೇನ ಸರ್ವಥಾ ತಮಪೂಜಯತ್ ॥ ೯ ॥

ತತಃ ಕಥಾಂ ತೇ ಕಸ್ಮಿಂಶ್ಚಿತ್ತಮುವಾಚ ಶುಭಾವತೀ ।
ಭಗವನ್ರಾಜ್ಯಮೇತನ್ನಃ ಸರ್ವಬಾಧಾವಿವರ್ಜಿತಂ ॥ ೧೦ ॥

ಕಸ್ಮಾನ್ನ ಭೃತ್ಯಾಃ ಪುತ್ರಾ ವಾ ಮಂತ್ರಿ ಮಿತ್ರಾದಿಕಂ ದ್ವಿಜ ।
ಭೋಗಾವಾಪ್ತಿರ್ನ ಚ ತಥಾ ಸರ್ವಲೋಕಾತಿಶಾಯಿನೀ ॥ ೧೧ ॥

॥ ಪಿಪ್ಪಲಾದ ಉವಾಚ ॥

ಯದ್ಯೇನ ಪೂರ್ವವಿಹಿತಂ ತದಸೌ ಪ್ರಾಪ್ನುತೇ ಫಲಂ ।
ಕರ್ಮಭೂಮಿರಿಯಂ ರಾಜ್ಞಿ ನಾತಃ ಶೋಚಿತುಮರ್ಹಸಿ ॥ ೧೨ ॥

---

೯. ಈ ಪಿಪ್ಪಲಾದಮುನಿಯು ಅನಿರೀಕ್ಷಿತವಾಗಿ ಬಂದದ್ದನ್ನು ನೋಡಿ, ರಾಜಪತ್ನಿಯಾದ ಶುಭಾವತೀದೇವಿಯು ಅರ್ಘ್ಯ, ಪಾದ್ಯ ಮುಂತಾದವುಗಳಿಂದ ಈ ಬ್ರಾಹ್ಮಣನನ್ನು ಪೂಜೆಮಾಡಿ ಉಪಚರಿಸಿದಳು.

೧೦-೧೧. ಸ್ವಲ್ಪಕಾಲ ಕುಶಲಪ್ರಶ್ನೆಗಳೂ, ಕಥಾಪ್ರಸಂಗವೂ ನಡೆದ ನಂತರ ಈ ಶುಭಾವತೀದೇವಿಯು ಆ ಪಿಪ್ಪಲಾದ ಮಹಾಮುನಿಯನ್ನು ಕುರಿತು ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಬ್ರಾಹ್ಮಣೋತ್ತಮನೇ! ನಮ್ಮ ರಾಜ್ಯವು ಇತರ ಬಾಧೆಗಳಿಗಾವುದಕ್ಕೂ ಯಾವ ರೀತಿಯಲ್ಲಿಯೂ ಒಳಪಟ್ಟಿಲ್ಲ. ಹೀಗಿದ್ದರೂ ಸೇವಕರು, ಮಕ್ಕಳು, ಮಂತ್ರಿ, ಸ್ನೇಹಿತರು ಮೊದಲಾದವರೂ ರಾಜ್ಯಭೋಗಕ್ಕೆ ತಕ್ಕ ಅತಿಶಯಸುಖಾನುಭವವೂ ನನಗೆ ಏಕೆ ಉಂಟಾಗಲಿಲ್ಲವೋ ತಿಳಿಯದು. ಪ್ರಭೋ! ದಯವಿಟ್ಟು ಇದಕ್ಕೆ ಕಾರಣವೇನೆಂಬುದನ್ನು ತಿಳಿಸಿ ನಮ್ಮನ್ನು ಉದ್ಧಾರಮಾಡಬೇಕೆಂದು ಪ್ರಾರ್ಥಿಸಿದಳು.

೧೨. ಪಿಪ್ಪಲಾದ ಮುನಿಯು ಹೇಳುತ್ತಾನೆ—ಎಲೌ ಶುಭಾವತೀ ದೇವಿಯೇ! ಇದು ಕರ್ಮಭೂಮಿ. ಮಾನವರು ಹಿಂದಿನ ಜನ್ಮದಲ್ಲಿ ಏನೇನು ಕರ್ಮಗಳನ್ನು ಮಾಡಿರುವರೋ ಅದಕ್ಕನುಗುಣವಾಗಿ ಶುಭಾಶುಭರೂಪವಾದ ಫಲಗಳನ್ನು ಈ ಜನ್ಮದಲ್ಲಿ ಅನುಭವಿಸಿಯೇ ತೀರಬೇಕು. ಇದಕ್ಕಾಗಿ ದುಃಖಿಸಬಾರದು.

**ನ ತತ್ಕುರ್ವಂತಿ ರಾಜಾನೋ ನ ದಾಯಾದಾ ನ ಶತ್ರವಃ |**
**ನ ಬಾಂಧವಾ ನ ಮಿತ್ರಾಣಿ ಯದ್ಯೇನ ನ ಪುರಾ ಕೃತಂ || ೧೩ ||**

**ತಸ್ಮಾದ್ಭವದ್ಭಿರ್ಯದ್ದತ್ತಂ ಪ್ರಾಪ್ತಂ ತದ್ರಾಜ್ಯಮುತ್ತಮಂ |**
**ಭೃತ್ಯಮಿತ್ರಾದಿಸಂಬಂಧೋ ನ ದತ್ತಃ ಪ್ರಾಪ್ಯತೇ ಕುತಃ || ೧೪ ||**

**|| ಶುಭಾವತ್ಯುವಾಚ ||**

**ಇದಾನೀಮೇವ ವಿಪ್ರರ್ಷೇ ಕಸ್ಮಾತ್ತನ್ನೋಪದಿಶ್ಯತೇ |**
**ಯೇನ ಮೇ ಬಹವಃ ಪುತ್ರಾಃ ಧನಂ ಭೃತ್ಯಾ ಭವಂತಿ ವೈ || ೧೫ ||**

**ಮಂತ್ರೋ ವಾ ಸಿದ್ಧಯೋಗೋ ವಾ ವ್ರತಂ ದಾನಮುಪೋಷಿತಂ |**
**ಕಥಯಸ್ವಾಮಲಮತೇ ಯೇನ ಸಂಪದ್ಯತೇ ಸುಖಂ || ೧೬ ||**

---

೧೩. ಹಿಂದಿನ ಜನ್ಮದಲ್ಲಿ ತಾನು ಮಾಡದೇ ಇದ್ದುದರ ಫಲವನ್ನು ಈ ಜನ್ಮದಲ್ಲಿ ರಾಜರು, ದಾಯಾದಿಗಳು, ಶತ್ರುಗಳು, ನೆಂಟರಿಷ್ಟರು, ಸ್ನೇಹಿತರು ಇವರಾರೂ ಒದಗಿಸಿಕೊಡಲಾರರು. ತಾನು ಮಾಡಿದ್ದರ ಫಲವನ್ನು ತಾನು ಅನುಭವಿಸಬೇಕೇ ಹೊರತು ಮತ್ತಾರೂ ಅದನ್ನು ಮಾಡಲು ಅಸಾಧ್ಯ.

೧೪. ನೀವು ಹಿಂದಿನ ಜನ್ಮದಲ್ಲಿ ಕೇವಲ ರಾಜ್ಯವನ್ನು ಮಾತ್ರ ದಾನ ಮಾಡಿದ್ದಿರಿ. ಆದ್ದರಿಂದ ನಿಮಗೆ ಈ ಜನ್ಮದಲ್ಲಿ ಉತ್ತಮವಾದ ರಾಜ್ಯವು ಮಾತ್ರ ದೊರೆತಿದೆ. ಸೇವಕರು, ಸ್ನೇಹಿತರು, ಮುಂತಾದ ಆನುಕೂಲ್ಯವನ್ನು ನೀವು ಹಿಂದೆ ಕಲ್ಪಿಸದೆಹೋದ್ದರಿಂದ ಈಗ ನಿಮಗೆ ಅವು ಲಭ್ಯವಿಲ್ಲ. ಇದಕ್ಕಾಗಿ ದುಃಖಪಟ್ಟು ಪ್ರಯೋಜನವಿಲ್ಲ ಎಂದನು.

೧೫. ಶುಭಾವತಿಯು ಪ್ರಶ್ನೆಮಾಡುತ್ತಾಳೆ—ಸ್ವಾಮಿ ಬ್ರಾಹ್ಮಣೋತ್ತಮರೇ! ಹಿಂದಿನ ಜನ್ಮದಲ್ಲಿ ನಾವು ಮಾಡದೇ ಹೋದ್ದರಿಂದ ಈಗ ನಮಗೆ ಫಲವಿಲ್ಲವೆಂದು ನೀವು ತಿಳಿಸಿದಿರಿ., ಈಗ ನಾವು ಯಾವ ದಾನಮಾಡಿದರೆ ಅನೇಕಮಂದಿ ಪುತ್ರರೂ, ಬೇಕಾದಷ್ಟು ದ್ರವ್ಯವೂ, ಬಹಳಜನ ಸೇವಕರೂ, ಮತ್ತು ಇತರ ಸಾಧನಗಳೂ ಅದನ್ನು ದಯಮಾಡಿ ತಿಳಿಸಬೇಕು.

೧೬. ಸ್ವಾಮಿಾ ಮೇಧಾವಿಗಳೇ! ಮಂತ್ರವೋ, ಸಿದ್ಧಯೋಗವೋ, ವ್ರತವೋ, ದಾನವೋ, ಉಪವಾಸವೋ ಯಾವುದರಿಂದ ನಮಗೆ ಸುಖವುಂಟಾಗುವುದೋ ಅದನ್ನು ದಯವಿಟ್ಟು ತಿಳಿಸಿದರೆ ಅದರಂತೆ ನಾವು ತಪ್ಪದೆ ನಡೆಯುವೆವು ಎಂದಳು.

**ತತಃ ಸ ಕಥಯಾಮಾಸ ಪಿಪ್ಪಲಾದೋ ದ್ವಿಜೋತ್ತಮಃ ।**
**ಅಪಾಕಾಖ್ಯಂ ಮಹಾದಾನಂ ಸರ್ವಸಂಪತ್ಪ್ರದಾಯಕಂ ॥ ೧೭ ॥**

**ಶ್ರದ್ಧಯಾ ಕುರುಶಾರ್ದೂಲ ನಾರೀ ವಾಪ್ಯಥ ವಾ ಪುಮಾನ್ ।**
**ಯೇನ ದತ್ತೇನ ಭಾಗ್ಯಾನಾಂ ಬಹೂನಾಂ ಭಾಜನಂ ಭವೇತ್ ॥ ೧೮ ॥**

**ತಚ್ಛ್ರುತ್ವಾ ಸ ದದೌ ರಾಜಾಽಽಪಾಕಾಖ್ಯಂ ದಾನಮುತ್ತಮಂ ।**
**ಲೇಭೇ ಪುತ್ರಾನ್ ಪಶೂನ್ ಭೃತ್ಯಾನ್ಮಂತ್ರಿಮಿತ್ರಸುಹೃಜ್ಜನಾನ್ ॥೧೯॥**

**॥ ಶ್ರೀಕೃಷ್ಣ ಉವಾಚ ॥**

**ಅಪಾಕಾಖ್ಯಂ ಮಹಾದಾನಂ ಕಥಯಾಮಿ ಯುಧಿಷ್ಠಿರ ।**
**ದತ್ತೇನ ಯೇನ ಕಾಮಾನಾಂ ಪುಮಾನ್ಭವತಿ ಭಾಜನಂ ॥ ೨೦ ॥**

---

೧೭. ಆಗ ಈ ಪಿಪ್ಪಲಾದಮುನಿಯು ಸಕಲ ಸಂಪತ್ತುಗಳನ್ನೂ ಉಂಟು ಮಾಡುವ ಅಪಾಕವೆಂಬ ಹೆಸರುಳ್ಳ ಮಹಾದಾನದ ವಿಧಾನವನ್ನು ಆ ರಾಜ ದಂಪತಿಗಳಿಗೆ ತಿಳಿಸಿದನು.

೧೮. ಎಲೈ ಯುಧಿಷ್ಠಿರನೇ! ನೀನೂ ಈ ಅಪಾಕದಾನವನ್ನು ಮಾಡು. ಸ್ತ್ರೀಯಾಗಲಿ, ಪುರುಷನಾಗಲಿ ಇದನ್ನು ಶ್ರದ್ಧೆಯಿಂದ ಮಾಡಿದರೆ ಸಕಲ ಸೌಭಾಗ್ಯಗಳನ್ನೂ ಪಡೆಯುವರು.

೧೯. ಮಹಾರಾಜನು ಆ ಪಿಪ್ಪಲಾದ ಮುನಿಯ ಮಾತುಗಳನ್ನು ಕೇಳಿ ಅದರಂತೆಯೇ ಅತ್ಯುತ್ತಮವಾದ ಈ ಅಪಾಕದಾನವನ್ನು ಮಾಡಿ ಅನೇಕ ಪುತ್ರರು, ಪಶುಗಳು, ಭೃತ್ಯರು, ಮಂತ್ರಿಗಳು, ಸ್ನೇಹಿತರು ಮುಂತಾದವರನ್ನು ಪಡೆದು ಸುಖವಾಗಿದ್ದನು.

೨೦. ಶ್ರೀಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರ! ಅಪಾಕ ಸಂಜ್ಞಕ ವಾದ ಮಹಾದಾನದ ವಿಧಾನವನ್ನು ತಿಳಿಸುವೆನು ಕೇಳು. ಇದನ್ನು ದಾನ ಮಾಡುವುದರಿಂದ ಮಾನವನು ತನ್ನ ಸಕಲ ಇಷ್ಟಾರ್ಥಗಳನ್ನೂ ತಪ್ಪದೇ ಪಡೆಯುವನು.

ಗ್ರಹತಾರಾಬಲಂ ಲಬ್ಧ್ವಾ ಭಾರ್ಗವಂ ಪೂಜಯೇಚ್ಛುಭಂ ।
ವಾಸೋಭಿರ್ಭೂಷಣೈಶ್ಚೈವ ಪುಷ್ಪೈರಗರುಚಂದನೈಃ　　　॥ ೨೦ ॥

ಕುರ್ಯಾತ್ತಥೈವ ಸಮ್ಮಾನಂ ಯಥಾ ತುಷ್ಟೋಽಭಿಜಾಯತೇ ।
ಕುರುಷ್ವ ತ್ವಂ ಮೇ ಭಾಂಡಾನಿ ಗುರೂಣಿ ಚ ಲಘೂನಿ ಚ　　　॥ ೨೧ ॥

ಮಣಿಕಾದೀನಿ ಶುಭ್ರಾಣಿ ಸ್ಥಾಲ್ಯಶ್ಚ ಸುಮನೋಹರಾಃ ।
ಘಟಿಕಾಃ ಕರಕಾಶ್ಚೈವ ಗಲಂತ್ಯಃ ಕುಂಡಲಾನಿ ಚ　　　॥ ೨೩ ॥

ಶರಾವಾದೀನಿ ಪಾತ್ರಾಣಿ ಭಾಂಡಮುಚ್ಚಾವಚಂ ಬಹು ।
ಸಂಪಾದಯ ಮಹಾಭಾಗ ವಿಶ್ವಕರ್ಮಾ ತ್ವಮೇವ ಹಿ　　　॥ ೨೪ ॥

ಭಾರ್ಗವೋಽಪಿ ಪ್ರಯತ್ನೇನ ನಾನಾಭಾಂಡಾನ್ವಿತಂ ಶುಭಂ ।
ಆಪಾಕಂ ಕಲ್ಪಯೇದ್ದಿವ್ಯಂ ವಿಧಿದೃಷ್ಟೇನ ಕರ್ಮಣಾ　　　॥ ೨೫ ॥

---

೨೦. ಗ್ರಹಬಲ ಮತ್ತು ಚಂದ್ರತಾರಾಬಲಯುಕ್ತವಾದ ಶುಭದಿನವನ್ನು ನೋಡಿಕೊಂಡು ಯಜಮಾನನು ಶುಭಲಕ್ಷಣವುಳ್ಳ ಒಬ್ಬ ಭಾರ್ಗವ (ಕುಂಬಾರ) ನನ್ನು ಹುಡುಕಿ, ಅವನನ್ನು ವಸ್ತ್ರ, ಆಭರಣ, ಪುಷ್ಪ, ಅಗರು, ಚಂದನ ಇವು ಗಳಿಂದ ಸನ್ಮಾನಿಸಬೇಕು.

೨೧-೨೪. ಅನಂತರ ಅವನನ್ನು ಕುರಿತು "ಎಲೈ ಮಹಾನುಭಾವನೇ! ನನಗೋಸ್ಕರ ನೀನು ಈ ಮುಂದೆ ಹೇಳುವ ಮಣಿಕ (ದೊಡ್ಡ ಮಡಿಕೆ) ಗಳು ಶುಭ್ರವಾದ ಸ್ಥಾಲಿಗಳು (ತಪ್ಪಲೆಗಳು) ಮನೋಹರವಾದ ಗಡಿಗೆಗಳು (ಕುಡಿಕೆ) ಗಲಂತೀ, ಕುಂಡಲ, ಶರಾವ ಮುಂತಾದ ಸಣ್ಣ ಮತ್ತು ದೊಡ್ಡ ಪಾತ್ರೆಗಳನ್ನು ಸಿದ್ಧಮಾಡಿಕೊಡು. ಎಲೈ ಮಹಾನುಭಾವನೇ! ನೀನೇ ಸಾಕ್ಷಾದ್ವಿಶ್ವಕರ್ಮನು" ಎಂದು ಪ್ರಾರ್ಥಿಸಬೇಕು.

೨೫. ಆ ಭಾರ್ಗವನೂ (ಕುಂಬಾರನೂ) ಸಹ ಪ್ರಯತ್ನಪೂರ್ವಕವಾಗಿ ಶುಭಕರವಾದ ನಾನಾ ಮಣ್ಣಿನ ಪಾತ್ರೆಗಳನ್ನು ರಚಿಸಿ, ಆಪಾಕಕ್ಕೆ ಸಿದ್ಧಮಾಡ ಬೇಕು. ಈ ಕೆಲಸವೆಲ್ಲವೂ ವಿಧಿಯನ್ನನುಸರಿಸಿ ನಡೆಯಬೇಕು.

ಸಹಸ್ರಮೇಕಂ ಭಾಂಡಾನಾಂ ಸ್ಥಾಪಯಿತ್ವಾ ವಿಚಕ್ಷಣಃ ।
ಸಂಧ್ಯಾಕಾಲೇ ಜ್ವಲಿತ್ವಾ ತು ದದ್ಯಾಚ್ಚಾಪಿ ಹುತಾಶನಂ ॥ ೨೬ ॥

ರಾತ್ರೌ ಜಾಗರಣಂ ಕುರ್ಯಾದ್ಗೀತಮಂಗಲನಿಸ್ಸ್ವನೈಃ ।
ತತಃ ಪ್ರಭಾತೇ ವಿಮಲೇ ಜ್ಞಾತ್ವಾ ನಿರ್ವಾಪಿತಂ ಶನೈಃ ॥ ೨೭ ॥

ರಕ್ತವಸ್ತ್ರೈಃ ಸಮಾಚ್ಛಾದ್ಯ ಪುಷ್ಪಮಾಲಾಭಿರರ್ಚಯೇತ್ ।
ಯಜಮಾನಸ್ತತಃ ಸ್ನಾತ್ವಾ ಶುಕ್ಲಾಂಬರಧರಃ ಶುಚಿಃ ॥ ೨೮ ॥

ಹೇಮರೌಪ್ಯಾಣಿ ಭಾಂಡಾನಿ ತಾಮ್ರಲೋಹಮಯಾನಿ ಚ ।
ಪರಿತಃ ಸ್ಥಾಪಯಿತ್ವಾ ಚ ಸ್ವಶಕ್ತ್ಯಾ ತಾನಿ ಷೋಡಶ ॥ ೨೯ ॥

ಪೂಜಯಿತ್ವಾ ಪ್ರಯತ್ನೇನ ಕೃತ್ವಾ ಚಾರುಪ್ರದಕ್ಷಿಣಾಂ ।
ಬ್ರಾಹ್ಮಣಾನ್ಪೂಜಯಿತ್ವಾ ಚ ಭಾರ್ಗವಂ ಪೂಜ್ಯ ಯತ್ನತಃ ॥ ೩೦ ॥

---

೨೬. ಹೀಗೆ ಈ ಭಾರ್ಗವನು ಒಂದುಸಾವಿರ ಭಾಂಡಗಳನ್ನು ಬುದ್ಧಿವಂತಿಕೆಯಿಂದ ಮಾಡಿ ಆವಿಗೆಯಲ್ಲಿರಿಸಿ, ಸಂಧ್ಯಾಕಾಲವಾಗುತ್ತಲೆ ಅದಕ್ಕೆ ಬೆಂಕಿಯನ್ನು ಹತ್ತಿಸಬೇಕು.

೨೭-೨೮. ಮಂಗಳವಾದ್ಯಗಳೊಡನೆ ಜಾಗರಣೆಮಾಡುತ್ತಾ ರಾತ್ರಿಯನ್ನೆಲ್ಲಾ ಕಳೆದು, ಚೆನ್ನಾಗಿ ಬೆಳಗಾಗುತ್ತಲೇ ಉರಿಯು ಆರುತ್ತಾ ಬಂದು ಅಗ್ನಿಯು ಶಾಂತವಾದುದನ್ನು ನೋಡಿ, ಯಜಮಾನನು ಸ್ನಾನಮಾಡಿ, ಶುಚಿಯಾಗಿ, ಶುಭ್ರವಾದ ಬಟ್ಟೆಗಳನ್ನು ಧರಿಸಿ, ಕೆಂಪುವಸ್ತ್ರಗಳನ್ನು ಆ ಭಾಂಡಗಳ ಮೇಲೆ ಹೊದ್ದಿಸಿ, ಹೂಮಾಲೆ ಮುಂತಾದ ಸಾಮಗ್ರಿಗಳಿಂದ ಪೂಜಿಸಬೇಕು.

೨೯. ಚಿನ್ನ, ಬೆಳ್ಳಿ, ತಾಮ್ರ ಅಥವಾ ಕಬ್ಬಿಣ ಈ ಲೋಹಗಳಲ್ಲಿ ತನ್ನ ಯೋಗ್ಯತಾನುಸಾರ ಪ್ರಮಾಣದಲ್ಲಿ ಹದಿನಾರು ಭಾಂಡಗಳನ್ನು ಮಾಡಿಸಿ ಆ ಮಣ್ಣಿನ ಭಾಂಡಗಳ ಸುತ್ತಲೂ ಸ್ಥಾಪಿಸಬೇಕು.

೩೦-೩೧. ಅನಂತರ ಇವುಗಳನ್ನೂ ಪೂಜಿಸಿ ಶ್ರದ್ಧೆಯಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಆಮೇಲೆ ಬ್ರಾಹ್ಮಣರನ್ನೂ, ಆ ಭಾರ್ಗವ

ನ್ಯಾಯಶ್ಚಾವಿಧವಾಸ್ತತ್ರ ಸಮಾನೀಯಂ ಪ್ರಪೂಜ್ಯ ಚ ।
ದ್ರ.ದಕ್ಷಿಣಂ ತತಃ ಕೃತ್ವಾ ಮಂತ್ರೇಣಾನೇನ ಪೂಜಯೇತ್ ॥ ೩೧ ॥

ಅಪಾಕಬ್ರಹ್ಮರೂಪೋಽಸಿ ಬಾಂಡಾನೀಮಾನಿ ಜಂತವಃ ।
ಪ್ರದಾನಾತ್ತೇ ಪ್ರಜಾಪುಷ್ಟಿಃ ಸ್ವರ್ಗಶ್ಚಾಸ್ತು ಮಮಾಕ್ಷಯಃ ॥ ೩೨ ॥

ಭಾಂಡರೂಪಾಣಿ ಯಾನ್ಯತ್ರ ಕಲ್ಪಿತಾನಿ ಮಯಾ ಕಿಲ ।
ಭೂತ್ವಾ ಸತ್ಪಾತ್ರರೂಪಾಣಿ ಉಪತಿಷ್ಠಂತು ತಾನಿ ಮೇ ॥ ೩೩ ॥

॥ ಇತಿ ದಾನಮಂತ್ರಃ ॥

ಯಾ ಚ ಯದ್ಭಾಂಡಮಾದತ್ತೇ ತಸ್ಯೈತದ್ದಾಪಯೇತತ್ತತಃ ।
ಸ್ವೇಚ್ಛಯಾ ಚೈವ ಗೃಹ್ಣಾತು ನ ನಿವಾರ್ಯಾಸ್ತು ಕಾಶ್ಚನ ॥ ೩೪ ॥

---

ನನ್ನೂ, ವಿಪ್ರಸುಮಂಗಲಿಯರನ್ನೂ ಕರೆದು ಅವರನ್ನೆಲ್ಲಾ ಶ್ರದ್ಧಾಭಕ್ತಿಯಿಂದ ಪೂಜಿಸಿ, ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಮುಂದೆ ಹೇಳುವ ಅರ್ಥವುಳ್ಳ ಮಂತ್ರವನ್ನು ಹೇಳಹೇಕು.

೩೨-೩೩. ಎಲೈ ಅಪಾಕವೇ! ನೀನು ಬ್ರಹ್ಮಸ್ವರೂಪವಾಗಿರುವೆ. ಈ ಭಾಂಡಗಳೆಲ್ಲವೂ ನಿನ್ನ ಸೃಷ್ಟಿಯ ಪ್ರಾಣಿವರ್ಗಗಳು. ಇದನ್ನು ದಾನಮಾಡುವುದ ರಿಂದ ನಿನ್ನ ಸೃಷ್ಟಿಯನ್ನೇ ಕೊಟ್ಟಂತಾಗುವುದರಿಂದ ನನಗೆ ಪ್ರಜಾಸೃಷ್ಟಿಯೂ ಸ್ವರ್ಗವೂ ಲಭಿಸಲಿ. ನಾನು ಇಲ್ಲಿ ನಿರ್ಮಿಸಿರುವ ಭಾಂಡಗಳೆಲ್ಲವೂ ಸತ್ಪಾತ್ರ ಗಳಾಗಿ ನನಗೆ ಶ್ರೇಯಸ್ಸನ್ನುಂಟುಮಾಡಲಿ. (ಇದು ಮಂತ್ರಾರ್ಥ.)

೩೪. ಅನಂತರ ಆಹೂತರಾಗಿ ಅಲ್ಲಿ ನೆರೆದಿರುವವರಲ್ಲಿ ಯಾರಿಗೆ ಯಾವ ಪಾತ್ರೆಯು ಇಷ್ಟವೋ ಅದನ್ನು ತೆಗೆದುಕೊಂಡು ಹೋಗುವಂತೆ ಹೇಳಬೇಕು. ಆಗ ಅವರನ್ನು ಯಾವ ರೀತಿಯಲ್ಲಿಯೂ ತಡೆಯಬಾರದು.

ಅನೇನ ವಿಧಿನಾ ಯಸ್ತು ದಾನಮೇತತ್ಪ್ರಯಚ್ಛತಿ ।
ವಿಶ್ವಕರ್ಮಾ ಭವೇತ್ತುಷ್ಟಸ್ತಸ್ಯ ಜನ್ಮತ್ರಯಂ ನೃಪ ॥ ೩೫ ॥

ನಾರೀ ಚ ದತ್ವಾ ಸೌಭಾಗ್ಯಮತುಲಂ ಪ್ರತಿಪದ್ಯತೇ ।
ಗೃಹಂ ಸರ್ವಗುಣೋಪೇತಂ ಭೃತ್ಯಮಿತ್ರಜನೈರ್ವೃತಂ ॥ ೩೬ ॥

ಅವಿಯೋಗಂ ಸದಾ ಭರ್ತ್ರಾ ರೂಪಂ ಚಾನುತ್ತಮಂ ಲಭೇತ್ ।
ಭೂದಾನಮೇತನ್ನಿರ್ದಿಷ್ಟಂ ಪ್ರಕಾರೇಣ ತವಾನಘ ॥ ೩೭ ॥

ನಿಷ್ಪಾದ್ಯ ಭಾಂಡನಿಚಯೋಚ್ಚತರಂ ಪ್ರಯತ್ನಾ ।
ದಾಪಾಕದಾನಮಿಹ ಯಾ ಕುರುತೇ ವರಸ್ತ್ರೀ ॥

---

೩೫. ಎಲೈ ರಾಜನೇ! ಈರೀತಿ ವಿಧಿಪೂರ್ವಕವಾಗಿ ಈ ದಾನವನ್ನು ಮಾಡಿದರೆ ವಿಶ್ವಕರ್ಮನು ಸಂತೋಷಪಟ್ಟು ಆ ಮಾನವನಿಗೆ ಮುಂದೆ ಮೂರು ಜನ್ಮಗಳಲ್ಲಿಯೂ ಒಳ್ಳೆಯದನ್ನು ಮಾಡುವನು.

೩೬-೩೭. ಸ್ತ್ರೀಯು ಇದನ್ನು ದಾನಮಾಡಿದರೆ ಸಕಲ ಸೌಭಾಗ್ಯಗಳನ್ನೂ ಪಡೆಯುವಳಲ್ಲದೆ, ಸರ್ವಾನುಕೂಲಗಳಿಂದಲೂ, ಸರ್ವ ಭೃತ್ಯಜನಗಳಿಂದಲೂ ಯುಕ್ತವಾದ ಮನೆಯನ್ನೂ, ಯಾವಾಗಲೂ ತನ್ನ ಪತಿಯೊಡನೆ ವಿಯೋಗವಾಗದಿರುವಿಕೆಯನ್ನೂ ಮತ್ತು ಅತ್ಯುತ್ತಮವಾದ ಸೌಂದರ್ಯವನ್ನೂ ಸಹ ಪಡೆಯುವಳು. ಎಲೈ ಪಾಪರಹಿತನಾದ ಯುಧಿಷ್ಠಿರನೇ! ಭೂದಾನವನ್ನೇ ಬೇರೊಂದು ವಿಧದಿಂದ ಮಾಡುವುದನ್ನು ನಾನು ಈಗ ನಿನಗೆ ಹೇಳಿರುವೆನು.

೩೮. ಉತ್ಕೃಷ್ಟವಾದ ಸಣ್ಣ ಮತ್ತು ದೊಡ್ಡ ಭಾಂಡಸಮೂಹಗಳನ್ನು ಮಾಡಿಸಿ, ಅದನ್ನು ಆವಿಗೆಯಲ್ಲಿ ಬೇಯಿಸಿ ಚೆನ್ನಾಗಿ ಬೆಂದ ಈ ಭಾಂಡಗಳನ್ನು ದಾನಮಾಡುವ ಪುಣ್ಯವತಿಯು ಮಕ್ಕಳು, ಮೊಮ್ಮಕ್ಕಳು, ಪಶುಸಮೃದ್ಧಿ ಮುಂತಾದುವುಗಳನ್ನು ಯಥೇಚ್ಛವಾಗಿ ಪಡೆದು, ಮುಂದಿನ ಜನ್ಮದಲ್ಲಿ ತನ್ನ

ಸಾ ಪುತ್ರಪೌತ್ರಪಶುವೃದ್ಧಿಸುಖಾನಿ ಭುಕ್ತ್ವಾ ।
ಪ್ರೇತ್ಯ ಸ್ವಭರ್ತೃಸಹಿತಾ ಸುಖಿನೀ ಸದಾಸ್ತೇ		॥ ೩೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಆಪಾಕದಾನ ವಿಧಿವರ್ಣನಂ
ನಾಮ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ.



---

ಪತಿಯೊಡನೆ ಯಾವಾಗಲೂ ವಿಯೋಗಹೊಂದದೆ ಸದಾ ಸುಖದಿಂದ ಕಾಲವನ್ನು ಕಳೆಯುವಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ
ಸಂವಾದದಲ್ಲಿ ಆಪಾಕದಾನವಿಧಿ ವರ್ಣನೆಯೆಂಬ
ನೂರರವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಸರ್ವಶಾಸ್ತ್ರಾರ್ಥತತ್ತ್ವಜ್ಞ ಜ್ಞಾನವಿಜ್ಞಾನಪಾರಗ ।
ಗೃಹದಾನಸ್ಯ ಮಾಹಾತ್ಮ್ಯಂ ವಿಧಿಂ ವದ ವಿದಾಂವರತ ॥ ೧ ॥

॥ ಶ್ರೀಕೃಷ್ಣ ಉವಾಚ ॥

ನ ಗಾರ್ಹಸ್ಥ್ಯಾತ್ಪರೋ ಧರ್ಮೋ ನಾಸ್ತಿ ದಾನಂ ಗೃಹಾತ್ಪರಂ ।
ನಾನೃತಾದಧಿಕಂ ಪಾಪಂ ನ ಪೂಜ್ಯೋ ಬ್ರಾಹ್ಮಣಾತ್ಪರಃ ॥ ೨ ॥

---

## ನೂರಅರವತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಸಕಲಶಾಸ್ತ್ರಗಳ ತತ್ತ್ವಜ್ಞನೂ, ಜ್ಞಾನ ವಿಜ್ಞಾನಗಳಲ್ಲಿ ಪಾರಂಗತನೂ ಆದ ಎಲೈ ಶ್ರೀಕೃಷ್ಣ ಪರಮಾತ್ಮನೇ! ಗೃಹ ದಾನದ ಮಹಿಮೆಯನ್ನೂ ಮತ್ತು ಅದರ ವಿಧಿಯನ್ನೂ ಸಹ ನನಗೆ ದಯವಿಟ್ಟು ತಿಳಿಸು ಎಂದನು.

೨. ಆಗ ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಗೃಹಸ್ಥಾಶ್ರಮಕ್ಕಿಂತ ಉತ್ಕೃಷ್ಟವಾದ ಧರ್ಮವೂ, ಗೃಹದಾನಕ್ಕಿಂತ ಮಿಗಿಲಾದ ದಾನವೂ, ಸುಳ್ಳು ಹೇಳುವುದಕ್ಕಿಂತ ಅಧಿಕವಾದ ಪಾಪವೂ ಮತ್ತು ಬ್ರಾಹ್ಮಣನಿಗಿಂತ ಪರಮಶ್ರೇಷ್ಠನಾದ ಪೂಜ್ಯನೂ ಬೇರೆ ಇಲ್ಲ ತಿಳಿಯಿತೆ!

ಧನಧಾನ್ಯಸಮಾಯುಕ್ತಂ ಕಲತ್ರಾಪತ್ಯಸಂಕುಲಂ ॥ ೩ ॥

ಗೋಗಣಾಶ್ವಗಣಾಕೀರ್ಣಂ ಗೃಹಂ ಸ್ವರ್ಗಾದ್ವಿಶಿಷ್ಯತೇ ।
ಯಥಾ ಮಾತರಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ ॥ ೪ ॥

ಏವಂ ಗೃಹಸ್ಥಮಾಶ್ರಿತ್ಯ ವರ್ತಯಂತೀತರಾಶ್ರಮಾಃ ।
ಧರ್ಮಶ್ಚಾರ್ಥಶ್ಚ ಕಾಮಶ್ಚ ಮಿತ್ರಾಣಿ ಪ್ರಥಿತಂ ಯಶಃ ॥ ೫ ॥

ಪ್ರಾಪ್ತುಕಾಮೈರ್ನರೈಃ ಪಾರ್ಥ ಸದಾ ಸೇವ್ಯೋ ಗೃಹಾಶ್ರಮಃ ।
ನ ಗೃಹೇಣ ವಿನಾ ಧರ್ಮೋ ನಾರ್ಥಕಾಮೌ ಸುಖಂ ನ ಚ ॥ ೬ ॥

ನ ಲೋಕಪಂಕ್ತಿರ್ನ ಯಶಃ ಪ್ರಾಪ್ಯತೇ ತ್ರಿದಶೈರಪಿ ।
ನತತ್ಸ್ವರ್ಗೇ ನಾಪವರ್ಗೇ ನತತ್ಕೇನೋಪಮೀಯತೇ ॥ ೭ ॥

---

೩-೪. ಸಕಲ ಧನಧಾನ್ಯಗಳು, ಹೆಂಡತಿಮಕ್ಕಳು, ಗೋಸಮೂಹ ಮತ್ತು ಕುದುರೆಯ ಸಮೂಹ ಇವುಗಳಿಂದ ಯುಕ್ತವಾಗಿ ಶೋಭಿಸುತ್ತಿರುವ ಗೃಹಸ್ಥನ ಮನೆಯು ಸ್ವರ್ಗಕ್ಕಿಂತಲೂ ಉತ್ಕೃಷ್ಟವೆನಿಸುವುದು. ಸಕಲಪ್ರಾಣಿಗಳೂ ತಮ್ಮ ತಾಯಿಯನ್ನಾಶ್ರಯಿಸಿ ಜೀವಿಸುವಂತೆ ಬ್ರಹ್ಮಚರ್ಯ, ಸಂನ್ಯಾಸ ಮತ್ತು ವಾನಪ್ರಸ್ಥ ಗಳೆಂಬ ಆಶ್ರಮಿಗಳೆಲ್ಲಾ ಈ ಗೃಹಸ್ಥಾನನ್ನಾಶ್ರಯಿಸಿ ಜೀವಿಸುವರು.

೫. ಈ ಗೃಹಸ್ಥಾಶ್ರಮಿಗಳಿಗೆ ಯಜ್ಞಯಾಗಾದ್ಯನುಷ್ಠಾನಗಳಿಂದ ಸದ್ಧರ್ಮವೂ, ಇತರ ವ್ಯವಹಾರಗಳಿಂದ ದ್ರವ್ಯಾರ್ಜನೆಯೂ, ಸ್ರಕ್ಚಂದನ ವನಿತಾದಿ ಸುಖದಿಂದ ಕಾಮವೂ, ಸ್ನೇಹಿತರೂ ಮತ್ತು ಪ್ರಸಿದ್ಧಿಯಾದ ಕೀರ್ತಿಯೂ ಸಹ ಉಂಟಾಗುವುದು.

೬-೭. ಓ ಪಾರ್ಥನೇ! ಇಷ್ಟಾರ್ಥಗಳನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳ ಮಾನವರು ಗೃಹಸ್ಥಾಶ್ರಮವನ್ನು ಆಶ್ರಯಿಸಬೇಕು. ಮನೆಯೇ ಇಲ್ಲದೆ ಇದ್ದರೆ ಧರ್ಮವಾಗಲಿ, ಅರ್ಥ ಕಾಮಗಳಾಗಲಿ, ಸುಖವಾಗಲಿ, ಪರಲೋಕ ಕೀರ್ತಿ ಮುಂತಾದವುಗಳಾಗಲಿ ದೇವತೆಗಳಿಗೆ ಸಹ ಉಂಟಾಗುವುದಿಲ್ಲ. ತನ್ನ ಸ್ವಂತ ಮನೆಯಲ್ಲಿ ಹಾಯಾಗಿ ಕಾಲು ನೀಡಿಕೊಂಡು ಮಲಗಿಕೊಳ್ಳುವವನಿಗಿರುವ ಸುಖವು ಸ್ವರ್ಗದಲ್ಲಿಯಾಗಲಿ ಅಥವಾ ಮೋಕ್ಷದಲ್ಲಿಯಾಗಲಿ ದೊರೆಯಲಾರದು. ಇದಕ್ಕೆ ಸಮಾನವಾದ ಸುಖ ಬೇರೊಂದಿದೆಯೆಂದು ಹೇಳಲು ಆಗುವುದಿಲ್ಲ.

ಪ್ರಸಾರ್ಯ ಪಾದೌ ಯದ್ರಾತ್ರೌ ಸ್ವಗೃಹೇ ಸ್ವಪತಾಂ ಸುಖಂ ।
ದಿನಾನಿ ನಾಸ್ಯ ಗಣ್ಯಂತೇ ನೈನಮಾಹುರ್ಮಹಾಶನಂ ॥ ೮ ॥

ಅಪಿ ಶಾಕಂ ಪಚಾನಸ್ಯ ಸ್ವಗೃಹೇ ಪರಮಂ ಸುಖಂ ।
ಇತಿ ಮತ್ವಾ ಮಹಾರಾಜ ಕಾರಯಿತ್ವಾ ಸುಶೋಭನಂ ॥ ೯ ॥

ಭವನಂ ಬ್ರಾಹ್ಮಣೇ ದೇಯಂ ಭವ್ಯಭೂತಿಮಭೀಪ್ಸತಾ ।
ಕಾರಯಿತ್ವಾ ದೃಢಸ್ತಂಭಂ ಶುಭಪಕ್ವೇಷ್ಟಕಾಮಯಂ ॥ ೧೦ ॥

ಶುಭಂ ಕಮಠಪೃಷ್ಠಾಭಂ ಭಾಭಾಸಿತದಿಗಂತರಂ ।
ಸುಧಾನುಲಿಪ್ತಂ ಗುಪ್ತಂ ಚ ಸುಖಶಾಲಾವಿರಾಜಿತಂ ॥ ೧೧ ॥

---

ಈ ಸ್ವಂತಮನೆಯಲ್ಲಿ ವಾಸಮಾಡುವವರು ತಾವು ಕಳೆದ ದಿನಗಳನ್ನು ಗಣಿಸುವುದಿಲ್ಲ. ಅಲ್ಲದೆ ಇವರು ಯಥೇಚ್ಛವಾಗಿ ಮೃಷ್ಟಾನ್ನವನ್ನು ಸೇವಿಸದೆ ಇದ್ದು ತನ್ನ ಮನೆಯಲ್ಲೇ ಇದ್ದು ಅಯಾಚಿತವಾಗಿ ದೊರೆತಷ್ಟನ್ನು ನಿರಾಳವಾಗಿ ಸೇವಿಸಿ ಪರಮಸುಖ ಹೊಂದುವನು.

೯-೧೦. ಮುಂದೆ ತನಗೆ ಐಶ್ವರ್ಯಾದಿ ಸುಖವನ್ನಪೇಕ್ಷಿಸುವ ಮಾನವನು ಇದನ್ನು ಚೆನ್ನಾಗಿ ತಿಳಿದು ಸುಂದರವಾಗಿಯೂ ಮನೋಹರವಾಗಿಯೂ ಇರುವ ಮನೆಯನ್ನು ಕಟ್ಟಿಸಿ ಬ್ರಾಹ್ಮಣನಿಗೆ ದಾನಮಾಡಬೇಕು. ಮನೆಯು ಗಟ್ಟಿಯಾದ ಕಂಬಗಳಿಂದ ಕೂಡಿ ಚೆನ್ನಾಗಿ ಸುಟ್ಟ ಇಟ್ಟಿಗೆಗಳಿಂದ ರಚಿತವಾಗಿರಬೇಕು.

೧೧-೧೨. ಮನೆಯು ಆಮೆಯ ಪೃಷ್ಠಪ್ರದೇಶದಂತೆ ಕಾಂತಿಯುಕ್ತವಾಗಿರಬೇಕು. ಶುಭಕರವಾದ ಈ ಮನೆಯಲ್ಲಿ ಎಲ್ಲಾ ಕಡೆಯಲ್ಲಿಯೂ ಗಾಳಿ, ಬೆಳಕು ಚೆನ್ನಾಗಿ ಬರುವಂತಿರಬೇಕು. ಮನೆಗೆಲ್ಲಾ ಚೆನ್ನಾಗಿ ಸುಣ್ಣವನ್ನು ಬಳಿಸಬೇಕು. ಈ ಮನೆಯಲ್ಲಿ ಸುಖಶಾಲೆಯು ರಹಸ್ಯ ಸ್ಥಳದಲ್ಲಿ ರಚಿಸಲ್ಪಟ್ಟಿರಬೇಕು. ಇಂತಹ ಮನೆಯನ್ನು ಕಟ್ಟಿಸಿ ಶೈವ ಅಥವಾ ವೈಷ್ಣವ ಮತದ ಯೋಗಿಗಳಿಗೆ ದಾನ ಮಾಡಿದರೆ ಇದರಿಂದ ಅಪಾರವಾದ ಫಲವುಂಟಾಗುವುದು. ಮನೆಯ ಸಮೀಪದಲ್ಲೇ ವಿಸ್ತಾರವಾಗಿಯೂ ಗಂಭೀರವಾಗಿಯೂ ಇರುವ ಜಲಭರಿತವಾದ ಒಂದು ಸರೋವರ ಅಥವಾ ಕೊಳವನ್ನು ನಿರ್ಮಿಸಬೇಕು. ದೀನರೂ, ಅನಾಥರೂ

**ದದ್ಯಾದನಂತಫಲದಂ ಶೈವವೈಷ್ಣವಯೋಗಿನಾಂ ।**
**ಪ್ರತಿಶ್ರಯೋ ತು ವಿಸ್ತೀರ್ಣೇ ಕಾರಿತೇ ಸಜಲೇ ಘನೇ ॥ ೧೨ ॥**

**ದೀನಾನಾಥಾಜಲಾರ್ಥಾಯ ಕೃತಂ ಕಿಂ ನ ಕೃತಂ ಭವೇತ್ ।**
**ಕಾರಯಿತ್ವಾ ಗೃಹಾನ್ಪಶ್ಚಾದೃತ್ವಿಗ್ರುದ್ರಾರ್ಕಸಂಖ್ಯಯಾ ॥ ೧೩ ॥**

**ಕುಡ್ಯಸ್ತಂಭಗವಾಕ್ಷಾಢ್ಯಾನ್ವಿಚಿತ್ರಾನ್ಬಹುಭೂಮಿಕಾನ್ ।**
**ಸಪ್ರಾಕಾರಪ್ರತೋಲೀಕಾನ್ಕಪಾಟಾರ್ಗಲಯಂತ್ರಿತಾನ್ ॥ ೧೪ ॥**

**ಸುಧಾಧವಲಿತಾನ್ರಮ್ಯಾನ್ವಿಸ್ತೀರ್ಣಾಂಗಣ ವಾಟಿಕಾನ್ ।**
**ಪ್ರವೇಶನಿರ್ಗಮಯುತಾನ್ಸಮಾಸನ್ನಜಲಾಶಯಾನ್ ॥ ೧೫ ॥**

**ಲೋಹೋಪಸ್ಕರಸಂಪೂರ್ಣಾಂಸ್ತಾಮ್ರೋಪಸ್ಕರಸಂಯುತಾನ್ ।**
**ಸ್ವರ್ಣೋಪಸ್ಕರಶೋಭಾಢ್ಯಾನ್ರೌಪ್ಯೋಪಸ್ಕರಸಂಕುಲಾನ್ ॥ ೧೬ ॥**

---

ನೀರು ಕುಡಿಯುವುದಕ್ಕೋಸ್ಕರ ಕಟ್ಟಿಸಿರುವ ಈ ಕೊಳವೊಂದರಿಂದಲೇ ಎಲ್ಲಾ ದಾನಗಳನ್ನು ಮಾಡಿದ ಫಲವುಂಟಾಗುವುದು.

೧೩-೧೫. ಹೀಗೆ ಕೊಳಗಳನ್ನು ನಿರ್ಮಿಸಿದ ಮೇಲೆ, ತಾನು ಆಹ್ವಾನ ಮಾಡಬೇಕೆಂದಿರುವ ಋತ್ವಿಕ್ಕುಗಳ ಸಂಖ್ಯೆಯನ್ನನುಸರಿಸಿ ಮನೆಗಳನ್ನು ಕಟ್ಟಿಸಬೇಕು. ಎಂದರೆ ರುದ್ರ (11) ಆದಿತ್ಯ (12) ಈ ಸಂಖ್ಯೆಯಂತೆಯಾದರೂ ಮನೆಗಳನ್ನು ಕಟ್ಟಿಸಬೇಕು. ಈ ಮನೆಗಳು ಸುಂದರವಾದ ಗೋಡೆಗಳು, ಕಂಬಗಳು, ಗವಾಕ್ಷಗಳು ಇವುಗಳಿಂದ ಯುಕ್ತವಾಗಿ ಅನೇಕ ಭೂಮಿಕೆಗಳಿಂದ ಕೂಡಿರಬೇಕು. ಅಲ್ಲದೆ ಪ್ರಾಕಾರ, (ಪ್ರತೋಲಿ) ಬಗಿಯಾದ ಬಾಗಿಲುಗಳು, ಅಗಣಿ ಇವುಗಳಿಂದ ಚೆನ್ನಾಗಿ ನಿಯಂತ್ರಿತವಾಗಿರಬೇಕು. ಮತ್ತು ಸಂಚಾರಕ್ಕೆ ಸುಗಮವಾಗಿರುವ ಜಲಾಶಯಗಳು ಸಮೀಪದಲ್ಲಿರಬೇಕು. ಅಲ್ಲದೆ ಸುಣ್ಣ ತೊಡೆದು ನೋಡಲು ಮನೋಹರವಾಗಿ ತೋರುವ ವಿಶಾಲವಾದ ಅಂಗಣ ಪ್ರದೇಶಗಳು ಇರಬೇಕು.

೧೬-೧೯. ಮತ್ತು ಈ ಮನೆಯಲ್ಲಿ ಕಬ್ಬಿಣದ ಸಾಮಾನುಗಳೂ ತಾಮ್ರದ ಪಾತ್ರೆಗಳೂ, ಸುವರ್ಣದ ಸಲಕರಣೆಗಳೂ, ತಾಮ್ರದ ಉಪಕರಣಗಳೂ, ಬೆಳ್ಳಿಯ ಪಾತ್ರೆ ಪದಾರ್ಥಗಳೂ, ರತ್ನದ ಆಭರಣಗಳೂ ಮತ್ತು ಕಂಚಿನ ಪಾತ್ರೆಪದಾರ್ಥ

**ರತ್ನೋಪಸ್ಕರಸಂಯುಕ್ತಾನ್ಕಾಂಸ್ಯೋಪಸ್ಕರಮಂಡಿತಾನ್ ।**
**ಆರಕೂಟತ್ರಪುಸೀಸದಾನೋಪಸ್ಕರವರ್ಜಿತಾನ್ ॥ ೧೭ ॥**

**ವಂಶೋಪಸ್ಕರಸಂಕೀರ್ಣಾನ್ಕಾಷ್ಠೋಪಸ್ಕರ ಬೃಂಹಿತಾನ್ ।**
**ಮೃನ್ಮಯೋಪಸ್ಕರಾಕೀರ್ಣಾನ್ವಸ್ತ್ರೋಪಕರಣಾನ್ವಿತಾನ್ ॥ ೧೮ ॥**

**ಧರ್ಮೋಪಸ್ಕರಸಂಭಾರಶಣವಲ್ಕಲರಾಜಿತಾನ್ ।**
**ರಾಜಿತಾಂಸ್ತೃಣಪಾಷಾಣ್ಯೈಃ ಸರ್ವೋಪಸ್ಕರಭೂಷಿತಾನ್ ॥ ೧೯ ॥**

**ಸಪ್ತಧಾತುಮಯಂ ಭಾಂಡಂ ಯುಕ್ತದ್ರತ್ನಸಮುದ್ಭವಂ ।**
**ಚರ್ಮಕಾಷ್ಠ ಮಹಾಭಾಂಡಂ ನವವಸ್ತುಮಯಂ ತಥಾ ॥ ೨೦ ॥**

**ಗೋ ಮಹಿಷ್ಯಶ್ವವೃಷಭಪ್ರೇಷ್ಯವೇಶ್ಯಾಗಣಾನ್ವಿತಾನ್ ।**
**ಕ್ಷೇತ್ರಾರಾಮಜಲಾಸನ್ನಾನ್ಕಾಮರ್ಹಾ ಹರ್ಮ್ಯವರಾ ಶುಭಾನ್ ॥೨೧॥**

---

ಗಳೂ, ತುಂಬಿರಬೇಕು. ಹಿತ್ತಾಳೆ, ತವರ ಮತ್ತು ಸೀಸ ಈ ಮೂರು ಪದಾರ್ಥಗಳೂ ದಾನಯೋಗ್ಯವಲ್ಲದ್ದರಿಂದ ಇವುಗಳನ್ನು ಇರಿಸಕೂಡದು. ಮತ್ತು ಬಿದಿರು, ಮರ ಮತ್ತು ಮಣ್ಣು ಇವುಗಳಿಂದ ಮಾಡಿರುವ ಸಣ್ಣಸಣ್ಣ ಪದಾರ್ಥಗಳೂ, ಬಟ್ಟೆಬರೆಗಳೂ, ಇತರ ಉಪಕರಣಗಳೂ, ಧರ್ಮಕಾರ್ಯಕ್ಕೋಸ್ಕರ ಉಪಯೋಗಿಸಲ್ಪಡುವ ಸಾಮಾನುಗಳೂ, ಧಾವಳಿ, ರೇಷ್ಮೆ, ನಾರುಮಡಿ ಮುಂತಾದ ವಸ್ತ್ರಗಳೂ ವಿರಾಜಿಸುತ್ತಿರಬೇಕು. ಎಲೈ ಯುಧಿಷ್ಠಿರನೇ! ಇಷ್ಟೇ ಅಲ್ಲದೆ ಕಲ್ಲುಮಡಿಕೆ, ದರ್ಭಾಸನ ಮುಂತಾದ ಪರಿಕರಗಳೂ ಈ ಮನೆಯಲ್ಲಿರಬೇಕು.

೨೦. ಓ ರಾಜೇಂದ್ರ! ಇವುಗಳಲ್ಲದೆ ಸಪ್ತಧಾತುಗಳಿಂದ ನಿರ್ಮಿತವೂ ರತ್ನಖಚಿತವೂ ಆದ ಭಾಂಡವೂ, ಚರ್ಮ ಮತ್ತು ಮರ ಇವುಗಳಿಂದ ನಿರ್ಮಿಸಿದ ಭಾಂಡವೂ, ಒಂಭತ್ತು ಪದಾರ್ಥಗಳ ಮಿಶ್ರಣದಿಂದ ಮಾಡಿದ ಭಾಂಡವೂ ಸ್ಥಾಪಿಸಲ್ಪಟ್ಟಿರಬೇಕು.

೨೧. ಹಸುಗಳು, ಎಮ್ಮೆಗಳು, ಎತ್ತುಗಳು, ಸೇವಕರು, ವಾರನಾರಿಯರು ಇವರಿಗೆಲ್ಲಾ ಆಶ್ರಯವಾಗಿರುವಂತೆ ಈ ಮನೆಯು ವಿಶಾಲವಾಗಿಯೂ ಗದ್ದೆ ತೋಟ ಕೊಳ ಇವುಗಳಿಗೆ ಸಮೀಪವಾಗಿದ್ದು ಮಹಡಿಯನ್ನುಳ್ಳದ್ದಾಗಿ ಸರ್ವಸಂಪತ್ಸಮೃದ್ಧಿಯಾಗಿಯೂ ಇರಬೇಕು.

**ಸಂಪೂರ್ಣಾನ್ ಸರ್ವಧಾನ್ಯೈಸ್ತು ಘೃತತೈಲಗುಡಾದಿಭಿಃ ।**
**ತಿಲತಂಡುಲಶಾಲೀಕ್ಷುಮುದ್ಗಗೋಧೂಮಸರ್ಷಪೈಃ ॥ ೨೨ ॥**

**ನಿಷ್ಪಾವಾಢಕ್ಯಚಣಕ ಕುಳಿತ್ಥಾಣುಮಸೂರಕೈಃ ।**
**ಕಂಗು ಮಾಷಯವಾದ್ಯಾಢ್ಯಾನ್ ಶಾಕವೃಂತಾಕಪೂರಿತಾನ್ ॥ ೨೩ ॥**

**ಲವಣಾದ್ರ್ಯಕಖರ್ಜೂರದ್ರಾಕ್ಷಾಜೀರಕಧಾನ್ಯಕೈಃ ।**
**ಹಿಂಗುಕುಂಕುಮಕರ್ಪೂರಸ್ನಾನದ್ರವ್ಯೈಃ ಸಚಂದನೈಃ ॥ ೨೪ ॥**

**ಧೂಪೋಪಸ್ಕರಪರ್ಯಸ್ತತೂಲೀಗಂಡೋಪಧಾನಕೈಃ ।**
**ಚುಲ್ಲೀಚ್ಛೇದನಮಂಥಾನಭದ್ರಾಸನಕ ಗುಚ್ಛಕೈಃ ॥ ೨೫ ॥**

**ಪಿಠರೋಲೂಖಲಸ್ಥಾಲೀಶೂರ್ಪದರ್ಪಣಪತ್ರಕೈಃ ।**
**ಮುಶಲಾಸಿಕೃಪಾಣೇಷುದಂಡಕೋದಂಡಮುದ್ಗರೈಃ ॥ ೨೬ ॥**

---

೨೨-೨೩. ಅಲ್ಲದೇ ಸಕಲಧಾನ್ಯಗಳಿಂದಲೂ, ತುಪ್ಪ, ಎಣ್ಣೆ, ಬೆಲ್ಲ ಮುಂತಾದವುಗಳಿಂದಲೂ ಈ ಮನೆಯು ಪರಿಪೂರ್ಣವಾಗಿರಬೇಕು. ಮತ್ತು ಎಳ್ಳು, ಅಕ್ಕಿ, ಭತ್ತ, ಕಬ್ಬು, ಹೆಸರು, ಗೋಧುವೆ, ಸಾಸುವೆ, ಅವರೆ, ತೊಗರಿ, ಕಡಲೆ, ಹುರುಳಿ, ಅಣುಮಸೂರಕ (ಕಿರುಗಡ್ಲೆ), ಕಂಗು (ನವಣೆ), ಉದ್ದು, ಯವ (ಪ್ರೋಟ್ಸ್) ಮುಂತಾದ ಧಾನ್ಯಗಳಿಂದ ಪರಿಪೂರ್ಣವೂ, ಸೊಪ್ಪು, ಬದನೇ ಕಾಯಿ ಮೊದಲಾದ ತರಕಾರಿಗಳಿಂದ ಯುಕ್ತವೂ ಆಗಿರಬೇಕು.

೨೪. ಉಪ್ಪು, ಹಸಿಯಶುಂಠಿ, ಖರ್ಜೂರ, ದ್ರಾಕ್ಷಿ, ಜೀರಿಗೆ ಮುಂತಾದುವುಗಳಿಂದಲೂ, ಹಿಂಗು, ಕೇಸರಿ, ಪಚ್ಚೆಕರ್ಪೂರ, ಸ್ನಾನದ್ರವ್ಯಗಳು ಮತ್ತು ಚಂದನ ಈ ಪದಾರ್ಥಗಳಿಂದಲೂ ಮನೆಯು ಶೋಭಿಸುತ್ತಿರಬೇಕು.

೨೫-೨೯. ಧೂಪದ ಕುಂಡ, ದೀಪದ ಬತ್ತಿ ಮುಂತಾದುವು. ಒಲೆ, ಸೌದೆ ಮುಂತಾದುವು, ಕತ್ತರಿಸುವ ಕೊಡಲಿ, ಮಚ್ಚು, ಇಳಿಗೇಮಣೆ ಮುಂತಾದುವು, ಕಡೆಯುವ ಮಂತು ಮುಂತಾದವು, ಭದ್ರಾಸನ ಮುಂತಾದ ಪೀಠಗಳೂ, ಗಡಿಗೆ, ಒರಳಕಲ್ಲು, ಸ್ಥಾಲೀ ಮೊರ, ಕನ್ನಡಿ, ನವಿಲುಗರಿ ಮುಂತಾದುವು, ಒನಕೆ, ಚೂರಿ. ಕತ್ತಿ, ಬಾಣ, ಭರ್ಜಿ, ಬಿಲ್ಲು, ಮುದ್ಗರ (ಆಯುಧ ವಿಶೇಷವು) ಗೃಹಾಟ, ವಾಟಕಾ, ದರ್ವೀ (ಸವುಟು), ಗುಂಡುಕಲ್ಲು, ಲೋಷ್ಟಕ, ಹಸ್ತಕ,

ಗೃಹಾಟವಾಟಿಕಾದರ್ವೀದೃಷಲ್ಲೋಷ್ಟಕಹಸ್ತಕೈಃ ।
ಚಾತ್ರಕಾಂಶುಕಲೋಹಾದಿ ದೀಪ್ತಮಂಥನಿಕಾದಿಭಿಃ ॥ ೨೭ ॥

ಕಂಡಣೀ ಪೇಷಣೀ ಚುಲ್ಲೀ ಉದಕುಂಭೀ ಪ್ರಮಾರ್ಜನೀ ।
ಮಂಜೂಷಾಕೋಷ್ಠಕಾಸಂದೀಕಂಬಲೈಸ್ತಂತುರಾಂಕವೈಃ ॥ ೨೮ ॥

ಇತ್ಯೇವಮಾದಿಭಿಃ ಪೂರ್ಣಾನ್ಗೃಹಾನ್ದದ್ಯಾದ್ದ್ವಿಜಾತಿಷು ।
ಕರ್ತುಶ್ಚಂದ್ರಬಲೋಪೇತೇ ಸ್ಥಿರನಕ್ಷತ್ರಸಂಯುತೇ ॥ ೨೯ ॥

ಶುಭೇಽಹ್ನಿ ವಿಪ್ರಕಥಿತೇ ದಾನಕಾಲಃ ಪ್ರಶಸ್ಯತೇ ।
ಏವಂ ಸಂಭೃತಸಂಭಾರೋ ಯಜಮಾನಃ ಸ್ವಯಂ ದ್ವಿಜಾನ್ ॥ ೩೦ ॥

ಕುಲಶೀಲಸಮಾಯುಕ್ತಾನ್ ಗೃಹಸಂಖ್ಯಾನ್ನಿಮಂತ್ರಯೇತ್ ।
ಅಧೀತವೇದಾನ್ ಶಾಸ್ತ್ರಜ್ಞಾನ್ ಪುರಾಣಸ್ಮೃತಿಪಾರಗಾನ್ ॥ ೩೧ ॥

---

ಚಾತ್ರಕ, (ಅಂಶುಕ) ಬಟ್ಟೆ ಮತ್ತು ಲೋಹ (ಕಬ್ಬಿಣ) ಇವೇ ಮುಂತಾದ ಮನೆಯ ಬಳಕೆಗೆ ಬೇಕಾಗುವ ಸಾಮಗ್ರಿಗಳೂ, ದೀಪ್ತ (ಪ್ರಕಾಶಮಾನ ಉರಿಯುತ್ತಿರುವ ದೀಪಗಳು), ಕಡೆಯಲು ಉಪಯೋಗವುಳ್ಳ ಕಡೆಗೋಲು ಮುಂತಾದುವುಗಳು ಮತ್ತು ಕಂಡಣೀ (ಇಳಿಗೆಮಣೆ), ಮಚ್ಚು, ಕೊಡಲಿ ಮುಂತಾದುವುಗಳು, ಪೇಷಣೀ (ಅರೆಯಲು ಉಪಯೋಗಿಸುವ ಒರಳುಕಲ್ಲು), ಅರೆಯುವಕಲ್ಲು ಮುಂತಾದುವುಗಳೂ, ಒಲೆಗಳು, ನೀರಿನಿಂದ ತುಂಬಿದ ಪಾತ್ರೆಗಳು, ಗುಡಿಸುವ ಕಸಪರಿಕೆಗಳು, ಪೆಟ್ಟಿಗೆಗಳು, ಮೊರಗಳೂ, ಬೀರುಗಳೂ ಮತ್ತು ಕಂಬಳಿ, ಹತ್ತಿಯಬಟ್ಟೆ, ಉಣ್ಣೆಯಬಟ್ಟೆ ಇವೇ ಮೊದಲಾದ ಪದಾರ್ಥಗಳಿಂದ ಪರಿಪೂರ್ಣವಾಗಿರುವ ಮನೆಗಳನ್ನು ಯಜಮಾನನು ತನಗೆ ಚಂದ್ರಬಲವಿರುವುದೂ ಸ್ಥಿರನಕ್ಷತ್ರದಿಂದ ಯುಕ್ತವಾಗಿರುವುದೂ ಆದ ಶುಭದಿವಸದಲ್ಲಿ ಬ್ರಾಹ್ಮಣರಿಗೆ ದಾನ ಮಾಡಬೇಕು.

೩೦-೩೧. ದಾನಮಾಡಲು ಸರಿಯಾದ ಕಾಲವೆಂದು ಬ್ರಾಹ್ಮಣನು ನಿಷ್ಕರ್ಷೆ ಮಾಡಿದ ಶುಭದಿವಸವೇ ಯಾವಾಗಲೂ ಪ್ರಶಸ್ತವಾದುದೆಂದು ತಿಳಿಯಬೇಕು. ಹಿಂದೆ ಹೇಳಿದಂತೆ ಸಕಲ ಸಲಕರಣೆಗಳಿಂದ ಭರಿತವಾದ ಮನೆಯನ್ನು ಸಿದ್ಧ ಮಾಡಿಕೊಂಡ ಮೇಲೆ ಯಜಮಾನನು ತಾನು ಕಟ್ಟಿಸಿರುವ ಮನೆಗಳ ಸಂಖ್ಯೆಗೆ ಸರಿಯಾಗುವಷ್ಟು ಮಂದಿ ಸದ್ಬ್ರಾಹ್ಮಣರನ್ನು ಆಹ್ವಾನಿಸಬೇಕು. ಈ ಬ್ರಾಹ್ಮ

**ಗೃಹಸ್ಥಧರ್ಮನಿರತಾಞ್ ಶಾಂತಾನ್ದಾಂತಾಞ್ ಜಿತೇಂದ್ರಿಯಾನ್ ।**
**ಅಲಂಕೃತ್ಯ ಸಪತ್ನೀಕಾನ್ವಾಸೋಭಿರಥ ಪೂಜಯೇತ್ ॥ ೩೨ ॥**

**ಸುಗಂಧಸ್ರಗ್ಧರಾನ್ಕೃತ್ವಾ ಶಾಂತಿಕರ್ಮಣಿ ಯೋಜಯೇತ್ ।**
**ಗೃಹಾಂಗಣೇ ಕಾರಯಿತ್ವಾ ಕುಂಡಮೇಕಂ ಸಮೇಖಲಂ ॥ ೩೩ ॥**

**ಗ್ರಹಯಜ್ಞಃ ಪ್ರಕರ್ತವ್ಯಸ್ತುಷ್ಟಿಪುಷ್ಟಿಕರಃ ಸದಾ ।**
**ರಕ್ಷೋಘ್ನಾನಿ ಚ ಸೂಕ್ತಾನಿ ಪಠೇಯುರ್ಬ್ರಾಹ್ಮಣಾಸ್ತತಃ ॥ ೩೪ ॥**

**ವಾಸ್ತುಪೂಜಾ ಪ್ರಕರ್ತವ್ಯಾ ದಿಕ್ಷು ಭೂತಬಲಿಃ ಕ್ಷಿಪೇತ್ ।**
**ತತಃ ಪುಣ್ಯಾಹಘೋಷೇಣ ಬ್ರಾಹ್ಮಣಾಂಸ್ತೇಷು ವೇಶ್ಮಸು ॥ ೩೫ ॥**

---

ಣರು ವೇದಶಾಸ್ತ್ರಗಳನ್ನಧ್ಯಯನಮಾಡಿ ಪುರಾಣ, ಸ್ಮೃತಿ ಇವುಗಳಲ್ಲಿ ಪಾರಂಗತರಾಗಿರಬೇಕು. ಮತ್ತು ಗೃಹಸ್ಥಧರ್ಮದಲ್ಲಿ ನಿರತರಾಗಿ ಶಾಂತಸ್ವಭಾವವುಳ್ಳವರೂ, ಅಹಂಕಾರವಿಲ್ಲದವರೂ, ಜಿತೇಂದ್ರಿಯರೂ ಸಹ ಆಗಿರಬೇಕು. ಇಂತಹ ಬ್ರಾಹ್ಮಣೋತ್ತಮರನ್ನು ಅವರ ಪತ್ನೀಸಮೇತ ಆಹ್ವಾನಿಸಿ ಅವರಿಗೆ ಉಚಿತವಾದ ವಸ್ತ್ರ ಮತ್ತು ಅಲಂಕಾರಾದಿಗಳಿಂದ ಉಪಚಾರಮಾಡಿ ಪೂಜಿಸಬೇಕು.

೩೩. ಅನಂತರ ಈ ಬ್ರಾಹ್ಮಣೋತ್ತಮರಿಗೆ ಗಂಧಪುಷ್ಪಾದಿಗಳನ್ನು ಸಮರ್ಪಿಸಿ ಇವರನ್ನು ಶಾಂತಿಕರ್ಮಗಳನ್ನು ಅನುಷ್ಠಾನಮಾಡುವಂತೆ ಪ್ರಾರ್ಥಿಸಬೇಕು. ಯಜಮಾನನು ಹೊಸಮನೆಯ ಅಂಗಳಪ್ರದೇಶದಲ್ಲಿ ಒಂದು ಕುಂಡವನ್ನು ನಿರ್ಮಿಸಿ ಅದಕ್ಕೆ ಮೇಖಲೆಯನ್ನು ರಚಿಸಬೇಕು.

೩೪. ಈ ಬ್ರಾಹ್ಮಣೋತ್ತಮರು ಆ ಕುಂಡದಲ್ಲಿ ಶಾಂತಿಕರವಾದ ಗ್ರಹಯಜ್ಞವನ್ನು ಮಾಡಬೇಕು. ಅನಂತರ ರಕ್ಷೋಘ್ನಸೂಕ್ತಗಳನ್ನು ಪಾರಾಯಣ ಮಾಡಬೇಕು.

೩೫-೩೬. ಅನಂತರ ವಾಸ್ತುಪೂಜೆಯನ್ನು ಮಾಡಿ ಎಲ್ಲಾ ದಿಕ್ಕುಗಳಲ್ಲಿಯೂ ಭೂತಗಳಿಗೆ ಬಲಿಯನ್ನು ಸಮರ್ಪಿಸಬೇಕು. ಆಮೇಲೆ ಪುಣ್ಯಾಹಮಂತ್ರಘೋಷಗಳೊಡನೆ ಸಪತ್ನೀಕರಾದ ಈ ಬ್ರಾಹ್ಮಣೋತ್ತಮರನ್ನು ಈ ಹೊಸಮನೆಗಳಿಗೆ ಪ್ರವೇಶಮಾಡಿಸಿ ಅವರವರಿಗೆ ಕೊಡಲು ಉದ್ದೇಶಮಾಡಿರುವ

ಪ್ರವೇಶಯಿತ್ವಾ ಶಯ್ಯಾಸು ಸಭಾರ್ಯಾನುಪವೇಶಯೇತ್ ।
ಯಜಮಾನಸ್ತತಃ ಪ್ರಾಜ್ಞಃ ಶುಕ್ಲಾಂಬರಧರಃ ಶುಚಿಃ ॥ ೩೬ ॥

ಯದ್ಯಸ್ಯ ವಿಹಿತಂ ಪೂರ್ವಂ ತತ್ತಸ್ಯ ಪ್ರತಿಪಾದಯೇತ್ ।
ಇದಂ ಗೃಹಂ ಗೃಹಾಣ ತ್ವಂ ಸರ್ವೋಪಸ್ಕರಸಂಯುತಂ ॥ ೩೭ ॥

ತವ ವಿಪ್ರ ಪ್ರಸಾದೇನ ಮಮಾಸ್ತ್ವಭಿಮತಂ ಫಲಂ ।
ಏವಮೇಕೈಕಶೋ ದತ್ವಾ ಪ್ರಣಿಪತ್ಯ ಕ್ಷಮಾಪಯೇತ್ ॥ ೩೮ ॥

ಸ್ವಸ್ತೀತಿ ಬ್ರಾಹ್ಮಣೈರ್ವಾಚ್ಯಂ ಕೋದಾದಿತಿ ಚ ಪೂಜಿತೈಃ ।
ಗೃಹೋಪಕರಣೈಸ್ತುಲ್ಯಾ ದಕ್ಷಿಣಾ ಭವನಂ ವಿನಾ ॥ ೩೯ ॥

ಉಪದೇಷ್ಟಾರಮಾಪೃಚ್ಛೇತ್ತನ್ಮೂಲತ್ವಾನ್ಮಹರ್ಷಯಃ ।
ಸ್ವಯಂ ತಾನ್ಪೂಜಯಿತ್ವಾ ತು ತತಃ ಸ್ವಭವನಂ ವ್ರಜೇತ್ ॥ ೪೦ ॥

---

ಮನೆಗಳಲ್ಲಿ ಅವರ ಪತ್ನಿಯರೊಡನೆ ಹಾಸಿಗೆಯ ಮೇಲೆ ಕೂರಿಸಬೇಕು. ಅನಂತರ ಬುದ್ಧಿವಂತನಾದ ಯಜಮಾನನು ಬಿಳಿಯ ಬಟ್ಟೆಗಳನ್ನು ಧರಿಸಿ ಶುಚಿಯಾಗಿ " ಎಲೈ ಬ್ರಾಹ್ಮಣೋತ್ತಮನೇ ! ಸಕಲ ಸಲಕರಣೆಗಳಿಂದಲೂ ಸಮೇತವಾಗಿರುವ ಈ ಮನೆಯನ್ನು ನೀನು ಸ್ವೀಕರಿಸಿ ನನ್ನನ್ನನುಗ್ರಹಿಸು. ಇದರಿಂದ ನನಗೆ ಅಭೀಷ್ಟವಾದ ಫಲವು ದೊರೆಯಲಿ" ಎಂದು ಪ್ರತ್ಯೇಕವಾಗಿ ಒಬ್ಬೊಬ್ಬ ಬ್ರಾಹ್ಮಣರಿಗೂ ಹೇಳಿ, ಅವರವರಿಗೆ ನಿಯಮಿತವಾಗಿದ್ದ ಮನೆಯನ್ನು ಅವರಿಗೆ ಧಾರೆ ಎರೆದು ದಾನಮಾಡಿ ಅವರನ್ನು ಕ್ಷಮಾಪಣೆ ಬೇಡಬೇಕು.

೩೯-೪೦. ದಾನವನ್ನು ಸ್ವೀಕರಿಸುವಾಗ ಬ್ರಾಹ್ಮಣರು ' ಸ್ವಸ್ತಿರ್ಭವತು ತೇ ' ಎಂಬುದನ್ನೂ ದಾನಮಾಡುವ ಯಜಮಾನನು ' ಕೋऽದಾತ್ ' ಎಂಬ ಮಂತ್ರವನ್ನೂ ಸಹ ಹೇಳಬೇಕು. ಮನೆಯಲ್ಲದೆ ತಾನು ಸಿದ್ಧಮಾಡಿರುವ ಉಪಕರಣಗಳಿಗೆ ಅನುರೂಪವಾದ ದಕ್ಷಿಣೆಯನ್ನು ಬ್ರಾಹ್ಮಣರಿಗೆ ಸಮರ್ಪಿಸಬೇಕು. ತನಗೆ ಉಪವೇಶಮಾಡಿದ ಗುರುವಿನ (ಆಚಾರ್ಯನ) ಗೌರವವನ್ನರಿತು ತದನುಗುಣವಾಗಿ ದಕ್ಷಿಣಾದಿಗಳನ್ನು ದಾನಮಾಡಬೇಕು. ಸಕಲ ಮಹರ್ಷಿಗಳೂ ಸಹ ತಮ್ಮ ತಮ್ಮ ಉಪದೇಶಕರಾದ ಗುರುಗಳ ವಚನದಂತೆಯೇ ನಡೆಯುವರು. ಅನಂತರ ಯಜಮಾನನು ಆಚಾರ್ಯರನ್ನೂ, ಮಹರ್ಷಿಗಳನ್ನೂ ಮತ್ತು ಬ್ರಾಹ್ಮಣರನ್ನೂ ಸಹ ಪೂಜೆಮಾಡಿ ಆಮೇಲೆ ತನ್ನ ಮನೆಗೆ ಹಿಂದಿರುಗಬೇಕು

ದದ್ಯಾದನೇನ ವಿಧಿನಾ ಗೃಹಮೇಕಂ ಬಹೂನಪಿ ।
ನ ಸಂಖ್ಯಾನಿಯಮಃ ಕಾರ್ಯಃ ಶಕ್ತಿರತ್ರ ನಿಯಾಮಿಕಾ ॥ ೪೧ ॥

ಶೀತವಾತಾತಪಹರಂ ದತ್ವಾ ತೃಣಕುಟೀರಕಂ ।
ಇಷ್ಟಾನ್ಕಾಮಾನವಾಪ್ನೋತಿ ಪ್ರೇತ್ಯ ಸ್ವರ್ಗೇ ಮಹೀಯತೇ ॥ ೪೨ ॥

ಕಿಂಪುನರ್ಬಹುನೋಕ್ತೇನ ಸರ್ವೋಪಸ್ಕರಭೂಷಿತಾಂ ।
ಅತ್ಯಂತ ಸುಖಲಬ್ಧೇನ ದತ್ವಾ ಬ್ರಹ್ಮಪುರೀಂ ಪ್ರಿಯಾಂ ॥ ೪೩ ॥

ಗೋಭೂಹಿರಣ್ಯದಾನಾನಿ ಯಮಾಃ ಸನಿಯಮಾಸ್ತಥಾ ।
ಗೃಹದಾನಸ್ಯ ಕೌಂತೇಯ ಕಲಾಂ ನಾರ್ಹಂತಿ ಷೋಡಶೀಂ ॥ ೪೪ ॥

---

೪೧. ಈ ವಿಧಿಯಂತೆ ಯಜಮಾನನು ಒಂದು ಅಥವಾ ಅನೇಕ ಮನೆಗಳನ್ನು ದಾನಮಾಡಬಹುದು. ಈ ವಿಷಯದಲ್ಲಿ ದಾನಮಾಡುವವನ ಶಕ್ತಿಯು ಮುಖ್ಯವೇ ಹೊರತು ಇಷ್ಟೇ ಮಾಡಬೇಕೆಂಬ ನಿಯಮವೇನೂ ಇಲ್ಲ.

೪೨-೪೩. ಶೀತ, ವಾತ ಮುಂತಾದವುಗಳನ್ನು ಹೋಗಲಾಡಿಸಿ ಸಾಮಾನ್ಯವಾಗಿ ವಾಸಮಾಡಲು ಅನುಕೂಲವಾಗಿರುವಂತೆ ನಿರ್ಮಿಸಿರುವ ಹುಲ್ಲಿನ ಮನೆಯನ್ನು ದಾನಮಾಡಿದ ಮಾತ್ರಕ್ಕೇ ತನ್ನ ಮರಣಾನಂತರ ಸ್ವರ್ಗಲೋಕವನ್ನು ಪಡೆದು ಅಲ್ಲಿ ಪೂಜ್ಯನಾಗಿರುವನೆಂದಮೇಲೆ, ಸಕಲ ಸಲಕರಣೆಗಳಿಂದಲೂ ಪರಿಪೂರ್ಣವಾಗಿ ಶೋಭಿಸುತ್ತಿರುವ ದಿವ್ಯವಾದ ಮನೆಗಳನ್ನು ದಾನಮಾಡಿದ ಮಹಾನುಭಾವನ ವಿಷಯದಲ್ಲಿ ಹೆಚ್ಚಿಗೆ ಹೇಳಬೇಕಾದುದೇನು ! ಈ ಮಹಾಪುರುಷನು ಅಪಾರವಾದ ಸುಖಗಳನ್ನನುಭವಿಸಿ, ತುಂಬಾ ಹಿತವನ್ನೂ ಆನಂದವನ್ನೂ ಸಹ ಉಂಟುಮಾಡುವ ಬ್ರಹ್ಮಲೋಕವನ್ನು ಪಡೆಯುತ್ತಾನೆ.

೪೪. ಎಲೈ ಯುಧಿಷ್ಠಿರನೇ ! ಗೋದಾನ, ಭೂದಾನ ಮತ್ತು ಸುವರ್ಣದಾನ, ಅಲ್ಲದೆ ಯಮ, ನಿಯಮ, ವ್ರತಾದಿ ನಿಯಮಗಳು ಇವೇ ಮೊದಲಾದ ಯಾವ ವಿಧವಾದ ದಾನಗಳಾಗಲಿ ಅಥವಾ ವ್ರತನಿಯಮಗಳಾಗಲಿ ಈ ಗೃಹದಾನದ ಹದಿನಾರನೆಯ ಒಂದುಭಾಗಕ್ಕೂ ಸಹ ಸಮಾನವಾಗಲಾರವು.

ಯಃ ಕಾರಯೇತ್ಸುದೃಢಹರ್ಮ್ಯವತೀಂ ಮಹಾರ್ಹಾಂ ।
ಸತ್ಸೇವಿತಾಂ ದ್ವಿಜಪುರೀಂ ಸುಜನೋಪಭೋಗ್ಯಾಂ ॥
ದಿವ್ಯಾಪ್ಸರೋಭಿನಂದಿತಚಿತ್ತವೃತ್ತಿಃ ।
ಪ್ರಾಪ್ನೋತ್ಯಸಾವನವಮಂ ಪದಮಿಂದುಮೌಲೇಃ ॥ ೪೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಗೃಹದಾನ ವಿಧಿವರ್ಣನಂ ನಾಮಾಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ.



೪೫. ಓ ಧರ್ಮರಾಜನೇ! ತುಂಬಾ ಬೆಲೆಬಾಳುವುದೂ, ಬಹಳ ದೃಢವಾದ ಇಟ್ಟಿಗೆ ಮುಂತಾದವುಗಳಿಂದ ಬಿಗಿಯಾಗಿ ರಚಿತವೂ ಆಗಿರುವ ಮಹಡಿಯ ಮನೆಯನ್ನು ಕಟ್ಟಿಸಿ, ಸಜ್ಜನರು ವಾಸಿಸಲು ಅರ್ಹವಾದ ಮನೆಗಳನ್ನು ಬ್ರಾಹ್ಮಣರಿಗೆ ದಾನಮಾಡುವ ಮಹಾನುಭಾವನು, ದಿವ್ಯಸುಂದರಿಯರಾದ ಅಪ್ಸರಸ್ತ್ರೀಯರಿಂದ ಸ್ತೋತ್ರಮಾಡಲ್ಪಡುವನಾಗಿ ಚಂದ್ರಮೌಳಿಯೆನಿಸಿದ ಪರಮೇಶ್ವರ ಸಾನ್ನಿಧ್ಯವನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಗೃಹದಾನವಿಧಿವರ್ಣನೆಯೆಂಬ ನೂರರವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಅನ್ನದಾನಸ್ಯ ಮಾಹಾತ್ಮ್ಯಂ ಕಥಯಾಮಿ ತವಾನಘ ।
ಯತ್ಪ್ರೋಕ್ತಂ ಋಷಿಭಿಃ ಪೂರ್ವಂ ತದಿಹೈಕ ಮನಾಃ ಶೃಣು || ೧ ||

ದದಸ್ವಾನಂ ದದಸ್ವಾನ್ನಂ ದದಸ್ವಾನ್ನಂ ಯುಧಿಷ್ಠಿರ ।
ಸದ್ಯಸ್ತುಷ್ಟಿಕರಂ ಲೋಕೇ ಕಿಂ ದತ್ತೇನ ಪರೇಣ ತೇ || ೨ ||

ರಾಮೇಣ ದಾಶರಥಿನಾ ವನಸ್ಥೇನ ನಿಜಾನುಜಃ ।
ನಿರ್ವೇದಾದ್ಯತ್ಪುರಾ ಪ್ರೋಕ್ತಸ್ತದಹಂ ಪ್ರಬ್ರವೀಮಿ ತೇ || ೩ ||

---

## ನೂರಅರವತ್ತೊಂಭತ್ತನೆಯ ಅಧ್ಯಾಯ

೧. ಅಯ್ಯಾ ಯುಧಿಷ್ಠಿರ! ಪೂರ್ವದಲ್ಲಿ ಋಷಿಗಳು ನನಗೆ ಅನ್ನದಾನದ ಮಹಿಮೆಯನ್ನು ಹೇಳಿದ್ದರು. ಅದನ್ನು ನಾನು ನಿನಗೆ ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೨. ಓ ಯುಧಿಷ್ಠಿರ! ನೀನು ಅನ್ನದಾನ ಮಾಡು. ಅದು ಲೋಕದಲ್ಲಿ ಆಕ್ಷಣವೇ ತುಷ್ಟಿಯನ್ನು ಉಂಟುಮಾಡುತ್ತದೆ. ಅದು ವಿನಾ ಇತರ ಯಾವ ದಾನಗಳಿಂದಲೂ ಅಷ್ಟು ಪ್ರಯೋಜನವಿಲ್ಲ.

೩. ದಶರಥನ ಮಗನಾದ ಶ್ರೀ ರಾಮಚಂದ್ರನು ಅರಣ್ಯವಲ್ಲಿದ್ದ ಸಮಯದಲ್ಲಿ ವೈರಾಗ್ಯದಿಂದ ತನ್ನ ಅನುಜನಾದ ಲಕ್ಷ್ಮಣನೊಡನೆ ಅನ್ನದಾನದ ವಿಷಯವನ್ನು ಯಾವ ರೀತಿ ಹೇಳಿದನೋ ಅದೇ ರೀತಿ ನಾನು ಈಗ ನಿನಗೆ ಹೇಳುತ್ತೇನೆ.

ಪೃಥಿವ್ಯಾಮನ್ನಪೂರ್ಣಾಯಾಂ ವಯಮನ್ನಸ್ಯ ಕಾಂಕ್ಷಿಣಃ ।
ಸೌಮಿತ್ರೇ ನೂನಮಸ್ಮಾಭಿರ್ನಬ್ರಾಹ್ಮಣಮುಖೇ ಹುತಂ ॥ ೪ ॥

ಯದುಚ್ಯತೇ ಕರ್ಮಬೀಜಂ ತಸ್ಯಾವಶ್ಯಂ ಫಲಂ ಸರ್ವೈಃ ।
ಪ್ರಾಪ್ಯತೇ ಲಕ್ಷ್ಮಣಾಸ್ಮಾಭಿರ್ನಾನ್ನಂ ವಿಪ್ರಮುಖೇ ಹುತಂ ॥ ೫ ॥

ಯನ್ನ ಪ್ರಾಪ್ಯಂ ತದಪ್ರಾಪ್ಯಂ ವಿದ್ಯಯಾ ಪೌರುಷೇಣ ವಾ ।
ಸತ್ಯೋ ಲೋಕಪ್ರವಾದೋಽಯಂ ನಾದತ್ತಮುಪತಿಷ್ಠತಿ ॥ ೬ ॥

ಭಕ್ಷ್ಯೋಪಯೋಗಾದನ್ನಸ್ಯ ದಾನಂ ಶ್ರೇಯಸ್ಕರಂ ಪರಂ । ॥ ೭ ॥

---

೪. ಅಯ್ಯಾ ಲಕ್ಷ್ಮಣ! ಲೋಕದ ಎಲ್ಲ ಪ್ರಾಣಿಗಳೂ ಆಹಾರ ತಿಂದು ತೃಪ್ತಿಯಾಗಿರುವ ಸಮಯದಲ್ಲಿ ನಾವು ಅನ್ನಕ್ಕಾಗಿ ಹಾತೊರೆಯುತ್ತಿದ್ದೇವೆ. ಹಿಂದೆ ಬ್ರಾಹ್ಮಣರಿಗೆ ನಾವು ನಿಜವಾಗಿ ಅನ್ನದಾನವನ್ನು ಮಾಡಲಿಲ್ಲವೆಂದು ತೋರುವುದು.

೫. ಲೋಕದಲ್ಲಿ ಜನರು ಅವರವರ ಕರ್ಮಾನುಸಾರವಾದ ಫಲಗಳನ್ನು ಅವಶ್ಯವಾಗಿ ಪಡೆಯುತ್ತಾರೆ. ನಾವು ಪೂರ್ವದಲ್ಲಿ ಬ್ರಾಹ್ಮಣರಿಗೆ ಅನ್ನದಾನ ಮಾಡದೆ ಇದ್ದಮೇಲೆ ನಮಗೆ ಈಗ ದೊರೆತೀತೇ ?

೬. ಲೋಕದಲ್ಲಿ ನಾವು ಹಿಂದೆ ದಾನಮಾಡದೇ ಇರತಕ್ಕ ವಸ್ತುವು ಈಗ ನಮಗೆ ಲಭಿಸುವುದಿಲ್ಲ ಎಂದು ರೂಢಿಯಿರುತ್ತದೆ. ಇದು ಸತ್ಯವಾದುದು. ಆರೀತಿ ದಾನಮಾಡದೇ ಇರುವ ವಸ್ತುವು, ನಾವು ವಿದ್ಯೆ ಕಲಿತ ಮಾತ್ರಕ್ಕಾಗಲಿ, ಪರಾಕ್ರಮಶಾಲಿಗಳಾದ ಮಾತ್ರಕ್ಕೇ ಆಗಲಿ ನಮಗೆ ಲಭಿಸುವುದಿಲ್ಲ.

೭. ಅನ್ನವು ಭಕ್ಷ್ಯವಸ್ತುವಾಗಿ ಉಪಯೋಗವಾಗುತ್ತದೆ. ಆದ್ದರಿಂದ ಆ ಅನ್ನದಾನವು ಬಹು ಶ್ರೇಯಸ್ಕರವಾದುದು.

ಪ್ರಕಾರಾಂತರಭೋಜ್ಯಾನಿ ದಾನಾನ್ಯನ್ಯಾನಿ ಭಾಶತ ।
ಅನ್ನಮೇವ ಪರಂ ದಾನಂ ಸತ್ಯವಾಕ್ಯಂ ಪರಂ ಪದಂ　　　॥ ೮ ॥

ಬುದ್ಧಿಶ್ಚಾರ್ಥಾತ್ಪರೋ ಲಾಭಃ ಸಂತೋಷಃ ಪರಮಂ ಸುಖಂ ।
ಸ್ನಾತಾನಾಮನುಲಿಪ್ತಾನಾಂ ಭೂಷಿತಾನಾಂ ಚ ಭೂಷಣೈಃ　　　॥ ೯ ॥

ನ ಸುಖಂ ನ ಚ ಸಂತೋಷೋ ಭವೇದನ್ನಾದೃತೇ ನೃಣಾಂ ।
ಶ್ವೇತೋ ನಾಮ ಮಹೀಪಾಲಃ ಸಾರ್ವಭೌಮೋಽಭವತ್ಪುರಾ ॥ ೧೦ ॥

ತೇನೇಷ್ಟಂ ಬಹುಭಿರ್ಯಜ್ಞೈಃ ಸಂಗ್ರಾಮಾ ಬಹವೋ ಜಿತಾಃ ।
ದಾನಾನಿ ಚ ಪ್ರದತ್ತಾನಿ ಧರ್ಮತಃ ಪಾಲಿತಾ ಮಹೀ　　　॥ ೧೧ ॥

---

೮. ಓ ಯುಧಿಷ್ಠಿರ ! ಅನ್ನದಾನವನ್ನು ಬಿಟ್ಟರೆ ಇತರ ದಾನಗಳು ಕೂಡಲೆ ಉಪಭೋಗಕ್ಕೆ ಆಗದೆ ಇದ್ದರೂ ಕಾಲಾಂತರದಲ್ಲಿ ಫಲದಾಯಕಗಳಾಗುತ್ತವೆ. ದಾನಗಳಲ್ಲಿ ಅನ್ನದಾನವೇ ಮುಖ್ಯವಾದ ದಾನವೆಂದೂ, ಸತ್ಯವಾಕ್ಯವೇ ಪರಮ ಪದವೆಂದೂ ಉಕ್ತವಾಗಿದೆ.

೯. ಧನಕ್ಕಿಂತಲೂ ಬುದ್ಧಿಯೇ ಮುಖ್ಯವಾದ ಲಾಭವು, ಸುಖಗಳಲ್ಲೆಲ್ಲಾ ಸಂತೋಷವೇ ಬಹಳ ಬೆಲೆಯುಳ್ಳದು. ಚನ್ನಾಗಿ ಸ್ನಾನಮಾಡಿದವರಿಗೂ, ಅನುಲೇಪಮಾಡಿಕೊಂಡಿರುವವರಿಗೂ, ಅಲಂಕೃತರಾದವರಿಗೂ, ಸ್ನಾನಾನುಲೇಪನ ಅಲಂಕಾರಗಳ ಲಾಭದಿಂದ ಅಷ್ಟು ಹಿತವಾಗುವುದಿಲ್ಲ.

೧೦. ಹಸಿದು ಬಂದ ಜನರಿಗೆ ಅನ್ನಲಾಭಕ್ಕಿಂತಲೂ ಬೇರೆಯಾದ ಸುಖವೂ ಸಂತೋಷವೂ ಮತ್ತೊಂದಿಲ್ಲ. ಇದಕ್ಕೆ ಒಂದು ನಿದರ್ಶನವನ್ನು ಹೇಳುತ್ತೇನೆ. ಪೂರ್ವದಲ್ಲಿ ಶ್ವೇತರಾಜನೆಂಬ ಹೆಸರುಳ್ಳ ಒಬ್ಬ ಚಕ್ರವರ್ತಿಯಿದ್ದನು.

೧೧. ಆತನು ಅನೇಕ ಯಾಗಗಳನ್ನು ಮಾಡಿದನು. ಎಷ್ಟೋ ಸಂಗ್ರಾಮಗಳಲ್ಲಿ ಹೋರಾಡಿ ವಿಜಯಿಯಾದನು. ಯಥೇಷ್ಟವಾಗಿ ದಾನಗಳನ್ನು ಮಾಡಿದನು. ಈರೀತಿಯಾಗಿ ಆತನು ಧರ್ಮದಿಂದ ರಾಜ್ಯವನ್ನು ಪಾಲನೆಮಾಡುತ್ತಿದ್ದನು.

ಭುಕ್ತ್ವಾ ಭೋಗಾಃ ಸುವಿಪುಲಾಃ ಶತ್ರೂಣಾಂ ಮೂರ್ಧನಿ ಸ್ಥಿತಂ ।
ವಾನಪ್ರಸ್ಥೇನ ವಿಧಿನಾ ತ್ಯಕ್ತ್ವಾ ರಾಜ್ಯಶ್ರಿಯಂ ನೃಪ ॥ ೧೨ ॥

ಸ್ವರ್ಗಂ ಜಗಾಮ ಭುಕ್ತ್ವಾ ತು ಪೂಜ್ಯಮಾನೋ ಮರುದ್ಗಣೈಃ ।
ವಿಮಾನಮರ್ಕಪ್ರತಿಮಂ ಪ್ರತಿಪೇದೇ ಮುದಾ ಯುತಃ ॥ ೧೩ ॥

ತತ್ರಾಸ್ತೇ ರಮಮಾಣೋಽಸೌ ಸಾಕಂ ವಿದ್ಯಾಧರೈಃ ಸುಖಂ ।
ಪ್ರಸಿದ್ಧೈಃ ಸ್ತೂಯತೇ ಸಿದ್ಧೈಃ ಸೇವ್ಯತೇಽಪ್ಸರಸಾಂ ಗಣೈಃ ॥ ೧೪ ॥

ಗಂಧರ್ವೈರ್ಗೀಯತೇ ಹೃಷ್ಟೈಃ ಶಕ್ರೇಣಾಪ್ಯನುಗೀಯತೇ ।
ದಿವ್ಯಮಾಲ್ಯಾಂಬರಧರೋ ದಿವ್ಯಾಭರಣಭೂಷಿತಃ ॥ ೧೫ ॥

ಸ ಚ ನಿತ್ಯಂ ವಿಮಾನಾಗ್ರ್ಯಾದವತೀರ್ಯ ಮಹೀತಲಂ ।
ಸ್ವಮಾಂಸಾನ್ಯತ್ತಿ ಕೌಂತೇಯ ಪೂರ್ವಂ ತ್ಯಕ್ತ್ವಾ ಕಲೇವರಂ ॥ ೧೬ ॥

---

೧೨. ಆತನು ವಿಧವಿಧವಾದ ಭೋಗಗಳನ್ನನುಭವಿಸಿದನು. ಶತ್ರುಗಳನ್ನು ತನ್ನ ಪರಾಕ್ರಮದಿಂದ ಹದ್ದಿನಲ್ಲಿಟ್ಟುಕೊಂಡಿದ್ದನು. ಈ ರೀತಿ ಇದ್ದು ಕಾಲ ಕ್ರಮದಲ್ಲಿ ವಾನಪ್ರಸ್ಥಾಶ್ರಮಿಯಾಗಿ ರಾಜ್ಯಭೋಗವನ್ನು ಬಿಟ್ಟನು.

೧೩. ಈರೀತಿ ಆ ಆಶ್ರಮ ಧರ್ಮಗಳನ್ನು ಅನುಭವಿಸಿ ಅನಂತರ ಮರುದ್ಗಣಗಳಿಂದ ಪೂಜಿತನಾಗಿ ಸಂತೋಷದಿಂದ ಸೂರ್ಯಪ್ರಭೆಗೆ ಸದೃಶವಾದ ವಿಮಾನವನ್ನು ಏರಿ ಸ್ವರ್ಗಕ್ಕೆ ಹೋದನು.

೧೪. ಆತನು ಆ ಸ್ವರ್ಗದಲ್ಲಿ ವಿದ್ಯಾಧರರೊಡನೆ ಸುಖದಿಂದ ರಮಿಸುತ್ತಲೂ ಸಿದ್ಧರಿಂದ ಹೊಗಳಲ್ಪಡುತ್ತಲೂ, ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತಲೂ ಇದ್ದನು.

೧೫. ಈತನು ಅಲ್ಲಿ ದೇವಲೋಕಸಂಬಂಧಿಯಾದ ಪುಷ್ಪಮಾಲಿಕೆಗಳನ್ನೂ ವಸ್ತ್ರಗಳನ್ನೂ ಧರಿಸಿ ದಿವ್ಯಾಭರಣಗಳಿಂದ ಅಲಂಕೃತನಾಗಿ ಇದ್ದನು. ಈತನನ್ನು ನೋಡಿ ಗಂಧರ್ವರು ಗಾನಮಾಡಲು ಪ್ರಾರಂಭಿಸುತ್ತಿದ್ದರು. ಇಂದ್ರನೂ ಸಹ ಅದೇ ರೀತಿ ಗಾನಮಾಡಲುಪಕ್ರಮಿಸುತ್ತಿದ್ದನು.

೧೬. ಆದರೆ ಆತನು ಸ್ವರ್ಗದಿಂದ ವಿಮಾನದ ಮೂಲಕ ಭೂಮಿಗೆ ಇಳಿದು ತನ್ನ ಮೊದಲಿನ ದೇಹದ ಬಳಿಗೆ ಬಂದು ಆ ಶವದ ಮಾಂಸವನ್ನೇ ತಿನ್ನುತ್ತಿದ್ದನು.

ತಚ್ಛರೀರಂ ತಥೈವಾಸ್ತೇ ರಕ್ಷಿತಂ ಪೂರ್ವಕರ್ಮಭಿಃ ।
ಸ ಕದಾಚಿತ್ಸುರೇಶಾನಂ ಬ್ರಹ್ಮಾಣಂ ಸಮುಪಸ್ಥಿತಃ ॥ ೧೭ ॥

ಪ್ರಣಮ್ಯ ಪ್ರಾಂಜಲಿರ್ಭೂತ್ವಾ ನಿರ್ವೇದಾದಿದಮಬ್ರವೀತ್ ।
ಭಗವಂಸ್ತ್ವತ್ಪ್ರಸಾದೇನ ಪ್ರಾಪ್ತಂ ಸ್ವರ್ಗಂಸುಖಂ ಮಯಾ ॥ ೧೮ ॥

ಸರ್ವೇಷಾಮಪಿ ಸಂಪೂಜ್ಯಃ ಸುರಾಣಾಂ ಸುರಪುಂಗವ ।
ಕಿಂತು ಕ್ಷುದ್ಬಾಧತೇಽತ್ಯರ್ಥಂ ಸ್ವರ್ಗಸ್ಥಸ್ಯಾಪಿ ಮೇ ಪ್ರಭೋ ॥ ೧೯ ॥

ಯಯಾ ಮಾಂಸಾನ್ಯಹಂ ಸ್ವಸ್ಯ ಭಕ್ಷಯಾಮ್ಯಶನಂ ವಿನಾ ।
॥ ಬ್ರಹ್ಮ ಉವಾಚ ॥
ಶ್ವೇತಾಭಿಜನಸಂಪನ್ನ ಶ್ವೇತ ಶೃಣು ವಚೋ ಮಮ । ॥ ೨೦ ॥

ತ್ವಯಾಧೀತಂ ಹುತಂ ದತ್ತಂ ಗುರವಃ ಪರಿತೋಷಿತಾಃ ।
ನಾಶನಂ ಭವತಾ ದತ್ತಂ ಯದ್ವಿಜೇಭ್ಯೋ ನರಾಧಿಪ ॥ ೨೧ ॥

---

೧೭. ಪೂರ್ವಕರ್ಮವಶದಿಂದ ಆ ಶರೀರವು ಹಿಂದಿನಂತೆಯೇ ಜೋಪಾನವಾಗಿ ರಕ್ಷಿತವಾಗಿರುತ್ತಿತ್ತು. ಒಂದು ದಿನ ಆತನು ದೇವತೆಗಳ ಈಶನಾದ ಬ್ರಹ್ಮನ ಸಮೀಪಕ್ಕೆ ಬಂದನು.

೧೮. ಒಡನೆ ಆತನಿಗೆ ನಮಸ್ಕರಿಸಿ ಅಂಜಲಿಬದ್ಧನಾಗಿ ವೈರಾಗ್ಯದಿಂದಲೋ ಎಂಬಂತೆ ಆತನನ್ನು ಕುರಿತು ಇಂತೆಂದನು. ಪೂಜ್ಯ ಪ್ರಭುವೇ! ನಿನ್ನ ಅನುಗ್ರಹದಿಂದ ನನಗೆ ಸ್ವರ್ಗಸುಖವೇನೋ ಉಂಟಾಯಿತು.

೧೯. ಅಯ್ಯಾ ಸುರಶ್ರೇಷ್ಠ—ನಾನು ದೇವತೆಗಳೆಲ್ಲರಿಂದಲೂ ಪೂಜಿತನಾಗಿದ್ದೇನೆ. ಅದೆಲ್ಲಾ ಸರಿ. ಸ್ವರ್ಗದಲ್ಲಿದ್ದರೂ ಕೂಡ ನನಗೆ ಹಸಿವಿನ ಬಾಧೆ ಬಹುವಾಗಿದೆ. ಆದ್ದರಿಂದ ಈಗ ನಾನು ಹೊಟ್ಟೆಗೆ ಆಹಾರವಿಲ್ಲದೆ ಹಸಿವಿನಿಂದ ನನ್ನ ಮಾಂಸವನ್ನೇ ತಿನ್ನುತ್ತೇನೆ ಎಂದನು.

೨೦. ಬ್ರಹ್ಮನು ಹೇಳುತ್ತಾನೆ—ಸಾಧುಗಳಲ್ಲಿ ಸಂಪನ್ನನಾದ ಶ್ವೇತ ರಾಜನೇ! ನನ್ನ ಮಾತನ್ನು ಕೇಳು.

೨೧. ಎಲೈ ರಾಜನೇ—ನೀನು ತಕ್ಕಮಟ್ಟಿಗೆ ಅಧ್ಯಯನ ಮಾಡಿದ್ದೀಯೆ. ಬಹಳ ಯಜ್ಞಯಾಗಾದಿಗಳನ್ನೂ ಮಾಡಿದ್ದೀಯೆ. ಆದರೆ ನೀನು ಬ್ರಾಹ್ಮಣರಿಗೆ ಅನ್ನದಾನ ಮಾತ್ರ ಮಾಡಲಿಲ್ಲ.

ಅನನ್ನದಾನಸ್ಯ ಫಲಂ ತ್ವಯೇದಮುಪಭುಜ್ಯತೇ ।
ತಸ್ಮಾದನ್ನದಾನತೋ ನಾನ್ಯಚ್ಛರೀರಾರೋಗ್ಯಕಾರಕಂ ॥ ೨೨ ॥

ನಾನ್ಯದನ್ನಾದ್ಯತೇ ಪುಂಸಾಂ ಕಿಂಚಿತ್ಸಂಜೀವನೌಷಧಂ ।
ಮಹೀಂ ಗತ್ವಾ ಮಹಾರಾಜ ಕುರುಷ್ವ ವಚನಂ ಮಮ ॥ ೨೩ ॥

ತಪಃ ಸ್ವಾಧ್ಯಾಯಸಂಪನ್ನೇ ಶಾಸ್ತ್ರಜ್ಞೇ ಸಂಜಿತೇಂದ್ರಿಯೇ ।
ಯೇನ ಸಂಪದ್ಯತೇ ತೃಪ್ತಿರಕ್ಷಯಾ ಕ್ಷ್ಮಾಪತೇ ತವ ॥ ೨೪ ॥

ವಿರಿಂಚೇರ್ವಚನಾದ್ಗತ್ವಾ ತ್ವರಾಯುಕ್ತೋ ಮಹೀತಲಂ ।
ಅಗಸ್ತ್ಯಂ ಭೋಜಯಾಮಾಸ ಭಕ್ತ್ಯಾ ಭರತಸತ್ತಮ ॥ ೨೫ ॥

ಭೋಜಯಿತ್ವಾ ತತಃ ಪ್ರಾದಾದ್ದಕ್ಷಿಣಾಂ ಕ್ಷೀಣಕಲ್ಮಷಃ ।
ಏಕಾವಲಿಂ ಸ್ವಕಾತ್ಕಂಠಾತ್ಸಮುತ್ತಾರ್ಯ ಸಮುಜ್ವಲಾಂ ॥ ೨೬ ॥

---

೨೨. ಅಯ್ಯಾ! ಹಿಂದೆ ನೀನು ಅನ್ನದಾನಮಾಡದೇ ಇರುವುದರ ಫಲವನ್ನು ಈಗ ಅನುಭವಿಸುತ್ತಿರುವೆ. ಈ ಸ್ಥಿತಿ ಪರಿಹಾರವಾಗಿ ಶರೀರವು ಆರೋಗ್ಯದಿಂದಿರ ಬೇಕಾದರೆ ಅನ್ನದಾನ ವಿನಾ ಬೇರೆ ಯಾವ ಮಾರ್ಗವೂ ಇಲ್ಲ.

೨೩. ಮನುಜರಿಗೆ ಅನ್ನವೊಂದು ವಿನಾ ಮತ್ತಾವುದೂ ಜೀವನಾಧಾರ ವಾದುದಲ್ಲ. ಆದ್ದರಿಂದ ಎಲೈ ರಾಜನೇ ! ನೀನು ಭೂಲೋಕಕ್ಕೆ ಹೋಗಿ ನನ್ನ ಮಾತಿನಂತೆ ನಡೆಯಿಸು.

೨೪. ಎಲೈ ರಾಜನೇ— ತಪಸ್ಸು, ವೇದಾಧ್ಯಯನ ಇವುಗಳಿಂದ ಸಂಪನ್ನನೂ, ಶಾಸ್ತ್ರಜ್ಞನೂ, ಜಿತೇಂದ್ರಿಯನೂ ಆಗಿರುವ ಬ್ರಾಹ್ಮಣನಿಗೆ ನೀನು ಅನ್ನದಾನ ಮಾಡಿದರೆ ನಿನಗೆ ಅಕ್ಷಯವಾದ ತೃಪ್ತಿಯುಂಟಾಗುವುದು ಎಂದನು.

೨೫. ಅಯ್ಯಾ ಯುಧಿಷ್ಠಿರ ! ಆ ರಾಜನು ಬ್ರಹ್ಮನ ಮಾತಿನಂತೆ ಜಾಗ್ರತೆಯಾಗಿ ಭೂಲೋಕಕ್ಕೆ ಬಂದು ಭಕ್ತಿಯಿಂದ ಅಗಸ್ತ್ಯಮಹರ್ಷಿಗಳಿಗೆ ಭೋಜನ ಮಾಡಿಸಿದನು.

೨೬. ಆರೀತಿ ಭೋಜನಮಾಡಿಸಿ ತನ್ಮೂಲಕ ತನ್ನ ಪಾಪಗಳನ್ನು ಹೋಗಲಾಡಿಸಿಕೊಂಡವನಾಗಿ ತನ್ನ ಕಂಠದಲ್ಲಿ ಧರಿಸಿದ್ದ ಥಳಥಳಿಸುವ ಒಂದು ಹಾರವನ್ನು ಆ ಮುನಿಗೆ ದಕ್ಷಿಣೆಯನ್ನಾಗಿ ಕೊಟ್ಟನು.

**ತತೋ ದುಂದುಭಿಘೋಷೇಣ ಪೂಜಿತಃ ಸುರಸತ್ತಮೈಃ ।**
**ಶ್ವೇತಸ್ತೃಪ್ತೋ ಗತಃ ಸ್ವರ್ಗಂ ದತ್ವಾನ್ನಂ ದಕ್ಷಿಣಾಯುತಂ ॥ ೨೭ ॥**

**ಪೌಲಸ್ತ್ಯೇ ನಿಹತೇ ಪಶ್ಚಾದ್ದೇವದಾನವಸಂಕಟೇ ।**
**ರಾಮಾಯೈಕಾವಲಿಂ ಪ್ರಾದಾದಗಸ್ತ್ಯಃ ಪರಯಾ ಮುದಾ ॥ ೨೮ ॥**

**ಏತದನ್ನಸ್ಯ ಮಾಹಾತ್ಮ್ಯಂ ಕಥಯಾಮ್ಯಪರಂ ಚ ತೇ ।**
**ನ ಚಾನ್ನಾದಪರಂ ಕಿಂಚಿತ್ಸತ್ಯಂ ತವ ಮಯೋದಿತಂ ॥ ೨೯ ॥**

**ಅನ್ನಂ ವೈ ಪ್ರಾಣಿನಾಂ ಪ್ರಾಣಾ ಅನ್ನಮೋಜೋ ಬಲಂಸುಖಂ ।**
**ಏತಸ್ಮಾತ್ಕಾರಣಾತ್ಸದ್ಭಿರನ್ನದಃ ಪ್ರಾಣದಃ ಸ್ಮೃತಃ ॥ ೩೦ ॥**

**ಸುದೂರಾದಾಶಯಾ ಯಸ್ಯ ಗೃಹಂ ಪ್ರಾಪ್ತಾ ಬುಭುಕ್ಷಿತಾಃ ।**
**ತೃಪ್ತಾಃ ಪ್ರತಿನಿವರ್ತಂತೇ ಕೋಽನ್ಯಸ್ತತ್ಸದೃಶಃ ಪುಮಾನ್ ॥ ೩೧ ॥**

---

೨೭. ಹೀಗೆ ಆತನು ದಕ್ಷಿಣಾಸಮೇತವಾಗಿ ಅನ್ನವನ್ನು ದಾನಮಾಡಿದ ನಂತರ ದೇವದುಂದುಭಿಗಳು ಮೊಳಗುತ್ತಿರಲು ದೇವತೆಗಳಿಂದ ಪೂಜಿತನಾಗಿ ತೃಪ್ತಿಹೊಂದಿ ಸ್ವರ್ಗಕ್ಕೆ ಹೋದನು.

೨೮. ರಾಮರಾವಣರ ಯುದ್ಧದಲ್ಲಿ ರಾವಣನು ಹತನಾದನಂತರ ಅಗಸ್ತ್ಯ ಮಹರ್ಷಿಯು ಶ್ವೇತರಾಜನು ತನಗೆ ಕೊಟ್ಟಿದ್ದ ಏಕಾವಳಿಯನ್ನು ಬಹು ಸಂತೋಷದಿಂದ ರಾಮನಿಗೆ ಕೊಟ್ಟನು.

೨೯. ನಿನಗೆ ಈ ಅನ್ನದಾನದ ಮಾಹಾತ್ಮ್ಯವನ್ನು ಹೇಳಿದೇನೆ—ಅನ್ನ ದಾನಕ್ಕಿಂತಲೂ ಬೇರೆ ಶ್ರೇಷ್ಠವಾದ ದಾನವು ಮತ್ತೊಂದಿಲ್ಲ.

೩೦. ಜೀವಿಗಳಿಗೆ ಅನ್ನವೇ ಪ್ರಾಣಾಧಾರವೂ, ಅನ್ನವೇ ಓಜಸ್ಸುಬಲ ವರ್ಧಕವೂ, ಸುಖದಾಯಕವೂ ಆಗಿದೆ. ಈ ಕಾರಣದಿಂದ ಸಜ್ಜನರು ಅನ್ನದಾನ ಮಾಡತಕ್ಕವನನ್ನು ಪ್ರಾಣದಾತನೆಂದು ಹೇಳುತ್ತಾರೆ.

೩೧ ಬಹಳ ದೂರದಿಂದ ನಡೆದು ಬಳಲಿ ಬಂದು ಆಶೆಯಿಂದಲೂ, ಹಸಿವಿನಿಂದಲೂ, ಮನೆಗೆ ಬಂದವರಿಗೆ ಅನ್ನಹಾಕಿ ತೃಪ್ತಿಪಡಿಸಿ ಕಳುಹಿಸತಕ್ಕ ಮನುಷ್ಯನಿಗೆ ಸಮಾನನಾದವನು ಇನ್ನು ಯಾರು ತಾನೆ ಇರುವರು.

ದೀಕ್ಷಿತಃ ಕಪಿಲಾ ಸತ್ರೀ ರಾಜಾ ಭಿಕ್ಷುರ್ಮಹೋದಧಿಃ ।
ದೃಷ್ಟಮಾತ್ರಾ ಪುನಂತ್ಯೇತೇ ತಸ್ಮಾತ್ಪಶ್ಯಂತಿ ನಿತ್ಯಶಃ ॥ ೩೨ ॥

ಏಕಸ್ಯಾಪ್ಯತಿಥೇರನ್ನಂ ಯಃ ಪ್ರದಾತುಮಶಕ್ತಿಮಾನ್ ।
ತಸ್ಯಾಽಽರಂಭೈಃ ಪರಿಕ್ಲೇಶೈರ್ಗೃಹಸತಃ ಕಿಂ ಫಲಂ ಗೃಹೇ ॥ ೩೩ ॥

ಶಕ್ಯತೇ ದುಷ್ಕರೇಽಪ್ಯರ್ಥೇ ಚಿರರಾತ್ರಾಯ ಜೀವಿತುಂ ।
ನತ್ವಾಹಾರವಿಹೀನೇನ ಶಕ್ಯಂ ವರ್ತಯಿತುಂ ಚಿರಂ ॥ ೩೪ ॥

ಭುಕ್ತ್ವಾಽಗೃಹೇ ಗೃಹಸ್ಥಸ್ಯ ಮೈಥುನಂ ಯಶ್ಚ ಸೇವತೆ ।
ಯಸ್ಯಾನ್ನಂ ತಸ್ಯ ತೇ ಪುತ್ರಾಃ ಇತಿಪ್ರಾಹುರ್ಮನೀಷಿಣಃ ॥ ೩೫ ॥

---

೩೨. ದೀಕ್ಷಿತರು, ಕಪಿಲವರ್ಣದ ಗೋವು, ಯಾಜ್ಞಿಕ, ರಾಜ, ಸನ್ಯಾಸಿ, ಮಹಾಸಮುದ್ರ ಇವನ್ನು ನೋಡಿದ ಮಾತ್ರದಿಂದಲೇ ಜನರು ಪರಿಶುದ್ಧರಾಗುತ್ತಾರೆ. ಆದ್ದರಿಂದ ನಿತ್ಯವೂ ಇವುಗಳು ದರ್ಶನೀಯವಾದುವು.

೩೩. ಒಬ್ಬ ಅತಿಥಿಗಾದರೂ ಅನ್ನ ಹಾಕಲು ಸಾಮರ್ಥ್ಯವಿಲ್ಲದೆ ಇದ್ದ ಮೇಲೆ ತನ್ನ ಕೆಲಸಕಾರ್ಯಗಳಿಗಾಗಿ, ಕಷ್ಟಪಟ್ಟು ಮಾಡುವ ಪ್ರಯತ್ನಗಳಿಂದಾಗಲಿ ಮನೆ ಮಾಡಿಕೊಂಡು ವಾಸಿಸುತ್ತಿದ್ದುದಕ್ಕಾಗಲಿ ಏನು ಪ್ರಯೋಜನ

೩೪. ಮಹಾಕಷ್ಟ ಪ್ರಾಪ್ತಿಯಾದ ಸಮಯದಲ್ಲೂ ಹೇಗೋ ಸಹಿಸಿಕೊಂಡು ಬಹುಕಾಲ ಜೀವಿಸಬಹುದು. ಆಹಾರವಿಲ್ಲದೇ ಇದ್ದರೆ ಬಹುಕಾಲ ಜೀವ ಇಟ್ಟುಕೊಂಡಿರುವುದು ಸಾಧ್ಯವಿಲ್ಲ.

೩೫. ಪ್ರವಾಸೀ ಮನುಷ್ಯನು ಗೃಹಸ್ಥನ ಮನೆಯಲ್ಲಿ ಅನ್ನವನ್ನು ತಿಂದು ಅಲ್ಲಿಯೇ ಮೈಥುನವನ್ನು ಆಚರಿಸಿದರೆ ಆಗ ಉತ್ಪನ್ನರಾಗುವ ಮಕ್ಕಳು ಆ ಅನ್ನದಾತನಿಗೆ ಆದುವು ಎಂದು ತಿಳಿದವರು ಹೇಳುತ್ತಾರೆ.

**ದುಷ್ಕೃತಂ ಹಿ ಮನುಷ್ಯಾಣಾಮನ್ನಮಾಶ್ರಿತ್ಯ ತಿಷ್ಠತಿ ।**
**ಯೋ ಯಸ್ಯಾನ್ನಂ ಸಮಶ್ನಾತಿ ಸ ತಸ್ಯಾಶ್ನಾತಿ ದುಷ್ಕೃತಂ ॥ ೩೬ ॥**

**ವನಸ್ಪತಿಗತೇ ಸೋಮೇ, ಪರಾನ್ನಂ ಯಸ್ತು ಭುಂಜತಿ ।**
**ತಸ್ಯ ಮಾಸಕೃತಂ ಪುಣ್ಯಂ ದಾತಾರಮುಪಗಚ್ಛತಿ ॥ ೩೭ ॥**

**ಕಸ್ಮಾನ್ನ ದೀಯತೇ ನಿತ್ಯಂ ಕಸ್ಮಾದನ್ನಂ ನ ದೀಯತೇ ।**
**ಯಸ್ಯೇದೃಶೀ ಫಲಾವಾಪ್ತಿಃ ಕಥಿತಾ ಪೂರ್ವಸೂರಿಭಿಃ ॥ ೩೮ ॥**

**ಭಿಕ್ಷಾಂ ವಾ ಪುಷ್ಕಲಾಂ ವಾಪಿ ಹಂತಕಾರಂ ದ್ವಿಜಾತಯೇ ।**
**ಭೋಜನಂ ವಾ ಯಥಾಲಾಭಮದತ್ವಾಶ್ನಾತಿ ಕಿಲ್ಬಿಷಂ ॥ ೩೯ ॥**

೩೬. ಮನುಷ್ಯರು ಸೇವಿಸುವ ಆಹಾರಕ್ಕೆ ಅನುಗುಣವಾಗಿ ಅವರಿಂದ ಪಾಪಕರ್ಮಗಳು ಆಚರಿಸಲ್ಪಡುತ್ತಾ ಇರುತ್ತವೆ. ಅನ್ನದಾತನು ಪಾಪದ್ರವ್ಯ ಯುಕ್ತನಾಗಿದ್ದರೆ ಆತನು ಕೊಟ್ಟ ಅನ್ನವನ್ನು ಸೇವಿಸಿದವನೂ ಪಾಪಕ್ಕೆ ಭಾಗಿಯಾಗುತ್ತಾನೆ.

೩೭. ಚಂದ್ರನು ಕೃಷ್ಣಪಕ್ಷದಲ್ಲಿ ತನ್ನ ಕಲೆಗಳನ್ನು ಒಂದೊಂದಾಗಿ ಓಷಧಿಗಳಲ್ಲಿ ಬೆರಸುತ್ತಾನೆಂದು ಪ್ರಸಿದ್ಧಿಯಿದೆ. ಆದ್ದರಿಂದ ಚಂದ್ರನು ವನಸ್ಪತಿಗತನಾದಾಗ ಎಂದರೆ ಕೃಷ್ಣಪಕ್ಷದಲ್ಲಿ ಪರಾನ್ನವನ್ನು ಭೋಜನ ಮಾಡಿದರೆ ಆತನು ಒಂದು ತಿಂಗಳಲ್ಲಿ ಆರ್ಜಿಸಿದ ಪುಣ್ಯವು ಅನ್ನದಾತನಿಗೆ ಸೇರುತ್ತದೆ.

೩೮. ಯಾವ ಮನುಷ್ಯನು ನಿತ್ಯವೂ ಅನ್ನದಾನ ಮಾಡದೆ ಇರುತ್ತಾನೆಯೋ ಅಂತಹವನಿಗೆ ಆ ಒಂದು ತಿಂಗಳ ಪುಣ್ಯಲೋಕವೇ ಫಲವೆಂದು ಪ್ರಾಚೀನ ವಿದ್ವಾಂಸರು ಹೇಳಿರುತ್ತಾರೆ.

೩೯. ಬ್ರಾಹ್ಮಣನಿಗೆ ಪುಷ್ಕಳವಾಗಿ ಭಿಕ್ಷೆಯನ್ನು ಹಾಕದೆ ಹೋದರೂ, ಶಕ್ತ್ಯನುಸಾರ ಭೋಜನ ಮಾಡಿಸದೆ ಇದ್ದರೂ ಅಂತಹ ಗೃಹಸ್ಥನು ಪಾಪಗಳಿಗೀಡಾಗುತ್ತಾನೆ.

ಯೋನಾ ಯುತಂ ಸಹಸ್ರಂ ವಾ ಭೋಜಿತಂ ಸ್ಯಾದ್ದ್ವಿಜನ್ಮನಾಂ ।
ತೇನ ಬ್ರಹ್ಮಗೃಹಾಸನ್ನಂ ನೂನಂ ಬದ್ಧಂ ಕುಟೀರಕಂ ॥ ೪೦ ॥

ವಾರಾಣಸ್ಯಾಂ ಪುರಾ ಪಾರ್ಥ ವಣಿಗಾಪಣಜೀವನಃ ।
ಧನೇಶ್ವರ ಇತಿ ಖ್ಯಾತೋ ದೇವಬ್ರಾಹ್ಮಣಪೂಜಕಃ ॥ ೪೧ ॥

ತಸ್ಯಾಪಣ್ಯೈಕದೇಶೇ ತು ಮುಕ್ತ್ವಾಂಡಂ ಪಾಂಡುರಚ್ಛವಿ ।
ಸಸರ್ಪ ಸರ್ಪಸ್ತದ್ದೇಶಾದ್ವಣಿಗ್ದೃಷ್ಟ್ವಾ ವಿಶಂಕಿತಃ ॥ ೪೨ ॥

ತದಂಡಂ ವಣಿಜಾ ತೇನ ದೃಷ್ಟಂ ಕಾರುಣ್ಯಬುದ್ಧಿನಾ ।
ತತಃ ಪ್ರಭೃತ್ಯನು ದಿನಂ ರರಕ್ಷ ಚ ಪುಪೋಷ ಚ ॥ ೪೩ ॥

ನಿರ್ಜಗಾಮ ದಿನೈಃ ಕೈಶ್ಚಿದ್ಭಿತ್ವಾಂಡಂ ಸರ್ಪಪೋತಕಃ ।
ತಂ ವಣಿಕ್ ಕ್ಷೀರಪಾನಾದ್ಯೈ ರುಪಚಾರೈರವರ್ಧಯತ್ ॥ ೪೪ ॥

---

೪೦. ಯಾವ ಮನುಷ್ಯನು, ಹತ್ತು ಸಾವಿರ ಮಂದಿ ಅಥವಾ ಒಂದು ಸಾವಿರ ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಾನೆಯೋ ಆತನಿಗೆ ಬ್ರಹ್ಮ ಲೋಕದಲ್ಲಿ ವಾಸಗೃಹವು ನಿಶ್ಚಯವಾಗಿಯೂ ಮೀಸಲಾಗಿರುತ್ತದೆ.

೪೧. ಎಲೈ ಯುಧಿಷ್ಠಿರ! ಹಿಂದೆ ಕಾಶಿಯಲ್ಲಿ ಒಬ್ಬ ವಣಿಜನು ಅಂಗಡಿ ಯಿಟ್ಟು ವ್ಯಾಪಾರದಿಂದ ಜೀವನ ಮಾಡುತ್ತಲೂ, ದೇವಬ್ರಾಹ್ಮಣರನ್ನು ಪೂಜಿ ಸುತ್ತಲೂ ಇದ್ದನು. ಆತನ ಹೆಸರು ಧನೇಶ್ವರನೆಂದು ಪ್ರಸಿದ್ಧವಾಗಿತ್ತು.

೪೨. ಆ ಅಂಗಡಿಯಲ್ಲಿ ಒಂದುಕಡೆ ಒಂದು ಸರ್ಪವು ಬೆಳ್ಳಗಿರುವ ಒಂದು ಮೊಟ್ಟೆಯನ್ನಿಟ್ಟು ಅಲ್ಲಿಯೇ ಬಿಟ್ಟು ಹೊರಟುಹೋಯಿತು. ವ್ಯಾಪಾರಿಯು ಅದನ್ನು ಕಂಡು ಶಂಕಿತನಾದನು.

೪೩. ಆದರೂ ಆ ಶೆಟ್ಟಿಯು ದಯಾಪೂರ್ಣತೆಯಿಂದ ಆ ಸರ್ಪದ ಮೊಟ್ಟೆ ಯನ್ನು ಅಂದು ಮೊದಲುಗೊಂಡು ಜೋಪಾನವಾಗಿ ರಕ್ಷಿಸುತ್ತಲೂ, ಪೋಷಿಸು ತ್ತಲೂ ಇದ್ದನು.

೪೪. ಕೆಲವು ದಿನಗಳನಂತರ ಆ ಮೊಟ್ಟೆಯನ್ನು ಭೇದಿಸಿಕೊಂಡು ಸರ್ಪದ ಮರಿಯು ಹೊರಗೆ ಬಂದಿತು. ಆಗ ಶೆಟ್ಟಿಯು ಅದಕ್ಕೆ ಹಾಲು ಕುಡಿಸು ವುದು ಮೊದಲಾದ ಉಪಚಾರಗಳಿಂದ ದೊಡ್ಡದಾಗುವಂತೆ ಬೆಳೆಸಿದನು.

**ಲಿಲಿಹೇ ಘೃತಭಾಂಡಾನಿ ಜಿಘ್ರೇ ಚ ಗಂಧಸಂಚಯಾ್ |**
**ಲುಲೋಠ ಪಾಂಸುಪ್ರಕರೇ ಚಚಾರ ವಾರಿಮಧ್ಯಗಃ　　|| ೪೫ ||**

**ವಣಿಜಾ ರಕ್ಷ್ಯಮಾಣಃ ಸ ಸ್ನೇಹಾಚ್ಛಾಹರಹಃ ಪುನಃ |**
**ಜಗಾಮ ಸುಮಹಾನ್ಕಾಲೋಽಭವದೇಷ ಭಯಂಕರಃ　　|| ೪೬ ||**

**ಅಥೈಕಸ್ಮಿನ್ದಿನೇ ಗಂಗಾಂ ಗತಃ ಸ್ನಾತುಂ ತ್ರಿಲೋಕಗಾಂ |**
**ವಣಿಗಾಪಣೆ ಪಣ್ಯವಿದಂ ಸ್ಥಾಪಯಿತ್ವಾ ಸುತಂ ಮತಂ　　|| ೪೭ ||**

**ವ್ಯವಹರ್ತುಂ ಸಮಾರಬ್ಧಂ ವಣಿಕ್ಪುತ್ರೇಣ ಧೀಮತಾ |**
**ದದಾತಿ ಪ್ರತಿಗೃಹ್ಣಾತಿ ಘೃತ ತೈಲಯವೈಕ್ಷವಂ　　|| ೪೮ ||**

**ವ್ಯವಹಾರಾಕುಲತಯಾ ಪಾದಯೋರಂತರೇಣ ಸಃ |**
**ಸರ್ಪಶ್ಚಚಾಲ ಚಾಪಲ್ಯಾದ್ವಣಿಗ್ವಿಕ್ಷೇಪಮಭ್ಯಗಾತ್　　|| ೪೯ ||**

---

೪೫. ಅದು ಅಂಗಡಿಯಲ್ಲಿ ಭಾಂಡಗಳಲ್ಲಿದ್ದ ತುಪ್ಪವನ್ನು ರುಚಿನೋಡುವುದು. ಸುವಾಸನೆಯುಳ್ಳ ಪದಾರ್ಥಗಳನ್ನು ಮೂಸಿನೋಡುವುದು. ಈ ರೀತಿ ಕಾಲ ಕಳೆಯುತ್ತಿತ್ತು.

೪೬. ಆ ಶೆಟ್ಟಿಯು ದಯೆಯಿಂದಲೂ, ಸ್ನೇಹದಿಂದಲೂ ಅದನ್ನು ಕಾಪಾಡುತ್ತಿರಲು ಅದು ಬಹುದಿನ ಬೆಳೆದು ದೊಡ್ಡದಾಗಿ ನೋಡಿದರೆ ಭಯವಾಗುವಂತಿತ್ತು.

೪೭. ಹೀಗಿರುವಲ್ಲಿ ಒಂದು ದಿನ ಆ ಶೆಟ್ಟಿಯು ವ್ಯಾಪಾರ ಕ್ರಮವನ್ನು ತಿಳಿದಿದ್ದ ತನ್ನ ಪ್ರಿಯ ಪುತ್ರನನ್ನು ಅಂಗಡಿಯಲ್ಲಿ ಕೂರಿಸಿ, ತಾನು ಸ್ನಾನ ಮಾಡಲು ತ್ರಿಪಥಗೆಯೆನಿಸಿದ ಗಂಗಾನದಿಗೆ ಹೋದನು.

೪೮. ಆ ವೈಶ್ಯಪುತ್ರನು ಅಂಗಡಿಯಲ್ಲಿ ತುಪ್ಪ, ಎಣ್ಣೆ, ಅಕ್ಕಿ, ಬೆಲ್ಲ, ಇತ್ಯಾದಿಗಳನ್ನು ಮಾರುವುದು, ತೆಗೆದುಕೊಳ್ಳುವುದು ಇವೇ ಮೊದಲಾದ ವ್ಯವಹಾರಕ್ಕೆ ಆರಂಭಿಸಿದನು.

೪೯. ಈ ರೀತಿ ವ್ಯವಹಾರ ನಡೆಯಿಸುತ್ತಿರಲಾಗಿ ಏನೋ ಚಪಲದಿಂದ ಆ ಸರ್ಪವು ವೈಶ್ಯ ಪುತ್ರನ ಕಾಲುಗಳ ಮಧ್ಯದಲ್ಲಿ ಬಂದಿತು.

ಜಾನನ್ನಪಿ ತದುದ್ದೇಶಂ ನಿದಾನೇ ನಿಯತೇರ್ವಶಾತ್ ।
ತ್ರಾಸಾತ್ಸಂತರ್ಜಯಾಮಾಸ ಬಲೇನ ಪದಚಾರಿಣಂ ॥ ೫೦ ॥

ಸ ಮಹೀತಃ ಸಮುತ್ಥಾಯ ಮೂರ್ಧಾನಮವರುಹ್ಯ ಚ ।
ಉವಾಚ ದಾರುಣತರಂ ವಚನಂ ಪನ್ನಗಾಧಮಃ ॥ ೫೧ ॥

ಶರಣಾಗತಂ ಪ್ರೋಷಿತಂ ಚ ತವ ಪಿತ್ರಾ ಭಯಂಕರ ।
ಕಸ್ಮಾನ್ಮಾಂ ಹಂಸಿ ದುಷ್ಟಾತ್ಮನ್ಕಥಂ ಜೀವನ್ವಿಮೋಕ್ಷ್ಯಸೇ ॥ ೫೨ ॥

ಅನಂತರಂ ಕಲಕಲಃ ಸಂಜಾತೋ ರೋದತಾಂ ನೃಣಾಂ ।
ಧನೇಶ್ವರಸುತೋ ನಷ್ಟಃ ಸರ್ಪೇಣಾಪಿ ಭೃಶಾಕುಲಃ ॥ ೫೩ ॥

---

೫೦. ಆ ವೈಶ್ಯಪುತ್ರನು ಅದು ಸಮೀಪಕ್ಕೆ ಬಂದುದನ್ನು ಕಂಡು ಅದರ ವಿಚಾರ ಗೊತ್ತಿದ್ದರೂ ದುರ್ದೈವದಿಂದ ಭಯಗೊಂಡು ಆ ಸರ್ಪವನ್ನು ಹೆದರಿಸಿದನು.

೫೧. ಅನಂತರ ಆ ನೀಚ ಸರ್ಪವು ನೆಲದಿಂದ ಮೇಲಕ್ಕೆದ್ದು ಆವಣಿಕ್ಪುತ್ರನ ತಲೆಯ ಮೇಲೆ ಹತ್ತಿ ಬಹು ಕಠಿಣವಾಗಿ ಈರೀತಿ ನುಡಿಯಿತು.

೫೨. ಎಲಾ ದುಷ್ಟಾತ್ಮನೇ ! ನಾನು ಭಯಂಕರನಾಗಿದ್ದರೂ ಕೂಡ ನನ್ನನ್ನು ಶರಣಾಗತನನ್ನಾಗಿ ಭಾವಿಸಿ ನಿನ್ನ ತಂದೆಯು ಕಾಪಾಡಿದನು. ಈಗ ದುಷ್ಟಾತ್ಮನಾದ ನೀನು ನನ್ನನ್ನು ಏತಕ್ಕೆ ಹಿಂಸಿಸುವೆ ? ಈಗ ನನ್ನ ಕೈಯಿಂದ ಯಾವ ರೀತಿ ಬಿಡುಗಡೆಯನ್ನು ಹೊಂದಿ ಬದುಕುತ್ತೀಯೋ ? ನೋಡುವೆನು ಎಂದಿತು.

೫೩. ಹೀಗೆ ಹೇಳಿ ಕೂಡಲೇ ಸರ್ಪವು ಬಹು ಕೋಪದಿಂದ ವೈಶ್ಯಪುತ್ರನನ್ನು ಕಚ್ಚಿತು. ಆಗ ಅಲ್ಲಿದ್ದ ಜನಗಳೆಲ್ಲಾ ಗೋಳಾಡುತ್ತಾ ಶೆಟ್ಟಿಯ ಮಗನು ಹಾವು ಕಚ್ಚಿ ಸತ್ತನೆಂದು ಕೋಲಾಹಲ ಧ್ವನಿಮಾಡಿದರು.

**ಅಚ್ಯುತಾನಂತ ಗೋವಿಂದ ಕೃಷ್ಣ ಕೃಷ್ಣೇತ್ಯುದೀರಯನ್ |**
**ಧನೇಶ್ವರೋಽಪ್ಯನುಪ್ರಾಪ್ತಃ ಪ್ರೋವಾಚಾಕುಲಯಾ ಗಿರಾ || ೫೪ ||**

**ಕಿಂ ಕೃತಂ ಮಮ ಪುತ್ರೇಣ ತವ ಪನ್ನಗ ವಿಪ್ರಿಯಂ |**
**ಯದಯಂ ಭವತಾ ಮೂರ್ಧ್ನಿ ಸ್ವಭೋಗೇನಾಭಿವೇಷ್ಟಿತಃ || ೫೫ ||**

**ಮೂರ್ಖಂ ಮಿತ್ರಂ ಸುಸಂಬಂಧಂ ಹೀನಜಾತಿಜನೋ ಹಿ ಯಃ |**
**ಯಃ ಕರೋತ್ಯಬುಧೋಂಗಾರಾನ್ ಸ ಸ್ವಹಸ್ತೇನ ಕರ್ಷತಿ || ೫೬ ||**

**ತಮುವಾಚ ಸ ಸರ್ಪೋಽಸೌ ಬಾಷ್ಪಗದ್ಗದಯಾ ಗಿರಾ |**
**ನಿರಪರಾಧೋ ಭವತಃ ಪುತ್ರೇಣಾಹಂ ಸಮಾಹತಃ || ೫೭ ||**

**ತದಹಂ ಪಶ್ಚತಸ್ತೇಽದ್ಯ ದಶಾಮ್ಯೇನಂ ಧನಾಧಿಪ |**
**ಯಥಾ ನ ಭೂಯಿದೇ ಭೂತಾನಾಂ ಭವೇದಸ್ಮಾತ್ಕ್ವಚಿದ್ಭಯಂ ||೫೮||**

---

೫೪. ಅನಂತರ ಶೆಟ್ಟಿಯೂ ಕೂಡ ಅಚ್ಯುತ, ಅನಂತ, ಗೋವಿಂದ, ಕೃಷ್ಣ ಕೃಷ್ಣ ಎಂಬದಾಗಿ ಹೇಳುತ್ತಾ ಅಲ್ಲಿಗೆ ಬಂದು ಆಕುಲಯುಕ್ತವಾದ ಮಾತಿನಿಂದ ಈ ರೀತಿ ಕೇಳಿದನು.

೫೫. ಎಲೈ ಸರ್ಪವೇ—ನನ್ನ ಬಾಲಕನ ತಲೆಯನ್ನು ನಿನ್ನ ಹೆಡೆಯಿಂದ ಆಕ್ರಮಿಸಿದ್ದೀಯಲ್ಲಾ ! ಇವನು ನಿನಗೆ ವಿರುದ್ಧವಾಗಿ ಏನನ್ನಾದರೂ ಮಾಡಿದನೆ ?

೫೬. ಯಾವನು ಮೂರ್ಖನೂ, ಹೀನಜಾತಿಯವನೂ ಆದವನನ್ನು ಸುಸಂಬಂಧಿಯನ್ನಾಗಿಯೋ ಮಿತ್ರನನ್ನಾಗಿಯೋ ಮಾಡಿಕೊಳ್ಳುವನೋ ಅವನು ಕೆಂಡವನ್ನು ತನ್ನ ಕೈಯಿಂದ ಹಿಡಿದುಕೊಂಡ ದಡ್ಡನಂತೆ ಆಗುವನು ಎಂದನು.

೫೭-೫೮. ಈ ಮಾತನ್ನು ಕೇಳಿ ಆ ಸರ್ಪವು ಬಾಷ್ಪಯುಕ್ತವಾಗಿ ಗದ್ಗದಸ್ವರ ಯುತವಾದ ಮಾತಿನಿಂದ ಆ ವೈಶ್ಯನನ್ನು ಕುರಿತು—ನಿನ್ನ ಮಗನು ನಿರಪರಾಧಿ ಯಾದ ನನ್ನನ್ನು ಹೊಡೆದಿದ್ದಾನೆ. ಅದರಿಂದಲೂ ಇನ್ನು ಮುಂದೆ ಯಾವಾಗಲೂ ಈತನಿಂದ ಪ್ರಾಣಿಗಳಿಗೆ ತೊಂದರೆಯಾಗದಂತೆ ಮಾಡುವುದಕ್ಕಾಗಿಯೂ ನಾನು ನಿನ್ನೆದುರಿಗೆ ಕಚ್ಚುತ್ತೇನೆ ಎಂಬದಾಗಿ ಹೇಳಿತು.

॥ ಧನೇಶ್ವರ ಉವಾಚ ॥

ಉಪಕಾರಂ ವ್ರತಂ ಭಕ್ತ್ಯಾ ಸ್ನೇಹಪಾಶೋ ನ ಯಸ್ಯ ಚ ।
ಸತಾಂ ಮಾರ್ಗಮುಪಾಕ್ರಮ್ಯ ಪ್ರಯಾತಃ ಕೇನ ವಾರ್ಯತೇ ॥ ೫೯ ॥

ಕ್ಷಣಮಾತ್ರಂ ಪ್ರತೀಕ್ಷಸ್ವ ಯಾವದೇವ ಶಿಶುರ್ಮಮ ।
ಔರ್ಧ್ವದೇಹಿಕಕರ್ಮಾಣಿ ಕರೋತಿ ಸ್ವಯಮಾತ್ಮನಃ ॥ ೬೦ ॥

ಏವ ಮುಕ್ತ್ವಾ ಗೃಹಂ ಗತ್ವಾ ಯತೀನಾಂ ಬ್ರಹ್ಮಚಾರಿಣಾಂ ।
ಸಹಸ್ರಂ ಭೋಜಯಾಮಾಸ ಘೃತಪಾಯಸ ಭೋಜನೈಃ ॥ ೬೧ ॥

ಸಮುತ್ಥಾಯ ತತಃ ಸರ್ವೇ ಬ್ರಾಹ್ಮಣಾ ಹೃಷ್ಟಮಾನಸಾಃ ।
ವಣಿಕ್ಪುತ್ರಸ್ಯೋತ್ತಮಾಂಗೇ ಚಿಕ್ಷಿಪುಃ ಕುಸುಮಾಕ್ಷತಾನ್ ॥ ೬೨ ॥

---

೫೯. ವೈಶ್ಯನು ಹೇಳುತ್ತಾನೆ—ಯಾವನು ಭಕ್ತಿಯಿಂದ ಸ್ನೇಹ ಧರ್ಮಕ್ಕೆ ಬದ್ಧನಾಗದೆ ಉಪಕಾರಸ್ಮರಣೆಯಿಲ್ಲದೆ, ನಿಯಮವನ್ನು ಅತಿಕ್ರಮಿಸಿ ಸನ್ಮಾರ್ಗ ಮೀರಿ ನಡೆಯುವನು ಅವನನ್ನು ಯಾರು ತಾನೆ ತಡೆಯುವುದಕ್ಕೆ ಆದೀತು ಹೇಳು.

೬೦. ನೀನು ಒಂದು ಕ್ಷಣ ಕಾಲ ಸಾವಕಾಶಮಾಡು. ಅಷ್ಟರಲ್ಲಿ ನನ್ನ ಮಗನು ತಾನೇ ತನಗೆ ಉತ್ತರಕ್ರಿಯೆಗಳನ್ನು ಮಾಡುತ್ತಾನೆ. ಎಂಬದಾಗಿ ಆ ವೈಶ್ಯನು ಸರ್ಪನನ್ನು ಕುರಿತು ಹೇಳಿದನು.

೬೧. ಈ ರೀತಿ ಹೇಳಿ ಮನೆಗೆ ಹೋಗಿ ಪಾಕಮಾಡಿಸಿ ಸಾವಿರಾರು ಯತಿಗಳು ಬ್ರಹ್ಮಚಾರಿಗಳು ಇವರಿಗೆ ತುಪ್ಪ, ಪಾಯಸ ಇವುಗಳಿಂದ ಕೂಡಿದ ಭೋಜನ ಮಾಡಿಸಿದನು.

೬೨. ಆದರಿಂದ ಬ್ರಾಹ್ಮಣರೆಲ್ಲಾ ಸಂತೋಷಗೊಂಡು ಅಲ್ಲಿಂದೆದ್ದು ಆ ವೈಶ್ಯ ಪುತ್ರನ ತಲೆಯ ಮೇಲೆ ಹೂ, ಅಕ್ಷತೆಗಳನ್ನು ಹಾಕಿ ಈ ರೀತಿ ಆಶೀರ್ವದಿಸಿದರು.

ವಣಿಕ್ಪುತ್ರ ಚಿರಂಜೀವ ನಶ್ಯಂತು ತವ ಶತ್ರವಃ ।
ಅಭೀಷ್ಟಫಲಸಂಸಿದ್ಧಿರಸ್ತು ತೇ ಬ್ರಾಹ್ಮಣಾಜ್ಞಯಾ　　॥ ೬೩ ॥

ತತಃ ಸ ದುಷ್ಟಪ್ರಕೃತಿರ್ವಿಪ್ರವಾಗ್ವಜ್ರ ತಾಡಿತಃ ।
ಪನ್ನಗೋ ನಗಸಂಕಾಶಃ ಪಪಾತ ಚ ಮಮಾರ ಚ　　॥ ೬೪ ॥

ವಿಪನ್ನಂ ಪನ್ನಗಂ ದೃಷ್ಟ್ವಾ ತ್ರಸ್ತಚಕ್ಷುರ್ಧನೇಶ್ವರಃ ।
ಆಃ ಕಿಮೇತದಿತಿ ಪ್ರೋಚ್ಯ ವಿಷಾದಮುಮಗತ್ಪರಂ　　॥ ೬೫ ॥

ಪೋಷಿತೋಽಯಂ ಮಯಾ ಬಾಲಃ ಪಾಲಿತೋ ಲಾಲಿತಸ್ತಥಾ ।
ಮಮಾಪಚಾರಾತ್ಪಂಚತ್ವಮಾಪನ್ನಃ ಪವನಾಶನಃ　　॥ ೬೬ ॥

ಉಪಕಾರಿಷು ಯಃ ಸಾಧುಃ ಸಾಧುತ್ವೇ ತಸ್ಯ ಕೋ ಗುಣಃ ।
ಅಪಕಾರಿಷು ಯಃ ಸಾಧುಃ ಸ ಸಾಧುಃ ಸದ್ಭಿರುಚ್ಯತೇ　　॥ ೬೭ ॥

---

೬೩. ಅಯ್ಯಾ ವೈಶ್ಯ ಪುತ್ರನೇ—ಬ್ರಾಹ್ಮಣರ ಅನುಗ್ರಹದಿಂದ ನೀನು ಬಹುಕಾಲ ಬದುಕು. ನಿನ್ನ ಶತ್ರುಗಳೆಲ್ಲಾ ನಾಶವಾಗಲಿ. ನಿನ್ನ ಇಷ್ಟಾರ್ಥವು ಸಿದ್ಧಿಸಲಿ ಎಂದು ಹೇಳಿದರು.

೬೪. ಅನಂತರ ದುಷ್ಟಸ್ವಭಾವವುಳ್ಳ ಆ ಸರ್ಪವು ವಜ್ರಪಾತ ಸದೃಶವಾದ ಬ್ರಾಹ್ಮಣರ ಮಾತುಗಳಿಂದ ತಾಡಿತವಾಗಿ ಪರ್ವತದಂತೆ ದೊಪ್ಪನೆ ಕೆಳಗೆ ಬಿದ್ದು ಸತ್ತಿತು.

೬೫. ಆಗ ವೈಶ್ಯನು ಹಾವು ವಿಪತ್ತಿಗೊಳಗಾದುದನ್ನು ಕಂಡು ಬೆದರಿದ ಕಣ್ಣುಗಳುಳ್ಳವನಾಗಿ, ಬಹು ವಿಷಾದಪಡುತ್ತಾ ಅಯ್ಯೋ ಹೀಗಾಯಿತೆ ? ಎಂಥ ಕೆಲಸವಾಯಿತು.

೬೬ ನಾನು ಇದನ್ನು ಬಾಲ್ಯದಿಂದಲೂ ರಕ್ಷಿಸಿದೆ, ಲಾಲನೆ ಮಾಡಿದೆ. ಈಗ ನನ್ನ ಅಪಚಾರದಿಂದಲೇ ಈ ಸರ್ಪವು ಮರಣ ಹೊಂದಿತಲ್ಲಾ.

೬೭. ಉಪಕಾರ ಮಾಡತಕ್ಕವರ ವಿಷಯದಲ್ಲಿ ಯಾವನು ಸಾಧುವಾಗಿ ರುತ್ತಾನೆಯೋ ಅಂತಹವನನ್ನು ಸಾಧು ಎಂದು ಹೇಳುವುದು ಏನೂ ಅತಿಶಯವಲ್ಲ ಅಪಕಾರ ಮಾಡುವವರ ವಿಷಯದಲ್ಲಿ (ಅಂತಹ ಕ್ರೂರ ಸ್ವಭಾವ ಉಳ್ಳವುಗಳಲ್ಲಿ) ಯಾವನು ಸಾಧುವಾಗಿರುತ್ತಾನೆಯೋ ಅವನನ್ನು ಸಾಧು ಎಂದು ಸಜ್ಜನರು ಹೇಳುತ್ತಾರೆ. ಆದ್ದರಿಂದ ನಾನೂ ಇದಕ್ಕೆ ಉಪಕಾರಮಾಡಬೇಕು.

ಇತ್ಯೇವ ಮವಧಾರ್ಯಾಸೌ ದುಃಖಸಂತಪ್ತಮಾನಸಃ ।
ಬುಭುಜೇ ನಾಕುಲತಯಾ ನ ಚ ಸುಷ್ವಾಪ ತಾಂ ನಿಶಾಂ ॥ ೬೮ ॥

ತತಃ ಪ್ರಭಾತೇ ಗಂಗಾಯಾಂ ಸ್ನಾತ್ವಾಸಂತರ್ಪ್ಯ ದೇವತಾ ।
ಸಹಸ್ರಂ ಭೋಜಯಾ ಮಾಸ ಪುನರೇವ ದ್ವಿಜನ್ಮನಾಂ ॥ ೬೯ ॥

ತೈರ್ಭುಕ್ತೈರಿಷ್ಟಸಂಸಿದ್ಧೈಃ ಬ್ರಾಹ್ಮಣೈರನುಮೋದಿತಃ ।
ವಣಿಕ್ಪ್ರಾಹ ಮಮಾಭೀಷ್ಟಂ ಸಂಜೀವತ್ವೇಷಪನ್ನಗಃ ॥ ೭೦ ॥

ತತೋದ್ವಿಜವರೋನ್ಮುಕ್ತೈರಂಬುಭಿಃ ಪರಿಷಿಂಚಿತಃ ।
ಉದತಿಷ್ಠದಹೀನಾಂಗಃ ಸಹಸಾಹಿ ಮಹಾಕುಲಃ ॥ ೭೧ ॥

ಪ್ರಹರ್ಷಮತುಲಂ ಲೇಭೇ ದೃಷ್ಟ್ವಾ ತಂ ಪುರತಃ ಸ್ಥಿತಂ ।
ಪ್ರತ್ಯಗ್ರಾವಯವಂ ದೃಷ್ಟ್ವಾ ಸೃಕ್ಕಣೀಪರಿಲೇಲಿಹಂ ॥ ೭೨ ॥

೬೮. ಆ ವರ್ತಕನು ಈ ಪ್ರಕಾರ ನಿಶ್ಚಯಿಸಿ ತನ್ನ ಕೃತ್ಯಕ್ಕಾಗಿ ಬಹು ದುಃಖಹೊಂದಿ ಆದುಃಖದಿಂದ ಆಹಾರವನ್ನು ಸೇವಿಸಲಿಲ್ಲ. ನಿದ್ರೆಯನ್ನು ಸಹ ಮಾಡಲಿಲ್ಲ.

೬೯. ಅನಂತರ ಬೆಳಗ್ಗೆ ಎದ್ದು ಗಂಗಾನದಿಯಲ್ಲಿ ಸ್ನಾನಮಾಡಿ ದೇವತೆಗಳನ್ನು ಪೂಜಾದಿಗಳಿಂದ ತೃಪ್ತಿಪಡಿಸಿ ಪುನಃ ಸಾವಿರಾರು ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿದನು.

೭೦. ತೃಪ್ತಿಯಾಗಿ ಭೋಜನಮಾಡಿದ ಮೇಲೆ ಆ ಬ್ರಾಹ್ಮಣರಿಂದ ಅನುಮತಿಯನ್ನು ಪಡೆದು " ಈ ಹಾವು ಬದುಕಲಿ " ಎಂಬುದು ನನ್ನ ಆಶಯ ಎಂದು ಆ ವೈಶ್ಯನು ಪ್ರಾರ್ಥನೆ ಮಾಡಿದನು.

೭೧. ಅನಂತರ ಆ ಬ್ರಾಹ್ಮಣರು ಅಭಿಮಂತ್ರಿಸಿ ಕೊಟ್ಟ ನೀರಿನ್ನು ಚಿಮುಕಿಸಲಾಗಿ ಆ ಸರ್ಪವು ಅವಯವಗಳನ್ನು ಚಲಿಸುತ್ತಾ ಬುಸುಗುಟ್ಟುತ್ತಾ ಎದ್ದಿತು.

೭೨. ಬಳಿಕ ಆ ಹಾವು ನೂತನಗಳಾದ ಅವಯವ ಉಳ್ಳದ್ದೂ, ರಕ್ತಕಣಗಳಿಂದ ಸುತ್ತುವರಿಯಲ್ಪಟ್ಟ ಪರೆಯುಳ್ಳದ್ದೂ ಆಯಿತು. ಈ ರೀತಿಯಾಗಿ ತನ್ನ ಮುಂದೆ ಇರುವ ಅದನ್ನು ಕಂಡು ಆ ವೈಶ್ಯನು ಬಹು ಸಂತೋಷಪಟ್ಟನು.

**ಸಾಧುವಾದೋ ಮಹಾಞ್ಜಾತಃ ಪ್ರಶಶಂಸುರ್ಧನೇಶ್ವರಂ ।**
**ಪುರೀನಿವಾಸಿನಃ ಸರ್ವೇ ವಿಸ್ಮಯೋತ್ಫುಲ್ಲಲೋಚನಾಃ ॥ ೭೩ ॥**

**ಸಹಸ್ರಭೋಜ್ಯಮಾಹಾತ್ಮ್ಯಂ ಕಥಿತಂ ತೇ ಯುಧಿಷ್ಠಿರ ।**
**ಸಮ್ಯಕ್ಛ್ರದ್ಧಾಪ್ರಯುಕ್ತಸ್ಯ ಕಿಮನ್ಯತ್ಕಥಯಾಮಿ ತೇ ॥ ೭೪ ॥**

**ಯಚ್ಛಂತಿ ಯೇಽನುದಿವಸಂ ದ್ವಿಜಪುಂಗವಾನಾಂ ।**
**ಅನ್ನಂ ವಿಶುದ್ಧಮನಸೋ ಭೃಶಮಾಗತಾನಾಂ ॥**
**ಮರ್ತ್ಯೇ ವಿಹೃತ್ಯ ಸುಚಿರಂ ಸಸುಹೃಜ್ಜನಾಸ್ತೇ ।**
**ಪ್ರೇತ್ಯ ಪ್ರಯಾಂತಿ ಭವನಂ ಮುದಿತಾ ಮುರಾರೇಃ ॥ ೭೫ ॥**

**ಇತಿ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಅನ್ನದಾನಮಾಹಾತ್ಮ್ಯವರ್ಣನಂ ನಾಮ ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ.**

---

೭೩. ಆಗ ವೈಶ್ಯನ ಬಾಯಿಂದ ಈಗ ಸರಿ ಎಂಬ ಮಾತು ಹೊರಟಿತು. ಆ ಪುರನಿವಾಸಿಗಳೆಲ್ಲ ಬೆರಗಾಗಿ ಅರಳಿದ ಕಣ್ಣುಗಳುಳ್ಳವರಾಗಿ ಆ ವೈಶ್ಯನನ್ನು ಹೊಗಳಿದರು.

೭೪. ಅಯ್ಯಾ ಯುಧಿಷ್ಠಿರ—ಸಾಮಾನ್ಯವಾಗಿ ಸಹಸ್ರ ಜನಗಳಿಗೆ ಭೋಜನ ಮಾಡಿಸಿದುದರಿಂದುಂಟಾಗುವ ಫಲವನ್ನು ಹೇಳಿದುದಾಯಿತು. ಅದನ್ನು ಚೆನ್ನಾಗಿ ಶ್ರದ್ಧೆಯಿಂದ ನೆರವೇರಿಸುವ ನಿನ್ನ ವಿಷಯದಲ್ಲಿ ಹೇಳತಕ್ಕದ್ದೇನು

೭೫. ಯಾವ ಮನುಜರು ತನ್ನ ಮನೆಗೆ ಬಂದಂತಹ ಬ್ರಾಹ್ಮಣಶ್ರೇಷ್ಠರಿಗೆ ಬಹು ಶುದ್ಧವಾದ ಮನಸ್ಸುಳ್ಳವರಾಗಿ ನಿತ್ಯವೂ ಅನ್ನದಾನ ಮಾಡುವರೋ ಅಂತಹವರು ಮರ್ತ್ಯಲೋಕದಲ್ಲಿ ಸ್ನೇಹಿತರೊಡಗೂಡಿ ಬಹುಕಾಲ ವಿಹರಿಸಿ ಆನಂತರ ಸಂತೋಷಚಿತ್ತದಿಂದ ವಿಷ್ಣುಲೋಕಕ್ಕೆ ಹೋಗುತ್ತಾರೆ.

ಇಲ್ಲಿಗೆ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದ ದಲ್ಲಿ ಅನ್ನದಾನ ಮಾಹಾತ್ಮ್ಯೆಯೆಂಬ ನೂರಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತತ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಅನ್ನದಾನಪ್ರಸಂಗೇನ ಮಮಾಪಿ ಸ್ಮೃತಿಮಾಗತಂ ।
ತತೋಽಹಂ ಸಂ ಪ್ರವಕ್ಷ್ಯಾಮಿ ಶ್ರುತಂ ದೃಷ್ಟಂ ಚ ಯನ್ಮಯಾ ||೧||

ಅಕ್ಷದ್ಯೂತೇನ ಭಗವನ್ಧನಂ ರಾಜ್ಯಂ ಚ ನೋದ್ಧೃತಂ ।
ಆಹೂಯ ನಿಷ್ಕೃತಿಪ್ರಾಜ್ಞೈಃ ಕಿತವೈರಕ್ಷಕೋವಿದೈಃ || ೨ ||

ವನಂ ಪ್ರಸ್ಥಾಪಿತಾಃ ಸರ್ವೇ ವಲ್ಕಲಾಜಿನವಾಸಸಃ ।
ದ್ರೌಪದ್ಯಾಸಹಿತಾಃ ಕೃಷ್ಣ ಕರ್ಣದುರ್ಯೋಧನಾದಿಭಿಃ || ೩ ||

---

### ನೂರಎಪ್ಪತ್ತನೆಯ ಅಧ್ಯಾಯ

೧. ಈ ಅನ್ನದಾನದ ಪ್ರಸಂಗದಿಂದ ನನಗೂ ಸಹ ಒಂದು ವಿಚಾರ ಜ್ಞಾಪಕಕ್ಕೆ ಬಂದಿತು. ನಾನು ಕಂಡು ಕೇಳಿದ ಆ ವಿಚಾರವನ್ನು ಹೇಳುತ್ತೇನೆ.

೨. ಎಲೈ ಸ್ವಾಮಿಯೇ !—ಪಗಡೆಯಾಟದಿಂದ ನಾವು ಧನವನ್ನಾಗಲಿ, ರಾಜ್ಯವನ್ನಾಗಲಿ ಸಂಪಾದಿಸುವುದಕ್ಕೆ ಆಶಿಸಲಿಲ್ಲ. ಪಗಡೆಯಾಟದಲ್ಲಿ ಬುದ್ಧಿವಂತರೂ, ಜೂಜಿನಲ್ಲಿ ಚತುರರೂ ಆದ ದ್ರೋಹಿಗಳಿಂದ ನಾವು ಆಟಕ್ಕೆ ಸೆಳೆಯಲ್ಪಟ್ಟೆವು.

೩. ಎಲೈ ಕೃಷ್ಣನೆ—ಕರ್ಣ ದುರ್ಯೋಧನರು ನಮ್ಮನ್ನು ಪಗಡೆಯ ಜೂಜಿಗೆ ಕರೆದು ಸೋಲಿಸಿ, ಕೇವಲ ನಾರುಮಡಿ, ಅಜಿನ ಇವುಗಳನ್ನು ಧರಿಸುವಂತೆ ಮಾಡಿ ದ್ರೌಪದೀಸಮೇತ ನಮ್ಮನ್ನು ಕಾಡಿಗೆ ಕಳುಹಿಸಿದರು.

ಜ್ಞಾತ್ವಾವನಗತಾನಸ್ಮಾನ್ಬ್ರಾಹ್ಮಣಾಃ ಸಂಜಿತೇಂದ್ರಿಯಾಃ ।
ದ್ರಷ್ಟುಮಭ್ಯಾಯಯುಸ್ಸರ್ವೇ ಪೌರಾಶ್ಚಾಪ್ಯನುಜಗ್ಮಿರೇ　　॥ ೪ ॥

ಅಸ್ಮಾನ್ ಸ್ನೇಹಾತ್ಕ್ಲಿಶ್ಯಮಾನಾನ್ ದೃಷ್ಟ್ವಾ ಬ್ರಾಹ್ಮಣಸತ್ತಮಾಃ ।
ಪೌರಾನ್ ಕರ್ಮಕರಾಂಶ್ಚೈವ ನಿರ್ವೇದಾದಿದಮಬ್ರುವನ್　　॥ ೫ ॥

ಜೀವತೋ ಯಸ್ಯ ಜೀವಂತಿ ವಿಪ್ರಾ ಮಿತ್ರಾಣಿ ಬಾಂಧವಾಃ ।
ಜೀವನಂ ತಸ್ಯ ಸಫಲಂ ಆತ್ಮಾರ್ಥೇ ಕೋ ನ ಜೀವತಿ　　॥ ೬ ॥

ಅಭ್ಯಾಗತಂ ಸುಹೃದ್ವರ್ಗಂ ಕುಟುಂಬಮುಪಹಾಯ ಚ ।
ಜೀವನ್ನಪಿ ಮೃತಃ ಪಾಪಃ ಕೇವಲಂ ಸ್ವೋದರಂಭರಿಃ　　॥ ೭ ॥

---

೪. ನಾವು ಕಾಡಿಗೆ ಹೊರಟುಹೋದ ಸಮಾಚಾರವನ್ನು ಕೇಳಿ ಜಿತೇಂದ್ರಿಯರಾದ ಬ್ರಾಹ್ಮಣರೂ, ಮತ್ತು ನಮ್ಮಲ್ಲಿ ವಿಶ್ವಾಸಿಗಳಾದ ಪಟ್ಟಣಿಗರೂ ನಮ್ಮನ್ನು ನೋಡಲು ಕಾಡಿಗೆ ಬಂದರು.

೫. ಅವರಲ್ಲಿ ಆ ಬ್ರಾಹ್ಮಣೋತ್ತಮರು ನಮ್ಮನ್ನು ಕ್ಲೇಶಕ್ಕೆ ಒಳಗಾದ ನಮ್ಮನ್ನುಸ್ನೇಹದಿಂದ ವಿಚಾರಿಸಿ ಬಳಿಕ ಕೆಲಸಗಾರರಾದ ಪಟ್ಟಣಿಗರನ್ನು ಕುರಿತು ವೈರಾಗ್ಯದಿಂದ ಈರೀತಿ ಹೇಳಿದರು.

೬. ಬ್ರಾ.ಹ್ಮಣರು, ಸ್ನೇಹಿತರು, ಬಂಧುಗಳು ಮತ್ತು ಇತರ ಪ್ರಾಣಿಗಳು ಇವರಿಗಾಗಿಯೇ ಯಾರು ಬದುಕುವರೋ ಅಂತಹವರ ಜೀವನವೇ ಸಫಲ. ತನಗೋಸ್ಕರ ಮಾತ್ರ ಯಾರು ಜೀವಿಸುವರೋ ಅವರ ಜೀವನ ಸಫಲವಲ್ಲ.

೭. ಮನೆಗೆ ಬಂದ ಅಭ್ಯಾಗತನನ್ನೂ, ಸ್ನೇಹಿತರನ್ನೂ, ಕುಟುಂಬ ವರ್ಗದವರನ್ನೂ ಸಹ ಬಿಟ್ಟು ಕೇವಲ ತನ್ನ ಹೊಟ್ಟೆ ತುಂಬಿಸಿಕೊಳ್ಳುವುದರಲ್ಲಿ ಆಸಕ್ತನೆನಿಸಿದವನು ಪಾಪಿಯಾಗುತ್ತಾನೆ. ಮತ್ತು ಅವನು ಬದುಕಿದ್ದರೂ ಸತ್ತಂತೆಯೇ ಸರಿ. ಎಂಬದಾಗಿ ಹೇಳಿದರು.

ಇತ್ಯೇವಮವಧಾರ್ಯಾಹಂ ತಾನೃಷೀನ್ಪುನರಬ್ರುವಂ ।
ಭವಂತಃ ಸರ್ವ ಏವಾತ್ರ ತ್ರಿಕಾಲಜ್ಞಾ ಮಹರ್ಷಯಃ ॥ ೮ ॥

ಸಮಾಗತಾ ಮತ್ಪ್ರಿಯಾರ್ಥಂ ಜ್ಞಾನವಿಜ್ಞಾನಪಾರಗಾಃ ।
ಬ್ರೂತ ಕಂಚಿದುಪಾಯಂ ಮೇ ಭವಂತೋಽಭಿಜನಂಪ್ರತಿ ॥ ೯ ॥

ಭವದ್ಭಿಃ ಸಹಿತಾಃ ಸರ್ವೇ ಭೃತ್ಯೈರ್ಭ್ರಾತೃಭಿರೇವ ಚ ।
ನಿರ್ಗಚ್ಛೇಯಂ ವನೇ ಶೂನ್ಯೇ ದ್ವಾದಶೇಮಾಃ ಸಮಾಃ ಯಥಾ ॥೧೦॥

ಮಾಮುವಾಚಾಥಮೈತ್ರೇಯಃ ಶೃಣು ಕೌಂತೇಯ ಮದ್ವಚಃ ।
ಪೂರ್ವವೃತ್ತಂ ಪ್ರವಕ್ಷ್ಯಾಮಿ ದೃಷ್ಟಂ ದಿವ್ಯೇನ ಚಕ್ಷುಷಾ ॥ ೧೧ ॥

ಆಸೀತ್ತಪೋವನೇ ಕಾಚಿದ್ಬ್ರಾಹ್ಮಣೀ ಬ್ರಹ್ಮಚಾರಿಣೀ ।
ದುರ್ಭಗಾ ದುರ್ಗತಾ ದುಃಖಾದಾರಾಧಯತಿ ಸಾ ದ್ವಿಜಾನ್ ॥ ೧೨ ॥

---

೮. ನಾನು ಇದನ್ನು ಕೇಳಿ ಆ ಋಷಿಗಳನ್ನು ಕುರಿತು "ನೀವುಗಳೆಲ್ಲರೂ ತ್ರಿಕಾಲಜ್ಞರಾದ (ಭೂತ ಭವಿಷ್ಯತ್ ವರ್ತಮಾನ ಎಂಬ ಮೂರು ಕಾಲದ ಸಂಗತಿಗಳನ್ನೂ ಅರಿತ) ಮಹರ್ಷಿಗಳಾಗಿ ಇದ್ದೀರಿ.

೯. ವಿಶೇಷ ಜ್ಞಾನದ ಪರಮಾವಧಿಯನ್ನು ಮುಟ್ಟಿರುವ ಜ್ಞಾನಿಗಳಾದ ತಾವು ಇಲ್ಲಿಗೆ ನನ್ನ ಹಿತಕ್ಕಾಗಿಯೇ ದಯಮಾಡಿರುತ್ತೀರಿ. ತಾವು ಈ ಸ್ಥಿತಿಯಲ್ಲಿರುವ ನನಗೆ ಧರ್ಮಸಾಧನೆಗೆ ಯಾವುದಾದರೂ ಒಂದು ಉಪಾಯವನ್ನು ಹೇಳಿರಿ.

೧೦. ನಾವು ನಿಮ್ಮೊಡನೆಯೂ, ಮತ್ತು ಸೇವಕರು, ಸಹೋದರರು, ಇವರೊಡನೆಯೂ ಈ ನಿರ್ಜನವಾದ ಕಾಡಿನಲ್ಲಿ ಹನ್ನೆರಡು ವರ್ಷಗಳನ್ನು ಹೇಗೆ ಕಳೆಯುವುದು? ಎಂದು ಕೇಳಿದೆನು.

೧೧. ಆಗ ಅವರಲ್ಲಿ ಮೈತ್ರೇಯನು ನನ್ನನ್ನು ಕುರಿತು "ಅಯ್ಯಾ ಯುಧಿಷ್ಠಿರ—ನಾನು ದಿವ್ಯದೃಷ್ಟಿಯಿಂದ ತಿಳಿದ ಪ್ರಾಚೀನಕಾಲದ ಒಂದು ವೃತ್ತಾಂತವನ್ನು ಹೇಳುವೆನು ಕೇಳು ಎಂಬದಾಗಿ ಹೇಳತೊಡಗಿದನು.

೧೨. ಒಂದು ತಪೋವನದಲ್ಲಿ ಒಬ್ಬ ಬ್ರಹ್ಮಚಾರಿಣಿಯಾದ ಬ್ರಾಹ್ಮಣ ಸ್ತ್ರೀಯು ಇದ್ದಳು. ಅವಳು ಕುರೂಪಿ, ಅದೃಷ್ಟಹೀನೆ, ಹೀಗೆ ಆಕೆ ದುಃಖದಿಂದ ಇದ್ದರೂ ಮುನಿವರ್ಯರನ್ನೂ ಬ್ರಾಹ್ಮಣರನ್ನೂ ಪೂಜಿಸುತ್ತಿದ್ದಳು.

ಶೌಚೇನ ತುಷ್ಟಾ ಮುನಯಃ ಪ್ರಶ್ರಯೇಣ ದಮೇನ ಚ ।
ಪ್ರೋಚುರ್ವದ ವಿಶಾಲಾಕ್ಷಿ ಕಿಂಕುರ್ಮಸ್ತವ ಸುವ್ರತೇ ॥ ೧೩ ॥

ಸಾ ತಾನುವಾಚ ಕಿಂ ತನ್ಮೇ ವ್ರತಂ ದಾನಮಥಾಪಿ ವಾ ।
ಕಥಯಧ್ವಂ ಭವೇಯಂ ವೈ ಯೇನ ಶ್ರೀಸುಖಭಾಗಿನೀ ॥ ೧೪ ॥

ಆಧಾರಭೂತಾ ಭೂತಾನಾಂ ಬಹ್ವಪತ್ಯಾ ಪತಿಪ್ರಿಯಾ ।
ಸ್ಪೃಹಣೀಯಾ ತ್ರಿಜಗತಾಂ ತ್ರಿವರ್ಗಫಲಭಾಗಿನೀ ॥ ೧೫ ॥

ವಸಿಷ್ಠಸ್ತಾಮುವಾಚಾಥ ಶ್ರುಣುಷ್ವ ಕಥಯಾಮಿ ತೇ ।
ದಾನಂ ಮಾನಕರಂ ಪುಂಸಾಂ ಸರ್ವಕಾಮಪ್ರದಾಯಕಂ ॥ ೧೬ ॥

---

೧೩. ಮುನಿಗಳು ಈಕೆಯ ಶೌಚನಿಯಮ, ವಿನಯ, ಶಾಂತಿ ಈ ಗುಣಗಳಿಂದ ಸಂತುಷ್ಟರಾಗಿ ಎಲೌ ವಿಶಾಲಾಕ್ಷಿ! ನೀನು ವ್ರತನಿಷ್ಠಳಾಗಿದ್ದೀಯೆ. ಆದಾಗ್ಯೂ ನಮ್ಮಿಂದ ನಿನಗೇನಾಗಬೇಕೆಂಬುದನ್ನು ಹೇಳು ಎಂದು ಕೇಳಿದರು.

೧೪-೧೫. ಅದನ್ನು ಕೇಳಿ ಆಕೆಯು ಮುನಿಗಳನ್ನು ಕುರಿತು ಮುನಿವರ್ಯರೆ! ನಾನು ಯಾವ ಆಚರಣೆಯಿಂದ ಸಂಪದ್ಯುಕ್ತಳೂ ಸುಖಿಯೂ ಮತ್ತು ಸಕಲ ಭೂತಗಳಿಗೆ ಆಧಾರಳೂ, ಪತಿಗೆ ಪ್ರೀತಿಪಾತ್ರಳೂ, ಬಹುಸಂತಾನ ಉಳ್ಳವಳೂ ಮೂರು ಲೋಕಗಳಿಗೂ ಇಷ್ಟಳೂ, ಧರ್ಮ, ಅರ್ಥ, ಕಾಮ ಎಂಬ ಮೂರು ಫಲಪ್ರಾಪ್ತಿಗೆ ಅರ್ಹಳೂ ಆಗುವೆನೋ ಅಂತಹ ವ್ರತ, ದಾನ ಮುಂತಾದ ಯಾವುದನ್ನಾದರೂ ಕೃಪೆಮಾಡಿ ಹೇಳಿ ಎಂದು ಹೇಳಿದಳು.

೧೬. ಆಗ ವಸಿಷ್ಠ ಮಹರ್ಷಿಗಳು ಆಕೆಯನ್ನು ಕುರಿತು " ಪುರುಷರಿಗೆ ಸಕಲ ಅಭೀಷ್ಟಗಳನ್ನೂ ಉಂಟುಮಾಡತಕ್ಕದ್ದೂ, ಗೌರವವನ್ನು ಉಂಟುಮಾಡತಕ್ಕದ್ದೂ ಆದ ಒಂದು ದಾನವನ್ನು ಹೇಳುತ್ತೇನೆ ಕೇಳು " ಎಂದು ಹೇಳ ತೊಡಗಿದರು.

ಕೃತ್ವಾ ತಾಮ್ರಮಯೀಂ ಸ್ಥಾಲೀಂ ಪಲಾನಾಂ ಪಂಚಭಿಃ ಶತೈಃ ।
ಅಶಕ್ತಸ್ತು ತದರ್ಧೇನ ಚತುರ್ಥಾಂಶೇನ ವಾ ಪುನಃ ॥ ೧೭ ॥

ಸರ್ವಶಕ್ತಿವಿಹೀನಸ್ತು ಮೃಣ್ಮಯೀಮಪಿ ಕಾರಯೇತ್ ।
ಸುಗಂಭೀರೋದರದರೀಧೃಢದಂಡಕುಟುಂಬಕಾಂ ॥ ೧೮ ॥

ಮುದ್ಗತಂಡುಲನಿಷ್ಪನ್ನ ಸುಸ್ವಿನ್ನಕ್ಷಿಪ್ರಪೂರಿತಾಂ ।
ಉಪದಂಶೋದಕಯುತಾಂ ಘೃತದಾತ್ರಸಮನ್ವಿತಾಂ ॥ ೧೯ ॥

ಧೌತಪಾರ್ಶ್ವಾಂ ಧೌತಕರ್ಣಾಂ ಚರ್ಚಿತಾಂ ಚಂದನೇನ ಚ ।
ಸ್ಥಾಪ್ಯ ಮಂಡಲಕೇ ವಸ್ತ್ರೈಃ ಪುಷ್ಪಧೂಪೈರಥಾರ್ಚಯೇತ್ ॥ ೨೦ ॥

ಆದಿತ್ಯೇಽಹನಿ ಸಂಕ್ರಾಂತೌ ಚತುರ್ದಶ್ಯಷ್ಟಮೀಷು ವಾ ।
ಏಕಾದಶ್ಯಾಂ ತೃತೀಯಾಯಾಂ ವಿಪ್ರಾಯ ಪ್ರತಿಪಾದಯೇತ್ ॥೨೧॥

---

೧೭. ಐದುನೂರು ಪಲ (ಪಲ ೬೪ ಗುಲಗಂಜಿ ತೂಕ) ತಾಮ್ರದಿಂದಲೋ ಅಷ್ಟಕ್ಕೆ ಶಕ್ತಿ ಇಲ್ಲದಿದ್ದರೆ ಅದರ ಅರ್ಧದಷ್ಟು ಎಂದರೆ ೨೫೦ ಪಲದಿಂಲೋ ಅದಕ್ಕೂ ಶಕ್ತಿಯಿಲ್ಲದಿದ್ದರೆ ೧೨೫ ಪಲ ತೂಕ ತಾಮ್ರದಿಂದಲೋ ಒಂದು ತಪ್ಪಲೆಯನ್ನು ಮಾಡಿಸಬೇಕು.

೧೮. ಆರೀತಿ ಮಾಡಿಸುವುದಕ್ಕೂ ಶಕ್ತಿಸಾಲದಿದ್ದರೆ ಮಣ್ಣಿನಿಂದಲಾದರೂ ಮಾಡಿಸಬೇಕು. ಆ ಸ್ಥಾಲಿಯ ಹೊಟ್ಟೆಯಲ್ಲಿ ಗಂಭೀರವಾದ ರಂಧ್ರವುಳ್ಳ (ಗಿಂಡಿಯಂತೆ) ದಂಡ ಉಳ್ಳದ್ದಾಗಿರಬೇಕು.

೧೯. ಮತ್ತು ಅದರಲ್ಲಿ ಚೆನ್ನಾಗಿ ಶುದ್ಧಿಮಾಡಿದ ಹೆಸರು, ಅಕ್ಕಿ, ಇವುಗಳನ್ನೂ ಮತ್ತು ನೀರನ್ನೂ ಸಹ ತುಂಬಬೇಕು. ಘೃತಪಾತ್ರೆಯ ಸಮೇತ ಅದನ್ನು ಇರಿಸಿ ಅದರ ಪಾರ್ಶ್ವಗಳಲ್ಲೂ ಮತ್ತು ಕಿವಿಗಳಲ್ಲೂ ಬೆಳ್ಳಗಿರುವಂತೆ ಚಂದನವನ್ನು ಲೇಪಿಸಬೇಕು.

೨೦-೨೧. ಈರೀತಿಯಾದ ಸ್ಥಾಲಿ(ತಪ್ಪಲೆ) ಯನ್ನು ಮಂಡಲವಲ್ಲಿ ಇರಿಸಿ ಭಾನುವಾರ, ಸಂಕ್ರಾಂತಿ, ಚತುರ್ದಶೀ, ಅಷ್ಟಮೀ, ಏಕಾದಶಿ, ತೃತೀಯಾ ಈ ತಿಥಿಗಳಲ್ಲಿ ಯಾವುದರಲ್ಲಿಯಾಗಲಿ ಬ್ರಾಹ್ಮಣನನ್ನು ವಸ್ತ್ರ ಪುಷ್ಪ ಧೂಪಾದಿಗಳಿಂದ ಪೂಜಿಸಿ ಆ ಕಲಶವನ್ನು ಆತನಿಗೆ ದಾನಮಾಡಬೇಕು.

ಜ್ವಲಜ್ಜ್ವಲನಪಾರ್ಶ್ವಸ್ಥೈಸ್ತಂಡುಲೈಃ ಸಜಲೈರಪಿ ।
ನ ಭವೇದ್ಭೋಜ್ಯಸಂಸಿದ್ಧಿರ್ಭೂತಾನಾಂ ಪಿಠರೀಂ ವಿನಾ ॥ ೨೨ ॥

ತ್ವಂ ಸಿದ್ಧಿಃ ಸಿದ್ಧಿಕಾಮಾನಾಂ ತ್ವಂ ಪುಷ್ಟಿಃ ಪುಷ್ಟಿಮಿಚ್ಛತಾಂ ।
ಅತಸ್ತ್ವಾಂ ಪ್ರಣಮಾಮ್ಯಾಶು ಸತ್ಯಂ ಕುರು ವಚೋ ಮಮ ॥ ೨೩ ॥

ಜ್ಞಾತಿಬಂಧುಸುಹೃದ್ವರ್ಗೇ ವಿಪ್ರೇ ಪ್ರೇಷ್ಯಜನೇ ತಥಾ ।
ಅಭುಕ್ತವತಿ ನಾಶ್ನೀಯಾತ್ತಥಾ ಭವ ವರಪ್ರದಾ ॥ ೨೪ ॥

ಇತ್ಯುಚ್ಚಾರ್ಯ ಪ್ರದಾತವ್ಯಾ ಹಂಡಿಕಾ ದ್ವಿಜಪುಂಗವೇ ।
ತುಷ್ಟಿಪುಷ್ಟಿಪ್ರದಾ ಪುಂಸಾಂ ಸರ್ವಾನ್ಕಾಮಾನಭೀಪ್ಸತಾ ॥ ೨೫ ॥

ವಸಿಷ್ಠವಚನಂ ಶ್ರುತ್ವಾ ಸಾ ಚಕಾರ ತಥೈವ ತು ।
ಪ್ರಾದಾತ್ಸ್ಥಾಲೀಂ ಬ್ರಾಹ್ಮಣಾಯ ಬಹೂನಾಂ ಬಹುದಕ್ಷಿಣಾಂ ॥೨೬॥

---

೨೨. ನೀರಿನ ಸಮೇತವಾದ ತಂಡುಲವು ಉರಿಯುತ್ತಿರುವ ಅಗ್ನಿಯ ಹತ್ತಿರವಿದ್ದರೂ ಸಹ ಈ ಥಾಲಿಯ ಸಹಾಯವಿಲ್ಲದೆ ಇದ್ದರೆ ಭೋಜನಾರ್ಹವಾದ ಅನ್ನವಾಗಲಾರದು.

೨೩. ನೀನು ಸಿದ್ಧಿಯನ್ನಪೇಕ್ಷಿಸತಕ್ಕವರಿಗೆ ಸಿದ್ಧಿದಾಯಕಳೂ ಪುಷ್ಟಿಯನ್ನು ಅಪೇಕ್ಷಿಸುವವರಿಗೆ ಪುಷ್ಟಿದಾಯಕಳೂ ಆಗಿ ಇದ್ದೀಯೆ. ಆದುದರಿಂದ ನಿನ್ನನ್ನು ನಮಸ್ಕರಿಸುತ್ತೇನೆ. ನನ್ನ ಮಾತನ್ನು ಸತ್ಯವಾದುದನ್ನಾಗಿ ಮಾಡು.

೨೪. ಜ್ಞಾತಿ, ಬಂಧು, ಸ್ನೇಹಿತರು, ಬ್ರಾಹ್ಮಣರು, ಮತ್ತು ಯೋಗ್ಯರಾದ ಇತರರು ಇವರುಗಳೊಡನೆ ಭೋಜನವು ಲಭಿಸುವ ರೀತಿ ನನಗೆ ವರ ಕೊಡುವವಳಾಗು ಎಂದು ಹೇಳಬೇಕು.

೨೫. ಸಕಲ ಅಭೀಷ್ಟಗಳನ್ನು ಹೊಂದಬೇಕೆಂಬ ಅಭಿಲಾಷೆಯುಳ್ಳವನು ಮೇಲೆ ಹೇಳಿದಂತೆ ಪ್ರಾರ್ಥಿಸಿ ಬ್ರಾಹ್ಮಣನಿಗೆ ದಾನಮಾಡಬೇಕು. ಎಂಬದಾಗಿ ವಸಿಷ್ಠರು ಹೇಳಿದರು.

೨೬. ಬಳಿಕ ಆಕೆಯು ವಸಿಷ್ಠರ ಮಾತಿನಂತೆ ಬಹಳ ದಕ್ಷಿಣೆ ಸಮೇತವಾಗಿ ಬ್ರಾಹ್ಮಣೋತ್ತಮನಿಗೆ ಆರೀತಿ ಥಾಲಿಯನ್ನು ದಾನಮಾಡಿದಳು.

ಸಾ ಚೈಷಾ ದ್ರೌಪದೀ ಪಾರ್ಥ ಭವದ್ಭಾರ್ಯಾಽಭವತ್ಪ್ರಿಯಾ ।
ತೇನ ದಾನಪ್ರಭಾವೇಣ ಭವಿತಾಽಶೂನ್ಯಪಾಣಿಕಾ ॥ ೨೭ ॥

ಏಷಾ ಸತೀ ಶಚೀ ಸ್ವಾಹಾ ಸಾವಿತ್ರೀ ಭೂರರುಂಧತೀ ।
ಶ್ರೀರೇಷಾ ಯತ್ರ ವಸತಿ ನ ಕಿಂಚಿತ್ತತ್ರ ದುರ್ಲಭಂ ॥ ೨೮ ॥

ಅನಯಾ ಯಾ ಭೃತಾ ಸ್ಥಾಲೀ ತಯಾ ಸರ್ವಮಿದಂ ಜಗತ್ ।
ಭೋಜಯಿಷ್ಯಸಿ ಕೌಂತೇಯ ಕಿಮುತೋ ಬ್ರಾಹ್ಮಣಾ ಅಮೀ ॥ ೨೯ ॥

ಮೈತ್ರೇಯಾತ್ತದುಪಶ್ರುತ್ಯ ತತ್ರ ಸಂಹೃಷ್ಟಮಾನಸಃ ।
ಪೂರ್ವಂ ಭೋಜಿತವಾನಸ್ಮಿ ಬಹುವಿಪ್ರಜನಾನ್ವನೇ ॥ ೩೦ ॥

ಅನ್ನದಾನಪ್ರಸಂಗೇನ ಸ್ಥಾಲೀದಾನಮಿದಂ ಮಯಾ ।
ಕಥಿತಂ ಪುಂಡರೀಕಾಕ್ಷ ಕ್ಷಂತವ್ಯಮನಸೂಯಯಾ ॥ ೩೧ ॥

---

೨೭. ಅಯ್ಯಾ ಕುಂತೀಪುತ್ರನೇ! ಹಿಂದಿನ ಜನ್ಮದಲ್ಲಿ ಮಾಡಿದ ಆ ದಾನ ಮಹಿಮೆಯಿಂದ ಆಕೆಯೇ ಈಗ ದ್ರೌಪದಿಯೆನಿಸಿ ನಿನ್ನ ಭಾರ್ಯೆಯಾಗಿರುವಳು. ಅವಳು ಎಂದಿಗೂ ಬರಿಗೈಯ್ಯವಳಾಗಿ ಆಗಲಾರಳು.

೨೮. ಎಲೈ ಯುಧಿಷ್ಠಿರ! ಈ ದ್ರೌಪದಿಯು ಸಂಪಾದಿಸಿ ಇಟ್ಟುಕೊಂಡಿರುವ (ಅಕ್ಷಯಪಾತ್ರೆ) ಥಾಲಿಯಿಂದ ಜಗತ್ತಿಗೆಲ್ಲಾ ಭೋಜನಮಾಡಿಸುವಂತಹ ಸಾಮರ್ಥ್ಯ ಉಳ್ಳವನಾಗಿದ್ದೀ ಅಂತಹದರಲ್ಲಿ ಈ ಬ್ರಾಹ್ಮಣರಿಗೆ ಆಗಲಾರದೇ ? ಎಂದು ಮೈತ್ರೇಯನು ಹೇಳಿದನು.

೨೯. ಮೈತ್ರೇಯನು ಹೇಳಿದ ಈ ಮಾತನ್ನು ನಾನು ಕೇಳಿ ಸಂತುಷ್ಟ ಮನನಾಗಿ, ಸ್ವಾಮಿ ವಿಪ್ರವರ್ಯರೇ! ಪೂರ್ವದಲ್ಲಿ ವನದಲ್ಲಿ ಅನೇಕ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದ್ದೇನೆ.

೩೦. ಅಯ್ಯಾ ಕೃಷ್ಣಾ—ಈ ಅನ್ನದಾನ ಪ್ರಸಂಗವಶದಲ್ಲಿ ನಾನೂ ಈ ಸ್ಥಾಲೀದಾನವಿಚಾರವನ್ನು ಹೇಳಿದೆನು. ಈ ಔದ್ಧತ್ಯಕ್ಕಾಗಿ ನನ್ನನ್ನು ಕ್ಷಮಿಸು ಎಂದನು.

**ಸ್ಥಾಲೀಂ ವಿಶಾಲವದನಾಂ ಚ ಸತಂಡುಲಾಂ ಚ ।**
**ಯಚ್ಛಂತಿ ಯೇ ಮಧುರಶುಲ್ಬಮಯೀಂ ದ್ವಿಜೇಭ್ಯಃ ॥**
**ತೇಷಾಂ ಸುಹೃತ್ಸ್ವಜನವಿಪ್ರಜನೇನ ಭೋಜ್ಯಂ ।**
**ಸಂಭುಜ್ಯಮಾನಮಪಿ ಕೃಷ್ಣ ನಯಾತಿ ನಾಶಂ ॥ ೩೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಸ್ಥಾಲೀದಾನ ವಿಧಿವರ್ಣನಂ ನಾಮ ಸಪ್ತತ್ಯುತ್ತರಶತತಮೋಽಧ್ಯಾಯಃ.**



---

೩೨. ವಿಶಾಲವಾದ ಬಾಯಿ ಉಳ್ಳ ತಪ್ಪಲೆಯನ್ನು ತಂಡುಲ ಸಮೇತವಾಗಿ ಬ್ರಾಹ್ಮಣರಿಗೆ ದಾನಮಾಡುವಂತಹವರು; ಸ್ನೇಹಿತರು ಬಂಧುಗಳು ಬ್ರಾಹ್ಮಣರು ಇವರನ್ನು ಭೋಜನಮಾಡಿಸತಕ್ಕ ಸಾಮರ್ಥ್ಯವನ್ನು ಪಡೆಯುತ್ತಾರೆ. ಜನರು ಅನುಭವಿಸಿದಷ್ಟೂ ಆ ಸಾಮರ್ಥ್ಯವು ನಾಶವಾಗದೆ ಅಕ್ಷಯವಾಗುವುದು.

ಇಲ್ಲಿಗೆ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದ ರೂಪವಾದ ಸ್ಥಾಲೀ ದಾನವನ್ನು ಮಾಡತಕ್ಕ ವಿಧಾನದ ವರ್ಣನೆಯೆಂಬ ನೂರಎಪ್ಪತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕಸಪ್ತತ್ಯುತ್ತರಶತತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ದಾಸೀದಾನಮಹಂ ತೇಽದ್ಯ ಪ್ರವಕ್ಷ್ಯಾಮ್ಯರಿಸೂದನ ।
ಭಕ್ತ್ಯಾ ಸ್ನೇಹಾಚ್ಚ ಭವತೋ ಯನ್ನೋಕ್ತಂ ಕೇನಚಿತ್ಕ್ವಚಿತ್ ||೧||

ಚತುರ್ಣಾಮಾಶ್ರಮಾಣಾಂ ಹಿ ಗೃಹಸ್ಥಃ ಶ್ರೇಷ್ಠ ಉಚ್ಯತೇ ।
ಗೃಹಸ್ಥಾಚ್ಚ ಗೃಹಂ ಶ್ರೇಷ್ಠಂ ಗೃಹಾಚ್ಛ್ರೇಷ್ಠಾ ವರಾಃ ಸ್ತ್ರಿಯಃ || ೨ ||

ಪೂರ್ಣೇಂದುಬಿಂಬವದನಾಃ ಪೀನೋನ್ನತಪಯೋಧರಾಃ ।
ತದ್ಗೃಹಂ ಯತ್ರ ದೃಶ್ಯಂತೇ ಯೋಷಿತಃ ಶೀಲಮಂಡನಾಃ || ೩ ||

---

## ನೂರಎಪ್ಪತ್ತೊಂದನೆಯ ಅಧ್ಯಾಯ

೧. ಶತ್ರುಧ್ವಂಸಕನಾದ ಯುಧಿಷ್ಠಿರ—ಯಾರೂ ಯಾವಾಗಲೂ ಹೇಳಿಲ್ಲವಂತಹ ದಾಸೀ ದಾನವಿಚಾರವನ್ನು ನಿನ್ನ ಮೇಲಣ ಸ್ನೇಹದಿಂದಲೂ ನಿನ್ನ ಭಕ್ತಿಗಾಗಿಯೂ ನಿನಗೆ ಹೇಳುವೆನು ಕೇಳು.

೨. ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠವೆಂದೂ, ಆ ಗೃಹಸ್ಥಾಶ್ರಮದಲ್ಲಿ ಸ್ವಗೃಹ ಶ್ರೇಷ್ಠವೆಂತಲೂ, ಅದರಲ್ಲೂ ಉತ್ತಮರಾದ ಸ್ತ್ರೀಯಿರುವುದು ಇನ್ನೂ ಶ್ರೇಷ್ಠವೆಂದೂ ಉಕ್ತವಾಗಿದೆ.

೩. ಪೂರ್ಣಚಂದ್ರನಂತೆ ಕಾಂತಿಯುಕ್ತವಾದ ಮುಖವುಳ್ಳವರಾಗಿಯೂ ಶೀಲವೇ ಭೂಷಣವಾಗಿಯೂ, ಇರತಕ್ಕ ಸ್ತ್ರೀಯರನ್ನು ಉಳ್ಳ ನಿವಾಸವೇ ನಿಜವಾದ ಗೃಹವೆನಿಸುವುದು.

ಜಾಮಯೋ ಯತ್ರ ಪೂಜ್ಯಂತೇ ರಮಂತೆ ತತ್ರದೇವತಾಃ |
ಯತ್ರೈತಾಸ್ತು ನ ಪೂಜ್ಯಂತೇ ವಿನಂಕ್ಷತ್ಯಾಶು ತದ್ಗೃಹಂ || ೪ ||

ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ |
ತಾನಿ ಕೃತ್ಯಾಹತಾನೀವ ಸದ್ಯೋಯಾಂತಿ ಪರಾಭವಂ || ೫ ||

ಅಮೃತಸ್ಯೇವ ಕುಂಡಾನಿ ಸುಖಾನಾಮಿವ ರಾಶಯಃ |
ರತೇರಿವ ನಿಧಾನಾನಿ ಯೋಷಿತಃ ಕೇನ ನಿರ್ಮಿತಾಃ || ೬ ||

ಶ್ಯಾಮಾ ಮಂಥರಗಾಮಿನ್ಯಃ ಪೀನೋನ್ನತಪಯೋಧರಾಃ |
ಮಹಿಷ್ಯೋ ವರನಾರ್ಯಶ್ಚ ನ ಭವಂತಿ ಗೃಹೇಗೃಹೇ || ೭ ||

ಅಹಿರಣ್ಯಮದಾಸೀಕಮಲ್ಪಾನ್ನಾಜ್ಯಮಗೋರಸಂ |
ಗೃಹಂ ಕೃಪಣವೃತ್ತೀನಾಂ ನರಕಸ್ಯಾಪರೋ ವಿಧಿಃ || ೮ ||

---

೪. ಸ್ತ್ರೀಯರು ಎಲ್ಲಿ ಪೂಜಿಸಲ್ಪಡುವರೋ ಅಲ್ಲಿ ದೇವತೆಗಳೆಲ್ಲರೂ ಆನಂದಿಸುತ್ತಾರೆ. ಇವರು ಎಲ್ಲಿ ಪೂಜಿಸಲ್ಪಡುವುದಿಲ್ಲವೋ ಅಂತಹ ಗೃಹವು ಜಾಗ್ರತೆಯಾಗಿ ಕ್ಷೀಣಿಸುತ್ತದೆ.

೫. ಸಾಧ್ವೀಮಣಿಯರು ಪುರಸ್ಕರಿಸಲ್ಪಡದೇ ಯಾವ ಮನೆಗಳಿಗೆ ಶಾಪವನ್ನು ಕೊಡುತ್ತಾರೋ ಅಂತಹ ಗೃಹಗಳು ಶೂನ್ಯಾದಿಗಳಿಂದ ಅಹತವಾದಂತೆ ಆ ಕ್ಷಣವೇ ಕ್ಷೀಣತೆಯನ್ನು ಹೊಂದುತ್ತವೆ.

೬-೮. ಅಮೃತ ತುಂಬಿದ ಕಲಶಗಳಂತೆಯೂ ಸುಖದ ರಾಶಿಗಳಂತೆಯೂ ರತಿಕ್ರೀಡೆಯ ನಿಧಿಯಂತೆಯೂ ಇರುವ ರಮಣಿಯರನ್ನು ಯಾವ ಮಹಾನುಭಾವರು ನಿರ್ಮಿಸಿದರೋ, ಹದಿನಾರುವರ್ಷದ ಪ್ರಾಯದವರಾಗಿಯೂ, ಮಂದಗಮನೆಯರಾಗಿಯೂ, ದಪ್ಪವೂ ಉನ್ನತವೂ ಆದ ಸ್ತನಗಳುಳ್ಳವರಾಗಿಯೂ, ಪಟ್ಟಾಭಿಷೇಕಕ್ಕೆ ಅರ್ಹರಾಗಿಯೂ, ಇರತಕ್ಕ ಸ್ತ್ರೀಯರೂ ಪ್ರತಿಯೊಂದು ಮನೆಯಲ್ಲೂ ಸಿಕ್ಕಲಾರರು. ಯಾವ ಗೃಹದಲ್ಲಿ ಸಮೃದ್ಧಿಯಾಗಿ ಸುವರ್ಣ, ದಾಸೀಜನರು ಇವು ಯಾವುವೂ ಇಲ್ಲವೊ, ಸ್ವಲ್ಪ ಅನ್ನ ಮತ್ತು ಸ್ವಲ್ಪ ತುಪ್ಪ ಮಾತ್ರ ಇರುವುದೋ, ಮತ್ತು ಗೋಕ್ಷೀರ ಶೂನ್ಯವಾಗಿಯೂ ಕೃಪಣಸ್ಥಿತಿಯುಳ್ಳದಾಗಿಯೂ ಇರುವುದೋ ಆ ಮನೆಯು ನರಕಸದೃಶವೇ ಸರಿ.

**ಅದಂಡಪಾಶಿಕಂ ಗ್ರಾಮಮದಾಸೀಕಂ ಚ ಯದ್ಗೃಹಂ ।**
**ಅನಾಜ್ಯಂ ಭೋಜನಂ ಯಚ್ಚ ವೃಥಾ ತದಿತಿ ಮೇ ಮತಿಃ ॥ ೯ ॥**

**ವಿಭವಾಭರಣಾ ದಾಸ್ಯೋ ಯದ್ಗೃಹಂ ಸಮುಪಾಸತೇ ।**
**ತತ್ರಾಸ್ತೇ ಪಂಕಜಕರಾ ಲಕ್ಷ್ಮೀಃ ಕ್ಷೀರೋದವಾಸಿನೀ ॥ ೧೦ ॥**

**ನ ಯತ್ರಾಸ್ತಿ ಗೃಹೇ ಶೌಚಂ ನ ಸುಖಂ ವ್ಯವಹಾರಜಂ ।**
**ಯತ್ರ ವಾ ನಾಸ್ತಿ ದಾಸ್ಯೇಕಾ ತತ್ಸದೈವಾನವಸ್ಥಿತಂ ॥ ೧೧ ॥**

**ಯತ್ರ ಕರ್ಮಕರೀ ನಾಸ್ತಿ ಸರ್ವಕರ್ಮಕರೀ ಸದಾ ।**
**ನತಚ್ಛೃತಂ ಕಿಂಕರಾಣಾಂ ಕರೋತಿ ಶುಭತಾಮಪಿ ॥ ೧೨ ॥**

**ಯದೇಕಾ ಕುರುತೇ ದಾಸೀ ಗೃಹಸ್ಥೇನ ಭೃತಾ ಹಿ ಸಾ ।**
**ಬಹುಲೋಕಾಕುಲೋ ಗ್ರಾಮೋ ದಾಸೀದಾಸಾಕುಲಂ ಗೃಹಂ ॥೧೩॥**

---

೯. ದಂಡ ವಿಧಾನಾದಿ ಶಿಕ್ಷಾಶೂನ್ಯವಾದ (ಮುಖಂಡರಿಲ್ಲದ) ಗ್ರಾಮ, ದಾಸೀರಹಿತವಾದ ಮನೆ, ತುಪ್ಪವಿಲ್ಲದ ಊಟ ಇವುಗಳೆಲ್ಲ ವ್ಯರ್ಥವಾದುವೆಂದು ನನ್ನ ಅಭಿಪ್ರಾಯ.

೧೦. ಯಾವ ಮನೆಯಲ್ಲಿ ದಾಸಿಯರು ಬಹು ವಸ್ತ್ರಾಭರಣ ಉಳ್ಳವರಾಗಿರುವರೋ ಅಲ್ಲಿ ಪದ್ಮಹಸ್ತೆಯೂ, ಕ್ಷೀರಸಮುದ್ರದಲ್ಲಿ ವಾಸಿಸುವಳೂ ಆದ ಲಕ್ಷ್ಮಿಯು ಸ್ಥಿರವಾಗಿ ಇರುತ್ತಾಳೆ.

೧೧. ಯಾವ ಮನೆಯಲ್ಲಿ ಶುಚಿಯೂ, ವ್ಯಾವಹಾರಿಕವಾದ ಸೌಖ್ಯವೂ ಒಬ್ಬಳಾದರೂ ದಾಸಿಯೂ ಇಲ್ಲವೋ ಅಂತಹ ಮನೆಯು ಯಾವಾಗಲೂ ವ್ಯವಸ್ಥೆಯಿಲ್ಲದೆ ಅಸಹ್ಯವಾಗಿರುವುದು.

೧೨. ಸಕಲ ಕಾರ್ಯದಕ್ಷಳಾದ ದಾಸಿಯೊಬ್ಬಳು ಇರದೆ ಅಲ್ಲಿ ನೂರಾರು ಸೇವಕರಿದ್ದರೂ ಆ ಮನೆಯು ಶೋಭಿಸುವುದಿಲ್ಲ.

೧೩. ಗೃಹಸ್ಥನಿಂದ ಚೆನ್ನಾಗಿ ಪೋಷಿತಳಾದ ಒಬ್ಬಳು ದಾಸಿಯು ಗೃಹ ಕಾರ್ಯಗಳನ್ನೆಲ್ಲಾ ನಿರ್ವಹಿಸುತ್ತಾಳೆ. ಬಹಳ ಜನಗಳು ಇರುವ ಸ್ಥಳಕ್ಕೆ ಗ್ರಾಮವೆಂದೂ, ದಾಸೀ ಮತ್ತು ದಾಸ ಇವರಿಂದ ಮಾತ್ರ ಕೂಡಿರತಕ್ಕದಕ್ಕೆ ಗೃಹ (ಮನೆ) ವೆಂದೂ ಹೆಸರು.

**ಬುದ್ಧಿರ್ಧರ್ಮಾಕುಲಾ ಯಸ್ಯ ತಸ್ಯ ಚೇತಃ ಕಿಮಾಕುಲಂ ।**
**ಯತ್ರ ಭಾರ್ಯಾ ಗೃಹೇ ದಕ್ಷಾ ದಾಸ್ಯಃಕರ್ಮಣ್ಯನುವ್ರತಾಃ ॥ ೧೪ ॥**

**ಭೃತ್ಯಾಃ ಸದೋದ್ಯಮಪರಾಸ್ತ್ರಿವರ್ಗಸ್ತತ್ರ ದೃಶ್ಯತೇ ।**
**ಯದ್ಯದಿಷ್ಟತಮಂ ಲೋಕೇ ತತ್ತದ್ದೇಯಮಿತಿ ಶ್ರುತಿಃ ॥ ೧೫ ॥**

**ಏತದ್ವಿಚಾರ್ಯ ಹೃದಯೇ ದೇಯಾ ದಾಸೀ ದ್ವಿಜಾತಯೇ ।**
**ಸ್ಥಿರನಕ್ಷತ್ರ ಸಂಯುಕ್ತೇ ಸೋಮೇ ಸೌಮ್ಯಗ್ರಹಾನ್ವಿತೇ ॥ ೧೬ ॥**

**ದಾನಕಾಲಂ ಪ್ರಶಂಸಂತಿ ಸಂತಃ ಪರ್ವಣಿ ವಾ ಪುನಃ ।**
**ಅಲಂಕೃತ್ಯ ಯಥಾಶಕ್ತ್ಯಾ ವಾಸೋಭಿರ್ಭೂಷಣೈಸ್ತಥಾ ॥ ೧೭ ॥**

---

೧೪-೧೫. ಮನುಜನ ಬುದ್ಧಿಯು ಧರ್ಮಪರವಾಗಿರುವುದಾದರೆ ಅದು ಹುಚ್ಚುತನಕ್ಕೆ ತಿರುಗುವುದಿಲ್ಲ. ಯಾವನ ಮನೆಯಲ್ಲಿ ಪತ್ನಿಯು ಕಾರ್ಯನಿರ್ವಾಹ ಮಾಡುವ ಸಾಮರ್ಥ್ಯ ಉಳ್ಳವಳೋ, ದಾಸಿಯರು ತಮ್ಮ ಕರ್ಮಗಳಲ್ಲಿ ಆಸಕ್ತರಾಗಿರುವರೋ, ಸೇವಕರು ಯಾವಾಗಲೂ ಕಾರ್ಯಸಕ್ತರಾಗಿರುತ್ತಾರೋ, ಅಲ್ಲಿ (ತ್ರಿವರ್ಗ) ಧರ್ಮ, ಅರ್ಥ, ಕಾಮ ಈ ಮೂರು ಪುರುಷಾರ್ಥಗಳೂ ಲಭಿಸುತ್ತವೆ. ಲೋಕದಲ್ಲಿ ಯಾರು ಯಾರಿಗೆ ಯಾವುದು ಅತಿ ಇಷ್ಟವೋ ಅದನ್ನೇ ದಾನಕೊಡಬೇಕು ಎಂದು ಶ್ರುತಿವಚನವಿದೆ.

೧೬. ಇವೆಲ್ಲವನ್ನೂ ಮನಸ್ಸಿನಲ್ಲಿ ವಿಚಾರಮಾಡಿ ಸ್ಥಿರನಕ್ಷತ್ರದಿಂದ ಕೂಡಿಯೂ, ಚಂದ್ರನು ಸಾಮ್ಯಗಳಾದ ಗ್ರಹಗಳೊಡನೆ ಕೂಡಿಯೂ ಇರತಕ್ಕ ಕಾಲದಲ್ಲಿ ಬ್ರಾಹ್ಮಣನಿಗೆ ದಾಸಿಯನ್ನು ದಾನಮಾಡಬೇಕು.

೧೭. ಆ ಕಾಲವಲ್ಲದಿದ್ದರೆ—ಸತ್ಪುರುಷರು ಪರ್ವಕಾಲವನ್ನು ದಾನ ಮಾಡತಕ್ಕ ಕಾಲವೆಂದು ಪ್ರಶಂಸೆಮಾಡಿದ್ದಾರೆ. ಆ ಕಾಲದಲ್ಲಿಯಾದರೂ ದಾನ ಮಾಡಬೇಕು. ಮತ್ತು ದಾನಮಾಡುವ ಆ ದಾಸಿಯನ್ನು ತನ್ನ ಶಕ್ತ್ಯನುಸಾರ ವಸ್ತ್ರಾಭರಣಗಳಿಂದ ಅಲಂಕರಿಸಬೇಕು.

ಬ್ರಾಹ್ಮಣಾಯ ಪ್ರದಾತವ್ಯಾ ಮಂತ್ರೇಣಾನೇನ ಕೌರವ ।
ಇಯಂ ದಾನೇ ಮಯಾ ತುಭ್ಯಂ ಭಗವನ್ ಪ್ರತಿಪಾದಿತಾ ॥ ೧೮ ॥

ಕರ್ಮೋಪಯೋಜ್ಯಾ ಭೋಜ್ಯಾವಾ ಯಥೇಷ್ಟಂ ಭದ್ರಮಸ್ತು ತೇ ।
ದತ್ವಾ ಕ್ಷಮಾಪಯೇತ್ಪಶ್ಚಾದ್ಬ್ರಾಹ್ಮಣಂ ಕಾಂಚನೇನ ತಂ ॥ ೧೯ ॥

ಅನುವ್ರಜ್ಯಗೃಹದ್ವಾರಂ ಯಾವತ್ಪಶ್ಚಾದ್ವಿಸರ್ಜಯೇತ್ ।
ಅನೇನ ವಿಧಿನಾ ದದ್ಯಾದಂಕಯಿತ್ವಾ ಸುರಾಲಯೇ ॥ ೨೦ ॥

ಮಖೇ ಚಾಪಿ ಮಹಾರಾಜ ಪ್ರಸಿದ್ಧೇ ವಾ ಪ್ರತಿಶ್ರಯೇ ।
ಸರ್ವಕರ್ಮಕರೀಂ ದತ್ವಾ ತರುಣೀಂ ರೂಪಶಾಲಿನೀಂ ॥ ೨೧ ॥

ಪ್ರಾಪ್ಯತೇ ಯತ್ಫಲಂ ಪುಂಭಿಃ ಪಾರ್ಥ ತತ್ಕೇನ ವರ್ಣ್ಯತೇ ॥ ೨೨ ॥

---

೧೮. ಎಲೈ ಕುರುವಂಶೀಯನೇ ! ಕೇಳು — ಈ ಮುಂದೆ ಹೇಳತಕ್ಕ ಮಂತ್ರಪೂರ್ವಕವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು.

೧೯. "ಎಲೈ ಪೂಜ್ಯನೇ— ಈ ದಾಸಿಯನ್ನು ನಾನು ನಿನಗೆ ದಾನಮಾಡಿದ್ದೇನೆ. ಇವಳನ್ನು ನೀನು ಧರ್ಮಕ್ಕೆ ವಿರೋಧವಿಲ್ಲದಂತೆ ನಿನ್ನ ಇಚ್ಛಾನುಸಾರ ಸೇವಾ ಕೆಲಸಗಳಿಗೆ ಉಪಯೋಗಿಸಿಕೊಳ್ಳಬಹುದು. ಅಥವಾ ಭೋಗಿಸಬಹುದು ನಿನಗೆ ಮಂಗಳವಾಗಲಿ." ಎಂದು ಹೇಳಿ ದಾನಮಾಡಿ ಅನಂತರ ಆ ಬ್ರಾಹ್ಮಣನಿಗೆ ಸುವರ್ಣದಕ್ಷಿಣಾದಿಗಳನ್ನು ಸಮರ್ಪಿಸಿ ಕ್ಷಮೆಬೇಡಬೇಕು.

೨೦. ಮತ್ತು ಆತನು ಹೊರಟುಹೋಗುವಾಗ ಮನೆಯ ಬಾಗಿಲಿನವರೆಗೂ ಆತನನ್ನು ಅನುಸರಿಸಿ ಹೋಗಿ ಕಳುಹಿಸಿಕೊಡಬೇಕು. ಈ ವಿಧಾನದಿಂದ ದಾನ ಮಾಡುವುದರಿಂದ ದೇವಲೋಕ ಪ್ರಾಪ್ತಿಯಾಗುವುದು.

೨೧-೨೨. ಅಯ್ಯಾ ಧರ್ಮರಾಜ— ಯಜ್ಞಕಾರ್ಯದಲ್ಲಿಯೂ, ಪ್ರಸಿದ್ಧವಾಗಿರತಕ್ಕ ಸಭೆಯ ಸಕಲ ಕಾರ್ಯಗಳಲ್ಲಿಯೂ ನಿರ್ವಾಹಸಮರ್ಥೆಯೂ, ತರುಣಿಯೂ, ರೂಪವತಿಯೂ ಆದ ದಾಸಿಯನ್ನು ದಾನಮಾಡುವುದರಿಂದ ಲಭಿಸತಕ್ಕ ಫಲವನ್ನು ಯಾರು ತಾನೇ ವರ್ಣನೆಮಾಡಲಾದೀತು.

ದಾಸೀಂ ಸಮೀಕ್ಷ್ಯ ಬಹುಶೋ ಗೃಹಕರ್ಮದಕ್ಷಾಂ
ಯೋ ಬ್ರಾಹ್ಮಣಾಯ ಕುಲಶೀಲವತೇ ದದಾತಿ ।
ವಿದ್ಯಾಧರಾಧಿಪಶತೈರಪಿ ಪೂಜಿತೋಽಸೌ
ಲೋಕಂ ತ್ರಿಲೋಕರಮಯಾಪ್ಸರಸಾಂ ಪ್ರಯಾತಿ		॥ ೨೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ದಾಸೀದಾನ ವಿಧಿವರ್ಣನಂ ನಾಮ
ಏಕಸಪ್ತತ್ಯುತ್ತರ ಶತತಮೋಽಧ್ಯಾಯಃ



---

೧೯. ದಾಸಿಯನ್ನು ಬಹುವಿಧವಾಗಿ ಪರೀಕ್ಷಿಸಿ ಗೃಹಕಾರ್ಯಗಳನ್ನು ಮಾಡುವುದರಲ್ಲಿ ಸಮರ್ಥಳೆಂಬುದನ್ನು ತಿಳಿದು ಆಕೆಯನ್ನು ಸತ್ಕುಲಪ್ರಸೂತನೂ ಸತ್ಸ್ವಭಾವವುಳ್ಳವನೂ ಆದ ಬ್ರಾಹ್ಮಣನಿಗೆ ದಾನಮಾಡಿದವನು, ವಿದ್ಯಾಧರರಿಗೆ ಅಧಿಪತಿಗಳೆನಿಸಿದ ನೂರಾರು ಜನರಿಂದ ಪೂಜಿತನಾಗಿ ಮೂರು ಲೋಕದವರೂ ರಮಿಸುವಂತಹ ಅಪ್ಸರ ಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ ಯುಧಿಷ್ಠಿರ
ಸಂವಾದದಲ್ಲಿ ದಾಸೀದಾನ ವಿಧಾನವರ್ಣನೆಯೆಂಬ ನೂರಎಪ್ಪತ್ತೊಂದ
ನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಪ್ರಪಾದಾನಸ್ಯ ಮಹಾತ್ಮ್ಯಂ ವದ ದೇವಕಿನಂದನ |
ಕಥಂ ದೇಯಾ ಕದಾ ದೇಯಾ ದಾನೇ ತಸ್ಯಾಶ್ಚ ಕಿಂ ಫಲಂ || ೧ ||

|| ಶ್ರೀ ಕೃಷ್ಣ ಉವಾಚ ||

ಅತೀತೇ ಫಾಲ್ಗುನೇ ಮಾಸಿ ಪ್ರಾಪ್ತೇ ಚೈತ್ರೇ ಮಹೋತ್ಸವೇ |
ಪುಣ್ಯೇಽಹ್ನಿ ವಿಪ್ರಕಥಿತೇ ಗ್ರಹಚಂದ್ರಬಲಾನ್ವಿತೇ || ೨ ||

---

### ನೂರಎಪ್ಪತ್ತೆರಡನೆಯ ಅಧ್ಯಾಯ

೧. ಅನಂತರ ಯುಧಿಷ್ಠಿರನು ಕೃಷ್ಣನನ್ನು ಕುರಿತು—ಅಯ್ಯಾ ದೇವಕಿ ಪುತ್ರ ! ಕೃಷ್ಣಪರಮಾತ್ಮ—ಅರವಟ್ಟಿಗೆಯಿಟ್ಟು ಪಾನೀಯವನ್ನು ದಾನ ಮಾಡುವುದರ ಮಹಿಮೆಯನ್ನೂ ಮತ್ತು ಅದನ್ನು ಯಾವಾಗ ಹೇಗೆ ಆಚರಿಸಬೇಕು ಎಂಬುದನ್ನೂ ಅದರಿಂದುಂಟಾಗತಕ್ಕ ಫಲವನ್ನೂ ಹೇಳು ಎಂದನು.

೨-೫. ಶ್ರೀ ಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ— ಫಾಲ್ಗುಣ ಮಾಸವು ಕಳೆದು ಚೈತ್ರಮಾಸ (ವಸಂತ ಮಹೋತ್ಸವ) ವು ಆರಂಭವಾದಾಗ ಜೋಯಿಸರು ಇದು ದಾನಕ್ಕೆ ಅರ್ಹವಾದ ದಿನವೆಂದು ನಿಶ್ಚಯಿಸಿದಾಗ ಎಂದರೆ ಗ್ರಹಗಳು

**ಮಂಡಪಂ ಕಾರಯೇದ್ವಿದ್ವಾನ್ ಘನಚ್ಛಾಯಂ ಮನೋರಮಂ ।**
**ಪುರಸ್ಯ ಮಧ್ಯೇ ಪಥಿ ವಾ ಕಾಂತಾರೇ ತೋಯವರ್ಜಿತೇ　　॥ ೩ ॥**

**ದೇವತಾಯತನೇ ವಾಪಿ ಚೈತ್ಯವೃಕ್ಷತಲೇಽಪಿ ವಾ ।**
**ಸುಶೀತಲಂ ಚ ರಮ್ಯಂ ಚ ವಿಚಿತ್ರಾಸನಸಂಯುತಂ　　॥ ೪ ॥**

**ಕಾರಯೇನ್ಮಂಡಪಂ ಭವ್ಯಂ ಶೀತವಾತಸಹಂ ದೃಢಂ ।**
**ತನ್ಮಧ್ಯೇ ಸ್ಥಾಪಯೇದ್ಭಕ್ತ್ಯಾ ಮಣೀನ್ಕುಂಭಾಂಶ್ಚ ಶೋಭನಾನ್ ॥ ೫ ॥**

**ಅಕಾಲಮೂಲಾನ್ ಕರಕಾನ್ ವಸ್ತ್ರೈರಾವೇಷ್ಟಿತಾನಥ ।**
**ಬ್ರಾಹ್ಮಣಃ ಶೀಲಸಂಪನ್ನೋ ವೃತ್ತಿಂ ದತ್ವಾ ಯಥೋಚಿತಾಂ　॥ ೬ ॥**

**ಪ್ರಪಾಪಾಲಃ ಪ್ರಕರ್ತವ್ಯೋ ಬಹುಪುತ್ರಪರಿಚ್ಛದಃ ।**
**ಪಾನೀಯಪಾನೇನಾಶ್ರಾಂತಾನ್ಯಃ ಕಾರಯತಿ ಮಾನವಾ　　॥ ೭ ॥**

---

ತಾರಾಬಲ ಚಂದ್ರಬಲದಿಂದ ಯುಕ್ತವಾದ ದಿನ ಈ ಕಾರ್ಯಾರಂಭಮಾಡಬೇಕು. ಇದರ ಸ್ಥಾಪನೆಗೆ ಪಟ್ಟಣದ ಮಧ್ಯಪ್ರದೇಶ, ಜನ ತಿರುಗುವ ದಾರಿ, ನೀರಿಲ್ಲದಿರುವಂತಹ ಅರಣ್ಯ ಪ್ರದೇಶ, ದೇವಸ್ಥಾನ, ಚೈತ್ಯವೃಕ್ಷದ ಸಾಮೀಪ್ಯ ಇಂತಹ ಪ್ರದೇಶಗಳು ತಕ್ಕವು. ಇವುಗಳೊಳಗೆ ಒಂದರಲ್ಲಿ ಸುಂದರವಾಗಿಯೂ, ಮತ್ತು ಮನೋಹರವಾದ ಆಸನಗಳುಳ್ಳದ್ದಾಗಿಯೂ, ಹಿತವಾದ ತಂಗಾಳಿ ಬೀಸಲನುಕೂಲವಾಗಿಯೂ ಸಾಂದ್ರವಾಗಿ ನೆರಳುಳ್ಳ ಹಾಗೂ ಒಂದು ಮಂಡಪವನ್ನು ಏರ್ಪಡಿಸಿ ಆ ಮಂಡಪದ ಮಧ್ಯದಲ್ಲಿ ಮಣಿಗಳನ್ನೂ ಕುಂಭಗಳನ್ನೂ ಇಡಬೇಕು.

೬-೭. ಅಲ್ಲಿ ಆ ಕಾಲದಲ್ಲಿ ಲಾಮಂಚದ ಮೂಲಾದಿಗಳನ್ನು ಹಾಕಿದ ನೀರಿನ ಭಾಂಡಗಳನ್ನು ವಸ್ತ್ರಗಳಿಂದ ಹೊದ್ದಿಸಿ ಇಡಬೇಕು. ಮತ್ತು ಒಳ್ಳೆಯ ಸ್ವಭಾವ ಉಳ್ಳವನೂ, ಮಕ್ಕಳೊಂದಿಗನೂ ಆಗಿ ಅಲ್ಲಿ ಬರತಕ್ಕವರಿಗೆ ಪಾನೀಯವನ್ನು ಸಿದ್ಧಪಡಿಸಿ ಬೇಜಾರುಪಡದೆ ಅದನ್ನು ಕೊಡುತ್ತಾ ಶಾಂತಿಯನ್ನುಂಟುಮಾಡುವ ಸಾಮರ್ಥ್ಯವುಳ್ಳ ಒಬ್ಬ ಬ್ರಾಹ್ಮಣನನ್ನು ಯೋಗ್ಯತಾನುಸಾರ ಸಂಬಳವನ್ನು ಕೊಟ್ಟು ಅರವಟ್ಟಿಗೆಯ ರಕ್ಷಕನನ್ನಾಗಿ ಏರ್ಪಡಿಸಬೇಕು.

ಏವಂವಿಧಾಂ ಪ್ರಪಾಂ ಕೃತ್ವಾ ಶುಭೇಽಹ್ನಿ ವಿಧಿಪೂರ್ವಕಂ ।
ಯಥಾಶಕ್ತ್ಯಾ ನರಶ್ರೇಷ್ಠ ಪ್ರಾರಂಭೇ ಭೋಜಯೇದ್ದ್ವಿಜಾನ್ ॥ ೮ ॥

ತತಶ್ಚೋತ್ಸರ್ಜಯೇದ್ವಿಪ್ರಾನ್ ಮಂತ್ರೇಣಾನೇನ ಮಾನವಃ ।
ಪ್ರಪೇಯಂ ಸರ್ವಸಾಮಾನ್ಯಾ ಭೂತೇಭ್ಯಃ ಪ್ರತಿಪಾದಿತಾ ॥ ೯ ॥

ಅಸ್ಯಾಃ ಪ್ರದಾನಾತ್ಪಿತರಸ್ತೃಪ್ಯಂತು ಚ ಪಿತಾಮಹಾಃ ।
ಅನಿವಾರ್ಯ ತತೋ ದೇಯಂ ಜಲಂ ಮಾಸಚತುಷ್ಟಯಂ ॥ ೧೦ ॥

ತ್ರಿಪಕ್ಷಂ ವಾ ಮಹಾರಾಜ ಜೀವಾನಾಂ ಜೀವನಂ ಪರಂ ।
ಗಂಧಾಢ್ಯಂ ಸುರಸಂ ಶೀತಂ ಶೋಭನೇ ಭಾಜನೇ ಸ್ಥಿತಂ ॥ ೧೧ ॥

ಪ್ರದದ್ಯಾದಪ್ರತಿಹತಂ ಪುರುಷಂ ಚಾನವಲೋಕಯನ್ ।
ಪ್ರತ್ಯಹಂ ಕಾರಯೇತ್ತಸ್ಯಾಂ ಶಕ್ತಿತೋ ದ್ವಿಜಭೋಜನಂ ॥ ೧೨ ॥

---

೮. ಈರೀತಿಯಾಗಿ ಅರವಟ್ಟಿಗೆಯನ್ನು ಶುಭದಿನ ಸುಲಗ್ನದಲ್ಲಿ ಶಾಸ್ತ್ರವಿಧಿ ಪ್ರಕಾರವಾಗಿ ಏರ್ಪಡಿಸಿ, ಆರಂಭದಲ್ಲಿ ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

೯-೧೦. ಅನಂತರ ಬ್ರಾಹ್ಮಣರನ್ನು ಆಹ್ವಾನಿಸಿ ಈ ಮುಂದೆ ಹೇಳತಕ್ಕ ಮಂತ್ರಪೂರ್ವಕವಾಗಿ ಅರವಟ್ಟಿಗೆಯನ್ನು ಪ್ರಾರಂಭಿಸಬೇಕು. "ಈ ಅರವಟ್ಟಿಗೆಯು ಸಮಸ್ತ ಮಾನವರಿಗೂ ಪ್ರಾಣಿಗಳಿಗೂ ಸಮಾನವಾದ ಉಪಕಾರಾರ್ಥವಾಗಿ ಏರ್ಪಡಿಸಿರುತ್ತದೆ. ಇಲ್ಲಿ ಪಾನೀಯ ದಾನಮಾಡುವುದರಿಂದ ನಮ್ಮ ಪಿತೃಗಳೂ ಮತ್ತು ಪಿತಾಮಹರೂ ಕೂಡ ತೃಪ್ತರಾಗಲಿ" ಎಂದು ಹೇಳಿ ಅನಂತರ ನಾಲ್ಕು ತಿಂಗಳು ಅವಿಚ್ಛಿನ್ನವಾಗಿ ಅರವಟ್ಟಿಗೆಯನ್ನು ನಡೆಸಬೇಕು.

೧೧-೧೨. ಎಲೈ ಮಹಾರಾಜನೇ—ಜೀವಿಗಳಿಗೆ (ಪ್ರಾಣ ಉಳ್ಳವರಿಗೆ) ಮುಖ್ಯವಾದ ಸುವಾಸನಾದ್ರವ್ಯಗಳಿಂದ ಕೂಡಿಯೂ, ಚೆನ್ನಾಗಿ ರಸವತ್ತಾಗಿಯೂ, ತಣ್ಣಗೂ ಇರುವ ನೀರನ್ನು ಜಾತಿಭೇದಾದಿಗಳನ್ನು ನೋಡದೆ ಸಮಸ್ತರಿಗೂ ಮೂರು ಪಕ್ಷಗಳಾದರೂ ಅವಿಚ್ಛಿನ್ನವಾಗಿ ದಾನಮಾಡಬೇಕು. ನೀರನ್ನು ಶುಭ್ರವಾದ ಪಾತ್ರೆಯಲ್ಲಿಟ್ಟಿರಬೇಕು ಮತ್ತು ಅಲ್ಲಿ ನಿತ್ಯವೂ ಶಕ್ತ್ಯನುಸಾರ ದ್ವಿಜರಿಗೆ ಭೋಜನ ಮಾಡಿಸಬೇಕು.

ಅನೇನ ವಿಧಿನಾ ಯಸ್ತು ಗ್ರೀಷ್ಮೇಷ್ಮಶೋಷನಾಶನಂ ।
ಪಾನೀಯಮುತ್ತಮಂ ದದ್ಯಾತ್ತಸ್ಯ ಪುಣ್ಯಫಲಂ ಶೃಣು ॥ ೧೩ ॥

ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ।
ತತ್ಪುಣ್ಯಫಲಮಾಪ್ನೋತಿ ಸರ್ವದೇವೈಃ ಸುಪೂಜಿತಃ ॥ ೧೪ ॥

ಪೂರ್ಣಚಂದ್ರಪ್ರತೀಕಾಶಂ ವಿಮಾನಂ ಸೋಧಿರುಹ್ಯ ಚ ।
ಯಾತಿ ದೇವೇಂದ್ರನಗರೇ ಪೂಜ್ಯಮಾನೋಽಪ್ಸರೋಗಣೈಃ ॥ ೧೫ ॥

ವಿಂಶತ್ಕೋಟ್ಯೋ ಹಿ ವರ್ಷಾಣಾಂ ಯಕ್ಷಗಂಧರ್ವಸೇವಿತಃ ।
ಪುಣ್ಯಕ್ಷಯಾದಿಹಾಗತ್ಯ ಚತುರ್ವೇದೀ ದ್ವಿಜೋ ಭವೇತ್ ॥ ೧೬ ॥

---

೧೩. ಈರೀತಿ ಗ್ರೀಷ್ಮಕಾಲದ ತಾಪವನ್ನು ಪರಿಹರಿಸತಕ್ಕ ಶ್ರೇಷ್ಠವಾದ ಪಾನೀಯವನ್ನು ದಾನಮಾಡತಕ್ಕವನಿಗೆ ಉಂಟಾಗಬಹುದಾದ ಪುಣ್ಯದ ಫಲವನ್ನು ಹೇಳುತ್ತೇನೆ ಕೇಳು.

೧೪. ಸಕಲ ತೀರ್ಥಕ್ಷೇತ್ರಯಾತ್ರೆಯಿಂದ ಬರುವ ಪುಣ್ಯವೂ ಮತ್ತು ಸಕಲ ದಾನ ಕೊಡುವುದರಿಂದ ಬರುವ ಫಲವೂ ಇದರಿಂದ ಉಂಟಾಗಿ ಸ್ವರ್ಗವನ್ನು ಸೇರಿ ಎಲ್ಲ ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ.

೧೫. ದೇಹತ್ಯಾಗಾನಂತರ ವಿಮಾನಾರೂಢನಾಗಿ ಇಂದ್ರಲೋಕಕ್ಕೆ ಹೋಗಿ ಅಪ್ಸರ ಸ್ತ್ರೀಯರಿಂದ ಪೂಜಿಸಲ್ಪಟ್ಟವನಾಗಿ ಪೂರ್ಣಚಂದ್ರನಂತೆ ಪ್ರಕಾಶಿಸುತ್ತಾನೆ.

೧೬. ಈ ಪುಣ್ಯಮಹಿಮೆಯಿಂದ ಇಪ್ಪತ್ತುಕೋಟಿ ವರ್ಷಗಳವರೆಗೂ ಯಕ್ಷರು, ಗಂಧರ್ವರು, ಇವರುಗಳಿಂದ ಅಲ್ಲಿ ಸೇವೆಹೊಂದುತ್ತಿದ್ದು ಅನಂತರ ಪುನಃ ಭೂಮಿಯಲ್ಲಿ ಜನಿಸಿ ನಾಲ್ಕು ವೇದವನ್ನು ಅಧ್ಯಯನಮಾಡತಕ್ಕ ಸಾಮರ್ಥ್ಯವುಳ್ಳ ಬ್ರಾಹ್ಮಣನಾಗುತ್ತಾನೆ.

ತತಃ ಪರಂ ಪದಂ ಯಾತಿ ಪುನರಾವೃತ್ತಿದುರ್ಲಭಂ ।
ಪ್ರಪಾದಾನಾಸಮರ್ಥೇನ ವಿಶೇಷಾದ್ಧರ್ಮ ಮೀಪ್ಸತಾ ॥ ೧೭ ॥

ಪ್ರತ್ಯಹಂ ಧರ್ಮಘಟಕಃ ಕರ್ಪಟಾವೇಷ್ಟಿತಾನನಃ ।
ಬ್ರಾಹ್ಮಣಸ್ಯ ಗೃಹೇನೇಯಃ ಶೀತಾಮಲಜಲಃ ಶುಚಿಃ ॥ ೧೮ ॥

ತಸ್ಯೈವೋದ್ಯಾಪನಂ ಕಾರ್ಯಂ ಮಾಸಿ ಮಾಸಿ ನರೋತ್ತಮ ।
ಮಂಡಕಾವೇಷ್ಟಿಕಾಭಿಷ್ಟ ಪಕ್ವಾನ್ನೈಃ ಸಾರ್ವಕಾಮಿಕೈಃ ॥ ೧೯ ॥

ಉದ್ದಿಶ್ಯಶಂಕರಂ ವಿಷ್ಣುಂ ಬ್ರಹ್ಮಾಣಂ ಕುರುನಂದನ ।
ಸಲಿಲಂ ಪ್ರೋಕ್ಷಯಿತ್ವಾ ತು ಮಂತ್ರೇಣಾನೇನ ಮಾನವಃ ॥ ೨೦ ॥

---

೧೭-೧೮. ಅನಂತರ ಪುನರ್ಜನ್ಮರಹಿತವಾದ ಶ್ರೇಷ್ಠವಾದ ಸ್ಥಾನ (ಮೋಕ್ಷ) ವನ್ನು ಪಡೆಯುತ್ತಾನೆ. ಈ ರೀತಿ ಅರವಟ್ಟಿಗೆಯನ್ನೇರ್ಪಡಿಸಿ ಪಾನೀಯ ದಾನವನ್ನು ಮಾಡಲು ಸಾಮರ್ಥ್ಯವಿಲ್ಲವನಾಗಿ ತದ್ಧರ್ಮಾಭಿಲಾಷಿಯಾಗಿದ್ದ ಪಕ್ಷದಲ್ಲಿ ತಾನು ಶುಚಿಯಾಗಿ ನಿತ್ಯವೂ ತಣ್ಣಗೆ, ನಿರ್ಮಲವಾಗಿ ಇರತಕ್ಕ ಜಲವನ್ನು ಕೊಡದಲ್ಲಿ ತುಂಬಿ ಅದರ ಕಂಠಕ್ಕೆ ಬಟ್ಟೆಯನ್ನು ಸುತ್ತಿ ಪ್ರಪಾಪಾಲಕನಾದ ಬ್ರಾಹ್ಮಣನ ಮನೆಗೆ ತಂದುಕೊಡಬೇಕು.

೧೯. ಅಯ್ಯಾ ನರಶ್ರೇಷ್ಠ—ಹೀಗೆ ಆ ಬ್ರಾಹ್ಮಣನಿಗೆ ಪ್ರತಿತಿಂಗಳಲ್ಲಿಯೂ ಸಾರ್ವಕಾಮಿತವಾದ ಪಕ್ವಾನ್ನ, ವಸ್ತ್ರ, ಮಂಡಕ (ಭಕ್ಷ್ಯ) ಗಳಿಂದ ತೃಪ್ತಿಪಡಿಸಿ ಉದ್ಯಾಪನ ಮಾಡಬೇಕು.

೨೦. ಎಲೈ ಕುರುನಂದನನೇ—ಉದ್ಯಾಪನೆಯ ಸಂದರ್ಭದಲ್ಲಿ ಶಂಕರ, ವಿಷ್ಣು, ಬ್ರಹ್ಮ ಇವರನ್ನು ಕಲಶದಲ್ಲಿ ಆವಾಹಿಸಿ ನೀರನ್ನು ಪ್ರೋಕ್ಷಿಸಿ ಮುಂದೆ ಹೇಳುವ ಮಂತ್ರದಿಂದ ಆ ಕಲಶವನ್ನು ದಾನಮಾಡಬೇಕು.

॥ ಧರ್ಮಘಟದಾನ ಮಂತ್ರಃ ॥

ಏಷಧರ್ಮಘಟೋ ದತ್ತೋ ಬ್ರಹ್ಮವಿಷ್ಣುಶಿವಾತ್ಮಕಃ ।
ಅಸ್ಯಪ್ರದಾನಾತ್ಸಫಲಾ ಮಮ ಸಂತು ಮನೋರಥಾಃ ॥ ೨೧ ॥

ಅನೇನ ವಿಧಿನಾ ಯಸ್ತು ಧರ್ಮಕುಂಭಂ ಪ್ರಯಚ್ಛತಿ ।
ಪ್ರಪಾದಾನಫಲಂ ಸೋಽಪಿ ಪ್ರಾಪ್ನೋತೀಹ ನ ಸಂಶಯಃ ॥ ೨೨ ॥

ಧರ್ಮಕುಂಭಪ್ರದಾನೇಽಪಿ ಯದ್ಯಶಕ್ತಃಪುಮಾನ್ ಭವೇತ್ ।
ತೇನಾಶ್ವತ್ಥತರೋರ್ಮೂಲಂ ಸೇಚ್ಯಂ ನಿತ್ಯಂ ಜಿತಾತ್ಮನಾ ॥ ೨೩ ॥

ಅಶ್ವತ್ಥರೂಪೀ ಭಗವಾನ್ ಪ್ರೀಯತಾಂ ಮೇ ಜನಾರ್ದನಃ ।
ಇತ್ಯುಚ್ಚಾರ್ಯ ನಮಸ್ಕೃತ್ಯ ಪ್ರತ್ಯಹಂ ಪಾಪನಾಶನಂ ॥ ೨೪ ॥

ಯಃ ಕರೋತಿ ತರೋರ್ಮೂಲೇ ಸೇಕಂ ಮಾಸಚತುಷ್ಟಯಂ ।
ಸೋಽಪಿ ತತ್ಫಲಮಾಪ್ನೋತಿ ಶ್ರುತಿರೇಷಾ ಸನಾತನೀ ॥ ೨೫ ॥

---

೨೧. ಬ್ರಹ್ಮ, ವಿಷ್ಣು, ಶಿವ, ಇವರ ಸ್ವರೂಪವಾದ ಈ ಘಟವನ್ನು ನಿನಗೆ ದಾನಮಾಡುತ್ತೇನೆ ಈ ದಾನದಿಂದ ನನ್ನ ಇಷ್ಟಾರ್ಥಗಳು ಸಫಲಗಳಾಗಲಿ ಎಂಬ ಅರ್ಥದ ಈ ಮಂತ್ರವನ್ನು ಹೇಳಬೇಕು.

೨೨. ಆ ಕುಂಭಕ್ಕೆ 'ಧರ್ಮಕುಂಭ'ವೆಂದು ಹೆಸರು. ಮೇಲೆ ಹೇಳಿದ ಮಂತ್ರದಿಂದ ಧರ್ಮಕುಂಭವನ್ನು ದಾನಮಾಡತಕ್ಕವನು ಅರವಟ್ಟಿಗೆ ಇರಿಸಿ ಪಾನೀಯ ದಾನಮಾಡಿದ ಫಲವನ್ನೇ ಹೊಂದುತ್ತಾನೆಂಬುದರಲ್ಲಿ ಸಂಶಯವಿಲ್ಲ.

೨೩. ಮೇಲೆ ಹೇಳಿದ ವಿಧಿಯಂತೆ ಧರ್ಮಕುಂಭವನ್ನು ದಾನಮಾಡುವುದಕ್ಕೆ ಅಸಮರ್ಥನಾದ ಮನುಜನು ಜಿತಾತ್ಮನಾಗಿ ನಿತ್ಯವೂ ಅಶ್ವತ್ಥವೃಕ್ಷದ ಬುಡಕ್ಕೆ ನೀರನ್ನು ಹುಯ್ಯಬೇಕು.

೨೪-೨೫. ಅಶ್ವತ್ಥರೂಪದಿಂದಿರುವ ಭಗವಂತನಾದ ಜನಾರ್ದನ (ವಿಷ್ಣು)ನು ಸಂತುಷ್ಟನಾಗಲಿ ಎಂಬದಾಗಿ ಪ್ರಾರ್ಥಿಸಿ ನಮಸ್ಕಾರ ಮಾಡಬೇಕು. ನಾಲ್ಕು ತಿಂಗಳು ಹೀಗೆ ಅಶ್ವತ್ಥಮೂಲದಲ್ಲಿ ಜಲಸೇಚನೆ ಮಾಡಿದುದೇ ಆದರೆ ಅವನ ಸಕಲ ಪಾಪಗಳೂ ನಾಶವಾಗುವುದಲ್ಲದೆ ಪ್ರಪಾದಾನ ಮಾಡಿದ ಫಲವನ್ನು ಹೊಂದುತ್ತಾನೆ. ಇದೇ ವಿಚಾರವಾಗಿ ಸನಾತನವಾದ ಶ್ರುತಿವಾಕ್ಯವೂ ಇರುತ್ತದೆ.

**ಸುಸ್ವಾದುಶೀತಸಲಿಲಾ ಕ್ಲಮನಾಶಿನೀ ಚ**
**ಪ್ರಾಂಕೇ ಪುರಸ್ಯ ಪಥಿ ಪಾಂಥಸಮಾಜಭೂಮೌ ।**
**ಯಸ್ಯ ಪ್ರಪಾ ಭವತಿ ಸರ್ವಜನೋಪಭೋಗ್ಯಾ**
**ಧರ್ಮೋತ್ತರಃ ಸ ಖಲು ಜೀವತಿ ಜೀವಲೋಕೇ ॥ ೨೬ ॥**

**ಇತಿ ಶ್ರೀ ಭವಿಷ್ಯಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಪ್ರಪಾದಾನ ವಿಧಿವರ್ಣನಂ ನಾಮ ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ.**



---

೧೯. ನಗರದ ಮಧ್ಯಪ್ರದೇಶ, ಜನರು ಹೆಚ್ಚಾಗಿ ತಿರುಗಾಡತಕ್ಕ ರಸ್ತೆಗಳು ಇವುಗಳಲ್ಲಿ, ಸಕಲ ಜನರಿಗೂ ಅನುಕೂಲಿಸುವಂತೆ ಅರವಟ್ಟಿಗೆಗಳನ್ನೇರ್ಪಡಿಸಿ ಅವುಗಳಲ್ಲಿ ಸಿಹಿಯಾಗಿಯೂ, ತಂಪಾಗಿಯೂ, ತಾಪಪರಿಹಾರಕವಾಗಿಯೂ ಇರತಕ್ಕ ಪಾನೀಯಗಳನ್ನು ಕೊಡಲು ಏರ್ಪಡಿಸತಕ್ಕವನು ಭೂಮಿಯಲ್ಲಿ ಧರ್ಮಾತ್ಮನೆಂದು ಪ್ರಸಿದ್ಧನಾಗಿ ಚಿರಾಯುವಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಅರವಟ್ಟಿಗೆಯ ದಾನವಿಧಿವರ್ಣನೆಯೆಂಬ ನೂರಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಅಗ್ನೀಷ್ಟಿಕಾ ಕಥಂ ದೇಯಾ ಶಿಶಿರೇ ಶೀತಭೀರುಭಿಃ ।
ಸರ್ವಸತ್ತ್ವೋಪಕಾರಾಯ ಕರುಣೀಕೃತಮಾನಸೈಃ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಅಗ್ನೀಷ್ಟಿಕಾಮಹಂ ಪಾರ್ಥ ಕಥಯಾಮಿ ನಿಬೋಧ ತಾಂ ।
ಯಥಾ ಯೇನ ವಿಧಾನೇನ ಸರ್ವಸತ್ತ್ವ ಸುಖಪ್ರದಾಂ ॥ ೨ ॥

---

## ನೂರಎಪ್ಪತ್ತಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಶ್ರೀಕೃಷ್ಣನನ್ನು ಕುರಿತು—ಸ್ವಾಮಿ ಕೃಷ್ಣಪರಮಾತ್ಮ! ಶೀತಕಾಲದಲ್ಲಿ ಚಳಿಗೆ ಹೆದರತಕ್ಕ ಕರುಣಾಶಾಲಿಗಳು ಸಕಲ ಸತ್ವಗಳಿಗೂ ಉಪಕಾರಮಾಡುವುದಕ್ಕೋಸ್ಕರ ಅಗ್ನಿಷ್ಟಿಕೆಯನ್ನು ದಾನಮಾಡುವ ವಿಧಾನವನ್ನು ಹೇಳು ಎಂದು ಕೇಳಿದನು.

೨. ಯುಧಿಷ್ಠಿರನಿಗೆ ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರ! ಕೇಳು—ಸಕಲ ಪ್ರಾಣಿಗಳಿಗೂ ಸೌಖ್ಯವುಂಟಾಗುವ ರೀತಿ ಅಗ್ನಿಷ್ಟಿಕೆಯನ್ನು ದಾನಮಾಡತಕ್ಕ ವಿಧಾನವನ್ನು ಹೇಳುತ್ತೇನೆ ಕೇಳು.

ಆದೌ ಮಾರ್ಗಶಿರೇ ಮಾಸಿ ಶೋಭನೇ ದಿವಸೇ ಶುಭಾಂ ।
ಅಗ್ನೀಷ್ಟಿಕಾಂ ಕಾರಯಿತ್ವಾ ಸುಖಾಸನವತೀಂ ಶುಭಾಂ ॥ ೩ ॥

ದೇವಾಂಗಣೇ ಪಥೇ ಗೇಹೇ ವಿಸ್ತೀರ್ಣೇ ಚತ್ವರೇಽಥವಾ ।
ಉಭಯೋಃ ಸಂಧ್ಯಯೋಃ ಕೃತ್ವಾ ಸಂಶುಷ್ಕಂ ಕಾಷ್ಠಸಂಚಯಂ ॥೪॥

ತತಃ ಪ್ರಜ್ವಾಲಯೇದಗ್ನಿಂ ಹುತ್ವಾ ವ್ಯಾಹೃತಿಭಿಃ ಕ್ರಮಾತ್ ।
ಆನೇನ ವಿಧಿನಾ ಹುತ್ವಾ ಪ್ರತ್ಯಹಂ ಜ್ವಾಲಯೇತ್ತತಃ ॥ ೫ ॥

ಯದಿ ಕಶ್ಚಿತ್ಕ್ಷುಧಾರ್ಥೀ ಸ್ಯಾದ್ಭೋಜ್ಯಂ ತಸ್ಮೈ ಪ್ರಕಲ್ಪಯೇತ್ ।
ಸುಖಾಸೀನೋ ಜನಸ್ತತ್ರ ವಿಶೀತೋ ವಿಜ್ವರಸ್ತಥಾ ॥ ೬ ॥

ಯಃ ಕರೋತಿ ಕಥಾಃ ಪಾರ್ಥ ನ ತಾಃ ಶಕ್ಯಾ ಮಯೋದಿತುಂ ।
ರಾಜವಾರ್ತಾ ಜನವಾರ್ತಾ ಯದಿ ಕಶ್ಚಿನ್ನಿಜೇಚ್ಛಯಾ ॥ ೭ ॥

---

೩-೫. ಮೊದಲು ಮಾರ್ಗಶಿರಮಾಸದ ಆರಂಭದಲ್ಲಿ ಒಂದು ಶುಭದಿನವನ್ನು ಗೊತ್ತುಮಾಡಿಕೊಂಡು ಆ ದಿನ ಸುಖಾಸನವುಳ್ಳದ್ದಾಗಿಯೂ, ಮಂಗಳದಾಯಕ ವಾಗಿಯೂ ಇರತಕ್ಕಒಂದು ಅಗ್ನಿಷ್ಟಿಕೆಯನ್ನು ಏರ್ಪಡಿಸಿ, ದೇವಾಲಯದ ಅಂಗಳ ದಲ್ಲೋ ಅಥವಾ ಮಾರ್ಗದಲ್ಲೋ ಮನೆಯ ವಿಸ್ತಾರವಾದ ಅಂಗಳದಲ್ಲಿಯೋ ಪ್ರಾತಃಕಾಲ ಮತ್ತು ಸಾಯಂಕಾಲಗಳ ಸಂಧ್ಯಾವಂದನಾದಿಗಳನ್ನು ನೆರವೇರಿಸಿದ ಮೇಲೆ ಚೆನ್ನಾಗಿ ಒಣಗಿದ ಸೌದೆಗಳನ್ನು ಒಟ್ಟುಗೂಡಿಸಿ, ಅನಂತರ ಅಲ್ಲಿ ಅಗ್ನಿ ಯನ್ನು ಪ್ರಜ್ವಲಿಸಿ ಕ್ರಮವಾಗಿ ವ್ಯಾಹೃತಿ ಮಂತ್ರಗಳಿಂದ ಹೋಮಮಾಡಬೇಕು. ಈರೀತಿ ಹೋಮಮಾಡಿ ನಿತ್ಯವೂ ಅಗ್ನಿಯು ಪ್ರಜ್ವಲಿಸುವಂತೆ ಮಾಡಬೇಕು.

೬. ಆ ಸಮಯದಲ್ಲಿ ಯಾವನಾದರೂ ಒಬ್ಬನು ಹಸಿದು ಬಂದಿದ್ದರೆ ಆತನ ಚಳಿಯನ್ನೂ ಮತ್ತು ಆಯಾಸವನ್ನೂ ಹೋಗಲಾಡಿಸಿ ಸುಖವಾದ ಆಸನ ದಲ್ಲಿ ಕುಳ್ಳಿರಿಸಿ ಆತನಿಗೆ ಭೋಜನವನ್ನು ಮಾಡಿಸಬೇಕು.

೭-೮. ಎಲೈ ಧರ್ಮಜನೇ—ಹೀಗೆ ಅನುಕೂಲಪಡಿಸಿಕೊಟ್ಟರೆ ಸುಖವಾಗಿ ಕುಳಿತ ಆ ಮನುಜನು ಕಾಲಹರಣಕ್ಕಾಗಿ ತನ್ನ ಇಚ್ಛಾನುಸಾರ ರಾಜಕೀಯದ

ವದೇಲ್ಲೋಕಃ ಸುಖಾಸೀನೋ ನ ಕೇನಾಪಿ ನಿವಾರ್ಯತೇ ।
ಅನೇನ ವಿಧಿನಾ ಯಸ್ತು ದದ್ಯಾದಗ್ನೀಷ್ಟಿಕಾಂ ನರಃ　　॥ ೮ ॥

ತಸ್ಯ ಪುಣ್ಯಫಲಂ ರಾಜನ್ ಕಥ್ಯಮಾನಂ ನಿಬೋಧ ಮೇ ।
ವಿಮಾನೇ ಚಾರ್ಕಸಂಕಾಶೇ ಸಮಾರೂಢೋ ಮಹಾಧನೇ　　॥ ೯ ॥

ಷಷ್ಟಿವರ್ಷ ಸಹಸ್ರಾಣಿ ಷಷ್ಟಿವರ್ಷಶತಾನಿ ಚ ।
ಹರ್ಷಿತೋಽತ್ಯಂತಸುಖಿತೋಽಬ್ರಹ್ಮಲೋಕೇ ಮಹಿಯತೇ　　॥ ೧೦ ॥

ಇಹಲೋಕೇಽವತೀರ್ಣಶ್ಚ ಚತುರ್ವೇದೀ ದ್ವಿಜೋ ಭವೇತ್ ।
ನೀರುಜಃ ಸತ್ರಯಾಜೀ ಚ ಅಗ್ನಿವತ್ತೇಜಸಾನ್ವಿತಃ　　॥ ೧೧ ॥

ಚೈತ್ಯೇ ಸುರಾಂಗಣಸಭಾವಸಥೇ ಸುಭವ್ಯಾಂ ।
ಯೋಗ್ನೀಷ್ಟಿಕಾಂ ಪ್ರಚುರಕಾಷ್ಠವತೀಂ ಪ್ರದದ್ಯಾಃ ॥

---

ವಿಚಾರ ಅಥವಾ ಸಾಮಾಜಿಕ ವಿಚಾರದ ಕಥೆಗಳನ್ನು ಹೇಳಬಹುದು. ಆಗ ಇತರರು ಕೇಳಬಹುದು. ಅದಕ್ಕೆ ಯಾರ ಅಡ್ಡಿಯೂ ಇಲ್ಲ.

೯-೧೦. ಈರೀತಿ ಅಗ್ನಿಷ್ಟಿಕೆಯನ್ನು ದಾನಮಾಡುವ ನರರಿಗೆ ಒದಗುವ ಪುಣ್ಯಫಲವನ್ನು ಹೇಳುವೆನು ಕೇಳು—ಸೂರ್ಯಸದೃಶವೂ ಮತ್ತು ಸಂಪತ್ಸಮೃದ್ಧವೂ ಆದ ವಿಮಾನವನ್ನು ಹತ್ತಿ ಸಂತೋಷದಿಂದ ಸುಖಿಯಾಗಿ ಬ್ರಹ್ಮಲೋಕವನ್ನು ಸೇರಿ ಅಲ್ಲಿ ಅರವತ್ತಾರು ಸಹಸ್ರ ವರ್ಷಗಳು ಪೂಜಿತನಾಗಿರುತ್ತಾನೆ.

೧೧. ಅನಂತರ ಭೂಲೋಕದಲ್ಲಿ ಜನ್ಮವೆತ್ತುವಾಗ ರೋಗರಹಿತನೂ, ಯಾಜ್ಞಿಕನೂ, ಅಗ್ನಿಯಂತೆ ತೇಜಸ್ವಿಯೂ, ನಾಲ್ಕು ವೇದಗಳನ್ನು ಅಧ್ಯಯನ ಮಾಡತಕ್ಕ ಬ್ರಾಹ್ಮಣನೂ ಆಗುತ್ತಾನೆ.

೧೨. ದೇವತೆಗಳು ಸಭೆ ಸೇರಲು ಯೋಗ್ಯವಾಗುವಂತೆ ಮನೋಹರವಾಗಿರುವ ಅಂಗಳವುಳ್ಳ ದೇವಸ್ಥಾನದಲ್ಲಿ ಹೇಮಂತ, ಶಿಶಿರ, ಈ ಋತುಗಳಲ್ಲಿ

**ಹೇಮಂತಶೈಶಿರಋತೌ ಸುಖದಾ ಜನಾನಾಂ ।**
**ಕಾಯಾಗ್ನಿದೀಪನಮಲಂ ಪುನರಾಪ್ನುವಂತಿ ॥ ೧೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಶ್ರೀಕೃಷ್ಣಯುಧಿಷ್ಠಿರ ಸಂವಾದೇ**
**ಅಗ್ನೀಷ್ಟಿಕಾದಾನ ವಿಧಿವರ್ಣನಂ**
**ನಾಮ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ.**



ಬಹುವಾಗಿ ಕಾಷ್ಠಗಳನ್ನು ರಾಶಿಹಾಕಿ ಅಗ್ನಿಷ್ಟಿಕೆಯನ್ನು ದಾನಮಾಡುವಂಥವರು ಅಗ್ನಿತೇಜಸ್ಸಿಗೆ ಸದೃಶವಾದ ದೇಹಕಾಂತಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಅಗ್ನಿಷ್ಟಿಕಾದಾನದ ವಿಧಿವರ್ಣನೆಯೆಂಬ
ನೂರಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಬಹುಪ್ರದಾನಂ ಗೋದಾನಂ ತ್ವತ್ತೋ ವಿದ್ವಞ್ಛ್ರುತಂ ಮಯಾ |
ಭೂಮಿದಾನಸ್ಯ ಮಾಹಾತ್ಮ್ಯಂ ವಿಧಿಶ್ಚೈವಾವಧಾರಿತಃ || ೧ ||

ಸಾಂಪ್ರತಂ ಯದುಶಾರ್ದೂಲ ವಿದ್ಯಾದಾನಸ್ಯ ಯೋ ವಿಧಿಃ |
ತಮಹಂ ಶ್ರೋತುಮಿಚ್ಛಾಮಿ ಕಥಯಸ್ವ ಜನಾರ್ದನ || ೨ ||

|| ಶ್ರೀಕೃಷ್ಣ ಉವಾಚ ||

ವಿದ್ಯಾದಾನವಿಧಿಂ ವಕ್ಷ್ಯೇ ಯಥಾ ತಥ್ಯೇನ ತೇಽಧುನಾ |
ಯಥಾ ದೇಯಂ ಫಲಂ ಯಚ್ಚ ದತ್ತೇನ ಕುರನಂದನ || ೩ ||

---

### ನೂರಎಪ್ಪತ್ತನಾಲ್ಕನೆಯ ಅಧ್ಯಾಯ

೧-೨. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಯದುವಂಶಶ್ರೇಷ್ಠನೂ ವಿದ್ವಾಂಸನೂ ಆದ ಶ್ರೀಕೃಷ್ಣನೇ! ಗೋದಾನವು ಬಹು ಸೌಖ್ಯಪ್ರದಾಯಕ ವೆಂಬುದನ್ನೂ ಭೂಮಿದಾನದ ಮಾಹಾತ್ಮ್ಯೆಯನ್ನೂ ಮತ್ತು ಇವುಗಳ ವಿಧಾನ ವನ್ನೂ ನಿನ್ನಿಂದ ನಾನು ಅರಿತೆನು. ಪ್ರಕೃತ ವಿದ್ಯಾದಾನವಿಧಾನವನ್ನು ತಿಳಿಯಲಪೇಕ್ಷಿಸುತ್ತೇನೆ. ಅದನ್ನು ಹೇಳು ಎಂದನು.

೩. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಕುರುವಂಶಾನಂದಕರನಾದ ಧರ್ಮಜನೇ! ವಿದ್ಯೆಯನ್ನು ನಿಜವಾಗಿ ದಾನಮಾಡತಕ್ಕ ವಿಧಾನವನ್ನೂ ಮತ್ತು ಹಾಗೆ ದಾನಮಾಡಿದುದರಿಂದುಂಟಾಗತಕ್ಕ ಫಲವನ್ನೂ ಹೇಳುತ್ತೇನೆ ಕೇಳು.

ಶುಭೇಽಹ್ನಿ ವಿಪ್ರಕಥಿತೇ ಗೋಮಯೇನ ಸುಶೋಭನಂ ।
ಕಾರಯೇನ್ಮಂಡಲಂ ದಿವ್ಯಂ ಚತುರಸ್ರಂ ಸಮಂತತಃ ॥ ೪ ॥

ಪುಷ್ಪಪ್ರಕರಸಂಛನ್ನಂ ಸ್ವಸ್ತಿಕಾದಿವಿಭೂಷಿತಂ ।
ಪುಸ್ತಕಂ ತತ್ರ ಸಂಸ್ಥಾಪ್ಯ ಗಂಧಪುಷ್ಪೈಃ ಸಮರ್ಚಯೇತ್ ॥ ೫ ॥

ಸೌವರ್ಣೀ ಲೇಖನೀ ಕಾರ್ಯಾ ರೌಪ್ಯಂ ಚ ಮಷಿಭಾಜನಂ ।
ಲೇಖಕಂ ಪೂಜಯಿತ್ವಾ ತು ಆರಂಭಂ ಕಾರಯೇತ್ಸುಧೀಃ ॥ ೬ ॥

ವಿನೀತಶ್ಚಾಪ್ರಮತ್ತಶ್ಚ ತತಃ ಪ್ರಭೃತಿ ಲೇಖಕಃ ।
ಮಾತ್ರಾನುಸ್ವಾರಸಂಯುಕ್ತಂ ಪದಚ್ಛೇದಸಮನ್ವಿತಂ ॥ ೭ ॥

ಸಮಾನಿ ಸಮಶೀರ್ಷಾಣಿ ವರ್ತುಲಾನಿ ಘನಾನಿ ಚ ।
ಲೇಖಯೇದಕ್ಷರಾಣೀಹ ತದ್ಗತೇನಾಂತರಾತ್ಮನಾ ॥ ೮ ॥

---

೪. ದೈವಜ್ಞನಾದ ಬ್ರಾಹ್ಮಣನನ್ನು ಈ ಕಾರ್ಯಕ್ಕೆ ಶುಭದಿವಸವಾವುದೆಂದು ಕೇಳಿ ತಿಳಿದುಕೊಂಡು, ಅನುರೂಪ್ಯ ಸ್ಥಳವನ್ನು ಗೊತ್ತುಮಾಡಿ ಸಗಣಿಯಿಂದ ಸಾರಿಸಿ ಅಲ್ಲಿ ಚತುರಸ್ರಮಂಡಲವನ್ನು ಚೆನ್ನಾಗಿ ರಚಿಸಬೇಕು.

೫. ಆ ಮಂಡಲದಲ್ಲಿ ರಂಗವಲ್ಲಿಯಿಂದ ಸ್ವಸ್ತಿಕ ಮುಂತಾದ ಹಸೆಗಳನ್ನು ರಚಿಸಿ ಶುಭದ್ಯೋತಕಗಳಾದ ಪುಷ್ಪಸಮೂಹಗಳಿಂದ ಶೃಂಗರಿಸಿ ಅಲ್ಲಿ ಪುಸ್ತಕವನ್ನಿಟ್ಟು ಗಂಧ, ಪುಷ್ಪ ಇತ್ಯಾದಿಗಳಿಂದ ಅರ್ಚಿಸಬೇಕು.

೬. ಇದಕ್ಕೆ ಮುಂಚೆ ಚಿನ್ನದಿಂದ ಲೇಖನಿಯನ್ನೂ ಬೆಳ್ಳಿಯಿಂದ (ದೌತಿ) ಮಸಿ ಕುಡಿಕೆಯನ್ನೂ ಮಾಡಿಸಿ ಲೇಖಕನನ್ನು ಪೂಜಿಸಿ ಅನಂತರ ಆರಂಭಿಸಬೇಕು.

೭-೮. ಅಂದು ಮೊದಲುಗೊಂಡು ಲೇಖಕನು ವಿನೀತನೂ ಸರಿಯಾದ ಎಚ್ಚರಿಕೆಯುಳ್ಳವನೂ ಆಗಿ ಮಾತ್ರೆಗಳು ಅನುಸ್ವಾರ, ಇವುಗಳ ಸಹಿತವಾಗಿರುವಂತೆಯೂ, ಸರಿಯಾದ ಪದವಿಭಾಗಗಳನ್ನೊಳಗೊಂಡಿರುವ ಹಾಗೆಯೂ, ಅಕ್ಷರಗಳ ತಲೆಕಟ್ಟುಗಳೆಲ್ಲಾ ಒಂದೇ ಪಂಕ್ತಿಯಾಗಿಯೂ ಲಿಪಿಗಳು ದುಂಡಾಗಿಯೂ ಇರುವಂತೆ ಸರಿಯಾಗಿ ಮನಸ್ಸಿಟ್ಟು ಬರೆಯಬೇಕು.

ನಿಷ್ಪಾದಯಿತ್ವಾ ತಚ್ಛಾಸ್ತ್ರಂ ಶೈವಂ ವಾಪ್ಯಥವೈಷ್ಣವಂ ।
ನಿಷ್ಪಾದಿತೇ ತತಃ ಪೂಜ್ಯೋ ಲೇಖಕೋವಸ್ತ್ರಭೂಷಣೈಃ ॥ ೯ ॥

ಸಂಪೂಜಯಿತ್ವಾ ತಚ್ಛಾಸ್ತ್ರಂ ದೇಯಂ ಗುಣವತೇ ತದಾ ।
ಶಾಸ್ತ್ರಸದ್ಭಾವವಿದುಷೇ ವಾಚಕೇ ಚ ಪ್ರಿಯಂವದೇ ॥ ೧೦ ॥

ವಸ್ತ್ರಯುಗ್ಮೇನ ಸಂವೀತಂ ಪುಸ್ತಕಂ ಪ್ರತಿಪಾದಯೇತ್ ।
ಸಾಮಾನ್ಯಂ ಸರ್ವಲೋಕಾನಾಂ ಸ್ಥಾಪಯೇದಥ ವಾ ಮಠೇ ॥ ೧೧ ॥

ಅನೇನ ವಿಧಿನಾ ದತ್ವಾ ಯತ್ಫಲಂ ಪ್ರಾಪ್ನುಯಾನ್ನರಃ ।
ತದಹಂ ತೇ ಪ್ರವಕ್ಷ್ಯಾಮಿ ಯುಧಿಷ್ಠಿರ ನಿಬೋಧ ತತ್ ॥ ೧೨ ॥

ಯತ್ಪುಣ್ಯಂ ತೀರ್ಥಯಾತ್ರಾಯಾಂ ಯತ್ಪುಣ್ಯಂ ಯಜ್ವನಾಂ ತಥಾ ।
ತತ್ಪುಣ್ಯಂ ಕೋಟಿಗುಣಿತಂ ವಿದ್ಯಾದಾನಾಲ್ಲಭೇನ್ನರಃ ॥ ೧೩ ॥

---

೯. ಹೀಗೆ ಈಶ್ವರಸಂಬಂಧವಾದುದೋ ಅಥವಾ ವಿಷ್ಣುಸಂಬಂಧವಾದುದೋ ಆದ ಶಾಸ್ತ್ರವನ್ನು ಲೇಖನಗೊಳಿಸಿ ಪೂರಯಿಸಿದ ಅನಂತರ ವಸ್ತ್ರಭೂಷಣಾದಿಗಳಿಂದ ಲೇಖಕನನ್ನು ಸತ್ಕರಿಸಬೇಕು

೧೦. ಉಲ್ಲೇಖಿಸಿದ ಗ್ರಂಥವನ್ನು ಪೂಜೆಮಾಡಿ ಆ ಪುಸ್ತಕವನ್ನು ಗುಣವಂತನೂ, ಪ್ರೀತಿಯಿಂದ ಓದುವವನೂ, ಶಾಸ್ತ್ರದಲ್ಲಿ ನಂಬಿಕೆಯಿರುವವನೂ ಆದ ವಿದ್ವಾಂಸನಿಗೆ ದಾನಮಾಡಬೇಕು.

೧೧. ಆರೀತಿ ಪುಸ್ತಕವನ್ನು ವಿದ್ವಾಂಸನಿಗೆ ದಾನಮಾಡುವುದಾದರೆ ಎರಡು ವಸ್ತ್ರಗಳಿಂದ ಸುತ್ತಿ ದಾನಮಾಡಬೇಕು. ಸಮಸ್ತರಿಗೂ ಸಾಮಾನ್ಯವಾಗಿ ಉಪಯೋಗವಾಗಬೇಕೆಂಬ ಅಭಿಲಾಷೆ ಇದ್ದರೆ ಮಠದಲ್ಲಿಯೋ ಪುಸ್ತಕಭಂಡಾರದಲ್ಲೋ ಇಟ್ಟಿರಬೇಕು.

೧೨. ಅಯ್ಯಾ ಯುಧಿಷ್ಠಿರ— ಈ ವಿಧಿಯಂತೆ ದಾನಮಾಡಿದ ಮನುಷ್ಯನಿಗೆ ಲಭಿಸುವ ಫಲವಾವುದೆಂಬುದನ್ನು ಹೇಳುತ್ತೇನೆ ತಿಳಿದುಕೊ.

೧೩. ಮನುಷ್ಯನು ತೀರ್ಥಯಾತ್ರೆ, ಮತ್ತು ಯಾಗ, ಇವುಗಳನ್ನು ಮಾಡುವುದರಿಂದ ಎಷ್ಟು ಪುಣ್ಯವನ್ನು ಪಡೆಯುವನೋ ಅದರ ಕೋಟಿಯಷ್ಟು ಪುಣ್ಯವನ್ನು ಶಾಸ್ತ್ರಪುಸ್ತಕವನ್ನು ದಾನಮಾಡುವುದರಿಂದ ಪಡೆಯುತ್ತಾನೆ.

ಕಪಿಲಾನಾಂ ಸಹಸ್ರೇಣ ಸಮ್ಯಗ್ದತ್ತೇನ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಪುಸ್ತಕಸ್ಯ ಪ್ರದಾಯಕಃ ॥ ೧೪ ॥

ಪುರಾಣಂ ಭಾರತಂ ವಾಪಿ ರಾಮಾಯಣಮಥಾಪಿ ವಾ ।
ದತ್ತ್ವಾ ಯತ್ಫಲಮಾಪ್ನೋತಿ ಪಾರ್ಥ ತತ್ಕೇನ ವರ್ಣ್ಯತೇ ॥ ೧೫ ॥

ಪ್ರಾತರುತ್ಥಾಯ ಯಃ ಶಿಷ್ಯಾನಧ್ಯಾಪಯತಿ ಯತ್ನತಃ ।
ವೇದಂ ಶಾಸ್ತ್ರಂ ನೃತ್ಯಗೀತಂ ಕಸ್ತೇನ ಸದೃಶಃ ಕೃತೀ ॥ ೧೬ ॥

ಉಪಾಧ್ಯಾಯಸ್ಯ ಯೋವೃತ್ತಿಂ ದತ್ತ್ವಾಧ್ಯಾಪಯತೇ ಜನಃ ।
ಕಿಂ ನ ದತ್ತಂ ಭವೇತ್ತೇನ ಧರ್ಮಕಾಮಾರ್ಥದರ್ಶಿನಾ ॥ ೧೭ ॥

೧೪. ಕಪಿಲವರ್ಣವುಳ್ಳ ಸಾವಿರ ಗೋವುಗಳನ್ನು ಶ್ರದ್ಧೆಯಿಂದ ವಿಧಿಪ್ರಕಾರ ದಾನಮಾಡಿದರೆ ಲಭ್ಯವಾಗತಕ್ಕ ಫಲವನ್ನು ಪುಸ್ತಕವನ್ನು ದಾನಮಾಡುವವನೂ ಕೂಡ ಪಡೆಯುತ್ತಾನೆ.

೧೫. ಅಯ್ಯಾ ಯುಧಿಷ್ಠಿರ—ಪುರಾಣಗ್ರಂಥಗಳಾದ ಭಾರತ, ರಾಮಾಯಣ ಇವುಗಳನ್ನು ದಾನಮಾಡಿದರೆ ಎಂತಹ ಫಲವನ್ನು ಪಡೆಯುತ್ತಾನೆಂಬುವನ್ನು ಸಮಗ್ರವಾಗಿ ತಿಳಿಸಲು ಯಾರಿಂದಲೂ ಸಾಧ್ಯವಿಲ್ಲ.

೧೬. ಪ್ರಾತಃಕಾಲದಲ್ಲಿ ಎದ್ದು ಶಿಷ್ಯರಿಗೆ ವೇದ, ಶಾಸ್ತ್ರ, ನೃತ್ಯ, ಸಂಗೀತ ಇತ್ಯಾದಿಗಳನ್ನು ಪ್ರಯತ್ನದಿಂದ ಅಧ್ಯಯನಮಾಡಿಸುವ ಪುಣ್ಯಾತ್ಮನು ನಿಜವಾಗಿ ಕೃತಕೃತ್ಯನು. ಅವನಿಗೆ ಸಮಾನರಾದ ಧನ್ಯರಾರೂ ಇಲ್ಲ.

೧೭. ಧರ್ಮಾಭಿಲಾಷಿಯಾದ ಯಾವ ಮನುಜನು ಉಪಾಧ್ಯಾಯರನ್ನು ಗೊತ್ತುಮಾಡಿ ವೇತನವನ್ನು ಕೊಟ್ಟು ಬಾಲಕರಿಗೆ ಅಧ್ಯಯನಮಾಡಿಸುವನೋ ಆತನು ಬಹುಜನರನ್ನು ಧರ್ಮ, ಅರ್ಥ, ಕಾಮ ಎಂಬ ಪುರುಷಾರ್ಥತ್ರಯದ ಸಂಪಾದನಾರ್ಹರನ್ನಾಗಿ ಮಾಡಿದ್ದರಿಂದ ಆತನು ಸಕಲವನ್ನೂ ದಾನಮಾಡಿದಂತೆಯೇ ಆಯಿತು.

ಛಾತ್ರಾಣಾಂ ಭೋಜನಾಭ್ಯಂಗಂ ವಸ್ತ್ರಂ ಭಿಕ್ಷಾಮಥಾಪಿ ವಾ ।
ದತ್ತ್ವೈವ ಪ್ರಾಪ್ನೋತಿ ಪುರುಷಃ ಸರ್ವಕಾಮಾನ್ನ ಸಂಶಯಃ ॥ ೧೮ ॥

ವಿವೇಕೋ ಜೀವಿತಂ ದೀರ್ಘಂ ಧರ್ಮಕಾಮಾರ್ಥಸಂಪದಃ ।
ಸರ್ವಂ ತೇನ ಭವೇದ್ದತ್ತಂ ಛಾತ್ರಾಣಾಂ ಪೋಷಣೇ ಕೃತೇ ॥ ೧೯ ॥

ಶಾಸ್ತ್ರಂ ಶಸ್ತ್ರಕಲಾಶಿಲ್ಪಂ ಯೋ ಯದಿಚ್ಛೇದುಪಾರ್ಜಿತುಂ ।
ತಸ್ಯೋಪಕಾರಕರಣೇ ಪಾರ್ಥ ಕಾರ್ಯಂ ಸದಾ ಮನಃ ॥ ೨೦ ॥

ವಾಜಪೇಯ ಸಹಸ್ರಸ್ಯ ಸಮ್ಯಗಿಷ್ಟಸ್ಯ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ವಿದ್ಯಾದಾನಾನ್ನಸಂಶಯಃ ॥ ೨೧ ॥

---

೧೮. ವಿದ್ಯಾರ್ಥಿಗಳಿಗೆ ಭೋಜನ, ಎಣ್ಣೆ ಒತ್ತಿ ನೀರೆರೆಯುವುದು, (ಅಭ್ಯಂಗ) ವಸ್ತ್ರ, ಮತ್ತು ಭಿಕ್ಷಾನ್ನ ಇವುಗಳನ್ನು ದಾನಮಾಡಿದ ಮನುಜನು ತನ್ನ ಸಕಲ ಅಭೀಷ್ಟಗಳನ್ನೂ ಪಡೆಯುತ್ತಾನೆಂಬುದರಲ್ಲಿ ಸಂಶಯವಿಲ್ಲ.

೧೯. ವಿದ್ಯಾರ್ಥಿಗಳನ್ನು ಭೋಜನಾಭ್ಯಂಗಾದಿಗಳಿಂದ ಪೋಷಣೆಮಾಡಿದರೆ ಅವರಿಗೆ ವಿವೇಕ, ದೀರ್ಘವಾದ ಆಯುಸ್ಸು, ಧರ್ಮ, ಕಾಮ, ಅರ್ಥ ಎಂಬ ಮೂರು ಪುರುಷಾರ್ಥಗಳು ಮತ್ತು ಸಂಪತ್ತು ಇವುಗಳೆಲ್ಲವನ್ನೂ ದಾನ ಮಾಡಿದಂತಾಗುತ್ತದೆ.

೨೦. ಅಯ್ಯಾ ಧರ್ಮಜನೇ ! ಕೇಳು— ಶಾಸ್ತ್ರಜ್ಞಾನ, ಶಸ್ತ್ರವಿದ್ಯೆ, ಶಿಲ್ಪಿಕಲೆ ಇವುಗಳಲ್ಲಿ ಯಾವುದನ್ನು ಸಂಪಾದಿಸಲಿಚ್ಛಿಸುವನೋ ಅವನಿಗೆ ಅವುಗಳನ್ನು ಕಲಿಸಿಕೊಡುವ ಉಪಕಾರ ಮಾಡುವುದರಲ್ಲಿಯೇ ಯಾವಾಗಲೂ ಮನಸ್ಸನ್ನಿಡಬೇಕು.

೨೧. ಮಾನವನು ಒಂದು ಸಾವಿರ ವಾಜಪೇಯ ಯಾಗಗಳನ್ನು ಮಾಡೋಣದರಿಂದ ಯಾವ ಫಲವನ್ನು ಹೊಂದುವನೋ ಅದೇ ಫಲವನ್ನು ವಿದ್ಯಾದಾನಮಾಡಿದುದರಿಂದ ಪಡೆಯುತ್ತಾನೆಂಬುದರಲ್ಲಿ ಸಂಶಯವಿಲ್ಲ.

ಶಿವಾಲಯೇ ವಿಷ್ಣುಗೃಹೇ ಸೂರ್ಯಸ್ಯಭವನೇಽಥವಾ ।
ಯಃ ಕಾರಯತಿ ಧರ್ಮಾತ್ಮಾ ಸದಾ ಪುಸ್ತಕವಾಚನಂ ॥ ೨೨ ॥

ಗೋಭೂಹಿರಣ್ಯವಾಸಾಂಸಿ ಶಯನಾನ್ಯಾಸನಾನಿ ಚ ।
ಪ್ರತ್ಯಹಂ ತೇನ ದತ್ತಾನಿ ಭವಂತಿ ಭರತರ್ಷಭ ॥ ೨೩ ॥

ಧರ್ಮಾಧರ್ಮಂ ನ ಜಾನಾತಿ ವಿದ್ಯಯಾ ರಹಿತಃ ಪುಮಾನ್ ।
ತಸ್ಮಾತ್ಸದೈವ ಧರ್ಮಾತ್ಮಾ ವಿದ್ಯಾದಾನರತೋ ಭವೇತ್ ॥ ೨೪ ॥

ತ್ರೈಲೋಕ್ಯಂ ಚತುರೋ ವರ್ಣಾಃ ಚತ್ವಾರಶ್ಚಾಶ್ರಮಾಃ ಪೃಥಕ್ ।
ಬ್ರಹ್ಮಾದ್ಯಾ ದೇವತಾಃ ಸರ್ವಾಃ ವಿದ್ಯಾದಾನೇ ಪ್ರತಿಷ್ಠಿತಾಃ ॥ ೨೫ ॥

೨೨. ಎಲೈ ಭರತಕುಲಶ್ರೇಷ್ಠನೇ—ಈಶ್ವರ, ವಿಷ್ಣು, ಸೂರ್ಯ ಈ ದೇವರುಗಳ ದೇವಸ್ಥಾನಗಳಲ್ಲಿ ಪುರಾಣದ ಪುಸ್ತಕಗಳನ್ನು ನಿತ್ಯವೂ ವಾಚನ ಮಾಡಿಸತಕ್ಕ ಮನುಜನು ಧರ್ಮಾತ್ಮನೆನಿಸುವನು.

೨೩. ಮತ್ತು ಆತನು ಈರೀತಿ ಮಾಡುವುದರಿಂದ ನಿತ್ಯವೂ ಗೋವುಗಳು ಸುವರ್ಣ, ವಸ್ತ್ರಗಳು, ಹಾಸಿಗೆ, ಆಸನ ಇವಗಳನ್ನು ದಾನಮಾಡಿದಂತಾಗುತ್ತದೆ.

೨೪. ವಿದ್ಯೆಯಿಲ್ಲದ ನರನಿಗೆ ಧರ್ಮವಾವುದು? ಅಧರ್ಮವಾವುದು? ಎಂಬ ತಿಳಿವಳಿಕೆಯು ಇರುವುದಿಲ್ಲ. ಆದುದರಿಂದ ಧರ್ಮಾತ್ಮನಾದ ಮನುಜನು ಯಾವಾಗಲೂ ವಿದ್ಯೆಯನ್ನು ದಾನಮಾಡುವುದರಲ್ಲಿ ಆಸಕ್ತನಾಗಬೇಕು.

೨೫. ಮೂರು ಲೋಕಗಳೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಗಳೂ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳೂ, ಮತ್ತು ಬ್ರಹ್ಮನೇ ಮೊದಲಾದ ಸಕಲ ದೇವತೆಗಳೂ, ವಿದ್ಯೆಯನ್ನು ದಾನಮಾಡತಕ್ಕ ಮನುಜನಲ್ಲಿ ಪ್ರತಿಷ್ಠಿತರಾಗಿರುತ್ತಾರೆ.

ಚತುರ್ಯುಗಾನಿ ರಾಜೇಂದ್ರ ಏಕಸಪ್ತತಿಸಂಖ್ಯಯಾ ।
ಕಲ್ಪಂ ವಿಷ್ಣುಪುರೇ ತಿಷ್ಠೇತ್ಪೂಜ್ಯಮಾನಃ ಸುರೋತ್ತಮೈಃ　|| ೨೬ ||

ಕ್ಷಿತಿಂ ಪ್ರಾಪ್ಯೇತ್ಯ ಕಾಲಾಂತೇ ರಾಜಾ ಭವತಿ ಧಾರ್ಮಿಕಃ ।
ಹಸ್ತ್ಯಶ್ವರಥದಾನಾಢ್ಯೋ ದಾತಾ ಭೋಕ್ತಾ ವಿಮತ್ಸರೀ　|| ೨೭ ||

ರೂಪಸೌಭಾಗ್ಯಸಂಪನ್ನೋ ದೀರ್ಘಾಯುರ್ನೀರುಜೋ ಭವೇತ್ ।
ಪುತ್ರೈಃ ಪೌತ್ರೈಃ ಪರಿವೃತೋ ಜೀವೇಚ್ಚ ಶರದಾಂ ಶತಂ　|| ೨೮ ||

ದಾನಂ ವಿಶೇಷಫಲದಂ ಜಗತೀಹ ನಾನ್ಯ- ।
ದ್ವಿದ್ಯಾಂ ವಿಹಾಯ ವದನಾಬ್ಜಕೃತಾಧಿವಾಸಾಂ ||

---

೨೬. ಎಲೈ ರಾಜಶ್ರೇಷ್ಠನೇ! ಈರೀತಿ ವಿದ್ಯಾದಾನ ಮಾಡಿದ ಮನುಜನು ನಾಲ್ಕು ಯುಗಗಳಿಗೆ ಒಂದು ಕಲ್ಪವೆಂಬ ರೂಢಿಯಿರುವ ಎಪ್ಪತ್ತೊಂದು ಕಲ್ಪ ಪರ್ಯಂತವಾಗಿ ದೇವಶ್ರೇಷ್ಠರಿಂದ ಪೂಜಿಸಲ್ಪಡುತ್ತಾ ವೈಕುಂಠದಲ್ಲಿ ವಾಸ ವಾಗಿರುತ್ತಾನೆ.

೨೭. ಆ ನಿಯಮಿತಕಾಲವು ಕಳೆದ ಮೇಲೆ ಭೂಮಿಯಲ್ಲಿ ಜನಿಸಿ ಧಾರ್ಮಿಕನಾದ ರಾಜನಾಗುತ್ತಾನೆ. ಆಗ ಆನೆ, ಕುದುರೆ, ರಥ (ಅರ್ಶಾದ್ಯ ಚ್ಪ್ರತ್ಯಯ ಮಾಡಿದರೆ ದಾನ ಎಂಬ ಪದಕ್ಕೆ ದಾನಿ ಎಂದರ್ಥ) ಇವುಗಳನ್ನು ದಾನಮಾಡುವಸಾಮರ್ಥ್ಯ ಉಳ್ಳವನೂ, ಮಾತ್ಸರ್ಯರಹಿತನೂ, ದಾನಶೀಲನೂ ಅದರಿಂದುಂಟಾಗತಕ್ಕ ಒಳ್ಳೆಯ ಫಲವನ್ನು ಅನುಭವಿಸತಕ್ಕವನೂ ಆಗು ತ್ತಾನೆ.

೨೮. ಅಲ್ಲದೆ ಸೌಂದರ್ಯ ಸೌಭಾಗ್ಯಗಳಿಂದ ಕೂಡಿದವನೂ, ನೀರೋ ಗಿಯೂ, ಪುತ್ರಪೌತ್ರಾದಿಗಳಿಂದ ಪರಿವೃತನೂ ಆಗಿ ನೂರಾರು ವರ್ಷಗಳು ಬದುಕ ಬಹುದು.

೨೯. ವಿಶೇಷವಾದ ಫಲಗಳನ್ನು ಉಂಟುಮಾಡುವ ದಾನಗಳಲ್ಲಿ ಮಾನ ವರ ವದನಕಮಲ ವಾಸಿಯಾದ ವಿದ್ಯೆಗಿಂತಲೂ ಬೇರೆಯಾದ ದಾನವು ಪ್ರಪಂಚ

**ಗೋ ಭೂ ಹಿರಣ್ಯ ಗಜ ವಾಜಿ ರಥಾದಿ ಸರ್ವಂ ।**
**ತಾಂ ಯಚ್ಛತಾಂ ಕಿಮಿಹ ಪಾರ್ಥ ಭವೇನ್ನ ದತ್ತಂ ॥ ೨೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ವಿದ್ಯಾದಾನವಿಧಿವರ್ಣನಂ ನಾಮ ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ.**



ದಲ್ಲಿ ಯಾವುದೂ ಇಲ್ಲ. ಅಯ್ಯಾ ಯುಧಿಷ್ಠಿರ! ಈ ಮಹಿಮೆಯುಳ್ಳ ವಿದ್ಯೆಯನ್ನು ದಾನಮಾಡುವ ಮಾನವರು ಗೋವು, ಭೂಮಿ, ಸುವರ್ಣ, ಗಜ, ಕುದುರೆ, ರಥ ಇತ್ಯಾದಿ ಸಕಲಗಳನ್ನೂ ದಾನಮಾಡಿದಂತಾಗುವುದಿಲ್ಲವೇ? ಎಂದು ಕೃಷ್ಣನು ಹೇಳಿದನು.

ಇಲ್ಲಿಗೆ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದದಲ್ಲಿ ವಿದ್ಯಾದಾನದ ವಿಧಿಯ ವರ್ಣನೆ ಎಂಬ ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಪುರಾ ಪ್ರಿಯವ್ರತೋ ರಾಜಾ ಪುತ್ರಃ ಸ್ವಾಯಂಭುವಸ್ಯ ತು |
ಪಾಲಯಾಮಾಸ ವಸುಧಾಂ ಪ್ರಜಾಪತಿರಿವಾಪರಃ || ೧ ||

ತ್ರಿಂಶದ್ವರ್ಷಸಹಸ್ರಾಣಿ ಪಾಲಯಿತ್ವಾ ಮಹೀಮಿಮಾಂ |
ಸಪ್ತದ್ವೀಪಾನ್ವಿಭಜ್ಯಾಸೌ ಪುತ್ರೇಭ್ಯಃ ಪ್ರದದೌ ವಿಭುಃ || ೨ ||

ರಾಜ್ಯೇ ನಿಕ್ಷಿಪ್ಯ ತನಯಾನ್ ಸಪ್ತದ್ವೀಪೇಷು ಸಪ್ತ ಸಃ |
ವಿಷಯಾನುಪಸಂಹೃತ್ಯ ಜಗಾಮ ತಪಸೇ ವನಂ || ೩ ||

---

### ನೂರಎಪ್ಪತ್ತೈದನೆಯ ಅಧ್ಯಾಯ

೧. ಪೂರ್ವದಲ್ಲಿ ಸ್ವಾಯಂಭುವಮನುವಿನ ಮಗನಾದ ಪ್ರಿಯವ್ರತನು ರಾಜನಾಗಿ ಎರಡನೆಯ ಬ್ರಹ್ಮನೋ ಎಂಬಂತೆ ರಾಜ್ಯವನ್ನು ರಕ್ಷಿಸುತ್ತಿದ್ದನು.

೨. ಆತನು ಈ ಭೂಮಿಯನ್ನು ಮುವ್ವತ್ತು ಸಹಸ್ರ ವರ್ಷಗಳು ಪಾಲನೆ ಮಾಡಿ ಅನಂತರ ಅದನ್ನು ಏಳು ದ್ವೀಪಗಳನ್ನಾಗಿ ವಿಂಗಡಿಸಿ ತನ್ನ ಮಕ್ಕಳಿಗೆ ಕೊಟ್ಟನು.

೩. ತನ್ನ ಏಳು ಮಕ್ಕಳನ್ನು ಒಂದೊಂದು ದ್ವೀಪದಲ್ಲಿ ಒಬ್ಬೊಬ್ಬರು ರಾಜರಾಗಿರುವಂತೆ ನೇಮಕಮಾಡಿದನು. ಮತ್ತು ಗಂಧ ಪುಷ್ಪ ಮೊದಲಾದ ವಿಷಯೋಪಭೋಗಗಳನ್ನು ಬಿಟ್ಟು ತಪಸ್ಸುಮಾಡಬೇಕೆಂಬ ಉದ್ದೇಶದಿಂದ ಆತನು ಕಾಡಿಗೆ ಹೋದನು.

ತಪೋವನಗತಂ ಶ್ರುತ್ವಾ ರಾಜಾನಂ ಪರಮದ್ಯುತಿಂ ।
ಸಮಾಜಗ್ಮುರ್ಮಹಾತ್ಮಾನಃ ಋಷಯಸ್ತಂ ದಿದೃಕ್ಷವಃ ॥ ೪ ॥

ತಾನಾಗತಾನ್ ಋಷೀನ್ದೃಷ್ಟ್ವಾ ತಪೋನಿಧೂರ್ತಕಲ್ಮಷಾನ್ ।
ಪೂಜಯಾಮಾಸ ಮೇಧಾವೀ ವಿಧಿದೃಷ್ಟೇನ ಕರ್ಮಣಾ ॥ ೫ ॥

ಪಾದ್ಯಾರ್ಘ್ಯಾಚಮನೀಯೇನ ಪ್ರಿಯಪ್ರಶ್ನೋತ್ತರೇಣ ಚ ।
ಅಥ ತೇಷೂಪವಿಷ್ಟೇಷು ಬ್ರಾಹ್ಮಣೇಷು ಮಹಾತ್ಮಸು ॥ ೬ ॥

ಆಜಗಾಮ ಮಹಾತೇಜಾಃ ಪುಲಸ್ತ್ಯೋ ಬ್ರಹ್ಮಣಃ ಸುತಃ ।
ದೀಪ್ಯಮಾನೋ ಮಹಾತೇಜಾಃ ದ್ವಿತೀಯ ಇವ ಭಾಸ್ಕರಃ ॥ ೭ ॥

ತಂ ದೃಷ್ಟ್ವಾ ಮುನಯಃ ಸರ್ವೇ ಸ ಚ ರಾಜಾ ಮಹಾರಥಃ ।
ಉತ್ತಸ್ಥುರ್ವಿಸ್ಮಿತಾಃ ಸರ್ವೇ ಪ್ರೋತ್ಫುಲ್ಲನಯನಾಸ್ತತಃ ॥ ೮ ॥

---

೪. ಪರಮ ತೇಜಸ್ವಿಯಾದ ಆ ರಾಜನು ತಪೋವನಕ್ಕೆ ಹೊರಟುದನ್ನು ಕೇಳಿ ಆತನನ್ನು ನೋಡಲಪೇಕ್ಷಿಸಿ ಮಹಾತ್ಮರಾದ ಋಷಿಗಳು ಅವನಿದ್ದೆಡೆಗೆ ಬಂದರು.

೫. ತಪಸ್ಸನ್ನಾಚರಿಸಿದುದರಿಂದ ಪರಮ ಪವಿತ್ರರಾಗಿ ಅಲ್ಲಿಗೆ ಬಂದ ಋಷಿಗಳನ್ನು ತಪೋನಿಧಿಯಾದ ರಾಜನು ಕಂಡು ಯಥಾವಿಧಿಯಾಗಿ ಅರ್ಚಿಸುವನಾಗಿ,

೬. ಪಾದ್ಯ, ಅರ್ಘ್ಯ, ಆಚಮನ ಇವುಗಳಿಂದ ಸತ್ಕರಿಸಿ ಕುಶಲ ಪ್ರಶ್ನೆಗಳನ್ನು ಮಾಡಿದನು,

೭. ಮಹಾತ್ಮರಾದ ಬ್ರಾಹ್ಮಣರೆಲ್ಲ ಅಲ್ಲಿ ಮಾತಾಡುತ್ತ ಕುಳಿತುಕೊಂಡಿರಲಾಗಿ ಬ್ರಹ್ಮನ ಮಗನಾದ ಪುಲಸ್ತ್ಯನೆಂಬ ಹೆಸರುಳ್ಳ ಮಹಾತೇಜಸ್ವಿಯೊಬ್ಬನು ಎರಡನೆಯ ಸೂರ್ಯನೋ ಎಂಬಂತೆ ಪ್ರಕಾಶಿಸುತ್ತಾ ಅಲ್ಲಿಗೆ ಬಂದನು.

೮. ಅಲ್ಲಿಗೆ ಬಂದ ಆತನನ್ನು ಕಂಡು ಅಲ್ಲಿ ಸೇರಿದ್ದ ಮುನಿಗಳೂ ಮತ್ತು ಮಹಾರಥನಾದ ಆ ರಾಜನೂ ಸಂತೋಷದಿಂದ ಕಣ್ಣುಗಳನ್ನು ಅರಳಿಸಿಕೊಂಡು ಎದ್ದು ನಿಂತರು.

ಕೃತ್ವಾ ತು ಸಂವಿದಂ ತೇನ ಯಥಾಯೋಗ್ಯಂ ವಿಧಾನತಃ ।
ವಿಷ್ಟರಂ ಚ ದದುಸ್ತಸ್ಮೈ ಪಾದ್ಯಾರ್ಘ್ಯಾಚಮನಾದಿಕಂ ॥ ೯ ॥

ತತಸ್ತು ಮುನಯಃ ಸರ್ವೇ ಸಮಾಸೀನಾ ಯಥಾಸುಖಂ ।
ಚಕ್ರುಃ ಕಥಾ ಮುದಾಯುಕ್ತಾ ವೇದೋಕ್ತವಿವಿಧಾಶ್ರಯಾಃ ॥೧೦॥

ತತಃ ಕಥಾಂತೇ ಕಸ್ಮಿಂಶ್ಚಿನ್ಮುನಯಸ್ತೇ ಸರಾಜಕಾಃ ।
ಪಪ್ರಚ್ಛುರ್ಬ್ರಹ್ಮತನಯಂ ಲೋಕಾನಾಂ ಹಿತಕಾಮ್ಯಯಾ ॥ ೧೧ ॥

॥ ಋಷಯ ಊಚುಃ ॥

ಭಗವನ್ ಕೇನ ದಾನೇನ ವ್ರತೇನ ನಿಯಮೇನ ವಾ ।
ಪ್ರಾಪ್ಯತೇ ಸದ್ಗತಿಃ ಪುಂಭಿಃ ಸ್ತ್ರೀಭಿಶ್ಚ ಮುನಿಸತ್ತಮ ॥ ೧೨ ॥

---

೯. ಮತ್ತು ಆತನೊಡನೆ ವಿಧಿಪ್ರಕಾರ ಯೋಗ್ಯರೀತಿಯಿಂದ ಸಂಭಾಷಣೆ ಮಾಡಿ ಪಾದ್ಯ, ಅರ್ಘ್ಯ, ಆಚಮನ ಇತ್ಯಾದಿಗಳಿಂದ ಸತ್ಕರಿಸಿ ಕುಳಿತುಕೊಳ್ಳುವುದಕ್ಕೆ ಆಸನವನ್ನು ಕೊಟ್ಟರು.

೧೦. ಅನಂತರ ಆ ಮುನಿಗಳು ತಾವೂ ಕೂಡ ಸುಖವಾಗಿ ಕುಳಿತುಕೊಂಡು ಹರ್ಷಚಿತ್ತರಾಗಿ ವೇದದಲ್ಲಿ ಉದಾಹೃತವಾದ ಅನೇಕ ಕಥೆಗಳನ್ನು ಹೇಳಿದರು.

೧೧. ಹಾಗೆ ಕಥೆಯನ್ನು ಕೇಳಿದನಂತರ ಮುನಿಗಳೂ, ರಾಜನೂ ಸಹ ಲೋಕಗಳಿಗೆ ಹಿತವಾಗಲೆಂಬ ಆಶಯದಿಂದ ಬ್ರಹ್ಮನ ಮಗನಾದ ಆ ಪುಲಸ್ತ್ಯನನ್ನು ಈರೀತಿ ಪ್ರಶ್ನಿಸಿದರು.

೧೨. ಋಷಿಗಳು ಕೇಳುತ್ತಾರೆ—ಸ್ವಾಮಿ ಪೂಜ್ಯರೇ, ಯಾವ ದಾನ, ಯಾವ ವ್ರತ, ಯಾವ ನಿಯಮ ಇವುಗಳಿಂದ ಪುರುಷರೂ, ಸ್ತ್ರೀಯರೂ ಸದ್ಗತಿಯನ್ನು ಹೊಂದುತ್ತಾರೆ ? ಈ ವಿಚಾರವನ್ನು ನಾವೂ, ಮತ್ತು ನಿಯಮಶಾಲಿಯಾದ ಈ ರಾಜನೂ ಕೂಡ ತಿಳಿದುಕೊಳ್ಳಲು ಕುತೂಹಲಿಗಳಾಗಿದ್ದೇವೆ ಎಂದರು.

॥ ಪುಲಸ್ತ್ಯ ಉವಾಚ ॥

ಇಚ್ಛಾಮಃ ಶ್ರೋತುಮೇತತ್ತೇ ರಾಜಾ ಚಾಯಂ ಯತವ್ರತಃ ।
ಶೃಣುಧ್ವಂ ಮುನಯಃ ಸರ್ವೇ ರಹಸ್ಯಂ ಪಾಪನಾಶನಂ ॥ ೧೩ ॥

ಉತ್ತಮಂ ಸರ್ವದಾನಾನಾಂ ಸಮವಾಯಂ ವದಾಮಿ ವಃ ।
ಯದ್ದತ್ತ್ವಾ ಬ್ರಹ್ಮಹಾ ಗೋಘ್ನಃ ಪಿತೃಘ್ನೋ ಗುರುತಲ್ಪಗಃ ॥ ೧೪ ॥

ಕೃತಘ್ನಃ ಕೂಟಸಾಕ್ಷೀ ಚ ಮುಚ್ಯತೇ ಪಾತಕಾನ್ನರಃ ।
ಸದ್ಯೋ ದಿವ್ಯತನುಶ್ಚೈವ ಜಾಯತೇ ಸ್ತ್ರೀ ತಥೈವ ಚ ॥ ೧೫ ॥

ಕೃಚ್ಛ್ರ ಚಾಂದ್ರಾಯಣಾದ್ಯೈಶ್ಚ ತುಲಾಪುರುಷಸಂಜ್ಞಿತೈಃ ।
ವ್ರತೈಶ್ಚ ಪಾಚಯೇದ್ದೇಹಮಾಕಾಂಕ್ಷನ್ ಬ್ರಹ್ಮಣಃ ಪದಂ ॥ ೧೬ ॥

ಕೃಚ್ಛ್ರ ಚಾಂದ್ರಾಯಣಾದೀನಿ ವ್ರತಾನಿ ಮುನಿಸತ್ತಮಾಃ ।
ಬ್ರಾಹ್ಮಣಾನಾಂ ವನಸ್ಥಾನಾಂ ಭಿಕ್ಷೋ ರಂಡಾಜನಸ್ಯ ಚ ॥ ೧೭ ॥

೧೩. ಪುಲಸ್ತ್ಯನು ಹೇಳುತ್ತಾನೆ—ಎಲೈ ಮುನಿಗಳೇ, ಪರಮ ರಹಸ್ಯವೂ ಪಾಪನಾಶಕವೂ ಆದ ಒಂದು ವಿಚಾರವನ್ನು ಹೇಳುತ್ತೇನೆ ಕೇಳಿ.

೧೪-೧೫. ಸಕಲ ದಾನಗಳಲ್ಲಿ ಶ್ರೇಷ್ಠವೆನಿಸಿದ ಸಮುದಾಯದಾನವೊಂದಿದೆ. ಈ ದಾನಮಾಡುವುದರಿಂದ ಪುರುಷನು ಆಚರಿಸಿದ ಬ್ರಹ್ಮಹತ್ಯ, ಗೋಹತ್ಯ, ಪಿತೃಹತ್ಯ, ಗುರುಪತ್ನೀಗಮನ, ಉಪಕಾರಸ್ಮರಣೆಯಿಲ್ಲದೆ ಇರುವಿಕೆ, ಕೂಟದರ್ಶನ ಇತ್ಯಾದಿ ಪಾತಕಗಳಿಂದ ಮುಕ್ತನಾಗುತ್ತಾನೆ. ಸ್ತ್ರೀಯು ಈ ದಾನ ಮಾಡಿದರೆ ಶೀಘ್ರದಲ್ಲಿಯೇ ದಿವ್ಯವಾದ ಶರೀರವುಳ್ಳವಳಾಗುತ್ತಾಳೆ.

೧೬. ಬ್ರಹ್ಮಲೋಕವನ್ನು ಅಪೇಕ್ಷಿಸತಕ್ಕ ಮನುಜನು ತುಲಾ ಪುರುಷ ದಾನ ಎಂಬ ವ್ರತದಿಂದಲೂ ಮತ್ತು ಕೃಚ್ಛ್ರ, ಚಾಂದ್ರಾಯಣ ಎಂಬ ವ್ರತಗಳಿಂದಲೂ ತನ್ನ ದೇಹವನ್ನು ದಂಡಿಸಬೇಕು.

೧೭. ಎಲೈ ಮುನಿವರ್ಯರೇ—ವಾನಪ್ರಸ್ಥರೆನಿಸಿದ ಬ್ರಾಹ್ಮಣರಿಗೂ, ಮತ್ತು ರಂಡಾಜನರಿಗೂ ಸನ್ಯಾಸಿಗೂ ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳು ಉಕ್ತವಾಗಿವೆ.

**ಕಾಯಕ್ಲೇಶೇನ ಸಿಧ್ಯಂತಿ ಗೃಹಸ್ಥೇಷು ನ ತಾನಿ ವೈ ।**
**ಮಹಾಧನಾಶ್ಚ ಯೇ ಲೋಕಾಃ ರಾಜಾನೋ ರತ್ನಭಾಗಿನಃ ॥ ೧೮ ॥**

**ನ ತೇಷಾಂ ಕೃಚ್ಛ್ರಸಾಧ್ಯೋಽಪಿ ಕ್ವಚಿದ್ಧರ್ಮಃ ಪ್ರಶಸ್ಯತೇ ।**
**ಯದೇತದ್ದ್ರವಿಣಂ ನಾಮ ಪ್ರಾಣಾಶ್ಚೈತೇ ಬಹಿಶ್ಚರಾಃ ॥ ೧೯ ॥**

**ತಸ್ಮಾದ್ಬಹಿಶ್ಚರೈಃ ಪ್ರಾಣೈರಾತ್ಮಾ ಯೋಜ್ಯಃ ಸದಾ ಬುಧೈಃ ।**
**ದ್ರವ್ಯಾಣಾಮುತ್ತಮಂ ಲೋಕೇ ಕಾಂಚನಂ ಸಾರ್ವಕಾಮಿಕಂ ॥ ೨೦ ॥**

**ಅಪತ್ಯಂ ಸುರಮುಖ್ಯಸ್ಯ ಜ್ಯೇಷ್ಠಂ ಚೈವ ವಿಭಾವಸೋಃ ।**
**ತೇನ ಸಾರ್ಧಂ ಯ ಆತ್ಮಾನಂ ತೋಲಯೇತ್ಪ್ರಯತೋ ಬುಧೈಃ॥೨೧॥**

---

೧೮. ಬಹು ಧನಿಕರಾದವರೂ ರತ್ನಭಾಗಿಗಳಾದ ರಾಜರೂ ಸಹ ಮನೆಯಲ್ಲಿದ್ದು ಕಾಯಕ್ಲೇಶಪಟ್ಟ ಮಾತ್ರಕ್ಕೆ ಇವುಗಳು ಸಿದ್ಧಿಸುವುದಿಲ್ಲ.

೧೯. ಅಥವಾ ಕೃಛ್ರದಿಂದ ಸಾಧ್ಯವಾಗುವ ಧರ್ಮವು ಅವರಿಗೆ ಪ್ರಶಂಸಾರ್ಹವಲ್ಲ. ಅವರಿಗೆ ದ್ರವ್ಯವೇ ಬಹಿಃಪ್ರಾಣಗಳಾಗಿ ಎಂದರೆ ಪ್ರಾಣಸಮಾನವಾಗಿರುತ್ತವೆ.

೨೦. ಆದುದರಿಂದ ತಿಳಿವಳಿಕೆಯುಳ್ಳವನು ಬಹಿಶ್ಚರಪ್ರಾಣಗಳೊಡನೆ ಎಂದರೆ ದ್ರವ್ಯದೊಡನೆ ತನ್ನನ್ನು ತೂಕಮಾಡಿಸಿ ದಾನಮಾಡಬೇಕು. ಪ್ರಪಂಚದಲ್ಲಿ ಸಕಲ ದ್ರವ್ಯಗಳಲ್ಲಿ ಚಿನ್ನವು ಸರ್ವವನ್ನೂ ಒದಗಿಸಿಕೊಳ್ಳಲು ಯೋಗ್ಯವಾಗುವಂತಹ ಉತ್ತಮವಾದ ಪದಾರ್ಥವಾಗಿರುತ್ತದೆ.

೨೧. ಆ ಕಾಂಚನವು ಸುರರ ಹವಿಸ್ಸಿಗೆ ಮುಖ್ಯಾಶ್ರಯನಾದ ಅಗ್ನಿಯ ಸಂತತಿಯೆನಿಸಿದೆ. "ಅಗ್ನೇರಪತ್ಯಂ ಪ್ರಥಮಂ ಸುವರ್ಣಮಿಹ ಪಠ್ಯತೆ" ಎಂದು ಶಾಸ್ತ್ರವಚನವಿದೆ. ಮತ್ತು ಸೂರ್ಯನಿಗಿಂತ ಪ್ರಕಾಶದಲ್ಲಿ ಹಿರಿಯುದಾಗಿದೆ. ಆದ್ದರಿಂದ ಪ್ರಾಜ್ಞನು ತನ್ನ ತೂಕ ಸುವರ್ಣವನ್ನು ತೂಗಿಸಿ ದಾನಮಾಡಬೇಕು

ವಿಧೂಯ ಸರ್ವಪಾಪಾನಿ ಸದ್ಯೋ ದಿವ್ಯತನುರ್ಭವೇತ್ ।
ಏತತ್ಪುಲಸ್ತ್ಯಮುನಿನಾ ಋಷೀಣಾಂ ಪಾರ್ಥಿವಸ್ಯ ಚ ॥ ೨೨ ॥

ಸಮಾಖ್ಯಾತಂ ನೃಪಶ್ರೇಷ್ಠ ತೇಭ್ಯಶ್ಚ ತನ್ಮಯಾ ಶ್ರುತಂ ।
॥ ಯುಧಿಷ್ಠಿರ ಉವಾಚ ॥
ತುಲಾಪುರುಷದಾನಸ್ಯ ವಿಧಾನಂ ಪರಮೇಶ್ವರ ॥ ೨೩ ॥

ಕಥಯಸ್ವ ಮಹಾಭಾಗ ಮಮ ಭಕ್ತ್ಯಾನುಕಂಪಯಾ ।
॥ ಶ್ರೀಕೃಷ್ಣ ಉವಾಚ ॥
ಶೃಣುಷ್ವಾವಹಿತೋ ರಾಜನ್ ವಿಧಾನಂ ಗದತೋ ಮಮ ॥ ೨೪ ॥

ತುಲಾಪುರುಷಸಂಜ್ಞಸ್ಯ ದಾನಸ್ಯೇಹ ನೃಪೋತ್ತಮ ।
ವ್ಯತೀಪಾತೇಽಯನೇ ಚೈವ ಕಾರ್ತಿಕ್ಯಾಂ ವಿಷುವೇ ತಥಾ ॥ ೨೫ ॥

---

೨೨. ಈರೀತಿ ಮಾಡಿದರೆ ಮನುಜನು ಆ ಕ್ಷಣದಲ್ಲಿಯೇ ತನ್ನ ಸಕಲ ಪಾಪಗಳನ್ನೂ ಹೋಗಲಾಡಿಸಿಕೊಂಡವನಾಗಿ ದಿವ್ಯವಾದ ಶರೀರವುಳ್ಳವನಾಗುತ್ತಾನೆ.

೨೩. ಎಲೈ ನೃಪಶ್ರೇಷ್ಠನಾದ ಯುಧಿಷ್ಠಿರನೇ! ಮೇಲೆ ಹೇಳಿದ ಮಾತನ್ನು ಪುಲಸ್ತ್ಯಮುನಿಯು ಅಲ್ಲಿದ್ದ ಋಷಿಗಳಿಗೂ, ಆ ರಾಜನಿಗೂ ಹೇಳಿದನು. ಆ ಋಷಿಗಳ ಮೂಲಕ ನಾನು ಕೇಳಿದೆನು ಎಂದು ಶ್ರೀ ಕೃಷ್ಣನು ಹೇಳಿದನು.

೨೪. ಯುಧಿಷ್ಠಿರನು ಹೇಳುತ್ತಾನೆ—ಎಲೈ ಮಹಾಮಹಿಮನಾದ ಶ್ರೀ ಕೃಷ್ಣನೇ! ಭಕ್ತನಾದ ನನ್ನಲ್ಲಿ ದಯೆಯನ್ನಿಟ್ಟು ಆ ತುಲಾಪುರುಷದಾನ, ವಿಧಾನವನ್ನು ಹೇಳು ಎಂಬದಾಗಿ ಕೇಳಿದನು. ಶ್ರೀಕೃಷ್ಣನು ಹೇಳುತ್ತಾನೆ— ಎಲೈ ರಾಜನೇ! ಆ ವಿಧಾನವನ್ನು ಬೇಳುತ್ತೇನೆ ಸಮಾಹಿತಮನಸ್ಕನಾಗಿ ಕೇಳು.

೨೫-೨೬. ಎಲೈ ನೃಪೋತ್ತಮನೇ—ತುಲಾಪುರುಷದಾನವನ್ನು ವ್ಯತೀಪಾತವಿರುವ ದಿವಸ, ದಕ್ಷಿಣಾಯನ ಉತ್ತರಾಯಣ ಪುಣ್ಯಕಾಲ, ಚಂದ್ರಗ್ರಹಣ

**ಚಂದ್ರಸೂರ್ಯಗ್ರಹೇ ಯದ್ವಾ ಮಾಘ್ಯಾಂ ವಾ ನೃಪಸತ್ತಮ ।**
**ಜನ್ಮರ್ಕ್ಷೇ ಗ್ರಹಪೀಡಾಸು ತಥಾ ದುಃಸ್ವಪ್ನದರ್ಶನೇ ॥ ೨೬ ॥**

**ಯದಾ ವಾ ಜಾಯತೇ ವಿತ್ತಂ ತದಾ ದೇಯಮಿದಂ ಭವೇತ್ ।**
**ಅನಿತ್ಯಂ ಜೀವಿತಂ ಯಸ್ಮಾದ್ವಪುಶ್ಚಾತೀವಚಂಚಲಂ ॥ ೨೭ ॥**

**ಕೇಶೇಷು ಚ ಗೃಹೀತಸ್ಸನ್ ಮೃತ್ಯುನಾ ಧರ್ಮಮಾಚರೇತ್ ।**
**ತಸ್ಮಾದ್ಯದೈವ ಜಾಯೇತ ಶ್ರದ್ಧಾ ದಾನಂ ಪ್ರತಿ ಪ್ರಭೋ ॥ ೨೮ ॥**

**ತದೈವ ದಾನಕಾಲಃ ಸ್ಯಾತ್ಕಾರಣಂ ಹಿ ಯತೋ ಮಮ ।**
**ತೀರ್ಥೇಷ್ವಾಯತನೇ ಗೋಷ್ಠೇಷ್ವಥ ವಾ ಭವನಾಂಗಣೇ ॥**
**ಮಂಡಪಂ ಕಾರಯೇದ್ವಿಂಶ್ಚದ್ವಾತುರ್ಭದ್ರಾಸನಂ ಬುಧಃ ॥ ೨೯ ॥**

---

ಸೂರ್ಯಗ್ರಹಣಕಾಲ, ಮಾಘಮಾಸ, ತನ್ನ ಜನ್ಮನಕ್ಷತ್ರದ ದಿನ, ಕ್ರೂರ ಗ್ರಹಗಳು ಅರಿಷ್ಟಸ್ಥಾನಗತವಾದ ಕಾಲ, ಮತ್ತು ಕೆಟ್ಟ ಸ್ವಪ್ನಗಳನ್ನು ಕಂಡ ಸಮಯ ಈ ಕಾಲಗಳಲ್ಲಿಯೋ ಅಥವಾ ದ್ರವ್ಯಾನುಕೂಲವೊದಗಿ ಮಾಡಬೇಕೆಂಬ ಮನಸ್ಸು ಹುಟ್ಟಿದಾಗಲೋ ಮಾಡಬಹುದು.

೨೭. ಜೀವಿತವು ಅನಿತ್ಯವಾದುದು. ಶರೀರವ್ಯಾಪಾರವು ಬಹು ಕ್ಷಣಿಕವಾದುದು. ಆದುದರಿಂದ ಮೃತ್ಯುವು ಕೇಶಗಳನ್ನು ಹಿಡಿದೆಳೆಯುತ್ತಾನೆಂದು ಭಾವಿಸಿ ಜಾಗ್ರತೆ ಧರ್ಮಕಾರ್ಯಗಳನ್ನು ಮಾಡಬೇಕು.

೨೮. ಈರೀತಿ ಎಲ್ಲವೂ ಅನಿತ್ಯಗಳಾದುದರಿಂದ ದಾನವನ್ನು ಮಾಡಬೇಕೆಂಬ ಶ್ರದ್ಧೆಯು ಯಾವಾಗ ಉಂಟಾಗುವುದೋ ಆ ಕಾಲವೇ ದಾನಕಾಲವೆಂದು ಉಕ್ತವಾಗಿದೆ. ಈ ಕಾರ್ಯಕ್ಕೆ ಶ್ರದ್ಧೆಯೇ ಮುಖ್ಯ ಕಾರಣವಾಗಿದೆ.

೨೯. ಈ ಕಾರ್ಯಕ್ಕೆ ಪುಣ್ಯಕರವಾದ ಜಲಾಶಯಗಳಿರತಕ್ಕ ಸ್ಥಲ ದೇವಸ್ಥಾನ, ಗೋವುಗಳನ್ನು ಕಟ್ಟುವ ಸ್ಥಳ, ಅಥವಾ ಮನೆಯ ಅಂಗಳ ಇವು ಪ್ರಶಸ್ತ ಸ್ಥಳಗಳು. ಇಂತಹ ಸ್ಥಳವನ್ನು ಗೊತ್ತುಮಾಡಿ ಅಲ್ಲಿ ನಾಲ್ಕು ಕಡೆಗೂ ಮಂಗಳಕರಗಳಾದ ಬಾಗಿಲುಗಳುಳ್ಳ ಒಂದು ಮಂಡಪವನ್ನು ಏರ್ಪಡಿಸಬೇಕು.

ಆರ್ದ್ರಶಾಖಾನ್ವಿತಂ ದಿವ್ಯಂ ಪ್ರಾಗುದಕ್ಪ್ರವಣಂ ದೃಢಂ ।
ಷೋಡಶಾರತ್ನಿಮಾತ್ರಂ ಚ ಪತಾಕಾಭಿರಲಂಕೃತಂ ॥ ೩೦ ॥

ತನ್ಮಧ್ಯೇ ಕಾರಯೇದ್ವೇದಿಂ ಹಸ್ತಮಾತ್ರೋಚ್ಛ್ರಿತಾಂ ಶುಭಾಂ ।
ಚತುರಸ್ರಾಂ ಸಮಂತಾಚ್ಚ ಸಪ್ತಹಸ್ತಾಂ ಸುಶೋಭನಾಂ ॥ ೩೧ ॥

ತಸ್ಯಾ ಮಧ್ಯೇ ತುಲಾಂ ದಿವ್ಯಾಂ ಸ್ಥಾಪಯೇದ್ವಿಧಿಪೂರ್ವಕಂ ।
ಹಸ್ತದ್ವಯಂ ಚ ನಿಖನೇಚ್ಚತುರ್ಹಸ್ತೋಚ್ಛ್ರಿತಾಂ ಬುಧಃ ॥ ೩೨ ॥

ಸ್ತಂಭದ್ವಯಂ ಮಹಾರಾಜ ಸ್ಥಾಪಯೇತ್ಸುದೃಢಂ ನವಂ ।
ಚಂದನಃ ಖದಿರೋ ಬಿಲ್ವಃ ಶಾಕಶ್ಚೈವೇಂಗುದಸ್ತಥಾ ॥ ೩೩ ॥

ತಿಂದುಕೋ ದೇವದಾರುಶ್ಚ ಶ್ರೀಪರ್ಣಶ್ಚಾಷ್ಟಮಃ ಸ್ಮೃತಃ ॥ ೩೪ ॥

---

೩೦. ಆ ಮಂಡಪದಲ್ಲಿ ನೆಲವನ್ನು ಗಟ್ಟಿಯಾಗಿಯೂ, ಪೂರ್ವದ ಕಡೆಗೂ ಉತ್ತರದ ಕಡೆಗೂ ಇಳಿಜಾರಾಗಿರುವಂತೆಯೂ ರಚಿಸಬೇಕು. ಮನೋಹರಗಳಾದ ಹಸಿಯ ಮಾವಿನ ಕೊನೆಗಳಿಂದ ಅಲಂಕರಿಸಬೇಕು. ಹದಿನಾರು ಮೊಳ ಚತುರಸ್ರವುಳ್ಳದ್ದಾಗಿಮಾಡಿದ ಆ ಮಂಟಪವನ್ನು ಧ್ವಜಗಳಿಂದ ಅಲಂಕರಿಸಬೇಕು.

೩೧. ಆ ಮಂಟಪದ ಮಧ್ಯದಲ್ಲಿ ಒಂದು ಮೊಳದಷ್ಟು ಎತ್ತರವುಳ್ಳುದೂ, ಶುಭಕರವಾದುದೂ, ಏಳುಹಸ್ತ ಪ್ರಮಾಣ ಚತುರಸ್ರವುಳ್ಳದ್ದೂ ಆದ ಒಂದು ವೇದಿಕೆಯನ್ನು ಮಾಡಬೇಕು.

೩೨. ಆ ವೇದಿಕೆಯ ಮಧ್ಯದಲ್ಲಿ ನೆಲದ ಮೇಲಕ್ಕೆ ನಾಲ್ಕುಮೊಳ ಎತ್ತರವುಳ್ಳ ಹಾಗೆಯೂ, ಎರಡುಮೊಳ ಗುಂಡಿಯೊಳಗೆ ನಾಟುವ ಹಾಗೆಯೂ ತಕ್ಕಡಿಯ ಸ್ತಂಭಗಳನ್ನು ವಿಧ್ಯುಕ್ತವಾಗಿ ಸ್ಥಾಪಿಸಬೇಕು.

೩೩-೩೪. ಎಲೈ ಮಹಾರಾಜನೇ! ಚಂದನ, ಅಶ್ವತ್ಥ, ಬಿಲ್ವ, ಶಾಕ, ಇಂಗುದೀ, ತಿಂದುಕ, ದೇವದಾರು, ಶ್ರೀಪರ್ಣ ಈ ಎಂಟು ವೃಕ್ಷಗಳು ಆ ತಕ್ಕಡಿಯ ಕಂಬಗಳನ್ನು ನಿರ್ಮಿಸಲು ಅರ್ಹವಾಗಿವೆ. ಆದುದರಿಂದ ಅವುಗಳಲ್ಲಿ

**ಇತ್ಯಷ್ಟೌ ವೃಕ್ಷಜಾತೀಯಾಃ ಸ್ತಂಭಾಸ್ತೇ ಪರಿಕೀರ್ತಿತಾಃ ।**
**ಅನ್ಯಶ್ಚಾಪಿ ಭವೇದ್ವೃಕ್ಷಃ ಸಾರಜ್ಞೋ ಯಾಜ್ಞಿಕಸ್ತಥಾ ॥ ೩೫ ॥**

**ಸುನಿಶ್ಚಲಂ ತತಃ ಕೃತ್ವಾ ತಿರ್ಯಕ್ಕಾಷ್ಠಮಥೋಪರಿ ।**
**ನ್ಯಸೇತ್ತದ್ವೃಕ್ಷಜಾತೀಯಂ ಚತುರ್ಹಸ್ತಂ ಪ್ರಮಾಣತಃ ॥ ೩೬ ॥**

**ಸಮಾನಜಾತಿಂ ತು ತುಲಾಂ ತನ್ಮಧ್ಯೇ ಯೋಜಯೇದ್ದೃಢಂ ।**
**ಷಣ್ಣವತ್ಯಂಗುಲಾ ದಿವ್ಯಾ ಸಮಗ್ರಾ ಲೋಹಪಾಶಿಕಾ ॥ ೩೭ ॥**

**ಕೃಷ್ಣಲೋಹಮಯೌ ತಸ್ಯಾಂ ಕರ್ಣೌ ಚಾಪಿ ಪ್ರಕಲ್ಪಯೇತ್ ।**
**ತುಲಾಪುರುಷಸಂಜ್ಞಸ್ತು ಮಧ್ಯೇ ಕಾರ್ಯಃ ಪುಮಾನ್ ಭವೇತ್॥೩೮॥**

---

ಯಾವುದಾದರೂ ಒಂದು ಜಾತಿಯ ಮರದಿಂದ ಹೊಸದಾಗಿಯೂ, ಧೃಢವಾಗಿಯೂ ಇರುವ ಎರಡು ಕಂಬಗಳನ್ನು ತಂದು ಮೇಲೆ ಸೂಚಿಸಿರುವಂತೆ ಸ್ಥಾಪಿಸಬೇಕು. ವೃಕ್ಷಗಳ ದಾರ್ಢ್ಯವನ್ನು ತಿಳಿದ ಯಾಜ್ಞಿಕನು ತನಗೆ ಸಮ್ಮತವಾದ ಇತರ ವೃಕ್ಷವನ್ನು ಬೇಕಾದರೂ ಸ್ತಂಭಕ್ಕಾಗಿ ಉಪಯೋಗಿಸಬಹುದು.

೩೬. ಆ ಕಂಭಗಳನ್ನು ಅಲ್ಲಾಡದಂತೆ ನಟ್ಟು ಯಾವ ವೃಕ್ಷದಿಂದ ಕಂಭವು ನಿರ್ಮಿತವಾಗಿದೆಯೋ ಅದೇ ವೃಕ್ಷದಿಂದ ರಚಿತವಾಗಿ ನಾಲ್ಕು ಹಸ್ತ ಪ್ರಮಾಣವುಳ್ಳ ಅಡ್ಡಮರವನ್ನು ಆ ಕಂಭಗಳ ಮೇಲೆ ಇರಿಸಬೇಕು.

೩೭. ಎರಡು ಕಡೆಯ ತಟ್ಟೆಯೂ ಒಂದೇ ರೀತಿ ಇರುವಂತೆ ನಿರ್ಮಿಸಿದ ತಕ್ಕಡಿಯನ್ನು ಆ ಅಡ್ಡಮರಕ್ಕೆ ಭದ್ರವಾಗಿ ಜೋಡಿಸಬೇಕು. ತಟ್ಟೆಗಳನ್ನು ತೂಗಹಾಕಲು ತೊಂಬತ್ತಾರು (96) ಅಂಗುಲ ಅಳತೆಯ ಲೋಹದ ಸರಪಣಿಯನ್ನು ಉಪಯೋಗಿಸಬೇಕು.

೩೮. ಆ ತಕ್ಕಡಿಗೆ ಕಬ್ಬಿಣದಿಂದ ಎರಡು ಕಿವಿಗಳನ್ನು ನಿರ್ಮಿಸಬೇಕು. ಅದರ ಮಧ್ಯದಲ್ಲಿ ತುಲಾಪುರುಷನೆಂಬ ಸಂಜ್ಞೆಯುಳ್ಳ ಪುರುಷಾಕೃತಿಯನ್ನು ನಿರ್ಮಿಸಬೇಕು.

ಏವಂವಿಧಾಂ ತುಲಾಂ ಕೃತ್ವಾ ನಾನಾರತ್ನೈರ್ವಿಭೂಷಿತಾಂ ।
ಚಂದನೇನಾನುಲಿಪ್ತಾಂಗೀಂ ವಸ್ತ್ರಾಲಂಕಾರವಿಗ್ರಹಾಂ ॥ ೩೯ ॥

ಸ್ತಂಭೌ ಚ ವಸ್ತ್ರಸಂಯುಕ್ತೌ ಪುಷ್ಪಮಾಲಾವಲಂಬಿನೌ ।
ಚಂದನೇನಾನುಲಿಪ್ತಾಂಗೌ ನಾನಾರತ್ನೈರಲಂಕೃತೌ ॥ ೪೦ ॥

ಕುಂಡಾನಿ ಚಾತ್ರ ಚತ್ವಾರಿ ಯೋನಿಯುಕ್ತಾನಿ ಕಾರಯೇತ್ ।
ಹಸ್ತಮಾತ್ರಪ್ರಮಾಣಾನಿ ಮೇಖಲಾತ್ರಯವಂತಿ ಚ ॥ ೪೧ ॥

ಪೂರ್ವೋತ್ತರೇ ಹಸ್ತಮಿತಾ ವೇದಿಃ ಕಾರ್ಯಾ ಸುಶೋಭನಾ ।
ಲೋಕಪಾಲಗ್ರಹಾಣಾಂ ಚ ಪೂಜಾ ತತ್ರ ವಿಧೀಯತೇ ॥ ೪೨ ॥

---

೩೯. ಈ ಪ್ರಕಾರವಾದ ತಕ್ಕಡಿಯನ್ನು ನಾನಾ ರತ್ನಗಳಿಂದ ಅಲಂಕೃತವೂ ಚಂದನದಿಂದ ಅನುಲಿಪ್ತವೂ ವಸ್ತ್ರಾದಿಗಳಿಂದ ಶೋಭಿತವೂ ಆಗುವಂತೆ ಸಿದ್ಧಪಡಿಸಬೇಕು.

೪೦. ಆ ಎರಡು ಕಂಭಗಳಿಗೂ ವಸ್ತ್ರಗಳನ್ನು ಸುತ್ತಬೇಕು. ಪುಷ್ಪಮಾಲೆಗಳನ್ನು ಜೋತುಬಿಡಬೇಕು. ಚಂದನವನ್ನು ಪೂರ್ತಿಯಾಗಿ ಲೇಪನಮಾಡಬೇಕು. ಮತ್ತು ನಾನಾ ರತ್ನಗಳಿಂದ ಅಲಂಕರಿಸಬೇಕು.

೪೧. ಅಲ್ಲಿ ಪ್ರತಿಯೊಂದೂ ಒಂದುಹಸ್ತ ಪ್ರಮಾಣ ಚತುರಸ್ರ ಉಳ್ಳದ್ದಾಗಿಯೂ ಮೂರು ಮೇಖಲೆಗಳು ಮತ್ತು ಕುಂಡಯೋನಿ ಇವುಗಳಿಂದ ಯುಕ್ತವಾಗಿಯೂ ಇರುವಂತೆ ನಾಲ್ಕು ಕುಂಡಗಳನ್ನು ನಿರ್ಮಿಸಬೇಕು.

೪೨. ಪೂರ್ವ ಮತ್ತು ಉತ್ತರದಿಕ್ಕುಗಳ ಮಧ್ಯದಲ್ಲಿ ಒಂದುಹಸ್ತ ಪ್ರಮಾಣ ಉಳ್ಳದ್ದೂ ಮತ್ತು ಮಂಗಳಕರವಾದುದೂ ಆದ ಒಂದು ವೇದಿಯನ್ನು ರಚಿಸಬೇಕು. ಅಲ್ಲಿ ಲೋಕಪಾಲಕರು, ಗ್ರಹಗಳು, ಇವರನ್ನು ಸ್ಥಾಪಿಸಿ ಪೂಜಿಸಬೇಕು.

ಅರ್ಚಾರ್ಚನಂ ಚ ತತ್ರೈವ ವಿರಿಂಚ್ಯಚ್ಯುತಯೋರ್ನೃಪ ।
ಶಂಕರಸ್ಯ ಭವೇತ್ಕಾರ್ಯಂ ಮಾಲ್ಯವಸ್ತ್ರಫಲಾಕ್ಷತೈಃ ॥ ೪೩ ॥

ತೋರಣಾನಿ ಚ ಕಾರ್ಯಾಣಿ ಕ್ಷೀರವೃಕ್ಷೋದ್ಭವಾನಿ ಚ ।
ಚತುರ್ದ್ವಾರೇಷು ಸಂಸ್ಥಾಪ್ಯಾಃ ಕುಂಭಾಃ ಸ್ರಕ್ಪಲ್ಲವಾನನಾಃ ॥ ೪೪ ॥

ಪಂಚರತ್ನ ಸಮಾಯುಕ್ತಾಃ ಸಪ್ತಧಾನ್ಯೋಪರಿಸ್ಥಿತಾಃ ।
ಋಗ್ವೇದಪಾಠಕೌ ದ್ವೌ ಚ ಪೂರ್ವಕುಂಡೇ ನಿಯೋಜಯೇತ್ ॥೪೫॥

ಯಜುರ್ವೇದವಿದೌ ಯಾಮ್ಯೇ ಪಶ್ಚಿಮೇ ಸಾಮವೇದಿನೌ ।
ಅಥರ್ವಣಾವುತ್ತರತೋ ನವಮೋ ಧರ್ಮದೇಶಕಃ ॥ ೪೬ ॥

---

೪೩. ಎಲೈ ರಾಜನೇ! ಅಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳನ್ನು ಆವಾಹಿಸಿ ಹೂಮಾಲೆ, ಫಲ, ಅಕ್ಷತೆ ಇವುಗಳಿಂದ ಅರ್ಚಿಸಬೇಕು.

೪೪. ಅಲ್ಲಿ ನಾಲ್ಕು ಬಾಗಿಲುಗಳಲ್ಲೂ ಕ್ಷೀರವೃಕ್ಷದ ಚಿಗುರುಗಳಿಂದ ರಚಿತವಾದ ತೋರಣಗಳನ್ನು ಕಟ್ಟಬೇಕು. ಮತ್ತು ನಾಲ್ಕು ಕಲಶಗಳನ್ನಿಟ್ಟು ಅವರ ಕಂಠಕ್ಕೆ ಪುಷ್ಪಮಾಲೆಯನ್ನು ಸುತ್ತಿ ಕಲಶದ ಬಾಯಿಯಲ್ಲಿ ಚೂತಪಲ್ಲವವನ್ನು ಇರಿಸಬೇಕು.

೪೫. ಕಲಶದೊಳಕ್ಕೆ ಪಂಚರತ್ನಗಳನ್ನು ಹಾಕಬೇಕು. ಮತ್ತು ಆ ಕುಂಭಗಳನ್ನು ಸಪ್ತಧಾನ್ಯಗಳ ಮೇಲೆ ಇರಿಸಬೇಕು. ಬಳಿಕ ಪೂರ್ವದಿಕ್ಕಿನ ಕುಂಡದ ಬಳಿ ಇಬ್ಬರು ಋಗ್ವೇದಿಗಳನ್ನು ನೇಮಿಸಬೇಕು.

೪೬. ದಕ್ಷಿಣದಿಕ್ಕಿನ ಕುಂಡದ ಬಳಿ ಇಬ್ಬರು ಯಜುರ್ವೇದಿಗಳನ್ನೂ ಪಶ್ಚಿಮದಿಕ್ಕಿನ ಕುಂಡದ ಬಳಿ ಇಬ್ಬರು ಸಾಮವೇದಿಗಳನ್ನೂ ಉತ್ತರದಿಕ್ಕಿನ ಕುಂಡದಲ್ಲಿ ಇಬ್ಬರು ಅಥರ್ವಣವೇದಿಗಳನ್ನೂ ಮತ್ತು ಒಂಭತ್ತನೆಯವನನ್ನಾಗಿ ಇನ್ನೊಬ್ಬ ಧರ್ಮದರ್ಶಿಯನ್ನೂ ನಿಯಮಿಸಬೇಕು.

**ಅತ್ರೈವ ಕೇಚಿದಿಚ್ಛಂತಿ ಋಷಯಃ ಷೋಡಶರ್ತ್ವಿಜಃ ।**
**ತಾಮ್ರಪಾತ್ರದ್ವಯಂ ದೇಯಮೇಕೈಕಸ್ಮೈ ತಥಾಸನಂ ॥ ೪೭ ॥**

**ಹೋಮದ್ರವ್ಯಾಣಿ ಸರ್ವಾಣಿ ತಿಲಾಜ್ಯಂ ಸಮಿಧಸ್ತಥಾ ।**
**ಸ್ರುವಾಃ ಸ್ರುಚಶ್ಚ ಶಸ್ತ್ರಾಣಿ ವಿಷ್ಟರಃ ಕುಸುಮಾನಿ ಚ ॥ ೪೮ ॥**

**ಲೋಕಪಾಲಾಃ ಸುವರ್ಣಾಸ್ತು ಪತಾಕಾಃ ಪರಿತಃ ಶುಭಾಃ ।**
**ಮಹಾಧ್ವಜಂ ಚ ಬಧ್ನೀಯಾತ್ ಪಂಚವರ್ಣಂ ವಿತಾನಕಂ ॥ ೪೯ ॥**

**ಏತತ್ಸರ್ವಂ ಸಮಾಹೃತ್ಯ ಪುಣ್ಯೇऽಹನಿ ವಿಚಕ್ಷಣಃ ।**
**ವರ್ಧಕಿರ್ಬ್ರಾಹ್ಮಣೈಃ ಸಾರ್ಧಂ ಸರ್ವಶಿಲ್ಪವಿಶಾರದಃ ॥ ೫೦ ॥**

**ಸಂಪೂರ್ಣಂ ಯಜಮಾನಾಯ ದರ್ಶಯೇದ್ಯಜ್ಞಮಂಡಪಂ ।**
**ಯಜಮಾನಸ್ತತಃ ಪ್ರಾಜ್ಞಃ ಶುಕ್ಲಾಂಬರಧರಃ ಶುಚಿಃ ॥ ೫೧ ॥**

---

೪೭. ಕೆಲವು ಋಷಿಗಳು ಈ ಸನ್ನಿವೇಶದಲ್ಲಿ ಹದಿನಾರು ಋತ್ವಿಜರಿರಬೇಕೆಂದು ಅಭಿಪ್ರಾಯಪಡುತ್ತಾರೆ. ಆ ರೀತಿ ನಿಯಮಿಸಲ್ಪಟ್ಟ ಪ್ರತಿಯೊಬ್ಬ ಋತ್ವಿಜನಿಗೂ ಆಸನವನ್ನೂ ಎರಡು ತಾಮ್ರದ ಪಾತ್ರೆಗಳನ್ನೂ ಕೊಡಬೇಕು.

೪೮. ಮತ್ತು ಅಲ್ಲಿ ಎಳ್ಳು, ತುಪ್ಪ, ಸಮಿತ್ತು, ಸ್ರುಕ್ಕು, ಸ್ರುವ, ಶಸ್ತ್ರ, ವಿಷ್ಟರ (ಆಸನ), ಕುಸುಮ, ಇತ್ಯಾದಿ ಸಕಲ ಹೋಮದ್ರವ್ಯಗಳನ್ನೂ ಸಿದ್ಧಪಡಿಸಿಕೊಳ್ಳಬೇಕು.

೪೯. ಎಂಟು ದಿಕ್ಕುಗಳಲ್ಲಿಯೂ ಸ್ವರ್ಣದಿಂದ ಮಾಡಿಸಿದ ದಿಕ್ಪಾಲಕರ ಪ್ರತಿಮೆಯನ್ನು ಸ್ಥಾಪಿಸಿ ಸುತ್ತಲೂ ಶುಭಕರವಾದ ಸಣ್ಣಪತಾಕೆಗಳನ್ನೂ ಮಧ್ಯೆ ವಿಸ್ತಾರವಾದ ಧ್ವಜವನ್ನೂ ಏರಿಸಿ ಚಪ್ಪರದಲ್ಲಿ ಬಣ್ಣಬಣ್ಣದ ಬಟ್ಟೆಯಿಂದ ಮೇಲುಕಟ್ಟನ್ನು ಕಟ್ಟಬೇಕು.

೫೦. ಬುದ್ಧಿಶಾಲಿಯೂ, ಕಾರ್ಯವಿಚಕ್ಷಣನೂ, ಶಿಲ್ಪಕಲೆಯಲ್ಲಿ ನಿಪುಣನೂ ಆದ ವರ್ಧಕಿಯು ಈ ಪ್ರಕಾರ ಮಂಟಪರಚನಾಕಾರ್ಯವನ್ನು ನೆರವೇರಿಸಿ ಆವಶ್ಯಕವಾದ ಸಂಭಾರದ್ರವ್ಯಯುಕ್ತವಾಗಿರುವಂತೆ ಮಾಡಬೇಕು.

೫೧-೫೨. ಶುಭದಿನದಲ್ಲಿ ಬ್ರಾಹ್ಮಣರ ಸಮೇತವಾಗಿ ಬಂದ ಯಜಮಾನನಿಗೆ, ಸಿದ್ಧವಾದ ಯಜ್ಞಮಂಡಪವನ್ನೆಲ್ಲಾ ತೋರಿಸಬೇಕು. ಅನಂತರ ಪ್ರಾಜ್ಞ

ಶಂಖತೂರ್ಯನಿನಾದೇನ ವೇದಧ್ವನಿರವೇಣ ಚ ।
ಪ್ರಕ್ಷಿಪೇಲ್ಲೋಕಪಾಲಾನಾಂ ಏಭಿರ್ಮಂತ್ರೈಃಶುಭೈರ್ಬಲಿಂ ॥ ೫೨ ॥

ಏಹ್ಯೇಹಿ ಸರ್ವಾಮರಸಿದ್ಧಸಾಧ್ಯೈ ।
ರಭಿಷ್ಟುತೋ ವಜ್ರಧರಾಮರೇಶ ॥
ಸಂವೀಜ್ಯಮಾನೋಽಪ್ಸರಸಾಂ ಗಣೇನ ।
ರಕ್ಷಾಧ್ವರಂ ನೋ ಭಗವನ್ನಮಸ್ತೇ ॥ ೫೩ ॥

(ಓಂ ಇಂದ್ರಾಯನಮಃ)

ಏಹ್ಯೇಹಿ ಸರ್ವಾಮರಹವ್ಯವಾಹ ।
ಮುನಿಪ್ರವೀರೈರಭಿಹೃಷ್ಟಮಾನಸಃ ॥
ತೇಜೋವತಾ ಲೋಕಗಣೇನ ಸಾರ್ಧಂ ।
ಮಮಾಧ್ವರಂ ರಕ್ಷ ಕವೇ ನಮಸ್ತೇ ॥ ೫೪ ॥

(ಓಂ ಅಗ್ನಯೇನಮಃ)

---

ನಾದ ಯಜಮಾನನು ಸ್ನಾನಾದಿಗಳಿಂದ ಶುಚಿರ್ಭೂತನೂ ಶುಕ್ಲಾಂಬರ ಧಾರಿಯೂ ಆಗಿ ಶಂಖ, ತೂರ್ಯ ಇತ್ಯಾದಿ ಮಂಗಳವಾದ್ಯಗಳು ಮೊಳಗುತ್ತಿರಲು ಈ ಮುಂದೆ ಹೇಳತಕ್ಕ ಮಂತ್ರಪೂರ್ವಕವಾಗಿ ಲೋಕಪಾಲಕರಿಗೆ ಬಲಿ ಪ್ರದಾನ ಮಾಡಬೇಕು.

೫೩. "ಎಲೈ ಭಗವಂತನೇ! ಸಕಲ ದೇವತೆಗಳು, ಸಿದ್ಧರು, ಇತ್ಯಾದಿಗಳಿಂದ ಸ್ತೋತ್ರಮಾಡಿಸಿಕೊಳ್ಳತಕ್ಕವನೂ, ವಜ್ರಾಯುಧಧಾರಿಯೂ, ದೇವತೆಗಳಿಗೆ ಅಧಿಪತಿಯೂ ಆಗಿರುವ ಇಂದ್ರನೇ! ನೀನು ಅಪ್ಸರಸ್ತ್ರೀಯರಿಂದ ಬೀಸಣಿಗೆಯಿಂದ ಬೀಸಲ್ಪಡುವವನಾಗಿ ನಮ್ಮ ಯಾಗವನ್ನು ರಕ್ಷಿಸು" ಎಂಬ ಅರ್ಥವುಳ್ಳ ಮಂತ್ರದಿಂದ ಇಂದ್ರನಿಗೆ ಬಲಿಯನ್ನು ಸಮರ್ಪಿಸಬೇಕು.

೫೪. ಸಕಲ ದೇವತೆಗಳ ಹವಿರ್ಭಾಗವನ್ನು ಅವರಿಗೆ ಸಲ್ಲಿಸುವ ಸಾಮರ್ಥ್ಯವುಳ್ಳವನೂ, ಮುನಿಶ್ರೇಷ್ಠರ ಅರ್ಚನೆಯಿಂದ ಸಂತೋಷಹೊಂದಿದ ಮನಸ್ಸುಳ್ಳವನೂ ಆದ ಅಗ್ನಿಯೇ! ಬಾ, ನಿನಗೆ ನಮಸ್ಕಾರ. ತೇಜಸ್ವಿಗಳಾದ ಸಕಲ ಲೋಕಗಣಗಳೊಡನೆ ಬಂದು ನನ್ನ ಯಾಗವನ್ನು ರಕ್ಷಿಸು. ಈ ಅರ್ಥವುಳ್ಳ ಮಂತ್ರದಿಂದ ಅಗ್ನಿಗೆ ಬಲಿಪ್ರದಾನ ಮಾಡಬೇಕು.

ಏಹ್ಯೇಹಿ ವೈವಸ್ವತಧರ್ಮರಾಜ ।
ಸರ್ವಾಮರೈರರ್ಚಿತದಿವ್ಯಮೂರ್ತೇ ॥
ಶುಭಾಶುಭಾನಂದಕೃತಾಮಧೀಶ ।
ರಕ್ಷಾಧ್ವರಂ ಮೇ ಭಗವನ್ನಮಸ್ತೇ ॥ ೫೫ ॥

(ಓಂ ಯಮಾಯನಮಃ)

ಏಹ್ಯೇಹಿ ರಕ್ಷೋಗಣನಾಯಕಸ್ತ್ವಂ ।
ವಿಶಾಲವೇತಾಲಪಿಶಾಚಸಂಘೈಃ ॥
ಮಮಾಧ್ವರಂ ಪಾಹಿ ಪಿಶಾಚನಾಥ ।
ಲೋಕೇಶ್ವರಸ್ತ್ವಂ ಭಗವನ್ನಮಸ್ತೇ ॥ ೫೬ ॥

(ಓಂ ನಿಋುಋುತಯೇನಮಂ)

ಏಹ್ಯೇಹಿ ಯಾದೋಗಣವಾರಿಧೀನಾಂ ।
ಗಣೇನ ಪರ್ಜನ್ಯಸಹಾಪ್ಸರೋಭಿಃ ॥

---

೫೫. ಸೂರ್ಯಪುತ್ರನೂ ಧರ್ಮಾಧಿಪತಿಯೂ ದಿವ್ಯಮೂರ್ತಿ ಉಳ್ಳವನೂ ಸಕಲ ದೇವಾದಿದೇವತೆಗಳಿಂದ ಪೂಜಿಸಲ್ಪಡುವವನೂ ಶುಭ, ಅಶುಭ, ಸಂತೋಷ ಇವುಗಳನ್ನು ಉಂಟುಮಾಡತಕ್ಕವನೂ ಆದ ಯಮನೇ! ಬಾ, ನಿನಗೆ ನಮಸ್ಕಾರ. ಬಂದು ನನ್ನ ಯಾಗವನ್ನು ರಕ್ಷಿಸು. ಈ ಅರ್ಥವುಳ್ಳ ಮಂತ್ರದಿಂದ ಯಮನಿಗೆ ಬಲಿಪ್ರದಾನ ಮಾಡಬೇಕು.

೫೬. ರಾಕ್ಷಸಗಣಗಳಿಗೆ ಅಧಿಪತಿಯೂ, ಪಿಶಾಚಿಗಳಿಗೆ ಒಡೆಯನೂ, ಚತುರ್ಭುವನಗಳಿಗೆ ಅಧಿಪತಿಯೂ ಆಗಿರುವ ಎಲೈ ನಿಋುಋುತಿಯೇ! ಬಾ, ನಿನಗೆ ನಮಸ್ಕಾರ. ನೀನು ಸಕಲ ವೇತಾಲಾದಿ ಪಿಶಾಚಿಗಳ ಗುಂಪಿನೊಡನೆ ಬಂದು ನನ್ನ ಯಾಗವನ್ನು ರಕ್ಷಿಸು. ಈ ಅರ್ಥವುಳ್ಳ ಮಂತ್ರದಿಂದ ನಿಋುಋುತಿಗೆ ಬಲಿಪ್ರದಾನ ಮಾಡಬೇಕು.

೫೭. ಎಲೈ ಸಮುದ್ರಗಳಿಗೂ ಜಲಜಂತುಗಳಿಗೂ ಅಧಿಪತಿಯಾದ ವರುಣನೇ! ಸಕಲ ಮೇಘಗಳೂ, ಅಪ್ಸರೋಗಣಗಳೂ, ವಿದ್ಯಾಧರರೂ, ಇಂದ್ರಾದಿ ದೇವತೆಗಳೂ ಎಲ್ಲರೂ ನಿನ್ನನ್ನು ಸ್ತೋತ್ರಮಾಡುತ್ತಾರೆ ಇಂತಹ ನೀನು

ವಿದ್ಯಾಧರೇಂದ್ರಾಮರ ಗೀಯಮಾನ ।
ಪಾಹಿ ತ್ವಮಸ್ಮಾನ್ಭಗವನ್ನಮಸ್ತೇ ॥ ೫೭ ॥
(ಓಂ ವರುಣಾಯನಮಃ)

ಏಹ್ಯೇಹಿ ಯಜ್ಞೇ ಮಮ ರಕ್ಷಣಾಯ ।
ಮೃಗಾಧಿರೂಢಃ ಸಹ ಸಿದ್ಧಸಂಘೈಃ ॥
ಪ್ರಾಣಾಧಿಪಃ ಕಾಲವಿಧೇಃ ಸಹಾಯೋ ।
ಗೃಹಾಣ ಪೂಜಾಂ ಭಗವನ್ನಮಸ್ತೇ ॥ ೫೮ ॥
(ಓಂ ವಾಯವೇನಮಃ)

ಏಹ್ಯೇಹಿ ಯಜ್ಞೇಶ್ವರ ಯಜ್ಞರಕ್ಷಾಂ ।
ವಿಧತ್ಸ್ವ ನಕ್ಷತ್ರಗಣೇನ ಸಾರ್ಧಂ ॥
ಸರ್ವೌಷಧೀಭಿಃ ಪಿತೃಭಿಃ ಸಹೈವ ।
ಗೃಹಾಣ ಪೂಜಾಂ ಭಗವನ್ನಮಸ್ತೇ ॥ ೫೯ ॥
(ಓಂ ಸೋಮಾಯನಮಃ)

---

ನಮ್ಮನ್ನು ರಕ್ಷಿಸು. ನಿನಗೆ ನಮಸ್ಕಾರ. ಈ ಅರ್ಥವುಳ್ಳ ಮಂತ್ರದಿಂದ ವರುಣನಿಗೆ ಬಲಿಯನ್ನು ಸಮರ್ಪಿಸಬೇಕು.

೫೮. ಎಲೈ ವಾಯುವೇ! ನೀನು ನನ್ನ ಯಾಗವನ್ನು ರಕ್ಷಣೆಮಾಡುವುದಕ್ಕೋಸ್ಕರ ಸಿದ್ಧರೊಡನೆ ಮೃಗಾಧಿರೂಢನಾಗಿ ಬಾ. ನೀನು ಎಲ್ಲಾ ಪ್ರಾಣಿಗಳಿಗೂ ಅಧಿಪತಿಯಾಗಿರುವೆ. ಕಾಲಕವಿಗೆ ಸಹಾಯಕನಾಗಿದ್ದೀಯೆ. ಅಂತಹ ನೀನು ನನ್ನ ಪೂಜೆಯನ್ನು ಸ್ವೀಕರಿಸು. ನಿನಗೆ ನಮಸ್ಕಾರ ಎಂಬ ಅರ್ಥವುಳ್ಳ ಈ ಮಂತ್ರದಿಂದ ವಾಯುವಿಗೆ ಬಲಿಯನ್ನು ಸಮರ್ಪಿಸಬೇಕು.

೫೯. ಎಲೈ ಯಜ್ಞಾಧಿಪತಿಯಾದ ಚಂದ್ರನೇ! ನೀನು ಸಕಲ ಓಷಧಿಗಳು, ಪಿತೃಗಳು ಮತ್ತು ನಕ್ಷತ್ರಗಣ ಇವುಗಳೊಡನೆ ನನ್ನ ಪೂಜೆಯನ್ನು ಸ್ವೀಕರಿಸು. ಮತ್ತು ಅದರಿಂದ ಸಂತುಷ್ಟನಾಗಿ ನನ್ನ ಯಜ್ಞದ ರಕ್ಷಣೆಯನ್ನು ಮಾಡು. ನಿನಗೆ ನಮಸ್ಕಾರ ಎಂಬ ಮಂತ್ರದಿಂದ ಚಂದ್ರನನ್ನು ಆಹ್ವಾನಿಸಿ ಅವನಿಗೆ ಬಲಿಯನ್ನು ಸಮರ್ಪಿಸಬೇಕು.

ಏಹ್ಯೇಹಿ ವಿಶ್ವೇಶ್ವರ ವಿಶ್ವಮೂರ್ತೇ ।
ತ್ರಿಶೂಲಖಟ್ವಾಂಗಧರೇಣ ಸಾರ್ಧಂ ॥
ಲೋಕೇನ ಭೂತೇಶ್ವರ ಯಜ್ಞಸಿಧ್ಯೈ ।
ಗೃಹಾಣ ಪೂಜಾಂ ಭಗವನ್ನಮಸ್ತೇ ॥ ೬೦ ॥
(ಓಂ ಈಶಾನಾಯನಮಃ)

ಏಹ್ಯೇಹಿ ಪಾತಾಲಧರಾಧರೇಂದ್ರ ।
ನಾಗಾಂಗನಾಕಿನ್ನರಗೀಯಮಾನ ॥
ಯಕ್ಷೋರಗೇಂದ್ರಾಮರಲೋಕಸಂಘೈಃ ।
ಅನಂತ ರಕ್ಷಾಧ್ವರಮಸ್ಮದೀಯಂ ॥ ೬೧ ॥
(ಓಂ ಅನಂತಾಯನಮಃ)

ಏಹ್ಯೇಹಿ ವಿಶ್ವಾಧಿಪತೇ ಮುನೀಂದ್ರ ।
ಲೋಕೇಶ ಸಾರ್ಧಂ ಪಿತೃದೇವತಾಭಿಃ ॥

---

೬೦. ಪ್ರಪಂಚಸ್ವರೂಪನೂ, ಪ್ರಪಂಚದ ಅಧಿಪತಿಯೂ ಮತ್ತು ತ್ರಿಶೂಲ, ಖಟ್ವಾಂಗ ಮುಂತಾದ ಆಯುಧಗಳನ್ನು ಧರಿಸಿರುವವನೂ, ಭೂತಗಳಿಗೆ ಅಧಿಪತಿಯೂ ಆಗಿರುವ ಈಶ್ವರನೇ! ನನ್ನ ಯಾಗವನ್ನು ನಿರ್ವಿಘ್ನವಾಗಿ ನೆರವೇರಿಸಿಕೊಡುವುದಕ್ಕೋಸ್ಕರ ನನಗೆ ಪ್ರಸನ್ನನಾಗು ಮತ್ತು ನಾನು ಮಾಡತಕ್ಕ ಪೂಜೆಯನ್ನು ಸ್ವೀಕರಿಸು. ಮತ್ತು ನನ್ನ ಯಜ್ಞವನ್ನು ರಕ್ಷಿಸು. ನಿನಗೆ ನಮಸ್ಕಾರ ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಿ ಈಶಾನನನ್ನು ಆಹ್ವಾನಿಸಿ ಬಲಿಯನ್ನು ಸಮರ್ಪಿಸಬೇಕು.

೬೧. ಎಲೈ ಪಾತಾಲಲೋಕವನ್ನು ಧರಿಸಿರುವವನೂ (ಹೊತ್ತಿರುವವನೂ) ನಾಗಕನ್ಯೆಯರು ಮತ್ತು ಕಿನ್ನರಸ್ತ್ರೀಯರು ಇವರಿಂದ ಸ್ತುತಿಸಲ್ಪಡುವವನೂ ಆದ ಅನಂತನೇ! ಪ್ರಸನ್ನನಾಗು. ಯಕ್ಷರು, ಉರಗಾಧಿಪರು, ದೇವತೆಗಳು ಮತ್ತು ಇತರರು ಇವರೆಲ್ಲರೂ ನಿನ್ನನ್ನು ಸ್ತೋತ್ರಮಾಡುತ್ತಾರೆ. ಅಂತಹ ನಿನಗೆ ನಮಸ್ಕಾರ. ನೀನು ನನ್ನ ಯಾಗವನ್ನು ರಕ್ಷಿಸು ಎಂಬ ಈ ಅರ್ಥವುಳ್ಳ ಈ ಮಂತ್ರದಿಂದ ಅನಂತನಿಗೆ ಬಲಿಯನ್ನು ಸಮರ್ಪಿಸಬೇಕು.

೬೨. ಎಲೈ ಲೋಕಾಧೀಶ್ವರನೂ, ಋಷಿವರ್ಯನೂ ಆಗಿರತಕ್ಕ ಬ್ರಹ್ಮನೇ! ನೀನು ಸಕಲ ಪಿತೃದೇವತೆಗಳೊಡನೆ ನಮಗೆ ಮಂಗಳವನ್ನುಂಟುಮಾಡುವುದ

ವಿಶಾಧ್ವರಾಂತಃ ಸತತಂ ಶಿವಾಯ ।
ಪಿತಾಮಹಸ್ತ್ವಂ ಸತತಂ ನಮಸ್ತೇ　　॥ ೬೨ ॥
(ಓಂ ಬ್ರಹ್ಮಣೇನಮಃ)

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮವಿಷ್ಣುಶಿವೈಃ ಸಾರ್ಧಂ ರಕ್ಷಾಂ ಕುರ್ವಂತು ತಾನಿ ಮೇ　॥ ೬೩ ॥

ದೇವದಾನವಗಂಧರ್ವಾಃ ಯಕ್ಷರಾಕ್ಷಸಪನ್ನಗಾಃ ।
ಋಷಯೋ ಮನವೋ ಗಾವೋ ದೇವಮಾತರ ಏವ ಚ　　॥ ೬೪ ॥

ಸರ್ವೇ ಮಮಾಧ್ವರೇರಕ್ಷಾಂ ಪ್ರಕುರ್ವಂತು ಮುದಾನ್ವಿತಾಃ ।
ಇತ್ಯಾವಾಹ್ಯ ಸುರಾನ್ ದದ್ಯಾದೃತ್ವಿಗ್ಭ್ಯಃ ಕಂಠಭೂಷಣಂ　॥ ೬೫ ॥

ಕುಂಡಲಾನಿ ಚ ಹೈಮಾನಿ ಸೂತ್ರಾಣಿ ಕಟಕಾನಿ ಚ ।
ತಥಾಂಗುಲಿ ಪವಿತ್ರಾಣಿ ವಾಸಾಂಸಿ ಕುಸುಮಾನಿ ಚ　　॥ ೬೬ ॥

---

ಕ್ಯೋಸ್ಕರ ಯಾವಾಗಲೂ ಯಜ್ಞದಲ್ಲಿ ಸನ್ನಿಹಿತನಾಗಿರು. ನಿನಗೆ ಸದಾ ನಮಸ್ಕಾರ ಎಂಬ ಅರ್ಥವುಳ್ಳಮಂತ್ರದಿಂದ ಬ್ರಹ್ಮನಿಗೆ ಬಲಿಯನ್ನುಸಮರ್ಪಿಸಬೇಕು.

೬೩. ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಇರತಕ್ಕ ಚರಾಚರಗಳಾದ ಯಾವ ಯಾವ ಭೂತಗಳಿವೆಯೋ ಅವುಗಳು ಬ್ರಹ್ಮ, ವಿಷ್ಣು, ಈಶ್ವರ ಇವರುಗಳೊಡನೆ ನನ್ನನ್ನು ರಕ್ಷಿಸಲಿ.

೬೪–೬೫. ದೇವತೆಗಳು ದಾನವರು (ರಾಕ್ಷಸರು), ಗಂಧರ್ವರು, ಯಕ್ಷರು, ರಾಕ್ಷಸರು, ಸರ್ಪಗಳು, ಋಷಿಗಳು, ಮನುಗಳು, ಗೋವುಗಳು ಮತ್ತು ಸಪ್ತ ದೇವಮಾತೃಕೆಯರು ಇವರೆಲ್ಲರೂ ಸಂತುಷ್ಟರಾಗಿ ನನ್ನ ಯಾಗವನ್ನು ರಕ್ಷಿಸಲಿ ಎಂದು ಹೇಳಿ ದೇವತೆಗಳನ್ನು ಆವಾಹಿಸಬೇಕು. ಮತ್ತು ಋತ್ವಿಜರೆಲ್ಲರಿಗೂ ಕಂಠಾಭರಣವಾದ ಹಾರವನ್ನು ಹಾಕಬೇಕು.

೬೬. ಅಷ್ಟೇ ಅಲ್ಲದೆ ಚಿನ್ನದ ಕರ್ಣಕುಂಡಲ, ಚಿನ್ನದ ಉಡಿದಾರ, ಕಟಕ (ತೋಡಾ) ಮತ್ತು ಚಿನ್ನದ ಪವಿತ್ರದ ಉಂಗುರ, ಧರಿಸುವ ಬಟ್ಟೆಗಳು, ಹೂವು ಇತ್ಯಾದಿಗಳನ್ನೂ ಸಹ ಕೊಡಬೇಕು.

ದ್ವಿಗುಣಂ ಗುರುವೇ ದದ್ಯಾದ್ಭೂಷಣಾಚ್ಛಾದನಾದಿಕಂ ।
ಆಘಾರಾವಾಜ್ಯಭಾಗೌ ತು ಪೂರ್ವಂ ಹುತ್ವಾ ವಿಚಕ್ಷಣಃ ॥ ೬೭ ॥

ಪ್ರಣವಾದಿ ಸ್ವನಾಮ್ನಾ ಚ ಸ್ವಾಹಾಂತೋ ಹೋಮ ಉಚ್ಯತೇ ।
ಹೋಮಃ ಸುರಾಣಾಂ ಕರ್ತವ್ಯೋ ಯೇ ಚೈವಾತ್ರ ಪ್ರತಿಷ್ಠಿತಾಃ ॥೬೮॥

ಗ್ರಹಾಣಾಂ ಲೋಕಪಾಲಾನಾಂ ಶಿವಕೇಶವಯೋಸ್ತಥಾ ।
ವನಸ್ಪತಿಭ್ಯೋ ಬ್ರಹ್ಮಣೇ ಹೋಮಃ ಕಾರ್ಯೋ ಯಥೇಚ್ಛಯಾ॥೬೯॥

ತತೋ ಮಂಗಳಶಬ್ದೇನ ಸ್ಥಾಪಿತೋ ವೇದಮಂಗಲೈಃ ।
ತ್ರಿಃಪ್ರದಕ್ಷಿಣಮಾವೃತ್ಯ ಗೃಹೀತಕುಸುಮಾಂಜಲಿಃ ॥ ೭೦ ॥

---

೬೭. ಗುರು (ಆಚಾರ್ಯರಿ) ಗೆ ಭೂಷಣಾದಿಗಳನ್ನು ಕೊಡುವಾಗ ಮಿಕ್ಕ ಋತ್ವಿಜರಿಗೆ ಕೊಡುವುದರ ಎರಡರಷ್ಟನ್ನು ಕೊಡಬೇಕು. ಹೋಮಪ್ರಾರಂಭದಲ್ಲಿ ಆಘಾರ ಹೋಮದ ಅಜ್ಯಭಾಗಗಳನ್ನು ಹೋಮಮಾಡಬೇಕು.

೬೮. ತಾನು ಆಹುತಿಕೊಡತಕ್ಕ ದೇವತೆಯ ನಾಮವನ್ನು ಓಂಕಾರ ಪೂರ್ವಕವಾಗಿ ಉಚ್ಚಾರಮಾರಮಾಡಿ ಅನಂತರ ಸ್ವಾಹಾ ಎಂದು ಹೇಳಿ ಆಹುತಿ ಕೊಡುವ ಕರ್ಮಕ್ಕೆ ಹೋಮವೆಂದು ಹೆಸರು. ಈ ಆಹುತಿಯನ್ನು ಅಲ್ಲಿ ಆವಾಹಿತ ರಾಗಿರುವ ಸಕಲ ದೇವತೆಗಳಿಗೂ ಕೊಡಬೇಕು.

೬೯. ಒಟ್ಟಿನಲ್ಲಿ ಲೋಕಪಾಲಕರು, ಈಶ್ವರ, ವಿಷ್ಣು, ಬ್ರಹ್ಮ, ವನಸ್ಪತಿ ಗಳು ಇವರನ್ನುದ್ದೇಶಿಸಿ ತನ್ನ ಇಚ್ಛಾನುಸಾರ ಸಂಖ್ಯೆಯಿಂದ ಹೋಮಮಾಡ ಬೇಕು.

೭೦. ಅನಂತರ ಮಂಗಳವಾದ್ಯಗಳೂ ಮಂಗಳಕರವಾದ ವೇದಘೋಷ ಗಳೂ ಆಗುತ್ತಿರಲು ಕುಸುಮಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ತುಲೆ ಯನ್ನು ಮೂರು ಪ್ರದಕ್ಷಿಣೆಮಾಡಬೇಕು.

**ಶುಕ್ಲಮಾಲ್ಯಾಂಬರೋ ಭೂತ್ವಾ ತಾಂ ತುಲಾಮಭಿಮಂತ್ರಯೇತ್ ।**
**ನಮಸ್ತೇ ಸರ್ವದೇವಾನಾಂ ಶಕ್ತಿಸ್ತ್ವಂ ಸತ್ಯಮಾಸ್ಥಿತಾ ॥ ೭೧ ॥**

**ಸಾಕ್ಷಿಭೂತಾ ಜಗದ್ಧಾತ್ರಿ ನಿರ್ಮಿತಾ ವಿಶ್ವಯೋನಿನಾ ।**
**ಏಕತಃ ಸರ್ವಸತ್ಯಾನಿ ಕಥಾನ್ಯೃತ ಶತಾನಿ ಚ ॥ ೭೨ ॥**

**ಧರ್ಮಾಧರ್ಮಭೃತಾಂ ಮಧ್ಯೇ ಸ್ಥಾಪಿತಾಸಿ ಜಗದ್ಧಿತೇ ।**
**ತ್ವಂ ತುಲೇ ಸರ್ವಭೂತಾನಾಂ ಪ್ರಮಾಣಮಿಹ ಕೀರ್ತಿತಾ ॥ ೭೩ ॥**

**ಮಾಂ ತೋಲಯಂತೀ ಸಂಸಾರಾದುದ್ಧರಾತ್ರ ನಮೋಽಸ್ತುತೇ ।**
**ಯೋಽಸೌ ತತ್ತ್ವಾಧಿಪೋ ದೇವಃ ಪುರುಷಃ ಪಂಚವಿಂಶಕಃ ॥೭೪॥**

**ಸ ಏಕೋಽಧಿಷ್ಠಿತೋ ದೇವಿ ತ್ವಯಿ ತಸ್ಮಾನ್ನಮೋ ನಮಃ ।**
**ನಮೋ ನಮಸ್ತೇ ಗೋವಿಂದ ತುಲಾಪುರುಷಸಂಜ್ಞಕ ॥ ೭೫ ॥**

---

೭೧-೭೨. ಬಿಳಿಯ ಹೂ ಮತ್ತು ಬಿಳಿ ಬಟ್ಟೆಗಳನ್ನು ಧರಿಸಿದ ಯಜಮಾನನು ಈ ಮುಂದೆ ಹೇಳಿರುವ ಮಂತ್ರದಿಂದ ಆ ತಕ್ಕಡಿಯನ್ನು ಪ್ರಾರ್ಥಿಸಬೇಕು. ಎಲೈ ! ನೀನು ಸಕಲ ದೇವತೆಗಳಿಗೂ ಕೂಡ ನಿಜವಾಗಿಯೂ ಶಕ್ತಿದಾಯಕಳೂ, ಜಗತ್ತಿಗೆ ರಕ್ಷಕಳೂ, ಎಲ್ಲರಿಗೆ ಸಾಕ್ಷೀಭೂತಳೂ, ವಿಶ್ವಕರ್ಮನಿಂದ ನಿರ್ಮಿತಳೂ, ಆಗಿರುತ್ತೀ. ನಿನ್ನ ಒಂದು ಪಾರ್ಶ್ವದಲ್ಲಿ ಸಕಲ ಸತ್ಯಗಳೂ, ಇನ್ನೊಂದು ಪಾರ್ಶ್ವದಲ್ಲಿ ನೂರಾರು ಅನೃತಗಳೂ ವಾಸಿಸುತ್ತವೆ. ಅಂತಹ ನಿನಗೆ ನಮಸ್ಕಾರ.

೭೩. ಎಲೈ ತಕ್ಕಡಿಯೇ ! ಧರ್ಮಾಧರ್ಮಗಳನ್ನು ಧರಿಸಿರುವವರ ಮಧ್ಯೆ ಲೋಕಹಿತಕಾರಿಣಿಯಾದ ನಿನ್ನನ್ನು ಇಡಲಾಗಿದೆ. ಆದುದರಿಂದ ಸಕಲ ಭೂತಗಳಿಗೂ ನೀನೇ ಪ್ರಮಾಣಭೂತಳು ಎಂದು ಸ್ತುತಿಸಲ್ಪಡುತ್ತೀ.

೭೪–೭೫. ಇಂತಹ ನಿನಗೆ ನಮಸ್ಕಾರ. ಎಲೈ ತುಲೆಯೇ ! ನನ್ನನ್ನು ತೂಗಿ ಈ ಸಂಸಾರ ಸಮುದ್ರದಿಂದ ಉದ್ಧಾರಮಾಡು. ಪಂಚವಿಂಶತಿ ತತ್ತ್ವಗಳಿಗೆ ಅಧಿಪನಾಗಿರತಕ್ಕ ಪರಮಪುರುಷನೂ ಕೂಡ ನಿನ್ನಲ್ಲಿಯೇ ಅಧಿಷ್ಠಿತನಾಗಿರುತ್ತಾನೆ. ತುಲಾಪುರುಷನೆಂಬ ಹೆಸರುಳ್ಳ ಎಲೈ ಗೋವಿಂದ (ಕೃಷ್ಣ) ನೇ ! ನಿನಗೆ ನಮಸ್ಕಾರ.

ತ್ವಂ ಹರೇ ತಾರಯಸ್ವಾಸ್ಮಾನಸ್ಮಾತ್ಸಂಸಾರಸಾಗರಾತ್ ।
ಪುಣ್ಯಕಾಲಮಥಾಸಾದ್ಯ ಕೃತ್ವೈವಮಧಿವಾಸನಂ ॥ ೭೬ ॥

ಪ್ರಣಮ್ಯ ಪರಯಾ ಭಕ್ತ್ಯಾ ತಾಂ ತುಲಾಮಾರುಹೇದ್ಬುಧಃ ।
ಸ ಖಡ್ಗಚರ್ಮಕವಚೀ ಸರ್ವಾಭರಣಭೂಷಿತಃ ॥ ೭೭ ॥

ಧರ್ಮರಾಜಮಥಾದಾಯ ಹೈಮಸೂರ್ಯೇಣ ಸಂಯುತಂ ।
ಕರಾಭ್ಯಾಂ ಬದ್ಧಮುಷ್ಟಿಭ್ಯಾಮಾಸ್ತೇ ಪಶ್ಯನ್ ಹರೇರ್ಮುಖಂ ॥೭೮॥

ವಾಮೇ ಯಮಂ ತಥಾಗೃಹ್ಯ ದಕ್ಷಿಣೇ ಚ ರವಿಂ ತಥಾ ।
ತತೋಽಪರೇ ತುಲಾಭಾಗೇ ನ್ಯಸೇಯುರ್ದ್ವಿಜಪುಂಗವಾಃ ॥
ಸಾಮ್ಯಾದಭ್ಯಧಿಕಂ ಯಾವತ್ಕಾಂಚನಂ ಚಾತಿನಿರ್ಮಲಂ ॥ ೭೯ ॥

---

೭೬. ಎಲೈ ಹರಿಯೇ ! ನಮ್ಮನ್ನು ಈ ಸಂಸಾರಸಾಗರದಿಂದ ದಾಟಿಸು ಎಂದು ಪ್ರಾರ್ಥಿಸಬೇಕು. ಪುಣ್ಯಕಾಲದಲ್ಲಿ ಈರೀತಿ ಪೂಜಿಸಿ ಅಧಿವಾಸವನ್ನು ಮಾಡಬೇಕು.

೭೭. ಅನಂತರ ಯಜಮಾನನು ಸರ್ವಾಭರಣಗಳಿಂದ ಅಲಂಕೃತನೂ ಮತ್ತು ಕತ್ತಿ, ಗುರಾಣಿ ಲೋಹಕವಚ ಇವನ್ನು ಧರಿಸಿದವನೂ ಆಗಿ ಆ ತುಲೆಯನ್ನು ನಮಸ್ಕರಿಸಿ ಅದನ್ನು ಹತ್ತಿ ಕುಳಿತುಕೊಳ್ಳಬೇಕು.

೭೮. ಹಾಗೆ ತಕ್ಕಡಿಯನ್ನು ಏರುವಾಗ ಸೂರ್ಯ ಮತ್ತು ಯಮ ಇವರ ಪ್ರತಿಮೆಗಳನ್ನು ಬದ್ಧಮುಷ್ಟಿಗಳುಳ್ಳ ಕೈಗಳಿಂದ ಬಲವಾಗಿ ಹಿಡಿದುಕೊಂಡು ಹರಿಯ ಮುಖವನ್ನು ನೋಡುತ್ತಾ ಇರಬೇಕು.

೭೯. ಹಾಗೆ ಹಿಡಿದುಕೊಳ್ಳುವಾಗ ಎಡದ ಮುಷ್ಟಿಯಲ್ಲಿ ಯಮಪ್ರತಿಮೆಯನ್ನೂ ಬಲದ ಮುಷ್ಟಿಯಲ್ಲಿ ಸೂರ್ಯಪ್ರತಿಮೆಯನ್ನೂ ಗ್ರಹಣಮಾಡಬೇಕು. ಅನಂತರ ತಕ್ಕಡಿಯ ಇನ್ನೊಂದು ತಟ್ಟೆಯೊಳಕ್ಕೆ ಬ್ರಾಹ್ಮಣರು ಪರಿಶುದ್ಧವಾಗಿರ ತಕ್ಕ ಚಿನ್ನವನ್ನು ಸೇರಿಸಿ ಯಜಮಾನನು ಕುಳಿತಿರತಕ್ಕ ತಕ್ಕಡಿಯ ತಟ್ಟೆಗಿಂತಲೂ ಹೆಚ್ಚು ತೂಕವಿರುವಂತೆ ಇರಿಸಬೇಕು.

**ಪುಷ್ಟಿಕಾಮಸ್ತು ಕುರ್ವೀತ ಭೂಮಿಸಂಸ್ಥಂ ನರೇಶ್ವರ |**
**ಕ್ಷಣಮಾತ್ರಂ ತತಃ ಸ್ಥಿತ್ವಾ ಪುನರೇತದುದೀರಯೇತ್ ॥ ೮೦ ॥**

**ನಮಸ್ತೇ ಸರ್ವಭೂತಾನಾಂ ಸಾಕ್ಷಿಭೂತೇ ಸನಾತನೇ |**
**ಪಿತಾಮಹೇನ ದೇವಿ ತ್ವಂ ನಿರ್ಮಿತಾ ಪರಮೇಷ್ಠಿನಾ ॥ ೮೧ ॥**

**ತ್ವಯೋದ್ಧೃತಂ ಜಗತ್ಸರ್ವಂ ಸಹಸ್ಥಾವರಜಂಗಮಂ |**
**ಸರ್ವಭೂತಾತ್ಮಭೂತಸ್ಥೇ ನಮಸ್ತೇ ವಿಶ್ವಧಾರಿಣಿ ॥ ೮೨ ॥**

**ತತೋಽವತೀರ್ಯ ಗುರವೇ ಸರ್ವಮರ್ಧಂ ನಿವೇದಯೇತ್ |**
**ಋತ್ವಿಗ್ಭ್ಯೋಽಪರಮರ್ಧಂ ಚ ದದ್ಯಾದುದಕಪೂರ್ವಕಂ ॥ ೮೩ ॥**

**ಪ್ರಾಪ್ಯ ತೇಷಾಮನುಜ್ಞಾಂ ವಾ ತಥಾನ್ಯೇಭ್ಯೋಽಪಿ ದಾಪಯೇತ್ |**
**ದೀನಾನಾಥವಿಶಿಷ್ಟಾದೀನ್ ಪೂಜಯೇದ್ಬ್ರಾಹ್ಮಣೈಃ ಸಹ ॥ ೮೪ ॥**

೮೦. ಎಲೈ ಯುಧಿಷ್ಠಿರನೇ! ಪುಷ್ಟಿಕಾಮನಾದ ನರನು ಚಿನ್ನ ಹಾಕಿರುವ ಕಡೆ ತಟ್ಟೆಯು ಭೂಮಿಗೆ ತಗಲುವ ಹಾಗೆ ಸೇರಿಸಿ ತೂಗಿಸಬೇಕು. ಒಂದುಕ್ಷಣ ಕಾಲ ಸುಮ್ಮನಿದ್ದು ಅನಂತರ ಈ ಮುಂದೆ ಸೂಚಿಸಿರುವ ಮಾತನ್ನು ಹೇಳಬೇಕು.

೮೧. ಎಲೌ ದೇವಿಯೇ! ನೀನು ಪುರಾತನಳೂ ಸಕಲಭೂತಗಳಿಗೂ ಸಾಕ್ಷಿಭೂತಳೂ ಆಗಿರುತ್ತೀ. ಪಿತಾಮಹನಾದ ಬ್ರಹ್ಮನು ನಿನ್ನನ್ನು ನಿರ್ಮಿಸಿರುತ್ತಾನೆ.

೮೨. ಸ್ಥಾವರಜಂಗಮಾತ್ಮಕವಾಗಿರತಕ್ಕ ಸಕಲ ಜಗತ್ತನ್ನೂ ನೀನೇ ಉದ್ಧಾರಮಾಡಿದ್ದೀಯೆ. ನೀನು ಪ್ರಪಂಚವನ್ನೇ ಧರಿಸಿರುವವಳೂ, ಸಕಲ ಭೂತಗಳಿಗೂ ಆತ್ಮಸ್ವರೂಪಿಣಿಯೂ ಆಗಿದ್ದೀಯೆ. ಇಂತಹ ನಿನಗೆ ನಮಸ್ಕಾರ.

೮೩. ಅನಂತರ ತಕ್ಕಡಿಯಿಂದ ಇಳಿದು ಆ ಚಿನ್ನದಲ್ಲಿ ಅರ್ಧಭಾಗವನ್ನು ಗುರುವಿಗೂ (ಆಚಾರ್ಯ) ಮಿಕ್ಕ ಅರ್ಧಭಾಗವನ್ನು ಅಲ್ಲಿರುವ ಋತ್ವಿಜರಿಗೂ ಜಲಧಾರಾಪೂರ್ವಕವಾಗಿ ದಾನಮಾಡಬೇಕು.

೮೪. ಅಥವಾ ಆ ಋತ್ವಿಜರ ಅನುಮತಿಯನ್ನು ಪಡೆದು ಇತರ ವಿಪ್ರರಿಗೂ ಕೊಡಬಹುದು. ದೀನರೂ, ಅನಾಥರೂ ಆದ ಇತರರನ್ನೂ ಸಹ ಬ್ರಾಹ್ಮಣರನ್ನು ಪೂಜಿಸುವಂತೆಯೇ ಪೂಜಿಸಬೇಕು.

ನ ಚಿರಂ ಧಾರಯೇದ್ಗೇಹೇ ಹೇಮಸಂಪ್ರೋಕ್ಷಿತಂ ಬುಧಃ ।
ಶಿಷ್ಯದ್ಭಯಾವಹಂ ಯಸ್ಮಾತ್ ಕಷ್ಟವ್ಯಾಧಿಕರಂ ಭವೇತ್ ॥ ೮೫ ॥

ಶೀಘ್ರಂ ಪರಸ್ವೀಕರಣಾಚ್ಛ್ರಿಯಂ ಪ್ರಾಪ್ನೋತ್ಯನುತ್ತಮಾಂ ।
ಅನೇನೈವ ವಿಧಾನೇನ ಕೇಚಿದ್ರೌಪ್ಯಮಯಂ ತಥಾ ॥ ೮೬ ॥

ಕರ್ಪೂರೇಣ ತಥೇಚ್ಛಂತಿ ಕೇಚಿದ್ಬ್ರಾಹ್ಮಣಪುಂಗವಾಃ ।
ತಥಾಸಿತತೃತೀಯಾಯಾಂ ನಾರ್ಯಃ ಸೌಭಾಗ್ಯವರ್ಧಿತಾಃ ॥ ೮೭ ॥

ಕುಂಕುಮೇನ ಪ್ರಯಚ್ಛಂತಿ ಲವಣೇನ ಗುಡೇನ ಚ ।
ತತ್ರ ಮಂತ್ರಾ ನ ಹೋಮೋ ವಾ ಏವಮೇವ ಪ್ರದಾಪಯೇತ್ ॥೮೮॥

---

೮೫. ಆ ರೀತಿ ತುಲಾಭಾರ ಮಾಡಿದ ಸುವರ್ಣವನ್ನು ಯಜಮಾನನು ಮನೆಯಲ್ಲಿ ಬಹುಕಾಲ ಇಟ್ಟುಕೊಳ್ಳಕೂಡದು. ಹಾಗೆ ಇಟ್ಟಿದ್ದರೆ ಅದು ಬಹು ಭಯಕ್ಕೂ ಕಷ್ಟಪ್ರಾಪ್ತಿಗೂ ವ್ಯಾಧಿಪೀಡೆಗೂ ಕಾರಣವಾಗುತ್ತವೆ.

೮೬. ಇತರರಿಗೆ ಇದನ್ನು ಶೀಘ್ರವಾಗಿ ದಾನಮಾಡಿದರೆ ಸರ್ವಶ್ರೇಷ್ಠವಾದ ಸಂಪತ್ತನ್ನು ಹೊಂದುತ್ತಾನೆ. ಇದೇ ವಿಧಾನದಿಂದ ಕೆಲವರು ಬೆಳ್ಳಿಯ ತುಲಾ ಪುರುಷ ದಾನವನ್ನು ಮಾಡುವರು.

೮೭. ಕೆಲವು ಬ್ರಾಹ್ಮಣರು ಇದೇ ವಿಧಾನದಿಂದ ಕರ್ಪೂರ ತುಲಾಭಾರ ವನ್ನು ದಾನಮಾಡಬಹುದೆಂದು ಅಭಿಪ್ರಾಯಪಡುತ್ತಾರೆ. ನಾರೀಮಣಿಯರು ಕೃಷ್ಣಪಕ್ಷದ ತೃತೀಯೆಯಲ್ಲಿ ತುಲಾಭಾರದಾನ ಮಾಡಿದರೆ ಅವರ ಸಕಲ ಸೌಭಾ ಗಳೂ ಹೆಚ್ಚುತ್ತವೆ.

೮೮. ಹೆಂಗಸರು ಮಾಡುವಾಗ ಕುಂಕುಮ, ಲವಣ (ಉಪ್ಪು), ಬೆಲ್ಲ ಇವುಗಳನ್ನು ತುಲಾಭಾರ ತೂಗಿಸಿ ದಾನಮಾಡಬಹುದು. ಈ ದಾನದಲ್ಲಿ ಯಾವ ಮಂತ್ರಗಳೇ ಆಗಲಿ, ಹೋಮಗಳೇ ಆಗಲಿ ಏನೂ ಇರುವುದಿಲ್ಲ. ಸುಮ್ಮನೆ ಹಾಗೆಯೇ ದಾನಮಾಡಬೇಕು.

**ವಿಧಿನಾನೇನ ಯೋ ದದ್ಯಾದ್ದಾನಮೇತತ್ಸಮಾಹಿತಃ ।**
**ತಸ್ಯ ಪುಣ್ಯಫಲಂ ರಾಜಞ್ಛೃಣುಷ್ವ ಗದತೋ ಮಮ ॥ ೮೯ ॥**

**ವಿಮಾನವರಮಾಸ್ಥಾಯ ನಾರೀ ವಾ ಪುರುಷೋಽಪಿ ವಾ ।**
**ಅಪ್ಸರೋಗಣಸಂಕೀರ್ಣಂ ಗಂಧರ್ವನಗರೋಪಮಂ ॥ ೯೦ ॥**

**ನಾನಾವೃಕ್ಷಾಕುಲಂ ರಮ್ಯಂ ನಾನಾಗಂಧಾಧಿವಾಸಿತಂ ।**
**ಅನೇಕರತ್ನವಿದ್ಧಾಂಗಂ ಮುಕ್ತಾದಾಮಾವಲಂಬಿತಂ ॥ ೯೧ ॥**

**ಶಯನಾಸನಸಂಕೀರ್ಣಂ ಪತಾಕಾಭಿರಲಂಕೃತಂ ।**
**ಘಂಟಾಶತರವೋದ್ಘುಷ್ಟಂ ಚಾಮರವ್ಯಜನಾನ್ವಿತಂ ॥ ೯೨ ॥**

**ಸರ್ವರ್ತುಸುಖದಂ ರಮ್ಯಂ ಸರ್ವದುಃಖವಿವರ್ಜಿತಂ ।**
**ಇತ್ಥಂ ವಿಮಾನಮಾರುಹ್ಯ ಗಚ್ಛೇತ್ಸೂರ್ಯಸಲೋಕತಾಂ ॥ ೯೩ ॥**

---

೮೯. ಎಲೈ ರಾಜನೇ! ಈ ವಿಧಾನವನ್ನನುಸರಿಸಿ ಒಳ್ಳೆಯ ಮನಸ್ಸಿನಿಂದ ದಾನವನ್ನು ಮಾಡುವಂತಹ ಪುರುಷನು ಪಡೆಯಬಹುದಾದ ಫಲಗಳನ್ನೂ ಪುಣ್ಯಪ್ರಾಪ್ತಿ ವಿಚಾರವನ್ನೂ ಹೇಳುತ್ತೇನೆ ಕೇಳು.

೯೦–೯೩. ಈರೀತಿ ದಾನಮಾಡಿದ ಸ್ತ್ರೀಯೇ ಆಗಲಿ ಅಥವಾ ಪುರುಷನೇ ಆಗಲಿ ಅವರು ಅಪ್ಸರೋಗಣದಿಂದ ಸುತ್ತುವರಿಯಲ್ಪಟ್ಟುದೂ, ಗಂಧರ್ವನಗರಕ್ಕೆ ಸಮನಾಗಿ ಸುಂದರವಾದುದೂ, ಅನೇಕ ವಿಧಗಳಾದ ವೃಕ್ಷಗಳುಳ್ಳದ್ದೂ, ಅನೇಕ ವಿಧ ಸುಗಂಧಯುಕ್ತಗಳಾದುದೂ, ಅನೇಕ ರತ್ನಗಳನ್ನು ಮೆಟ್ಟಿದುದೂ, ಮುತ್ತಿನ ಕುಚ್ಚುಗಳನ್ನು ತೂಗುಹಾಕಿರುವುದೂ ಹಾಸಿಗೆ ಮತ್ತು ಪೀಠಗಳುಳ್ಳದ್ದೂ ಪತಾಕೆಗಳಿಂದ ಅಲಂಕರಿಸಲ್ಪಟ್ಟದ್ದೂ, ನೂರಾರು ಘಂಟಾಧ್ವನಿಗಳುಳ್ಳದ್ದೂ, ಚಾಮರ, ಬೀಸಣಿಗೆ ಇತ್ಯಾದಿ ಸಲಕರಣೆಗಳುಳ್ಳದ್ದೂ, ಸಕಲ ವಸಂತಾದಿಋತುಗಳ ಸೌಖ್ಯವನ್ನು ಕೊಡತಕ್ಕದ್ದೂ ಮತ್ತು ಯಾವವಿಧದ ದುಃಖವೂ ಇಲ್ಲದುದೂ ಆಗಿರುವ ಬಹು-ರಮ್ಯವಾದ ವಿಮಾನವನ್ನು ಹತ್ತಿ ಸೂರ್ಯಲೋಕಕ್ಕೆ ಹೋಗಿ ಸೂರ್ಯನ ಸಾನ್ನಿಧ್ಯವನ್ನು ಪಡೆಯುತ್ತಾನೆ.

ರಮಿತ್ವಾ ತತ್ರ ರಾಜೇಂದ್ರ ಕಲ್ಪಮೇಕಂ ನಿರಾಮಯೈಃ ।
ವಿಷ್ಣುಲೋಕೇ ತಥಾ ಕಲ್ಪಂ ಶಿವಲೋಕೇ ತಥೈವ ಚ ॥ ೯೪ ॥

ವಿಶ್ವೇಷಾಂ ಚೈವ ದೇವಾನಾಂ ದೇವರಾಜಪುರೇ ತಥಾ ।
ಪುರೇ ಚ ಧರ್ಮರಾಜಸ್ಯ ವರುಣಸ್ಯ ತಥೈವ ಚ ॥ ೯೫ ॥

ಧನದಸ್ಯ ಪುರೇ ಸ್ಥಿತ್ವಾ ಕಲ್ಪಕೋಟಿಶತಂ ನರಃ ।
ಪುನರ್ಮಾನುಷಮಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ॥ ೯೬ ॥

ಯಜ್ವಾದಾನಪತಿರ್ಧೀಮಾನ್ಪ್ರತ್ರುಪಕ್ಷಕ್ಷಯಂಕರಃ ।
ಯಶ್ಚೈತಚ್ಛೃಣುಯಾದ್ಭಕ್ತ್ಯಾ ಮಹಾದಾನಾನುಕೀರ್ತನಂ ॥ ೯೭ ॥

ಸೋಽಪಿ ಮುಚ್ಯೇತ ಪಾಪೇನ ತ್ರಿವಿಧೇನ ನ ಸಂಶಯಃ ॥ ೯೮ ॥

---

೯೪–೯೫. ಈ ರೀತಿ ಆ ಸೂರ್ಯಲೋಕದಲ್ಲಿ ಯಾವ ರೋಗಾದಿಗಳೂ ಇಲ್ಲದೆ ಒಂದು ಕಲ್ಪಕಾಲ ವಾಸವಾಗಿರುತ್ತಾನೆ. ಅನಂತರ ವಿಷ್ಣುಲೋಕ, ರುದ್ರಲೋಕ, ವಿಶ್ವೇದೇವತೆಗಳ ಲೋಕ, ಇಂದ್ರಲೋಕ, (ಧರ್ಮರಾಜ) ಯಮ ಲೋಕ ಮತ್ತು ವರುಣಲೋಕ ಇವುಗಳಲ್ಲೆಲ್ಲಾ ಒಂದೊಂದು ಕಲ್ಪಪರ್ಯಂತ ಕ್ರೀಡಿಸುತ್ತಿರುತ್ತಾನೆ.

೯೬. ಅನಂತರ ಕುಬೇರನ ನಗರಕ್ಕೆ ಹೋಗಿ ಅಲ್ಲಿ ನೂರಾರುಕೋಟಿ ಕಲ್ಪಪರ್ಯಂತ ವಾಸವಾಗಿದ್ದು ಮತ್ತೆ ಮಾನುಷಜನ್ಮದಲ್ಲಿ ಜನಿಸಿ ಧರ್ಮದಿಂದ ರಾಜ್ಯವನ್ನು ಪಾಲಿಸುವ ರಾಜನಾಗುತ್ತಾನೆ.

೯೭. ಆಗ ಆತನು ಅನೇಕ ಯಾಗಮಾಡುವವನೂ ಮತ್ತು ದಾನವನ್ನು ಮಾಡತಕ್ಕವನೂ ಶತ್ರುಪಕ್ಷಧ್ವಂಸಕನೂ ಸಂಪದ್ಯುಕ್ತನೂ ಆಗುತ್ತಾನೆ.

೯೮. ಯಾವ ಮನುಜನು ಭಕ್ತಿಯಿಂದ ಈ ಮಹಾಪುಣ್ಯದಾಯಕವಾದ ಈ ದಾನವಿಚಾರವನ್ನು ಕೀರ್ತನೆಮಾಡುತ್ತಾನೋ ಅಥವಾ ಕೇಳುತ್ತಾನೆಯೋ ಅವನೂ ಕೂಡ ಮನಸ್ಸು, ವಾಕ್ (ಮಾತು) ಶರೀರ ಇವುಗಳಿಂದ ಸಂಘಟಿಸಿದ ಪಾಪಗಳಿಂದ ಬಿಡುಗಡೆಹೊಂದುತ್ತಾನೆ.

ಬ್ರಹ್ಮೇಶಕೇಶವ ಪರೋಽಸ್ತಿ ನ ಪೂಜನೀಯೋ ।
ನೈವಾಶ್ವಮೇಧ ಸದೃಶಃ ಕ್ರತುರಸ್ತಿ ಕಶ್ಚಿತ್ ॥
ಗಂಗಾಸಮಂ ತ್ರಿಭುವನೇಽಪಿ ನ ತೀರ್ಥಮಸ್ತಿ
ದಾನಂ ತುಲಾಪುರುಷತುಲ್ಯಮಿಹಾಸ್ತಿ ನಾನ್ಯತ್ ॥ ೯೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಶ್ರೀಕೃಷ್ಣಯುಧಿಷ್ಠಿರ ಸಂವಾದೇ
ತುಲಾಪುರುಷದಾನ ವಿಧಿವರ್ಣನಂ
ನಾಮ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ.



---

೯೯. ಬ್ರಹ್ಮ, ಈಶ್ವರ, ಕೇಶವ ಇವರನ್ನು ಆಸಕ್ತಿಯಿಂದ ಪೂಜಿಸುವವನಿಗಿಂತ ಪೂಜ್ಯನಾದ ಮನುಷ್ಯನೇ ಆಗಲಿ, ಅಶ್ವಮೇಧಯಾಗಕ್ಕೆ ಸದೃಶವಾದ ಯಾಗವೇ ಆಗಲಿ ಮತ್ತು ಗಂಗೆಗೆ ಸದೃಶವಾದ ತೀರ್ಥವೇ ಆಗಲಿ ಮತ್ತು ತುಲಾಪುರುಷದಾನಕ್ಕೆ ಸಮನಾದ ದಾನವೇ ಆಗಲಿ ಮೂರುಲೋಕಗಳಲ್ಲಿಯೂ ಖಂಡಿತ ಇಲ್ಲವೆಂದು ಶ್ರೀ ಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದದಲ್ಲಿ ತುಲಾಪುರುಷ ದಾನವಿಧಿವರ್ಣನೆಯೆಂಬ
ನೂರಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಟ್ಸಪ್ತತ್ಯುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಭಗವನ್ಸರ್ವಭೂತೇಶ ಸರ್ವಭೂತನಮಸ್ಕೃತ ।
ಅನುಗ್ರಹಾಯ ಲೋಕಾನಾಂ ಕಥಯಸ್ವ ಮಮಾಪರಂ ॥ ೧ ॥

ತ್ವತ್ತುಲ್ಯೋ ಜಾಯತೇ ಯೇನ ಆಯುಷಾ ಯಶಸಾ ಶ್ರಿಯಾ ।
ತನ್ಮೇ ಕಥಯ ದೇವೇಶ ದಾನಂ ವ್ರತಮಥಾಪಿ ವಾ ॥ ೨ ॥

---

## ನೂರಎಪ್ಪತ್ತಾರನೆಯ ಅಧ್ಯಾಯ

೧-೨. ಯುಧಿಷ್ಠಿರನು ಪ್ರಶ್ನಿಸುತ್ತಾನೆ—ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀ ಕೃಷ್ಣನೇ! ಸಕಲ ಭೂತಗಳೂ ನಿನಗೆ ನಮಸ್ಕರಿಸುತ್ತವೆ. ನೀನು ಅವುಗಳಿಗೆ ಅಧಿಪತಿಯಾಗಿರುತ್ತೀ. ನೀನು ಲೋಕಕ್ಕೆ ಅನುಗ್ರಹ ಉಂಟುಮಾಡುವುದಕ್ಕೋಸ್ಕರ ನಾನು ಕೇಳತಕ್ಕ ಈ ವಿಚಾರಕ್ಕೆ ಉತ್ತರಕೊಡು. ಎಲೈ ದೇವೇಶನಾದ ಶ್ರೀ ಕೃಷ್ಣನೇ ! ಆಯುಸ್ಸು, ಯಶಸ್ಸು, ಸಂಪತ್ತು ಇವುಗಳಲ್ಲಿ ಮಾನವನು ನಿನಗೆ ಸಾಟಿಯೆನಿಸಬೇಕಾದರೆ ಅವಶ್ಯವಾಗಿ ಯಾವ ವ್ರತವನ್ನು ಆಚರಿಸಬೇಕು ? ಯಾವ ದಾನಮಾಡಬೇಕು ? ಎಂಬುದನ್ನು ಹೇಳು.

॥ ಶ್ರೀಕೃಷ್ಣ ಉವಾಚ ॥

**ಶೃಣು ರಾಜನ್ ಪ್ರವಕ್ಷ್ಯಾಮಿ ತವ ಲೋಕಹಿತೇಚ್ಛಯಾ ।**
**ಯೇನೋಪಾಯೇನ ಜಾಯಂತೇ ಮತ್ತುಲ್ಯಾ ಮಾನವಾ ಭುವಿ ॥ ೩ ॥**

**ನ ವ್ರತೈರ್ನೋಪವಾಸೈಶ್ಚ ನ ತೀರ್ಥಗಮನೈರಪಿ ।**
**ಮಹಾಪಥಾದಿಮರಣೈರ್ನ ಯಜ್ಞೈರ್ನ ಶ್ರುತೇನ ಚ ॥ ೪ ॥**

**ಪ್ರಾಪ್ಯತೇ ಮಮ ಲೋಕೋಽಯಂ ದುಷ್ಪ್ರಾಪ್ಯಸ್ತ್ರಿದಶೈರಪಿ ।**
**ಪಾರ್ಥ ಸ್ನೇಹಾನ್ಮಹಾಭಾಗ ಪ್ರವಕ್ಷ್ಯಾಮಿ ಹಿತಂ ತವ ॥ ೫ ॥**

**ಗೋಬ್ರಾಹ್ಮಣಾರ್ಥೇ ಮರಣಂ ಪ್ರಾಪ್ತಂ ಯೇನ ಸುಮೇಧಸಾ ।**
**ಪ್ರಯಾಗೇಽನಶನಂ ವಾಪಿ ಪೂಜಿತೋ ವಾಥ ಶಂಕರಃ ॥ ೬ ॥**

೩. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ! ಭೂಮಿಯಲ್ಲಿ ಇರತಕ್ಕ ಮಾನವರು ಯಾವ ಉಪಾಯವನ್ನು ಕೈಗೊಂಡರೆ ನನಗೆ ಸಾಟಿಯಾಗು ವರೋ ಅಂತಹ ಉಪಾಯವನ್ನು ಲೋಕಕ್ಕೆ ಹಿತವನ್ನುಂಟುಮಾಡಬೇಕೆಂಬ ಅಭಿಲಾಷೆಯಿಂದ ನಿನ್ನೊಡನೆ ಹೇಳುತ್ತೇನೆ ಕೇಳು.

೪–೫. ಎಲೈ ಮಹಾಭಾಗ್ಯಶಾಲಿಯಾದ ಪಾರ್ಥನೇ! ವ್ರತಗಳು, ಉಪ ವಾಸಗಳು, ತೀರ್ಥಕ್ಷೇತ್ರಗಳಿಗೆ ಹೋಗುವುದು, ಮಹಾಯಾತ್ರಾಮಾರ್ಗಗಳಲ್ಲಿ (ಪುಣ್ಯಸ್ಥಳಗಳಲ್ಲಿ) ಮೃತಿಹೊಂದುವುದು ಮತ್ತು ಪವಿತ್ರಗಳಾದ ಯಜ್ಞಗಳು, ವೇದಾಧ್ಯಯನ ಮುಂತಾದುವುಗಳಿಂದ ವಿಷ್ಣುಲೋಕವು ದೇವತೆಗಳಿಗೂ ಸಹ ದುರ್ಲಭವಾದುದು. ಆದರೂ ನಿನ್ನಲ್ಲಿರುವ ಸ್ನೇಹದಿಂದ ನಿನಗೆ ಹಿತವಾಗಲೆಂದು ಹೇಳುತ್ತೇನೆ.

೬-೭. ಗೋವು ಮತ್ತು ಬ್ರಾಹ್ಮಣರು ಇವರ ರಕ್ಷಣೆಗಾಗಿ ಪ್ರಾಣಕೊಡು ವುದು, ಪ್ರಯಾಗಕ್ಷೇತ್ರದಲ್ಲಿ ಅನಶನವ್ರತದಿಂದಿರುವುದು, ಈಶ್ವರನ ಪೂಜೆ, ಇವುಗ ಳನ್ನು ಮಾಡಿದರೆ ಅಂತಹವನು ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾನೆ. ಮತ್ತು

ಪ್ರಯಾತಿ ಬ್ರಹ್ಮಸಾಲೋಕ್ಯಂ ಶ್ರುತಿರೇಷಾ ಸನಾತನೀ ।
ಯೇನ ಮತ್ಸಮತಾಂ ಯಾತಿ ತತೋ ವಕ್ಷ್ಯಾಮ್ಯತಃ ಪರಂ ॥ ೭ ॥

ದಾನಂ ಹಿರಣ್ಯಗರ್ಭಾಖ್ಯಂ ಕಥ್ಯಮಾನಂ ನಿಬೋಧ ಮೇ ।
ಅಗ್ನೇರಪತ್ಯಂ ಪ್ರಥಮಂ ಸುವರ್ಣಮಿಹ ಪಠ್ಯತೇ ॥ ೮ ॥

ಪವಿತ್ರಂ ಸರ್ವಭೂತಾನಾಂ ಪಾವನಂ ಪರಮಂ ಮಹತ್ ।
ಪರ್ಯಾಯನಾಮ ತಸ್ಯೋಕ್ತಂ ಹಿರಣ್ಯಂ ಸಾರ್ವಲೌಕಿಕಂ ॥ ೯ ॥

ತದಪಾಂ ಗರ್ಭಮಾವಿಶ್ಯ ಪುನರ್ಜಾತಂ ತು ಭೂತಲೇ ।
ಯಶ್ಚ ತದ್ಬ್ರಾಹ್ಮಣೇ ದದ್ಯಾನ್ಮತ್ತುಲ್ಯೋ ಜಾಯತೇ ಹಿ ಸಃ ॥ ೧೦ ॥

॥ ಯುಧಿಷ್ಠಿರ ಉವಾಚ ॥

ವಿಧಾನಂ ತಸ್ಯ ದೇವೇಶ ಕಥಯಸ್ವ ಸನಾತನ ।
ಯತ್ಪ್ರಮಾಣಂ ಯಥಾಚೈತದ್ದಾತವ್ಯಂ ಪರಮೇಶ್ವರ ॥ ೧೧ ॥

---

ವಿಷ್ಣುವಿಗೆ (ನನಗೆ) ಸಾಟಿಯಾಗುತ್ತಾನೆ ಎಂಬದಾಗಿ ಸನಾತನವಾದ ಶ್ರುತಿ ವಾಕ್ಯವು ಇರುತ್ತದೆ. ಇದಲ್ಲದೆ ಇನ್ನೂ ಒಂದು ವಿಚಾರ ಹೇಳುತ್ತೇನೆ.

೮. ಹಿರಣ್ಯಗರ್ಭವೆಂಬ ಹೆಸರುಳ್ಳ ಪ್ರಶಸ್ತವಾದ ದಾನವೊಂದಿದೆ. ಅದನ್ನು ಹೇಳುತ್ತೇನೆ ಕೇಳು. ಸುವರ್ಣವು ಅಗ್ನಿಯ ಮೊದಲನೆಯ ಮಗ ಎಂದು ಪ್ರಸಿದ್ಧವಾಗಿದೆ.

೯-೧೦. ಸಕಲ ವಸ್ತುಗಳಲ್ಲಿ ಈ ಸುವರ್ಣವು ಬಹು ಪವಿತ್ರವಾದುದು. ಇದಕ್ಕೆ ಹಿರಣ್ಯವೆಂಬ ಪರ್ಯಾಯನಾಮವೂ ಇರುವುದು ಸರ್ವಜನರಿಗೂ ಗೊತ್ತಿದೆ. ಅದು ಜಲಮಧ್ಯದಲ್ಲಿ ಹೊಕ್ಕು ಮತ್ತೆ ಭೂಮಿಯಲ್ಲಿ ಜನಿಸಿತು. ಅದನ್ನು ಬ್ರಾಹ್ಮಣನಿಗೆ ದಾನಮಾಡತಕ್ಕ ಮನುಜನು ನನಗೆ ಸಾಟಿಯಾಗುತ್ತಾನೆ ಎಂದನು.

೧೧. ಆಗ ಯುಧಿಷ್ಠಿರನು ಪ್ರಶ್ನಿಸುತ್ತಾನೆ—ದೇವಾಧಿಪನೂ ಪರಮೇಶ್ವರಸ್ವರೂಪನೂ ಆದ ಎಲೈ ಕೃಷ್ಣನೇ! ಈ ದಾನದ ಅಳತೆ, ತೂಕ ಇತ್ಯಾದಿ ಪ್ರಮಾಣವನ್ನೂ ಮತ್ತು ದಾನಮಾಡುವ ವಿಧಾನವನ್ನೂ ಹೇಳು ಎಂದನು.

|| ಶ್ರೀಕೃಷ್ಣ ಉವಾಚ ||

ಪರ್ವಕಾಲೇ ಪ್ರದಾತವ್ಯಂ ದಾನಮೇತನ್ಮಹಾಮತೇ |
ಅಯನೇ ವಿಷುವೇ ಚೈವ ಗ್ರಹಣೇ ಶಶಿಸೂರ್ಯಯೋಃ || ೧೨ ||

ವ್ಯತೀಪಾತೇಽಥ ಕಾರ್ತಿಕ್ಯಾಂ ಜನ್ಮರ್ಕ್ಷೇ ವಾ ನರೋತ್ತಮ |
ದುಃಸ್ವಪ್ನದರ್ಶನೇ ಚೈವ ಗ್ರಹಪೀಡಾಸು ಚೈವ ಹಿ || ೧೩ ||

ಪ್ರಯಾಗೇ ನೈಮಿಷೇ ಚೈವ ಕುರುಕ್ಷೇತ್ರೇ ತಥಾರ್ಬುದೇ |
ಗಂಗಾಯಾಂ ಯಮುನಾಯಾಂ ಚ ಸಿಂಧುಸಾಗರಸಂಗಮೇ || ೧೪ ||

ಪುಣ್ಯನದ್ಯಶ್ಚ ದಾನೇಽಸ್ಮಿನ್ ಪ್ರಶಸ್ತಾಸ್ಯುರ್ನಸಂಶಯಃ |
ಯತ್ರ ವಾ ರೋಚತೇ ರಾಜನ್ ಗೃಹೇ ದೇವಕುಲೇಽಥವಾ || ೧೫ ||

---

೧೨-೧೩. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಮಹಾಮತಿಯುಳ್ಳ ಯುಧಿಷ್ಠಿರನೇ! ಇದನ್ನು ಪೂರ್ಣಿಮಾ, ಅಮಾವಾಸ್ಯಾದಿ ಪರ್ವಕಾಲ, ದಕ್ಷಿಣಾಯನ ಉತ್ತರಾಯಣ ಪುಣ್ಯಕಾಲ, ವಿಷುವತ್ಪುಣ್ಯಕಾಲ, ಚಂದ್ರಗ್ರಹಣ ಮತ್ತು ಸೂರ್ಯಗ್ರಹಣಗಳು, ವ್ಯತೀಪಾತ, ಕಾರ್ತಿಕಮಾಸ, ತನ್ನ ನಕ್ಷತ್ರದ ದಿನ, ದುಃಸ್ವಪ್ನ ದರ್ಶನವಾದ ದಿನ, ಮತ್ತು ಗ್ರಹಗಳ ಪೀಡೆಯೊದಗಿದ ಕಾಲ, ಇಂಥ ದಿನಗಳು ಒದಗಿದಾಗ ದಾನಮಾಡಬೇಕು.

೧೪. ಈ ದಾನಮಾಡಲು ಪ್ರಯಾಗ, ನೈಮಿಷ, ಕುರುಕ್ಷೇತ್ರ ಮತ್ತು ಗಂಗಾತೀರ, ಯಮುನಾತೀರ, ಸಿಂಧುನದಿ, ಸಾಗರ ಇವುಗಳ ಸಂಗಮ, ಇತರ ಪುಣ್ಯನದೀತೀರ, ಈ ಸ್ಥಳಗಳು ಪ್ರಶಸ್ತಗಳೆನಿಸಿವೆ. ಇದರಲ್ಲಿ ಸಂಶಯ ವಿಲ್ಲ.

೧೫. ಎಲೈ ರಾಜನೇ! ಮೇಲೆ ಹೇಳಿದ ಸ್ಥಳಗಳು ಮಾತ್ರವಲ್ಲದೆ ದಾತೃವಿಗೆ ಇಷ್ಟಬಂದ ಕಡೆ ಎಂದರೆ ಮನೆ ಅಥವಾ ದೇವಸ್ಥಾನ ಇತ್ಯಾದಿಗಳಲ್ಲಿ ಯಾದರೂ ಈ ದಾನ ಮಾಡಬಹುದು.

ಆರಾಮೇ ವಾ ತಡಾಗೇ ವಾ ಶುಚೌ ದೇಶೇ ವಿಧಾನತಃ ।
ತತ್ರ ಭೂಶೋಧನಂ ಕುರ್ಯಾತ್ ಪ್ರಾಗುದಕ್ಪ್ರವಣಂ ಶುಭಂ ॥೧೬॥

ಹಸ್ತಾದ್ವಾದಶ ಕರ್ತವ್ಯಂ ಮಂಡಪಂ ತು ಸುಶೋಭನಂ ।
ಸ್ತಂಭೈರ್ಮನೋಹರೈರ್ಯುಕ್ತಂ ಆರ್ದ್ರಶಾಖಾಭಿರನ್ವಿತಂ ॥ ೧೭ ॥

ತನ್ಮಧ್ಯೇ ವೇದಿಕಾಂ ಕುರ್ಯಾತ್ಪಂಚಹಸ್ತಾಮಲಂಕೃತಾಂ ।
ವಿತಾನಮುಪರಿಷ್ಟಾಚ್ಚ ಪುಷ್ಪಮಾಲಾವಲಂಬಿತಂ ॥ ೧೮ ॥

ಹಿರಣ್ಯಗರ್ಭಂ ತನ್ಮಧ್ಯೇ ಪ್ರಥಮೇಽಹನಿ ಕಲ್ಪಯೇತ್ ।
ತಸ್ಯ ಪ್ರಮಾಣಂ ವಕ್ಷ್ಯಾಮಿ ರೂಪಂ ಸ್ಥೈ ಸ್ಥಂಡಿಲೋದ್ಭವಂ ॥ ೧೯ ॥

---

೧೬. ಉದ್ಯಾನ ಅಥವಾ ಸರಸ್ಸಿನ ತೀರ ಇಂತಹ ಶುಚಿಯಾದ ಪ್ರದೇಶಗಳೂ ಆಗಬಹುದು. ಅಂತಹ ಪ್ರದೇಶದಲ್ಲಿ ಪೂರ್ವಕ್ಕೋ ಉತ್ತರಕ್ಕೋ ಇಳಿಜಾರಾಗಿರುವ ಶುಭಕರವಾದ ಸ್ಥಾನವನ್ನು ಗೊತ್ತುಮಾಡಿ ಅಲ್ಲಿ ಭೂಶೋಧನೆ ಮಾಡಬೇಕು.

೧೭-೧೮. ಹಾಗೆ ಶೋಧನೆಮಾಡಿದ ಭೂಮಿಯಲ್ಲಿ ಮನೋಹರಗಳಾದ ಕಂಬಗಳುಳ್ಳದ್ದಾಗಿ (ಹಸಿ) ಕೊಂಬೆಗಳ ತೋರಣ, ತೆಂಗಿನಗರಿ ತಳಿರು ಇವುಗಳಿಂದ ಮನೋಹರವೂ ಹನ್ನೆರಡುಹಸ್ತ ಉದ್ದವೂ ಇರತಕ್ಕ ಮಂಟಪವನ್ನು ರಚಿಸಬೇಕು. ಅದರ ಮಧ್ಯದಲ್ಲಿ ಐದುಹಸ್ತ ಪ್ರಮಾಣವುಳ್ಳದ್ದಾಗಿ ಅಲಂಕೃತವಾಗಿರುವ ಯಜ್ಞವೇದಿಕೆಯನ್ನು ಸಿದ್ಧಪಡಿಸಬೇಕು. ಅದರ ಮೇಲೆ ಹೂವಿನ ಮಾಲೆಗಳಿಂದ ಅಲಂಕೃತವಾದ (ಚಪ್ಪರ) ಮೇಲ್ಕಟ್ಟನ್ನು ರಚಿಸಬೇಕು.

೧೯. ಅದರ ಮಧ್ಯದಲ್ಲಿ ಮೊದಲನೆಯ ದಿವಸ ಹಿರಣ್ಯಗರ್ಭನನ್ನು ಸ್ಥಾಪಿಸಬೇಕು. ಅದರ ಪ್ರಮಾಣವನ್ನು ಹೇಳುವೆನು. ಆ ಆಕೃತಿಯು ಸ್ಥಂಡಿಲದ ಪ್ರಮಾಣಕ್ಕನುಗುಣವಾಗಿರುತ್ತದೆ.

**ಶಿಲ್ಪಿನಂ ಪೂಜಯೇತ್ಪೂರ್ವಂ ವಾಸೋಭಿರ್ಭೂಷಣೈಸ್ತಥಾ ।**
**ಬ್ರಾಹ್ಮಣಾನ್ವಾಚಯೇತ್ಪಶ್ಚಾತ್ ತತಃ ಕರ್ಮಸಮಾರಭೇತ್ ॥ ೨೦ ॥**

**ಸುವರ್ಣೇನ ಸುಶುದ್ಧೇನ ಶಕ್ತಿತಃ ಕಾರಯೇದ್ಬುಧಃ ।**
**ಅಂಗುಲಾನಿ ಚತುಃಷಷ್ಟಿರ್ದೈರ್ಘ್ಯಂ ಚ ಪರಿಕೀರ್ತಿತಂ ॥ ೨೧ ॥**

**ತ್ರಿಭಾಗಹೀನಂ ವದನೇ ಮೂಲೇ ತಸ್ಯಾರ್ಧವಿಸ್ತರಂ ।**
**ವರ್ತುಲಂ ಕರ್ಣಿಕಾಕಾರಂ ಚಾರುಗ್ರಂಥಿವಿವರ್ಜಿತಂ ॥ ೨೨ ॥**

**ಪಿಧಾನಮುಪರಿಷ್ಟಾಚ್ಚ ಕರ್ತವ್ಯಂ ಚಾಂಗುಲಾಧಿಕಂ ।**
**ಅಸ್ತ್ರಾಣಿ ದಶ ಕುರ್ವೀತ ನಾಲಂ ಸೂರ್ಯಂ ಚ ಕಾಂಚನಂ ॥ ೨೩ ॥**

**ದಾತ್ರಂ ಸಪಟ್ಟಕಂ ಚೈವ ಸರ್ವೋಪಸ್ಕರಣಾನ್ವಿತಂ ।**
**ಸೂಚೀಕ್ಷುರಶ್ಚ ಹೈಮಾನಿ ತತ್ಸರ್ವಂ ಪರಿಕಲ್ಪಯೇತ್ ॥ ೨೪ ॥**

---

೨೦. ಮೊಟ್ಟಮೊದಲು ಈ ಕಾರ್ಯಸಮರ್ಥನಾದ ಶಿಲ್ಪಿಯನ್ನು ವಸ್ತ್ರ ಭೂಷಣಾದಿಗಳಿಂದ ಸತ್ಕರಿಸಬೇಕು. ಅನಂತರ ಬ್ರಾಹ್ಮಣರ ಮೂಲಕ ಸ್ವಸ್ತಿ ವಾಚನ ಮಾಡಿಸಿ ಬಳಿಕ ಕಾರ್ಯಾರಂಭಮಾಡಬೇಕು.

೨೧-೨೨. ಅನಂತರ ತನ್ನ ಶಕ್ತ್ಯನುಸಾರ ಪರಿಶುದ್ಧವಾದ ಚಿನ್ನದಿಂದ ಆ ಪ್ರತಿಮೆಯನ್ನು ಅರವತ್ತುನಾಲ್ಕಂಗುಲ ದೀರ್ಘವುಳ್ಳ ಹಾಗೆ ಮಾಡಿಸಬೇಕು. ಅದರ ಮುಖಭಾಗವು ಮೂರರಲ್ಲಿ ಒಂದರಷ್ಟಕ್ಕಿಂತ ಕಮ್ಮಿಯೂ ಅದರ ಮೂಲಭಾಗವು ಗಾತ್ರದ ಅರ್ಧದಷ್ಟು ವಿಸ್ತಾರವುಳ್ಳ ವರ್ತುಲಾಕಾರವೂ, ಕಮಲಕರ್ಣಿಕಾಕಾರವೂ, ಮನೋಹರವೂ, ಮಧ್ಯೆಮಧ್ಯೆ ಗಂಟುಗಳಿಲ್ಲದುದೂ ಆಗಿರಬೇಕು.

೨೩-೨೪. ಒಂದಂಗುಲಕ್ಕಿಂತಲೂ ಸ್ವಲ್ಪ ಹೆಚ್ಚಾಗಿ ಉಬ್ಬಿರುವ ಆಚ್ಛಾದನ ವುಳ್ಳದ್ದಾಗಿರಬೇಕು. ಮತ್ತು ಚಿನ್ನದ ಹತ್ತು ಅಸ್ತ್ರಗಳುಳ್ಳದ್ದೂ ಸೂರ್ಯನಂತೆ ಬೆಳಗುವ ಬಾಣ ಮುಂತಾದ ಸಕಲ ಉಪಕರಣಗಳೊಡಗೂಡಿ ಸಂಪುಟ ಸಮೇತವೂ ಆಗಿರತಕ್ಕ ಒಂದು ಗರ್ಭಬಿಂಬವನ್ನು ನಿರ್ಮಿಸಬೇಕು. ಅದರಲ್ಲಿ ಚಿನ್ನದ ಸೂಜಿ ಗಳನ್ನು ಕತ್ತಿಗಳನ್ನಾಗಿ ಪರಿಗಣಿಸಬೇಕು.

ಪಾರ್ಶ್ವತಃ ಸ್ಥಾಪಯೇತ್ತಸ್ಯ ಹೇಮದಂಡ ಕಮಂಡಲೂ ।
ಛತ್ರಿಕಾ ಪಾದುಕಾಯುಗ್ಮಂ ವಜ್ರವೈಡೂರ್ಯಮಂಡಿತಂ || ೨೫ ||

ಏವಂ ಲಕ್ಷಣಸಂಯುಕ್ತಂ ಕೃತ್ವಾ ಗರ್ಭಂ ವಿಚಕ್ಷಣಃ ।
ಬ್ರಹ್ಮಘೋಷೇಣ ಮಹತಾ ಶಂಖತೂರ್ಯರವೇಣ ಚ || ೨೬ ||

ಹಸ್ತಿನಾ ಶಕಟೇನಾಥ ರಾಜನ್ ಬ್ರಹ್ಮರಥೇನ ವಾ ।
ಆನಯೇನ್ಮಂಡಪಂ ಕೃತ್ವಾ ಪ್ರದಕ್ಷಿಣಮತಂದ್ರಿತಃ || ೨೭ ||

ತಿಲದ್ರೋಣೋಪರಿಗತಂ ವೇದೀಮಧ್ಯೇಽಧಿವಾಸಯೇತ್ ।
ಸಮಾಲಭ್ಯ ಪುನಸ್ಸರ್ವಂ ಕುಂಕುಮೇನ ಸುಗಂಧಿನಾ || ೨೮ ||

ಕೌಶೇಯವಾಸಸೀ ಶುಭ್ರೇ ತತಸ್ತಂ ಪರಿಧಾಪಯೇತ್ ।
ಸಮಂತಾತ್ಪುಷ್ಪಮಾಲಾಭಿಃ ಪೂಜಯೇದ್ಭಕ್ತಿತಃ ಸುಧೀಃ || ೨೯ ||

---

೨೫. ಮತ್ತು ಆದರ ಪಾರ್ಶ್ವದಲ್ಲಿ ಚಿನ್ನದದಂಡ ಮತ್ತು ಕಮಂಡಲು ಇವನ್ನು ಇಟ್ಟು ವಜ್ರವೈಡೂರ್ಯಾದಿಗಳಿಂದ ಖಚಿತವಾದ ಛತ್ರಿ, ಪಾದರಕ್ಷಾದ್ವಯ ಇವುಗಳನ್ನೂ ಸಮೀಪದಲ್ಲಿ ಸ್ಥಾಪಿಸಬೇಕು.

೨೬-೨೭. ಎಲೈ ರಾಜನೇ ! ಬುದ್ಧಿಶಾಲಿಯಾದವನು ಈ ರೀತಿ ಮೇಲೆ ಹೇಳಿದಂತೆ ಶುಭಲಕ್ಷಣಗಳುಳ್ಳ ಒಂದು ಗರ್ಭಬಿಂಬವನ್ನು ನಿರ್ಮಾಣ ಮಾಡಿ ವೇದಘೋಷ ಶಂಖ ತೂರ್ಯ ಇತ್ಯಾದಿ ಧ್ವನಿಗಳಾಗುವಾಗ ಆನೆಯ ಮೇಲೋ ಅಥವಾ ಗಾಡಿಯ ಮೇಲೋ ಅಥವಾ ಬ್ರಹ್ಮರಥದ ಮೇಲೋ ಅದನ್ನು ಇರಿಸಿಕೊಂಡು ಒಂದೇಮನಸ್ಸಿನಿಂದ ಮಂಡಪವನ್ನು ಪ್ರದಕ್ಷಿಣೆ ಮಾಡಿ ಅದನ್ನು ಮಂಡಪದ ಒಳಕ್ಕೆ ತರಬೇಕು.

೨೮. ಆ ವೇದಿಕೆಯ ಮಧ್ಯದಲ್ಲಿ ಒಂದು ದ್ರೋಣಪರಿಮಿತಿಯುಳ್ಳ ಎಳ್ಳನ್ನು ಹರಡಬೇಕು. ಅದರ ಮೇಲೆ ಈ ಬಿಂಬವನ್ನು ಇಡಬೇಕು. ಪುನಃ ಸುಗಂಧಯುಕ್ತವಾದ ಕುಂಕುಮಕೇಸರಿಯಿಂದ ಬಿಂಬದ ಸಮಸ್ತಭಾಗವನ್ನೂ ಲೇಪಿಸಬೇಕು.

೨೯. ಅನಂತರ ಆ ಬಿಂಬಕ್ಕೆ ರೇಶ್ಮೆಯ ಬಿಳಿಯ ಪೀತಾಂಬರಗಳೆರಡನ್ನು ಸುತ್ತಲೂ ಹೊದ್ದಿಸಬೇಕು. ಅನಂತರ ಭಕ್ತಿಯಿಂದ ಹೂಮಾಲೆಗಳಿಂದ ಅಲಂಕರಿಸಬೇಕು.

**ಧೂಪೈಃ ಸುಧೂಪಿತಂ ಕೃತ್ವಾ ಮಂತ್ರಮೇತದುದೀರಯೇತ್ ।**
**ಭೂರ್ಲೋಕ ಪ್ರಮುಖಾ ಲೋಕಾಸ್ತವಗರ್ಭೇ ವ್ಯವಸ್ಥಿತಾಃ ॥ ೩೦ ॥**

**ಬ್ರಹ್ಮಾದಯಸ್ತಥಾ ದೇವಾ ನಮಸ್ತೇ ಭುವನೋದ್ಭವ ।**
**ನಮಸ್ತೇ ಭುವನಾಧಾರ ನಮಸ್ತೇ ಭುವನೇಶ್ವರ ॥ ೩೧ ॥**

**ನಮೋ ಹಿರಣ್ಯಗರ್ಭಾಯ ಗರ್ಭೇ ಯಸ್ಯ ಪಿತಾಮಹಃ ।**
**ಏವಂ ಸಂಪೂಜಯಿತ್ವಾ ತು ತಾಂ ರಾತ್ರಿಮಧಿವಾಸಯೇತ್ ॥ ೩೨ ॥**

**ವೇದ್ಯಾಶ್ಚತುರ್ದಿಶಂ ಚೈವ ಕುಂಡಾನಿ ಪರಿಕಲ್ಪಯೇತ್ ।**
**ಚತ್ವಾರಿ ಚತುರಸ್ರಾಣಿ ತೇಷು ಹೋಮೋ ವಿಧಿಯತೇ ॥ ೩೩ ॥**

**ಚತುಶ್ಚಾರಣಿಕಾಸ್ತತ್ರ ಬ್ರಾಹ್ಮಣಾ ಮಂತ್ರಪಾರಗಾಃ ।**
**ಹೋಮಂ ಕುರ್ಯುರ್ಜಿತಾತ್ಮಾನೋ ಮೌನಿನಃ ಸರ್ವ ಏವ ತೇ॥೩೪॥**

---

೩೦-೩೧. ಧೂಪಾದಿಗಳನ್ನು ಬೆಳಗಿ ಪೂಜಿಸಿ, "ಎಲೈ ಭುವನಗರ್ಭವೇ! ಭೂಲೋಕವೇ ಮೊದಲಾದ ಲೋಕಗಳೂ, ಬ್ರಹ್ಮಾದಿ ದೇವತೆಗಳೂ, ಸಮಸ್ತರೂ ನಿನ್ನ ಗರ್ಭದಲ್ಲಿ ಅಧಿಷ್ಠಿತರಾಗಿರುತ್ತಾರೆ. ಮತ್ತು ನೀನೇ ಭೂಮಿಗೆ ಆಧಾರನೂ ಉತ್ಪತ್ತಿಕಾರಕನೂ, ಹಿರಣ್ಯಗರ್ಭಸ್ವರೂಪನೂ ಆಗಿದ್ದೀಯೆ. ಪಿತಾಮಹನಾದ ಬ್ರಹ್ಮನೂ ಸಹ ನಿನ್ನಲ್ಲಿಯೇ ಇರುತ್ತಾನೆ. ಅಂತಹ ನಿನಗೆ ನಮಸ್ಕಾರ ಎಂದು ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೩೨. ಈ ರೀತಿ ಪೂಜೆಮಾಡಿ ಆ ರಾತ್ರಿಯೆಲ್ಲಾ ಅದನ್ನು ಆ ವೇದಿಯ ಮಧ್ಯದಲ್ಲೇ ಅಧಿವಾಸ ಮಾಡಿಸಬೇಕು.

೩೩. ಮತ್ತು ಆ ವೇದಿಕೆಯ ನಾಲ್ಕು ದಿಕ್ಕುಗಳಲ್ಲಿಯೂ ಚತುರಸ್ರಾಕಾರವಾದ ನಾಲ್ಕು ಕುಂಡಗಳನ್ನು ರಚಿಸಬೇಕು. ಅವುಗಳಲ್ಲಿ ಹೋಮವನ್ನು ಮಾಡಬೇಕಾಗುತ್ತದೆ.

೩೪. ಆ ಹೋಮಕ್ಕೆ ಮಂತ್ರವೇತ್ತೃಗಳಾದ ನಾಲ್ವರು ಬ್ರಾಹ್ಮಣರನ್ನು ನಿಯಮಿಸಬೇಕು. ಅವರು ಅರಣಿಯಿಂದ ಅಗ್ನಿಯನ್ನು ಉತ್ಪತ್ತಿಮಾಡಬೇಕು. ಮತ್ತು ಸರ್ವರೂ ಮೌನಿಗಳಾಗಿಯೂ ಜಿತಾತ್ಮರಾಗಿಯೂ ಹೋಮಕಾರ್ಯವನ್ನು ನೆರವೇರಿಸುವವರಾಗಬೇಕು.

ಸರ್ವಾಭರಣಸಂಪನ್ನಾಃ ಸರ್ವೇಚಾಹತವಾಸಸಃ ।
ತಾಮ್ರಪಾತ್ರದ್ವಯೋಪೇತಾ ಗಂಧಪುಷ್ಪಾದಿಪೂಜಿತಾಃ ॥ ೩೫ ॥

ವೇದ್ಯಾಃ ಪೂರ್ವೋತ್ತರೇ ಭಾಗೇ ಗ್ರಹವೇದಿಂ ಪ್ರಕಲ್ಪಯೇತ್ ।
ತತ್ರ ಗ್ರಹಾನ್ ಲೋಕಪಾಲಾನ್ ಬ್ರಹ್ಮವಿಷ್ಣುಮಹೇಶ್ವರಾನ್ ॥೩೬॥

ಪೂಜಯೇತ್ಸ್ವರ್ಣಘಟಿತಾನ್ ಪುಷ್ಪಧೂಪವಿಲೇಪನೈಃ ।
ಪತಾಕಾಭಿರಲಂಕೃತ್ಯ ಮಂಡಪಂ ತೋರಣೈಸ್ತಥಾ ॥ ೩೭ ॥

ಕುಂಭದ್ವಯಂ ಚ ದ್ವಾರೇಷು ಸ್ಥಾಪಯೇದ್ರತ್ನ ಸಂಯುತಂ ।
ತುಲಾಪುರುಷಮಂತ್ರೈಶ್ಚ ಲೋಕಪಾಲಬಲಿಂ ಕ್ಷಿಪೇತ್ ॥ ೩೮ ॥

ಪಾಲಾಶ್ಯಃ ಸಮಿಧಸ್ತತ್ರ ಪ್ರಶಸ್ತಾ ಹೋಮಕರ್ಮಣಿ ।
ಚರುಶ್ಚೈವೇಂದ್ರದೈವತ್ಯಸ್ತಿಲಾಗವ ಘೃತಂ ತಥಾ ॥ ೩೯ ॥

೩೫. ಆ ಬ್ರಾಹ್ಮಣರು ಸಕಲ ಆಭರಣಗಳಿಂದ ವಿರಾಜಮಾನರೂ ಮತ್ತು ಶುಭ್ರವಸ್ತ್ರಧಾರಿಗಳೂ, ಎರಡೆರಡು ತಾಮ್ರದ ಪಾತ್ರೆಗಳಿಂದ ಸಮೇತರೂ, ಗಂಧ ಪುಷ್ಪಾದಿಗಳಿಂದ ಪೂಜಿತರೂ ಆಗಿರಬೇಕು.

೩೬-೩೭. ಮತ್ತು ಆ ವೇದಿಕೆಯ ಪೂರ್ವಕ್ಕೂ ಉತ್ತರಕ್ಕೂ ಮಧ್ಯದಲ್ಲಿ ಗ್ರಹಗಳನ್ನು ಆರಾಧಿಸುವುದಕ್ಕಾಗಿ ಒಂದು ವೇದಿಕೆಯನ್ನು ರಚಿಸಬೇಕು. ಅಲ್ಲಿ ಗ್ರಹಗಳನ್ನೂ ಲೋಕಪಾಲಕರನ್ನೂ ಚಿನ್ನದಿಂದ ರಚಿಸಿದ ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳ ಬಿಂಬಗಳನ್ನೂ ಹೂ, ಧೂಪ, ಲೇಪನ ಇತ್ಯಾದಿಗಳಿಂದ ಪೂಜಿಸಬೇಕು. ಮತ್ತು ಮಂಡಪವನ್ನು ತಳಿರು, ತೋರಣ, ಪತಾಕೆ ಇತ್ಯಾದಿ ಗಳಿಂದ ಅಲಂಕರಿಸಬೇಕು.

೩೮. ಎರಡು ಕುಂಭಗಳಲ್ಲಿಯೂ ರತ್ನಗಳನ್ನು ಹಾಕಿ ಬಾಗಿಲುಗಳ ಎರಡು ಪಾರ್ಶ್ವಗಳಲ್ಲಿಯೂ ಇರಿಸಬೇಕು. ತುಲಾಪುರುಷನ ಪೂಜೆಗೆ ಉಕ್ತವಾದ ಮಂತ್ರದಿಂದಲೇ ಲೋಕಪಾಲಕರಿಗೆ ಬಲಿಯನ್ನು ಸಮರ್ಪಿಸಬೇಕು.

೩೯. ಈ ಕರ್ಮಾಂಗವಾದ ಹೋಮದಲ್ಲಿ ಮುತ್ತುಗದ ಸಮಿತ್ತುಗಳೇ ಪ್ರಶಸ್ತವಾದುವು. ಚರು, ತಿಲ, ಹಸುವಿನ ತುಪ್ಪ, ಇವೇ ಹೋಮದ್ರವ್ಯ ಗಳು, ಇಂದ್ರನೇ ದೇವತೆ.

**ಸ್ವಲಿಂಗೈರ್ಹೋಮಯೇತ್ಪೂರ್ವಂ ಮಂತ್ರೈರ್ವ್ಯಾಹೃತಿಭಿಃ ಪುಮಾನ್।**
**ಅಯುತೇ ದ್ವೇ ಚ ಹೋಮಸ್ಯ ಸಂಖ್ಯಾಮಾಹುರ್ಮನೀಷಿಣಃ ॥೪೦॥**

**ಯಜಮಾನಸ್ತತಃ ಸ್ನಾತ್ವಾ ಶುಕ್ಲಾಂಬರಧರಃ ಶುಚಿಃ।**
**ಭಕ್ತ್ಯಾ ಹಿರಣ್ಯಗರ್ಭಂ ಚ ಪರ್ವಕಾಲೇ ಸಮರ್ಚಯೇತ್ ॥ ೪೧ ॥**

**ನಮೋ ಹಿರಣ್ಯಗರ್ಭಾಯ ವಿಶ್ವಗರ್ಭಾಯ ವೈ ನಮಃ।**
**ಚರಾಚರಸ್ಯ ಜಗತೋ ಗೃಹ ಭೂತಾಯ ತೇ ನಮಃ ॥ ೪೨ ॥**

**ಮಾತ್ರಾಹಂ ಜನಿತಃ ಪೂರ್ವಂ ಮರ್ತ್ಯಧರ್ಮಾಸುರೋತ್ತಮ।**
**ತ್ವದ್ಗರ್ಭಸಂಭವಾದದ್ಯ ದಿವ್ಯದೇಹೋ ಭವಾಮ್ಯಹಂ ॥ ೪೩ ॥**

---

೪೦. ಋತ್ವಿಜನು ಆಯಾ ದೇವತೆಗಳ ಸಂಜ್ಞಾಕವಾದ ಮಂತ್ರಗಳಿಂದ ವ್ಯಾಹೃತಿಪೂರ್ವಕವಾಗಿ ಹೋಮಮಾಡಬೇಕು. ಈ ಹೋಮಕ್ಕೆ ಎರಡು ಅಯುತ (ಇಪ್ಪತ್ತು ಸಾವಿರ) ಗಳೆಂದು ಪ್ರಾಜ್ಞರಿಂದ ನಿಗದಿಯಾಗಿದೆ.

೪೧. ಯಜಮಾನನು ಪರ್ವಕಾಲದ ದಿನ ಬೆಳಗ್ಗೆ ಎದ್ದು ಸ್ನಾನಮಾಡಿ ಮಡಿಯ ಬಟ್ಟೆಯನ್ನು ಧರಿಸಿ ಶುಚಿರ್ಭೂತನಾಗಿ ಭಕ್ತಿಯಿಂದ ಹಿರಣ್ಯಗರ್ಭನನ್ನು ಪೂಜಿಸಬೇಕು.

೪೨. ಎಲೈ ಹಿರಣ್ಯಗರ್ಭನೇ! ಪ್ರಪಂಚವೆಲ್ಲ ನಿನ್ನಲ್ಲಿಯೇ ಐಕ್ಯಗೊಂಡಿರುತ್ತದೆ. ಚರಾಚರಾತ್ಮಕವಾದ ಜಗತ್ತಿಗೆ ನೀನೇ ನಿವಾಸವಾಗಿದ್ದಿಯೆ. ಅಂತಹ ನಿನಗೆ ನಮಸ್ಕಾರ.

೪೩. ಎಲೈ ಸುರೋತ್ತಮನೇ! ನಾನು ಹಿಂದೆ ತಾಯಿಯ ಗರ್ಭದಲ್ಲಿ ಜನಿಸಿದೆನು. ಆದುದರಿಂದ ನಾನು ಮಾನವ ಧರ್ಮಾವಲಂಬಿಯಾದೆನು. ಈಗ ನಿನ್ನ ಗರ್ಭವು ನನಗೆ ಸಂಭವಿಸಿತಾದುದರಿಂದ ನಾನು ದಿವ್ಯದೇಹ ಉಳ್ಳವನಾಗುವೆನು.

ಇತ್ಯುಚ್ಚಾರ್ಯ ಸ್ವಯಂ ಭಕ್ತ್ಯಾ ಕೃತ್ವಾಚೈವ ಪ್ರದಕ್ಷಿಣಾಂ ।
ಕ್ಷೀರಾಜ್ಯದಧಿಸಂಪೂರ್ಣಂ ತದ್ಗರ್ಭಂ ಪ್ರವಿಶೇದ್ಬುಧಃ ॥ ೪೪ ॥

ಸೌವರ್ಣಂ ಧರ್ಮರಾಜಂ ತು ಸವ್ಯೇ ಕೃತ್ವಾ ಕರೇ ತತಃ ।
ಭಾಸ್ಕರಂ ದಕ್ಷಿಣೇ ಚೈವ ಮುಷ್ಟಿಂ ಬದ್ಧ್ವಾ ಪ್ರಯತ್ನತಃ ॥ ೪೫ ॥

ಜಾನ್ವೋರಂತರತಶ್ಚೈವ ಶಿರಃ ಕೃತ್ವಾ ಸಮಾಹಿತಃ ।
ಉಚ್ಛ್ವಾಸಪಂಚಕಂ ತಿಷ್ಠೇತ್ ಚೇತಸಾ ಚಿಂತಯಞ್ಛಿವಂ ॥ ೪೬ ॥

ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತಥಾ ।
ಕುರ್ಯುರ್ಹಿರಣ್ಯಗರ್ಭಸ್ಯ ತತಸ್ತೇ ದ್ವಿಜಪುಂಗವಾಃ ॥ ೪೭ ॥

ಜಾತಕರ್ಮಾದಿಕಾಃ ಕುರ್ಯುಃ ಕ್ರಿಯಾಃ ಷೋಡಶ ಚಾಪರಾಃ ।
ತತ ಉತ್ಥಾಯ ನಿಃಸೃತ್ಯ ಪುನಃ ಕುರ್ಯಾತ್ಪ್ರದಕ್ಷಿಣಾಂ ॥ ೪೮ ॥

---

೪೪. ಆ ಗರ್ಭಪಾತ್ರದಲ್ಲಿ ಕ್ಷೀರ (ಹಾಲು), ತುಪ್ಪ ಮತ್ತು ಮೊಸರು ಇವುಗಳೆಲ್ಲಾ ಪೂರ್ಣವಾಗಿರುವಲ್ಲಿ ಪ್ರಾಜ್ಞನು ಮೇಲೆ ಹೇಳಿದಂತೆ ಮಂತ್ರವನ್ನು ಉಚ್ಚಾರಮಾಡುತ್ತಾ ಭಕ್ತಿಯಿಂದ ಅದಕ್ಕೆ ಪ್ರದಕ್ಷಿಣೆಮಾಡಿ ಅನಂತರ ಆ ತುಲಾ ಭಾರದ ಹಿರಣ್ಯಗರ್ಭಪಾತ್ರದಲ್ಲಿಳಿದು ಪ್ರವೇಶಿಸಬೇಕು.

೪೫. ಹಾಗೆ ಕುಳಿತುಕೊಳ್ಳುವಾಗ ಚಿನ್ನದ ಯಮಪ್ರತಿಮೆಯನ್ನು ಎಡದ ಕೈಯಲ್ಲಿಯೂ, ಸೂರ್ಯನ ಪ್ರತಿಮೆಯನ್ನು ಬಲದ ಕೈಯಲ್ಲಿಯೂ, ಭದ್ರವಾದ ಮುಷ್ಟಿಯಿಂದ ಹಿಡಿದಿರಬೇಕು.

೪೬. ಈರೀತಿ ಸಮಾಹಿತಮನಸ್ಕನಾಗಿ ತನ್ನ ತಲೆಯನ್ನು ಮೊಳಕಾಲುಗಳ ಮಧ್ಯೆ ಇಟ್ಟುಕೊಂಡು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸುತ್ತಾ ಐದು ಉಚ್ಛ್ವಾಸ ಗಳನ್ನು ಮಾತ್ರ ಬಿಡಬೇಕು.

೪೭-೪೮. ಅಲ್ಲಿರುವ ಆ ವಿಪ್ರವರ್ಯರು ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಇವುಗಳನ್ನೂ ಮತ್ತು ಜಾತಕರ್ಮವೇ ಮೊದಲಾದ ಷೋಡಶ ಕರ್ಮಗಳನ್ನೂ ಸಹ ಆ ಹಿರಣ್ಯಗರ್ಭನಿಗೆ ಮಾಡಬೇಕು. ಅನಂತರ ಆತನು ಅಲ್ಲಿಂದ ಎದ್ದು ಮತ್ತೆ ಪ್ರದಕ್ಷಿಣೆ ಮಾಡಬೇಕು.

ತಾವನ್ಮುಖಂ ನ ಪಶ್ಯೇತ ಕಸ್ಯಚಿನ್ನೃಪಸತ್ತಮ ।
ಸೌವರ್ಣಾ ಪೃಥಿವೀ ಯಾವನ್ನದೃಷ್ಟಾ ಸ್ಪಷ್ಟಚಕ್ಷುಷಾ　　॥ ೪೯ ॥

ತತಃ ಸ್ನಾನಂ ಪ್ರಕುರ್ವೀತ ಬ್ರಹ್ಮಘೋಷಪುರಸ್ಸರಂ ।
ಅಷ್ಟೌ ದ್ವಿಜಾಃ ಸುವರ್ಣಾಂಗಾಃ ಸೌವರ್ಣೈಃ ಕಲಶೈಃ ಶುಭೈಃ ॥೫೦॥

ರೌಪ್ಯೈರೌದುಂಬರೈರ್ವಾಪಿ ಮೃಣ್ಮಯೈರ್ವಾ ಸುಶೋಭನೈಃ ।
ಧಧ್ಯಕ್ಷತವಿಚಿತ್ರಾಂಗೈರಾಮ್ರಪಲ್ಲವಶೋಭಿತೈಃ　　॥ ೫೧ ॥

ಪುಷ್ಪೈರಾವೇಷ್ಟಿತಗ್ರೀವೈರವ್ರಣೈಃ ಕಲಶೈರ್ದೃಢೈಃ ।
ಚತುಷ್ಕಮಧ್ಯೇ ಸಂಸ್ಥಾಪ್ಯ ಪೀಠಮವ್ರಣಮುತ್ತಮಂ　　॥ ೫೨ ॥

ತತ್ರ ಸ್ಥಾಪ್ಯ ಮಹಾಭಾಗ ಯಜಮಾನಂ ದ್ವಿಜೋತ್ತಮಾಃ ।
ದೇವಸ್ಯತ್ವೇತಿ ಮಂತ್ರೇಣ ಕುರ್ಯುರಸ್ಯಾಭಿಷೇಚನಂ　　॥ ೫೩ ॥

---

೪೯. ಎಲೈ ರಾಜನೇ! ಭೂಮಿಯು ಸುವರ್ಣಮಯವಾದುದಾಗಿ ಕಣ್ಣುಗಳಿಗೆ ಸ್ಪಷ್ಟವಾಗಿ ಕಾಣುವವರೆಗೂ ಯಾರ ಮುಖದರ್ಶನವನ್ನೂ ಮಾಡಬಾರದು.

೫೦-೫೩. ಅನಂತರ ವೇದಘೋಷಪೂರ್ವಕವಾಗಿ ಯಜಮಾನನಿಗೆ ಸ್ನಾನ ಮಾಡಿಸಬೇಕು. ಸುವರ್ಣಾಭರಣಗಳನ್ನು ಧರಿಸಿದ ಎಂಟುಜನ ಬ್ರಾಹ್ಮಣರು ಚಿನ್ನದ ಕಲಶಗಳನ್ನೋ ಅಥವಾ ಬೆಳ್ಳಿಯ ಕಲಶಗಳನ್ನೋ ಅಥವಾ ಅತ್ತಿಯ ಮರದಿಂದ ಮಾಡಿದ ಪಾತ್ರೆಗಳನ್ನೋ ಅಥವಾ ಮಣ್ಣಿನಿಂದ ಮಾಡಿದ ಕಲಶಗಳನ್ನೋ ಹಿಡಿದು ಒಡನೆ ಬರಬೇಕು. ಅವರು ತರುವ ಕಲಶಗಳು ದಧಿ, ಅಕ್ಷತೆ, ಮಾವಿನ ಚಿಗುರು ಇವುಗಳಿಂದ ಅಲಂಕೃತಗಳಾಗಿಯೂ, ಆ ಕಶಲಗಳ ಕತ್ತಿಗೆ ಪುಷ್ಪಮಾಲೆಗಳನ್ನು ಸುತ್ತಿರಬೇಕು. ಮತ್ತು ಅವು ಧೃಢಗಳಾಗಿ ಇರಬೇಕು. ಅನಂತರ ಆ ನಾಲ್ಕು ಕಂಬಗಳ ಮಧ್ಯದಲ್ಲಿ ರಮ್ಯವಾಗಿಯೂ, ದೃಢವಾಗಿಯೂ ಇರುವ ಉತ್ತಮವಾದ ಪೀಠದಲ್ಲಿ ಯಜಮಾನನನ್ನು ಕೂಡಿಸಿ ದ್ವಿಜರು "ದೇವಸ್ಯ ತ್ವಾ" ಎಂಬ ವೇದಮಂತ್ರದಿಂದ ಆ ಕಲಶದಲ್ಲಿರುವ ನೀರನ್ನು ಆತನಿಗೆ ಅಭಿಷೇಕ ಮಾಡಬೇಕು.

ಅದ್ಯ ಜಾತಸ್ಯೇತೇಽಂಗಾನಿ ಅಭಿಷೇಕ್ಷ್ಯಾಮಹೇ ವಯಂ ।
ದಿವ್ಯೇನಾನೇನ ವಪುಷಾ ಚಿರಂಜೀವ ಸುಖೀ ಭವ ॥ ೫೪ ॥

ಏವಂ ಕೃತಾಭಿಷೇಕಸ್ತು ಯಜಮಾನಃ ಸಮಾಹಿತಃ ।
ದದ್ಯಾದ್ಧಿರಣ್ಯಗರ್ಭಂ ತಂ ಸೋದಕೇನೈವ ಪಾಣಿನಾ ॥ ೫೫ ॥

ತಾನ್ ಸಂಪೂಜ್ಯ ಚ ಭಾವೇನ ಬಹುಭ್ಯೋ ವಾ ತದಾಜ್ಞಯಾ ।
ಯಜ್ಞೋಪಕರಣಂ ಸರ್ವಂ ಗುರುವೇ ವಿನಿವೇದಯೇತ್ ॥ ೫೬ ॥

ಪಾದುಕೋಪಾನಹೌ ಚೈವ ಛತ್ರಚಾಮರಭಾಜನಂ ।
ಅನ್ಯೇಷಾಂ ಚೈವ ವಿಪ್ರಾಣಾಂ ಯೇ ಚ ತತ್ರ ಸಭಾಸದಃ ॥ ೫೭ ॥

ತೇಷಾಂ ಚೈವ ಪ್ರದಾತವ್ಯಂ ದಾನಂ ಚಾತ್ರ ವಿಶೇಷತಃ ।
ದೀನಾಂಧಕೃಪಣಾನಾಂ ಚ ದಾತವ್ಯಂ ಸಾರ್ವಕಾಮಿಕಂ ॥ ೫೮ ॥

---

೫೪. ಈಗತಾನೆ ಜನಿಸಿದ ಈ ಅಂಗಗಳನ್ನೇ ನಾವು ಅಭಿಷೇಕಮಾಡುತ್ತೇವೆ. ಆದುದರಿಂದ ನೀನು ಈ ದಿವ್ಯಶರೀರದಿಂದ ಬಹುಕಾಲ ಬದುಕು ಎಂಬ ಅರ್ಥವುಳ್ಳ ಮಂತ್ರಗಳನ್ನು ಬ್ರಾಹ್ಮಣರು ಹೇಳಬೇಕು.

೫೫. ಯಜಮಾನನು ಈ ರೀತಿ ಅಭಿಷಿಕ್ತನಾದ ಮೇಲೆ ಸುಮನಸ್ಕನಾಗಿ ಜಲಧಾರಾಸಹಿತವಾದ ಕೈಯಿಂದ ಆ ಹಿರಣ್ಯಗರ್ಭನನ್ನು ಅವರಿಗೆ ದಾನಮಾಡಬೇಕು.

೫೬. ಅಥವಾ ಅವರ ಅನುಜ್ಞೆ ಪಡೆದು ಸತ್ಸ್ವಭಾವದವರಾದ ಇತರ ಜನರನ್ನು ಪೂಜಿಸಿ ಅವರಿಗೂ ದಾನಮಾಡಬಹುದು. ಆ ಯಜ್ಞದ ಉಪಕರಣಗಳನ್ನೆಲ್ಲ ಗುರುವಿಗೆ ಸಮರ್ಪಿಸಬೇಕು.

೫೭. ಪಾದುಕೆಗಳು, ಛತ್ರಿ, ಚಾಮರ, ಪಾತ್ರೆಗಳು ಮುಂತಾದುವನ್ನು ಆ ಸಭೆಯಲ್ಲಿ ಬಂದಿರತಕ್ಕ ಇತರ ಬ್ರಾಹ್ಮಣರಿಗೆ ದಾನಮಾಡಬೇಕು

೫೮. ನಮ್ಮ ಇಷ್ಟಪ್ರದವಾದ ಈ ದಾನಗಳನ್ನು ವಿಶೇಷವಾಗಿ ದೀನರು, ಕುರುಡರು, ಕೃಪಣರು ಇಂಥವರಿಗೇ ದಾನಮಾಡಬೇಕು.

**ಅನ್ನಸತ್ರಂ ಚ ಕರ್ತವ್ಯಂ ಯಾವದ್ದಾನಪರಿಗ್ರಹಃ ।**
**ಅನೇನ ವಿಧಿನಾ ಯಸ್ತು ದಾನಮೇತತ್ಪ್ರಯಚ್ಛತಿ　　॥ ೫೯ ॥**

**ಸ ಕುಲಂ ತಾರಯೇತ್ಸರ್ವಂ ದೇವಲೋಕಂ ಸ ಗಚ್ಛತಿ ।**
**ವಿಮಾನವರಮಾರುಹ್ಯ ಪಂಚಯೋಜನವಿಸ್ತೃತಂ　　॥ ೬೦ ॥**

**ವಾಪೀಕೂಪತಡಾಗಾದ್ಯೈರ್ಜಲಸ್ಥಾನೈರಲಂಕೃತಂ ।**
**ಉದ್ಯಾನಶತಸಂಸ್ಥಾನಂ ಪದ್ಮಾಕರ ನಿಷೇವಿತಂ　　॥ ೬೧ ॥**

**ಪ್ರಾಸಾದಶತಸಂಕೀರ್ಣಂ ವರಸ್ತ್ರೀಶತಸೇವಿತಂ ।**
**ವೀಣಾವೇಣುಮೃದಂಗಾನಾಂ ಶಬ್ದೈರಾಪೂರಿತಂ ಮಹತ್　　॥ ೬೨ ॥**

**ಭೂಮಯೋ ಯತ್ರ ರಾಜೇಂದ್ರ ದಿವ್ಯಾ ಮಣಿಮಯಾಃ ಶುಭಾಃ ।**
**ವೇದಿಕಾಭಿರ್ವಿಚಿತ್ರಾಭಿಃ ಶೋಭಿತಂ ಭಾಸ್ಕರಪ್ರಭಂ　　॥ ೬೩ ॥**

**ಧೃತಂ ಸ್ತಂಭ ಸಹಸ್ರೇಣ ಸುಕೃತಂ ವಿಶ್ವಕರ್ಮಣಾ ।**
**ಪತಾಕಾಭಿರ್ವಿಚಿತ್ರಾಭಿರ್ವಜ್ರೈಶ್ಚ ಸಮಲಂಕೃತಂ　　॥ ೬೪ ॥**

---

೫೯-೬೫. ಮತ್ತು ದಾನವನ್ನು ಪರಿಗ್ರಹಮಾಡುವ ಜನರು ಅಲ್ಲಿರುವವರೆಗೂ ಯಜಮಾನನು ಅನ್ನಸತ್ರವನ್ನು ಇಟ್ಟು ಸಂತರ್ಪಣೆ ಏರ್ಪಡಿಸಬೇಕು. ಎಲೈ ರಾಜನೇ ! ಈ ವಿಧಿಯನ್ನನುಸರಿಸಿ ದಾನಮಾಡತಕ್ಕ ಮಾನವನು ತಾನು ಮಾತ್ರವಲ್ಲದೆ ತನ್ನ ವಂಶವನ್ನೂ ಸಹ ನರಕದಿಂದ ಉದ್ಧಾರಮಾಡುತ್ತಾನೆ. ಮತ್ತು ಐದು ಯೋಜನ ವಿಸ್ತಾರವುಳ್ಳದ್ದೂ ಭಾವಿ, ಕೆರೆ, ಇತ್ಯಾದಿ ಜಲಾಶಯಗಳಿಂದ ಅಲಂಕೃತವಾದುದೂ ನೂರಾರು ಉದ್ಯಾನವನಗಳುಳ್ಳುದೂ, ಕಮಲಸರೋವರಗಳಿಂದ ಯುಕ್ತವಾದುದೂ ನೂರಾರು ಉಪ್ಪರಿಗೆಗಳುಳ್ಳುದೂ, ಮತ್ತು ನೂರಾರು ಉತ್ತಮಸ್ತ್ರೀಯರಿಂದ ಶೋಭಿತವಾದುದೂ, ವೀಣೆ, ಕೊಳಲು, ಮೃದಂಗ ಇವುಗಳ ಅವ್ಯಕ್ತಮಧುರವಾದ ಧ್ವನಿಯುಕ್ತವಾದುದೂ, ಮತ್ತು ದೇವಲೋಕದಂತೆ ಮಣಿಮಯ ನಿಬದ್ಧಭೂಮಿಗಳುಳ್ಳದ್ದೂ, ಸೂರ್ಯನಂತೆ ವಿರಾಜಿಸುತ್ತಿರುವ ಚಿತ್ರವಿಚಿತ್ರಗಳಾದ ವೇದಿಕೆಗಳುಳ್ಳದ್ದೂ, ಸಾವಿರಾರು ಕಂಬಗಳುಳ್ಳ ಹಾಗೆ ವಿಶ್ವಕರ್ಮನಿಂದ ನಿರ್ಮಿತವಾದುದೂ, ಮನೋಹರಗಳಾದ ಪತಾಕೆಗಳು ಮತ್ತು

ತದಾರುಹ್ಯ ವಿಮಾನಾಗ್ರ್ಯಂ ವಿದ್ಯಾಧರಗಣೈರ್ಯುತಂ ।
ಸ ಯಾತಿ ಲೋಕಂ ಶಕ್ರಸ್ಯ ಶಕ್ರೇಣ ಸಹ ಮೋದತೇ ॥ ೬೫ ॥

ಮನ್ವಂತರಶತೇ ಜಾತೇ ಕರ್ಮಭೂಮೌ ಪ್ರಜಾಯತೇ ।
ಜಂಬೂದ್ವೀಪಮಶೇಷಂ ತು ಭುಂಕ್ತೇ ದಿವ್ಯಪರಾಕ್ರಮಃ ॥ ೬೬ ॥

ಧಾರ್ಮಿಕಃ ಸತ್ಯಶೀಲಶ್ಚ ಬ್ರಹ್ಮಣ್ಯೋ ಗುರುವತ್ಸಲಃ ।
ದಶಜನ್ಮಾನ್ಯಸೌ ರಾಜಾ ಜಾಯತೇ ರೋಗವರ್ಜಿತಃ ॥ ೬೭ ॥

ಯಸ್ತ್ವಿದಂ ಶೃಣುಯಾದ್ಭಕ್ತ್ಯಾ ರಹಸ್ಯಂ ಪಾಪನಾಶನಂ ।
ಸೋ‌ಽಪಿ ವರ್ಷಶತಂ ಸಾಗ್ರಂ ಸುರಲೋಕೇ ಮಹೀಯತೇ ॥ ೬೮ ॥

ಗರ್ಭಂ ಹಿರಣ್ಮಯರಚಿತಂ ವಿಧಿವತ್ಪ್ರವಿಶ್ಯ ।
ಸಂಸ್ಕಾರಸಂಸ್ಕೃತತನುಃ ಪುನರೇವ ತಸ್ಮಾತ್ ॥

---

ವಜ್ರ ಇವುಗಳಿಂದ ಅಲಂಕೃತವಾದುದೂ, ವಿದ್ಯಾಧರಸಮೂಹದಿಂದ ಕೂಡಿದುದೂ ಆಗಿ ಬಹು ಅಂದವಾಗಿರತಕ್ಕ ಸರ್ವಶ್ರೇಷ್ಠವಾದ ವಿಮಾನಾರೂಢನಾಗಿ ಇಂದ್ರ ಲೋಕಕ್ಕೆ ತೆರಳಿ ಅಲ್ಲಿ ಇಂದ್ರನೊಡನೆ ಸಂತೋಷಪಡುತ್ತಾನೆ.

೬೬-೬೭. ಈ ರೀತಿ ನೂರು ಮನ್ವಂತರಗಳು ಅಲ್ಲಿದ್ದು ಅನಂತರ ಕರ್ಮ ಭೂಮಿಯಲ್ಲಿ ಜನಿಸಿ ಮುಂದಿನ ಹತ್ತು ಜನ್ಮಗಳಲ್ಲಿ ರಾಜನಾಗಿ ಬಹು ಪರಾ ಕ್ರಮಿಯೂ, ಸತ್ಯಶೀಲನೂ, ಬ್ರಾಹ್ಮಣರಲ್ಲೂ ಗುರುವಿನಲ್ಲೂ ಭಕ್ತಿಯುಕ್ತನೂ, ರೋಗರಹಿತನೂ ಆಗಿ ಸಮಸ್ತ ಜಂಬೂದ್ವೀಪವನ್ನು ಆಳುತ್ತಾನೆ.

೬೮. ರಹಸ್ಯವೂ ಮತ್ತು ಪಾಪನಾಶಕವೂ ಆದ ಇದನ್ನು ಭಕ್ತಿಯಿಂದ ಯಾವನು ಶ್ರವಣಮಾಡುತ್ತಾನೆಯೋ ಅವನು ಸರ್ವಶ್ರೇಷ್ಠನಾಗಿ ನೂರಾರು ವರ್ಷಗಳ ಕಾಲ ದೇವಲೋಕದಲ್ಲಿ ಪೂಜಿತನಾಗುತ್ತಾನೆ.

೬೯. ಯಥಾವಿಧಿಯಾಗಿ ಹಿರಣ್ಯಗರ್ಭಪಾತ್ರವನ್ನು ಪ್ರವೇಶಿಸಿ ಸುಸಂಸ್ಕೃತ ನಾಗಿ ಹೊರಗೆ ಬಂದು ಅದನ್ನು ವಿಪ್ರವರ್ಯನಿಗೆ ದಾನಮಾಡುವ ಮನುಜನು

ನಿಸ್ಸೃತ್ಯ ತದ್ದ್ವಿಜವರಾಯ ನಿವೇದ್ಯ ಭಕ್ತ್ಯಾ ।
ಮಾರ್ತಂಡವದ್ದಿವಿ ವಿರಾಜತಿ ದಿವ್ಯದೇಹಃ || ೬೯ ||

ಇತಿ ಶ್ರೀ ಭವಿಷ್ಯಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ಹಿರಣ್ಯಗರ್ಭದಾನ ವಿಧಿವರ್ಣನಂ ನಾಮ ಷಟ್ಸಪ್ತತ್ಯುತ್ತರಶತತಮೋಽಧ್ಯಾಯಃ.

---

ಅಂತರಿಕ್ಷದಲ್ಲಿ ಸೂರ್ಯನಂತೆ ದಿವ್ಯದೇಹವನ್ನು ಪಡೆದು ವಿರಾಜಿಸುತ್ತಾನೆ ಎಂಬ ದಾಗಿ ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳಿದನು.

ಇಲ್ಲಿಗೆ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದದಲ್ಲಿ ಹಿರಣ್ಯಗರ್ಭ (ಸುವರ್ಣ) ದಾನವಿಧಿ ವರ್ಣನೆ ಎಂಬ ನೂರ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ

---

|| ಶ್ರೀಕೃಷ್ಣ ಉವಾಚ ||

ಅಗಸ್ತ್ಯೇನ ಪುರಾ ಗೀತೋ ದಾನಾನಾಂ ವಿಧಿರುತ್ತಮಃ ।
ಶೃಣು ತ್ವಂ ರಾಜಶಾರ್ದೂಲ ಕಥ್ಯಮಾನಂ ಮಯಾಧುನಾ || ೧ ||

ಯೇನ ದತ್ತೇನ ರಾಜೇಂದ್ರ ಸರ್ವಂ ಪಾಪಂ ವ್ಯಪೋಹತಿ ।
ಮಾನಸಂ ವಾಚಿಕಂ ವಾಪಿ ಕಾಯಿಕಂ ಚ ಸುದುತ್ತರಂ || ೨ ||

ಮಾಂಗಲ್ಯಂ ಮಂಗಲಂ ಪುಣ್ಯಂ ಸರ್ವದಾನೇಷು ಚೋತ್ತಮಂ ।
ಧನ್ಯಂ ಯಶಸ್ಯಮಾಯುಷ್ಯಂ ಪರಲೋಕಭಯಾಪಹಂ ||
ಬ್ರಹ್ಮಾಂಡಂ ಕಾಂಚನಂ ಕೃತ್ವಾ ಸರ್ವಲಕ್ಷಣಸಂಯುತಂ || ೩ ||

---

### ನೂರಎಪ್ಪತ್ತೇಳನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ರಾಜಶ್ರೇಷ್ಠನಾದ ಯುಧಿಷ್ಠಿರನೇ! ಪೂರ್ವದಲ್ಲಿ ಅಗಸ್ತ್ಯಮಹರ್ಷಿಯು ಉತ್ತಮವಾದ ದಾನದ ವಿಧಿಯೊಂದನ್ನು ನನಗೆ ಹೇಳಿದ್ದನು. ಈಗ ನಿನಗೆ ಅದನ್ನೇ ಹೇಳುತ್ತೇನೆ ಕೇಳು.

೨. ಎಲೈ ರಾಜವರ್ಯನೇ! ಈ ದಾನದಿಂದ ಮನಸ್ಸು, ಮಾತುಗಳು, ಶರೀರ ಈ ಮೂರರಿಂದ ಸಂಘಟಿತವಾದ ಪಾಪಗಳೂ ನಾಶವಾಗುತ್ತವೆ.

೩. ಸಕಲ ಲಕ್ಷಣಯುಕ್ತವಾದ ಸುವರ್ಣಬ್ರಹ್ಮಾಂಡದಾನವು ತಾನು ಮಂಗಳಸ್ವರೂಪವಾಗಿರುವುದಲ್ಲದೆ ಇತರರಿಗೂ ಮಂಗಳದಾಯಕವೂ ಮತ್ತು ಪುಣ್ಯಕರವೂ ಸಕಲ ದಾನಗಳಲ್ಲಿ ಉತ್ತಮವೂ ಧನ್ಯತೆಯನ್ನುಂಟುಮಾಡುವುದೂ ಯಶಸ್ಸನ್ನೂ ಆಯುಸ್ಸನ್ನೂ ವೃದ್ಧಿಪಡಿಸುವುದೂ, ಶತ್ರುಭಯನಾಶಕವೂ ಆದುದೆಂದು ಪ್ರಸಿದ್ಧವಾಗಿದೆ.

ದೇವಾಸುರಮನುಷ್ಯೈಶ್ಚ ಗಂಧರ್ವೋರಗರಾಕ್ಷಸೈಃ ।
ಸಂಯುಕ್ತಂ ಚ ನದೀಭಿಶ್ಚ ಸಮುದ್ರೈಃ ಪರ್ವತೈಸ್ತಥಾ ॥
ವಿಮಾನಶತಕೋಟೀಭಿರ್ಭೂಷಿತಂ ಚಾಪ್ಸರೋವರೈಃ ॥ ೪ ॥

ದಿಗ್ಗಜಾಷ್ಟಕಸಂಯುಕ್ತಂ ಮಧ್ಯಸ್ಥಿತಚತುರ್ಮುಖಂ ।
ಶಿವಾಚ್ಯುತಾರ್ಕಶಿಖರಮಾಲಕ್ಷ್ಮೀಸಮನ್ವಿತಂ ॥ ೫ ॥

ತಸ್ಯಾಂಗೇ ಕಲ್ಪಯೇದ್ರಾಜನ್ ಭುವನಾನಿ ಚತುರ್ದಶ ।
ವಿತಸ್ತೀರಂಗುಲಶತಂ ಯಾವದಾಯಾಮವಿಸ್ತರಂ ॥ ೬ ॥

ಕುರ್ಯಾದ್ವಿಂಶತ್ಪಲಾದೂರ್ಧ್ವಮಾಸಹಸ್ರಾಚ್ಚ ಭಕ್ತಿತಃ ।
ಶಕಲದ್ವಯಸಂಯುಕ್ತಂ ಪುಟಾಕಾರಂ ಸುಸಂಹಿತಂ ॥ ೭ ॥

---

೪. ಈ ಬ್ರಹ್ಮಾಂಡವು ದೇವತೆಗಳು, ಮಾನವರು, ರಾಕ್ಷಸರು, ಮನುಷ್ಯರು, ಗಂಧರ್ವರು, ಸರ್ಪಗಳು ಮತ್ತು ನದಿಗಳು, ಸಮುದ್ರಗಳು, ಪರ್ವತಗಳು ಮತ್ತು ಕೋಟ್ಯಂತರ ವಿಮಾನಗಳು, ಉತ್ತಮರಾದ ಅಪ್ಸರಸ್ತ್ರೀಯರು, ಇವರಿಂದ ಅಲಂಕೃತವಾದುದೂ.

೫. ಅಷ್ಟದಿಗ್ಗಜಗಳಿಂದ ಕೂಡಿದುದೂ, ಮಧ್ಯಭಾಗದಲ್ಲಿ ಬ್ರಹ್ಮ; ಶಿಖರದಲ್ಲಿ ಈಶ್ವರ, ಅಚ್ಯುತ, ಸೂರ್ಯ ಮತ್ತು ಪಾರ್ವತಿ, ಲಕ್ಷ್ಮಿ ಇವರಿಂದ ಕೂಡಿದುದೂ ಆಗಿರಬೇಕು.

೬. ಎಲೈ ಯುಧಿಷ್ಠಿರನೇ! ಇದರ ಹೊರಮೈಯಲ್ಲಿ ಹದಿನಾಲ್ಕು ಭುವನಗಳನ್ನು ರಚಿಸಬೇಕು. ಈ ಹೊರಮೈ ನೂರು ಅಂಗುಲ ಎತ್ತರವೂ ಹನ್ನೆರಡು ಅಂಗುಲ ಸುತ್ತಳತೆಯೂ ಉಳ್ಳದ್ದಾಗಿರಬೇಕು.

೭. ಅದು ಇಪ್ಪತ್ತು ಪಲಗಳಿಗೆ ಮೇಲ್ಪಟ್ಟು ಸಾವಿರ ಪಲದವರೆಗೆ ತೂಕವುಳ್ಳದ್ದಾಗಿಯೂ ಎರಡು ಹೋಳುಗಳು ಕೂಡಿದರೆ ಸಂಪುಟಾಕಾರವಾಗುವಂತೆಯೂ ಇರಬೇಕು.

**ಶಿಲ್ಪಿನಾ ವಿಹಿತಂ ಯಸ್ಮಾದ್ಬ್ರಹ್ಮಾಂಡಂ ಸರ್ವಕಾಮದಂ ।**
**ಅಯನೇ ವಿಷುವೇ ಚೈವ ಚಂದ್ರಾದಿತ್ಯಗ್ರಹೇ ತಥಾ ॥ ೮ ॥**

**ಅನ್ಯೇಷ್ವಪಿ ತು ಕಾಲೇಷು ಶ್ರದ್ಧಾವಿತ್ತಸಮನ್ವಿತಃ ।**
**ಪುಷ್ಪಮಂಡಪಿಕಾಂ ಕೃತ್ವಾ ತತ್ರ ಸಂಸ್ಥಾಪಯೇದ್ಬುಧಃ ॥ ೯ ॥**

**ತಿಲದ್ರೋಣೋಪರಿಗತಂ ಕುಂಕುಮಕ್ಷೋದಚರ್ಚಿತಂ ।**
**ವಾಸೋ ಯುಗ್ಮೇನ ಸಂಛಾದ್ಯ ಪುಷ್ಪಗಂಧಾಧಿವಾಸಿತಂ ॥ ೧೦ ॥**

**ತಸ್ಯ ದಿಕ್ಷು ಚ ಸರ್ವಾಸು ಪೂರ್ಣಕುಂಭಾಂಶ್ಚ ವಿನ್ಯಸೇತ್ ।**
**ಅಷ್ಟಾದಶೈವ ಧಾನ್ಯಾನಿ ದ್ರೋಣಮಾತ್ರಾಣ್ಯಥಾಹರೇತ್ ॥ ೧೧ ॥**

---

೮. ಈರೀತಿಯಾಗಿ ಬ್ರಹ್ಮಾಂಡವು ಶಿಲ್ಪಿಯಿಂದ ನಿರ್ಮಿಸಲ್ಪಡಬೇಕು. ಈ ದಾನವು ಸಕಲ ಇಷ್ಟಾರ್ಥಗಳನ್ನೂ ಸಿದ್ಧಿಮಾಡಿಕೊಡುತ್ತದೆ. ಇದನ್ನು ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳಲ್ಲಿಯೂ, ವಿಷುವತ್‌ಪುಣ್ಯಕಾಲದಲ್ಲಿಯೂ, ಚಂದ್ರಗ್ರಹಣ ಮತ್ತು ಸೂರ್ಯಗ್ರಹಣ ಕಾಲದಲ್ಲಿಯೂ ಮಾಡಬಹುದು.

೯. ಅಥವಾ ಧನವು ಅನುಕೂಲವಾಗಿ ಒದಗಿ ಶ್ರದ್ಧೆಹುಟ್ಟಿದ ಇತರ ಕಾಲಗಳಲ್ಲಿಯೂ ಕೂಡ ಮಾಡಬಹುದು. ಮೊದಲು ಹೂವಿನ ಮಂಟಪವನ್ನು ನಿರ್ಮಿಸಿ ಅಲ್ಲಿ ಸ್ವರ್ಣಬ್ರಹ್ಮಾಂಡವನ್ನು ಸ್ಥಾಪಿಸಬೇಕು.

೧೦. ಒಂದು ದ್ರೋಣ ಎಳ್ಳನ್ನು ಹರಡಿ ಅದರ ಮೇಲೆ ಆ ಬ್ರಹ್ಮಾಂಡವನ್ನು ಇರಿಸಬೇಕು. ಮತ್ತು ಕುಂಕುಮಕೇಸರಿಯನ್ನು ತೆಯ್ದು ಆ ದ್ರವದಿಂದ ಲೇಪಿಸಬೇಕು. ಮತ್ತು ಎರಡು ವಸ್ತ್ರಗಳನ್ನು ಹೊದ್ದಿಸಬೇಕು. ಹೂ, ಗಂಧ ಇತ್ಯಾದಿಗಳಲ್ಲಿ ಅದನ್ನು ಅಧಿವಾಸಮಾಡಿಸಬೇಕು.

೧೧. ಅದರ ಸಕಲ ದಿಕ್ಕುಗಳಲ್ಲಿಯೂ ಪೂರ್ಣಕುಂಭಗಳನ್ನು ಇರಿಸಬೇಕು. ಪ್ರತಿಯೊಂದೂ ಒಂದೊಂದು ದ್ರೋಣಪರಿಮಾಣವುಳ್ಳ ಹಾಗೆ ಹದಿನೆಂಟು ಧಾನ್ಯಗಳನ್ನು ತಂದಿರಿಸಬೇಕು.

ಗೃಹೇ ವಾ ಮಂಡಪೇ ವಾಪಿ ಸ್ಥಾಪಯೇತ್ತದ್ವಿಚಕ್ಷಣಃ ।
ಪಾದುಕೋಪಾನಹಚ್ಛತ್ರ ಭಾಜನಾಸನದರ್ಪಣೈಃ ॥ ೧೨ ॥

ಸಂಯುಕ್ತಂ ಕಾರಯೇತ್ತತ್ರಪಯಸ್ವಿನ್ಯಾ ತಥೈವ ಚ ।
ಕಾರಯೇತ್ಕುಂಡಮೇಕಂ ತು ಹಸ್ತಮಾತ್ರಂ ವಿಧಾನತಃ ॥ ೧೩ ॥

ಚತುಶ್ಚಾರಣಿಕಾಸ್ತತ್ರ ಹೋಮಂ ಕುರ್ಯುರ್ದ್ವಿಜೋತ್ತಮಾಃ ।
ಸರ್ವಾಭರಣಸಂಪನ್ನಾಃ ಸುಸ್ನಾತಾಹತವಾಸಸಃ ॥ ೧೪ ॥

ಪ್ರಚರೇಯುರ್ದ್ವಿಜಾಸ್ತತ್ರ ಉದಾಧ್ಯಾಯಸಮನ್ವಿತಾಃ ।
ತಥಾ ಪುರೋಹಿತಶ್ಚೈವ ರಾಜ್ಞ್ಯಾ ಷಷ್ಠೋ ವಿಧೀಯತೇ ॥ ೧೫ ॥

ಇತರೇಷಾಂ ತು ಪಂಚೈವ ಕುರ್ಯುರ್ಯಜ್ಞಮತಂದ್ರಿತಾಃ ।
ಗ್ರಹಯಜ್ಞವಿಧಾನೇನ ಗ್ರಹಾಣಾಂ ಯಜ್ಞ್ಯ ಇಷ್ಯತೇ ॥ ೧೬ ॥

---

೧೨-೧೩. ಪ್ರಾಜ್ಞನು ಇದನ್ನು ಮೇಲೆ ಹೇಳಿದಂತೆ ಮಂಡಪ ಅಥವಾ ಗೃಹದಲ್ಲಿ ಇಡಬೇಕು. ಇದರ ಜೊತೆಯಲ್ಲಿ ಪಾದರಕ್ಷೆಗಳು, ಛತ್ರಿ, ಪಾತ್ರೆ, ಆಸನ, ಕನ್ನಡಿ, ಚೆನ್ನಾಗಿ ಹಾಲನ್ನು ಕೊಡತಕ್ಕ ಒಂದು ಹಸು(ಎಳಗರುಸಮೇತ) ಇವುಗಳನ್ನೂ ದಾನಕ್ಕೆ ಸಿದ್ಧಮಾಡಿ ಇರಿಸಬೇಕು. ಬಳಿಕ ಒಂದುಹಸ್ತ ಚತುರಸ್ರವುಳ್ಳ ಒಂದು ಕುಂಡವನ್ನು ವಿಧಿಯಂತೆ ಸಲಕ್ಷಣವಾಗಿ ರಚಿಸಬೇಕು.

೧೪. ನಾಲ್ಕು ಅರಣಿಯನ್ನು ಮಥಿಸಿ ಅಗ್ನಿಯನ್ನು ಮಾಡುವ ನಾಲ್ಕು ಮಂದಿಗಳನ್ನು ಗೊತ್ತುಮಾಡಬೇಕು. ಅವರು ಸಕಲ ಆಭರಣಾದಿಗಳಿಂದ ಅಲಂಕೃತರೂ, ಶುಭ್ರವಾದ(ಮಡಿ) ವಸ್ತ್ರಧಾರಿಗಳೂ ಆಗಿರಬೇಕು. ಆ ಬ್ರಾಹ್ಮಣರು ಮಥಿಸಿದ ಅಗ್ನಿಯನ್ನು ಆ ಕುಂಡದಲ್ಲಿ ಸ್ಥಾಪಿಸಿ ಹೋಮಮಾಡಬೇಕು.

೧೫. ವಿಪ್ರರು ಮಾಡುವ ಹೋಮಕ್ಕೆ ಈ ನಾಲ್ಕು ದ್ವಿಜರು ಸಾಕು, ರಾಜರು ಮಾಡುವ ಯಜ್ಞಕ್ಕೆ ಒಬ್ಬ ಉಪಾಧ್ಯಾಯ, ಒಬ್ಬ ಪುರೋಹಿತ ಇವರೂ ಸೇರಿ ಆರುಜನರಿರಬೇಕು.

೧೬. ಇತರರು ಮಾಡಿಸುವಾಗ ಐದು ಜನಗಳೇ ಈ ಯಜ್ಞವನ್ನು ಮಾಡಬೇಕು. ಈ ಹೋಮದಲ್ಲೂ ಗ್ರಹಯಜ್ಞವಿಧಿಯಂತೆಯೇ ಗ್ರಹಗಳಿಗೆ ಆಹುತಿ ಕೊಡಬೇಕೆಂದು ಉಕ್ತವಾಗಿದೆ.

ಬ್ರಹ್ಮವಿಷ್ಣುಶಿವಾನಾಂ ಚ ತನ್ನಾಮ್ನಾ ಜುಹುಯಾತ್ತಿಲಾನ್ ।
ಅಯುತಂ ಹೋಮಯೇತ್ಪಶ್ಚಾನ್ಮಹಾವ್ಯಾಹೃತಿಭಿರ್ನೃಪ ॥ ೧೭ ॥

ರುದ್ರಜಾಪಸ್ತು ಕರ್ತವ್ಯಸ್ತಸ್ಯೈವಾನಂತರಂ ದ್ವಿಜೈಃ
ತತಃ ಸರ್ವಸಮಾಪ್ತೌ ತು ಸ್ನಾತ್ವಾ ಶುಕ್ಲಾಂಬರಃ ಶುಚಿಃ ॥ ೧೮ ॥

ಬ್ರಹ್ಮಾಂಡಂ ಪೂಜಯೇದ್ಭಕ್ತ್ಯಾ ಗೃಹೀತಕುಸುಮಾಂಜಲಿಃ ।
ನಮೋ ಜಗತ್ಪ್ರತಿಷ್ಠಾಯ ವಿಶ್ವಧಾಮ್ನೇ ನಮೋಽಸ್ತು ತೇ ॥ ೧೯ ॥

ವಾಙ್ಮಯಾಂತನಿಮಗ್ನಾಯ ಬ್ರಹ್ಮಾಂಡ ಶುಭಕೃದ್ಭವ ।
ಬ್ರಹ್ಮಾಂಡೋದರವರ್ತೀನಿ ಯಾನಿ ಸತ್ತ್ವಾನಿ ಕಾನಿಚಿತ್ ॥ ೨೦ ॥

ತಾನಿ ಸರ್ವಾಣಿ ಮೇ ತುಷ್ಟಿಂ ಪ್ರಯಚ್ಛಂತ್ವತುಲಾಂ ಸದಾ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಲೋಕಪಾಲಾಸ್ತಥಾ ಗ್ರಹಾಃ ॥ ೨೧ ॥

---

೧೭. ಬ್ರಹ್ಮ, ವಿಷ್ಣು, ಈಶ್ವರ ಇವರಿಗೆ ಅವರವರ ನಾಮವನ್ನುಚ್ಚರಿಸಿ ಮಹಾವ್ಯಾಹೃತಿಮಂತ್ರಪೂರ್ವಕವಾಗಿ ಒಂದು ಆಯುತ (ಹತ್ತುಸಾವಿರ) ಸಂಖ್ಯೆಯ ತಿಲಹೋಮವನ್ನು ಮಾಡಬೇಕು.

೧೮-೧೯. ಅನಂತರ ಬ್ರಾಹ್ಮಣರಿಂದ ರುದ್ರಜಪವನ್ನು ಮಾಡಿಸಬೇಕು. ಈರೀತಿ ಎಲ್ಲವೂ ಸಮಾಪ್ತಿಯಾದ ಮೇಲೆ ಸ್ನಾನಮಾಡಿ ಶುಚಿಯಾದ ವಸ್ತ್ರವನ್ನು ಧರಿಸಿ ಶುಚಿಯಾಗಿ, ಹೂವನ್ನು ಬೊಗಸೆಯಲ್ಲಿ ಹಿಡಿದುಕೊಂಡವನಾಗಿ “ ಜಗತ್ತಿನಲ್ಲಿ ಪ್ರತಿಷ್ಠಿತವಾಗಿಯೂ, ಪ್ರಪಂಚಕ್ಕೆ ತೇಜೋದಾಯಕವಾಗಿಯೂ ಇರುವ ನಿನಗೆ ನಮಸ್ಕಾರ ” ಎಂದು ಆ ಬ್ರಹ್ಮಾಂಡವನ್ನು ಪೂಜಿಸಬೇಕು

೨೦-೨೨. ಎಲೈ ವೇದಾಂತಶಾಸ್ತ್ರ ನಿರೂಪಿತವಾದ ಬ್ರಹ್ಮಾಂಡವೇ! ನನಗೆ ಮಂಗಳವನ್ನುಂಟುಮಾಡು. ಬ್ರಹ್ಮಾಂಡದ ಮಧ್ಯಭಾಗದಲ್ಲಿ ಇರತಕ್ಕ ಸಮಸ್ತ ಸತ್ವಗಳೂ ನನಗೆ ಅಸದೃಶವಾದ ತುಷ್ಟಿಯನ್ನುಂಟುಮಾಡಲಿ. ಬ್ರಹ್ಮ, ವಿಷ್ಣು, ಈಶ್ವರ, ಲೋಕಪಾಲಕರು, ನಕ್ಷತ್ರಗಳು ಮತ್ತು ಸರ್ಪಗಳು,

**ನಕ್ಷತ್ರಾಣಿ ತಥಾ ನಾಗಾ ಋಷಯೋ ಮರುತಸ್ತಥಾ ।**
**ಸರ್ವೇ ಭವಂತು ಸಂತುಷ್ಟಾಃ ಸಪ್ತಜನ್ಮಾಂತರಾಣಿ ಮೇ　　॥ ೨೨ ॥**

**ಇತ್ಯುಚ್ಚಾರ್ಯ ತತೋ ದದ್ಯಾದ್ಬ್ರಹ್ಮಾಂಡಂ ಸರ್ವಕಾಮದಂ ।**
**ಸದಕ್ಷಿಣಂ ಚ ತಂ ಕೃತ್ವಾ ವಸು ಸಂಪಾದಯೇದ್ದ್ವಿಜಾನ್　　॥ ೨೩ ॥**

**ಅನೇನ ವಿಧಿನಾ ದತ್ವಾ ಯತ್ಪುಣ್ಯಂ ಸ್ಯಾನ್ನರೋತ್ತಮ ।**
**ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ಗದತೋ ಮಮ　　॥ ೨೪ ॥**

**ಆಸೀದಾದಿಯುಗೇ ರಾಜಾ ಸುದ್ಯುಮ್ನೋ ನಾಮ ಭಾರತ ।**
**ನಾಗಾಯುತಬಲಃ ಶ್ರೀಮಾನ್ಬಹುಭೃತ್ಯಪರಿಚ್ಛದಃ　　॥ ೨೫ ॥**

**ತ್ರಿಂಶದ್ವರ್ಷಸಹಸ್ರಾಣಿ ಕೃತ್ವಾ ರಾಜ್ಯಮಕಂಟಕಂ ।**
**ತತಃ ಸಂಸ್ಥಾಪ್ಯ ತನಯಂ ರಾಜಾ ರಾಜ್ಯೇ ವನಂ ಯಯೌ　　॥ ೨೬ ॥**

---

ಋಷಿಗಳು, ಮಾರುತಗಳು ಇವುಗಳೆಲ್ಲವೂ ತೃಪ್ತಗಳಾಗಿ ನನಗೆ ಏಳುಜನ್ಮಗಳಲ್ಲಿಯೂ ಮಂಗಳವನ್ನುಂಟುಮಾಡಲಿ.

೨೩. ಈರೀತಿ ಹೇಳಿ ಸಕಲ ಇಷ್ಟಾರ್ಥಗಳನ್ನೂ ಸಂಪಾದಿಸಿಕೊಡುವ ಆ ಬ್ರಹ್ಮಾಂಡವನ್ನು ದಕ್ಷಿಣೆಯೊಡನೆ ಬ್ರಾಹ್ಮಣರಿಗೆ ದಾನಮಾಡಬೇಕು. ಇದರಿಂದ ಸಮೃದ್ಧಿಯಾದ ಐಶ್ವರ್ಯವು ಲಭಿಸುತ್ತದೆ.

೨೪. ಎಲೈ ಯುಧಿಷ್ಠಿರನೇ! ಈ ವಿಧಾನದಿಂದ ದಾನಮಾಡಿದರೆ ಲಭಿಸತಕ್ಕ ಪುಣ್ಯವೆಂಥದೆಂಬುದಕ್ಕೆ ನಿದರ್ಶನವನ್ನು ಹೇಳುತ್ತೇನೆ ಕೇಳು.

೨೫. ಎಲೈ ಯುಧಿಷ್ಠಿರನೇ! ಕೃತಯುಗದಲ್ಲಿ ಸುದ್ಯುಮ್ನನೆಂದು ಪ್ರಸಿದ್ಧನಾದ ರಾಜನು ಹತ್ತುಸಾವಿರ ಆನೆಗಳಷ್ಟು ಬಲಶಾಲಿಯಾಗಿಯೂ ಮತ್ತು ಅನೇಕ ಸೇವಕರಿಂದ ಸುತ್ತುವರಿಯಲ್ಪಟ್ಟವನಾಗಿಯೂ, ಸಂಪದ್ಯುಕ್ತನಾಗಿಯೂ ಇದ್ದನು.

೨೬. ಆತನು ಮೂವತ್ತು ಸಹಸ್ರವರ್ಷಗಳು ನಿಷ್ಕಂಟಕವಾಗಿ ರಾಜ್ಯವನ್ನಾಳಿ ಅನಂತರ ರಾಜ್ಯಭಾರವನ್ನು ತನ್ನ ಮಗನಿಗೆ ವಹಿಸಿ ತಾನು ಕಾಡಿಗೆ ಹೋದನು.

ಪ್ರವಿಶ್ಯ ಚ ವನಂ ಘೋರಂ ತಪಸ್ತೀವ್ರಂ ಚಚಾರಹ ।
ಅಧ್ಯಾತ್ಮಗತಿತತ್ವಜ್ಞಃ ಕರ್ಮಕಾಂಡಂ ವಿಸೃಜ್ಯ ಚ ॥ ೨೭ ॥

ಕಾಲೇನ ಮಹತಾ ರಾಜಾ ದಿಷ್ಟಾಂತಮಗಮತ್ಪುರಾ ।
ದಿವ್ಯಂ ವಿಮಾನಮಾರುಹ್ಯ ನಾನಾ ವಾದ್ಯರವಾಕುಲಂ ॥ ೨೮ ॥

ಅತೀತ್ಯ ಶಕ್ರಲೋಕಾದೀನ್ ಬ್ರಹ್ಮಲೋಕಮತೋ ಗತಃ ।
ತಸ್ಯಾಸನಂ ದಿದೇಶಾಥ ಬ್ರಹ್ಮಾ ಸುರಗಣೈರ್ವೃತಃ ॥ ೨೯ ॥

ದಿವ್ಯಂ ಕನಕಚಿತ್ರಾಂಗಂ ರತ್ನಾಲಂಕೃತವಿಗ್ರಹಂ ।
ಏವಂ ಲೋಕವರೇ ತಸ್ಮಿನ್ರಮಮಾಣೋ ನೃಪೋತ್ತಮ ॥ ೩೦ ॥

---

೨೭. ವನಕ್ಕೆ ತೆರಳಿದ ಆತನು ತೀವ್ರವಾಗಿ ತಪಸ್ಸುಮಾಡಿದನು. ಇದರಿಂದ ಆತನಿಗೆ ಪರಮಾತ್ಮವಿಷಯಕವಾದ ಜ್ಞಾನವುಂಟಾಯಿತು. ಈತನು ಅದರ ತತ್ವವನ್ನು ತಿಳಿದವನಾಗಿ ಕರ್ಮಕಾಂಡವನ್ನು ತ್ಯಜಿಸಿದನು.

೨೮. ಆ ರಾಜನು ಬಹುಕಾಲದ ಅನಂತರ ಪಾಂಚಭೌತಿಕ ದೇಹತ್ಯಾಗ ಮಾಡಿ ಅನೇಕ ವಿಧವಾದ ವಾದ್ಯಧ್ವನಿಗಳಿಂದ ಕೂಡಿದ ದಿವ್ಯ ವಿಮಾನವನ್ನು ಹತ್ತಿ ಸ್ವರ್ಗಲೋಕಕ್ಕೆ ಹೋದನು.

೨೯. ಇಂದ್ರಲೋಕವೇ ಮೊದಲಾದುವನ್ನು ದಾಟಿ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ದೇವತೆಗಳಿಂದ ಪರಿವೃತನಾಗಿದ್ದ ಬ್ರಹ್ಮನು ಇವನನ್ನು ಸ್ವಾಗತಿಸಿ ಕುಳ್ಳಿರಲು ಆಸನವನ್ನು ತೋರಿಸಿದನು.

೩೦. ಆ ಆಸನವು ಅಲ್ಲಲ್ಲಿ ಚಿತ್ರಚಿತ್ರವಾದ ಚಿನ್ನದ ನಕಾಸೆಯ ಕೆಲಸದಿಂದಲೂ ಮತ್ತುರತ್ನಗಳ ಮೆಟ್ಟಿರುವಿಕೆಯಿಂದಲೂ ಮನೋಹರವಾಗಿ ಅಲಂಕರಿಸಲ್ಪಟ್ಟಿತ್ತು. ಎಲೈ ಯುಧಿಷ್ಠಿರನೇ! ಸುಂದರವಾದ ಆ ಲೋಕದಲ್ಲಿ ಆ ರಾಜನು ರಮಿಸುತ್ತಿದ್ದನು.

**ಆಸ್ತೇ ಚಾನುದಿನಂ ಸೋಽಥ ದಿವ್ಯಭೋಗವಿವರ್ಜಿತಃ ।**
**ವಸತಸ್ತಸ್ಯ ರಾಜ್ಞಸ್ತು ಶರೀರಂ ಪರಿತಪ್ಯತೇ ॥ ೩೧ ॥**

**ಬುಭುಕ್ಷಯಾ ನರಶ್ರೇಷ್ಠ ತಥಾತ್ಯಂತಪಿಪಾಸಯಾ ।**
**ಸ ಪೀಡ್ಯಮಾನೋ ಬ್ರಹ್ಮಾಣಂ ಕೃತಾಂಜಲಿರಭಾಷತ ॥ ೩೨ ॥**

**ಭಗವನ್ ಬ್ರಹ್ಮಲೋಕೋಽಯಂ ಸರ್ವದೋಷವಿವರ್ಜಿತಃ ।**
**ಅತ್ರ ಸ್ಥಿತಂ ಚ ಮಾಂ ದೇವ ಕ್ಷುತ್ತೃಷ್ಣಾ ಚ ಪ್ರಬಾಧತೆ ॥ ೩೩ ॥**

**ಕೇನ ಕರ್ಮ ವಿಪಾಕೇನ ಕ್ಷುಧಾ ಮೇ ನಾಪಸರ್ಪತಿ ।**
**ಬ್ರಹ್ಮಲೋಕೇ ಗತಸ್ಯಾಪಿ ಸಂಶಯಂ ಛೇತ್ತುಮರ್ಹಸಿ ॥ ೩೪ ॥**

**॥ ಬ್ರಹ್ಮೋವಾಚ ॥**

**ತ್ವಯಾ ಹಿ ಕುರ್ವತಾ ರಾಜ್ಯಂ ಪುಷ್ಟಾನ್ಯಂಗಾನಿ ಪಾರ್ಥಿವ ।**
**ನೈವ ದತ್ತಂ ತು ಬಹುಲಮಾತ್ಮವಾದರತೇನ ವೈ ॥ ೩೫ ॥**

---

೩೧. ಹೀಗೆಯೇ ಇರುತ್ತಿರಲಾಗಿ ಆತನಿಗೆ ಆ ದಿವ್ಯವಾದ ಸುಖಾನುಭವಗಳು ತಪ್ಪಿಹೋಗುತ್ತಾ ಬಂದುವು. ಮತ್ತು ಆತನ ಶರೀರವು ಪರಿತಪಿಸಹತ್ತಿತ್ತು.

೩೨. ಎಲೈ ರಾಜನೇ! ಆತನು ಹಸಿವು ಬಾಯಾರಿಕೆಗಳಿಂದ ಬಹುವಾಗಿ ಬಳಲಿದನು. ಆಧುದರಿಂದ ಅಂಜಲಿಬದ್ಧನಾಗಿ ಬ್ರಹ್ಮನನ್ನು ಕುರಿತು ಇಂತೆಂದನು.

೩೩. ಎಲೈ ಬ್ರಹ್ಮನೇ! ಇದು ಕ್ಲೇಶಾದಿ ಸಕಲ ದೋಷಗಳಿಂದಲೂ ಬಿಡಲ್ಪಟ್ಟಿರುವ ಬ್ರಹ್ಮಲೋಕವು. ಇಂಥದ್ದರಲ್ಲಿ ಇಲ್ಲಿರುವ ನನ್ನನ್ನೂ ಹಸಿವು ಬಾಯಾರಿಕೆಗಳು ಹಿಂಸಿಸುತ್ತವೆಯೆಲ್ಲಾ.

೩೪. ನಾನು ಈ ಬ್ರಹ್ಮಲೋಕಕ್ಕೆ ಬಂದರೂ ಸಹ ನನಗೆ ಹಸಿವು ಹೋಗಲಿಲ್ಲ. ಇದು ಯಾವ ಕರ್ಮದ ಫಲವು? ಈ ಸಂಶಯುವನ್ನು ನೀನು ಪರಿಹಾರ ಮಾಡು ಎಂಬದಾಗಿ ಬ್ರಹ್ಮನನ್ನು ಕುರಿತು ಕೇಳಿದನು.

೩೫. ಬ್ರಹ್ಮನು ಹೇಳುತ್ತಾನೆ—ಎಲೈ ಯುಧಿಷ್ಠಿರನೇ! ಬ್ರಹ್ಮನು ಆ ರಾಜನನ್ನು ಕುರಿತು ಎಲೈ, ನೀನು ವೈಭವದಿಂದ ರಾಜ್ಯಭಾರಮಾಡಿದರೂ ಕೇವಲ ಬ್ರಹ್ಮನಲ್ಲಿಯೇ ಆಸಕ್ತನಾಗಿದ್ದೆ. ಆದುದರಿಂದ ನೀನು ವಿಶೇಷವಾಗಿ ದಾನವೇನನ್ನೂ ಮಾಡಲಿಲ್ಲ.

ದಾನಂ ಬಂಧಾತ್ಮಕಂ ಮತ್ವಾ ತಸ್ಮಾದ್ದತ್ತಂ ತ್ವಯಾ ನ ಹಿ ।
ಜ್ಞಾನಾದ್ಬ್ರಹ್ಮಪದಂ ಪ್ರಾಪ್ತಮದಾನಾತ್ ಕ್ಷುತ್ಪ್ರಬಾಧತೇ ॥ ೩೦ ॥

॥ ರಾಜೋವಾಚ ॥

ಭಗವಂಸ್ತೃಷಾಪನುತ್ತಿಃ ಸ್ಯಾತ್ಕಥಂ ಮೇ ಪರಮೇಶ್ವರ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೩೭ ॥

॥ ಬ್ರಹ್ಮೋವಾಚ ॥

ಭೂಯೋ ಗತ್ವಾ ಮಹೀಂ ರಾಜನ್ ಬ್ರಹ್ಮಾಂಡಂ ಸಾರ್ವಕಾಮಿಕಂ ।
ಪ್ರಯಚ್ಛ ದ್ವಿಜಮುಖ್ಯಾನಾಂ ತೇನ ತೃಪ್ತಿಮವಾಪ್ಸ್ಯಸಿ ॥ ೩೮ ॥

ಇತ್ಯುಕ್ತಃ ಸಮ್ಯಗಾಗತ್ಯ ಮರ್ತ್ಯಲೋಕಂ ಮಹೀಪತಿಃ ।
ಬ್ರಹ್ಮಾಂಡಂ ತು ವಿಧಾನೇನ ಬ್ರಾಹ್ಮಣೇಭ್ಯಃ ಪ್ರದತ್ತವಾನ್ ॥ ೩೯ ॥

---

೩೬. ದಾನಮಾಡುವುದು ಪುನಃ ಭವಬಂಧನಕರವೆಂದು ತಿಳಿದು ನೀನು ದಾನವನ್ನು ಮಾಡಲಿಲ್ಲ. ಬ್ರಹ್ಮಜ್ಞಾನಿರತನಾದುದರಿಂದ ನಿನಗೆ ಬ್ರಹ್ಮಲೋಕವು ದೊರಕಿತಾದರೂ ದಾನದೂಡದೇ ಇದ್ದ ಪ್ರಯುಕ್ತ ಹಸಿವು ನಿನ್ನನ್ನು ಬಾಧಿಸುತ್ತದೆ ಎಂದನು.

೩೭. ರಾಜನು ಬ್ರಹ್ಮನನ್ನು ಪ್ರಶ್ನಿಸುತ್ತಾ—ಎಲೈ ಬ್ರಹ್ಮನೇ! ಏನು ಮಾಡಿದರೆ ನನಗೆ ಬಾಯಾರಿಕೆಯು ಪರಿಹಾರವಾಗುತ್ತದೆ? ಎಂಬುದನ್ನು ಅನುಗ್ರಹಮಾಡಿ ಉಪದೇಶಿಸು ಎಂದು ಕೇಳಿದನು.

೩೮. ಬ್ರಹ್ಮನು ಹೇಳುತ್ತಾನೆ—ಎಲೈ ರಾಜನೇ! ಈ ಕರ್ಮವನ್ನು ಆಚರಿಸಲು ಭೂಲೋಕಕ್ಕೆ ಪುನಃ ಹಿಂತಿರುಗಿ ಹೋಗಿ ದ್ವಿಜವರ್ಯರಿಗೆ ಸಕಲ ಇಷ್ಟಾರ್ಥಪ್ರದವಾದ ಬ್ರಹ್ಮಾಂಡದಾನಮಾಡು. ಇದರಿಂದ ನಿನಗೆ ತೃಪ್ತಿಯುಂಟಾಗುತ್ತದೆ ಎಂಬದಾಗಿ ಹೇಳಿದನು.

೩೯. ಬ್ರಹ್ಮನಿಂದ ಈರೀತಿ ಆಜ್ಞಪ್ತನಾದ ಆ ರಾಜನು ಒಡನೆಯೇ ಭೂಲೋಕಕ್ಕೆ ಹಿಂದಿರುಗಿ ಬಂದು ಬ್ರಾಹ್ಮಣರಿಗೆ ಯಥಾವಿಧಿಯಾಗಿ ಸ್ವರ್ಣ ಬ್ರಹ್ಮಾಂಡದ ದಾನವನ್ನು ಮಾಡಿದನು.

**ಸ ಜಗಾಮ ಪುನಃ ಸ್ವರ್ಗಂ ಲೇಭೇ ತೃಪ್ತಿಂ ಚ ಶಾಶ್ವತೀಂ ।**
**ಏತತ್ತೇ ಸರ್ವಮಾಖ್ಯಾತಂ ಮಹಾದಾನಸ್ಯ ಯತ್ಫಲಂ ॥ ೪೦ ॥**

**ಬ್ರಹ್ಮಾಂಡಂ ಯಃ ಪ್ರಯಚ್ಛೇತ ತೇನ ದತ್ತಂ ಚರಾಚರಂ ।**
**ಸಪ್ತಾವರಾನ್ ಸಪ್ತಪರಾನ್ ಸಪ್ತಚೈವ ಪರಾವರಾನ್ ॥ ೪೧ ॥**

**ತಾರಯೇತ್ಕುಲಜಾನ್ ದತ್ವಾ ಭವಿಷ್ಯಾಂಶ್ಚ ನ ಸಂಶಯಃ ।**
**ಮನ್ವಂತರಾಣಿ ಷಟ್ತ್ರಿಂಶದ್ಬ್ರಹ್ಮಲೋಕೇ ಮಹೀಯತೇ ॥ ೪೨ ॥**

**ಪುನರ್ಮಾನುಷಮಭ್ಯೇತ್ಯ ಧಾರ್ಮಿಕೋ ಜಾಯತೇ ಕುಲೇ ।**
**ನ ದಾರಿದ್ರ್ಯಂ ನ ಚ ವ್ಯಾಧಿಂ ವಿಯೋಗಂ ನೈವ ಪಶ್ಯತಿ ॥ ೪೩ ॥**

**ನಾರೀ ವಾ ಪುರುಷೋವಾಽಪಿ ದಾನಸ್ಯಾಸ್ಯ ಪ್ರಭಾವತಃ ।**
**ಯಶ್ಚೈತಚ್ಛೃಣುಯಾದ್ಭಕ್ತ್ಯಾ ಭಕ್ತಾನಾಂಶ್ರಾವಯೇಚ್ಚಯಃ ॥೪೪॥**

---

೪೦. ಬಳಿಕ ಆ ರಾಜನು ಸ್ವರ್ಗಕ್ಕೆ ಹೋಗಿ ಶಾಶ್ವತವಾದ ತೃಪ್ತಿಯನ್ನು ಪಡೆದನು. ಈ ಮಹಾದಾನದ ಎಲ್ಲ ಫಲವನ್ನೂ ಈ ರೀತಿ ನಿನಗೆ ವಿವರಿಸಿರುತ್ತೇನೆ.

೪೧-೪೨. ಆದುದರಿಂದ ಯಾವ ಮನುಜನು ಸ್ವರ್ಣಬ್ರಹ್ಮಾಂಡವನ್ನು ದಾನಮಾಡುವನೋ ಅವನು ಚರಾಚರವಾದ ಸಕಲವನ್ನೂ ದಾನಮಾಡಿದಂತಾಗುತ್ತದೆ. ಮತ್ತು ಅವನು ತನ್ನ ಹಿಂದಿನ ಏಳು ತಲೆಮಾರಿನವರು ಮತ್ತು ಮುಂದಿನ ಏಳು ತಲೆಮಾರಿನಲ್ಲಿ ಉತ್ಪನ್ನರಾಗುವವರು ಇವರನ್ನು ದಾಟಿಸಿದಂತಾಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಮತ್ತು ಆತನು ಮೂವತ್ತಾರು (36) ಮನ್ವಂತರಗಳು ಬ್ರಹ್ಮಲೋಕದಲ್ಲಿ ಪೂಜಿತನಾಗುತ್ತಾನೆ.

೪೩. ಅನಂತರ ಮನುಷ್ಯಜನ್ಮವನ್ನು ಪಡೆದು ಧರ್ಮನಿರತರ ವಂಶದಲ್ಲಿ ಹುಟ್ಟುತ್ತಾನೆ. ಆಗ ಆತನಿಗೆ ದಾರಿದ್ರ್ಯ, ವ್ಯಾಧಿ ಅಥವಾ ವಿಯೋಗ ಇವು ಯಾವುವೂ ಸಂಭವಿಸಲಾರವು.

೪೪. ನಾರಿಯೇ ಆಗಲಿ, ಪುರುಷನೇ ಆಗಲಿ ಈ ದಾನದ ಮಾಹಾತ್ಮ್ಯೆಯನ್ನು ಭಕ್ತಿಯಿಂದ ಕೇಳಿದರೂ ಅಥವಾ ಭಕ್ತರಾದವರಿಗೆ ತಿಳಿಸಿದರೂ.

ಸೋऽಪಿ ಸದ್ಗತಿಮಾಪ್ನೋತಿ ಕಿಂ ಪುನರ್ಯಃ ಪ್ರಯಚ್ಛತಿ ॥ ೪೫ ॥

ಬ್ರಹ್ಮಾಂಡಖಂಡಯುಗಲಂ ಸಕುಲಾಚಲಂ ಚ ।
ದಿಗ್ಭಾಗಸಾಗರಸರೋವರಸಿದ್ಧಜುಷ್ಟಂ ॥
ದಿಕ್ಸಂಖ್ಯಯಾ ಗುಣವತಾಂ ದ್ವಿಜಸತ್ತಮಾನಾಂ ।
ದತ್ವಾ ಪುಮಾನ್ ಪದಮುಪೈತಿ ಪಿತಾಮಹಸ್ಯ ॥ ೪೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಶ್ರೀಕೃಷ್ಣಯುಧಿಷ್ಠಿರ ಸಂವಾದೇ
ಬ್ರಹ್ಮಾಂಡದಾನವಿಧಿವರ್ಣನಂ
ನಾಮ ಸಪ್ತಸಪ್ತತ್ಯುತ್ತರಶತತಮೋऽಧ್ಯಾಯಃ.



೪೫. ಅಂತಹವನೂ ಕೂಡ ಸದ್ಗತಿಯನ್ನು ಪಡೆಯುತ್ತಾನೆ. ಹೀಗಿರುವಲ್ಲಿ ಈ ಬ್ರಹ್ಮಾಂಡವನ್ನು ದಾನಮಾಡಿದ ಮಾನವನು ಸದ್ಗತಿಯನ್ನು ಪಡೆಯುತ್ತಾನೆಂದು ಹೇಳಬೇಕೆ?

೪೬. ಸಿದ್ಧಾದಿಗಳಿಂದ ಸೇವಿತವಾದ ಸಾಗರ, ಸರೋವರ, ಕುಲಪರ್ವತಗಳಿಂದ ಆವೃತವಾಗಿರತಕ್ಕ ಬ್ರಹ್ಮಾಂಡ ಯುಗಲ (ಎರಡುಹೋಳು ಬ್ರಹ್ಮಾಂಡವನ್ನು) ವನ್ನು ದಿಕ್ಕುಗಳ ಸಂಖ್ಯೆಯನ್ನನುಸರಿಸಿ ಹತ್ತುಜನ ಸದ್ಗುಣವುಳ್ಳ ವಿಪ್ರವರ್ಯರಿಗೆ ಪ್ರತಿ ದಿಕ್ಕುಗಳಲ್ಲಿಯೂ ದಾನಮಾಡಿದ ಮನುಜನು ಶಾಶ್ವತ ಬ್ರಹ್ಮಲೋಕವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದದಲ್ಲಿ ಬ್ರಹ್ಮಾಂಡ ದಾನವಿಧಿವರ್ಣನೆಯೆಂಬ
ನೂರಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಭಗವಾಞ್ಛಂಕರಃ ಪೂರ್ವಂ ಕೃತೋದ್ವಾಹೋಮಯಾ ಸಹ ।
ರಮಮಾಣಸ್ತಯಾ ಸಾರ್ಧಂ ಬಹುವರ್ಷಗಣಾನ್ ಸ್ಥಿತಃ ॥ ೧ ॥

ತತಃ ಸುರಗಣಾಃ ಸರ್ವೇ ಪರಂ ತ್ರಾಸಮುಪಾಗತಾಃ ।
ತಯೋರಪತ್ಯಸ್ಯ ಭಯಾತ್ತಮೇವ ಶರಣಂ ಗತಾಂ ॥ ೨ ॥

ವೈಶ್ವಾನರ ಮುಖಾದೇವಾಃ ಮಹಾದೇವಂ ತ್ರಿಲೋಚನಂ ।
ಪ್ರಸನ್ನ ಶ್ಚಾಭವತ್ತೇಷಾಂ ವಿಬುಧಾನಾಂ ತ್ರಿಲೋಚನಃ ॥ ೩ ॥

---

## ನೂರಎಪ್ಪತ್ತೆಂಟನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಪೂರ್ವದಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ಶಿವನು ಪಾರ್ವತಿಯನ್ನು ವಿವಾಹಮಾಡಿಕೊಂಡು ಆಕೆಯೊಡನೆ ಅನೇಕ ವರ್ಷಕಾಲ ಕ್ರೀಡಿಸುತ್ತಾ ಇದ್ದನು.

೨. ಹೀಗಿರುವಲ್ಲಿ ದೇವತೆಗಳೆಲ್ಲರೂ ಆ ಶಿವಪಾರ್ವತಿ ಇವರಲ್ಲಿ ಸೂನುವಾಗಿ ಜನಿಸುವ ಗುಹನ ಭಯದಿಂದ ಬಹು ದಿಗಿಲುಗೊಂಡು ಆ ಶಿವನನ್ನೇ ಶರಣು ಹೋಗಬೇಕೆಂದು ನಿರ್ಧರಿಸಿದರು.

೩. ಹೀಗೆ ವೈಶ್ವಾನರನೇ ಮೊದಲಾದ ದೇವತೆಗಳೆಲ್ಲರೂ ಬಂದು ಮೂರು ಕಣ್ಣುಗಳುಳ್ಳ ಮಹಾದೇವನನ್ನು ಮರೆಹೊಕ್ಕರು. ಆ ಶಿವನೂ ಕೂಡ ಈ ದೇವತೆಗಳು ಬಂದುದನ್ನು ಕಂಡು ಪ್ರಸನ್ನನಾಗಿ ಇಂತೆಂದನು.

॥ ಈಶ್ವರ ಉವಾಚ ॥

ಕಿಂ ಭೀತಾಸ್ತ್ರಿದಶಾಃ ಸರ್ವೇ ಕಂ ವರಂ ಚ ದದಾಮಿವಃ ।
ಮಯಿ ಪ್ರಸನ್ನೇ ವಿಬುಧಾ ದುರ್ಲಭಂ ಹಿ ನ ಕಿಂಚನ ॥ ೪ ॥

॥ ದೇವಾಃ ಊಚುಃ ॥

ಭಗವಂಸ್ತವ ಸಂಯೋಗಾತ್ಪಾರ್ವತ್ಯಾ ಸಹ ಶಂಕರ ।
ಮೋಘೋ ಭವತು ದೇವೇಶ ಭೀತಾಃ ಸ್ಮ ತನಯಸ್ಯ ತೇ ॥ ೫ ॥

ಅನಪತ್ಯಶ್ಚ ದೇವೇಶ ಭವ ಭೂತಪತೇ ಸದಾ ।
ಅಶಕ್ತಾಃ ಸ್ಮ ವಯಂ ಸರ್ವೇ ಭವದೋಜೋ ವಿಧಾರಣೇ ॥ ೬ ॥

॥ ಶ್ರೀಭಗವಾನುವಾಚ ॥

ಅತಃ ಪ್ರಭೃತ್ಯಹಂ ದೇವಾಃ ಊರ್ಧ್ವರೇತಾಃ ವ್ಯವಸ್ಥಿತಃ ।
ಸ್ಥಾಣುವಚ್ಚ ಸ್ಥಿತಶ್ಚಾಸ್ಮಿ ನಾಮ ಚೈತದ್ಭವಿಷ್ಯತಿ ॥ ೭ ॥

---

೪. ಈಶ್ವರನು ಹೇಳುತ್ತಾನೆ—ಎಲೈ ದೇವತೆಗಳೇ! ನೀವೆಲ್ಲರೂ ಏಕೆ ಭೀತರಾಗಿದ್ದೀರಿ? ನಿಮಗೆ ಯಾವ ವರವನ್ನು ಕೊಡಲಿ? ನಾನು ಪ್ರಸನ್ನನಾದರೆ ದುರ್ಲಭವಾದುದು ಯಾವುದೂ ಇಲ್ಲ ಎಂದನು.

೫. ದೇವತೆಗಳು ಹೇಳುತ್ತಾರೆ—ಭಗವಂತನಾದ ಶಂಕರನೇ! ಪಾರ್ವತಿಯೊಡನೆ ನಿನ್ನ ಸಂಭೋಗವನ್ನು ಸಾಕುಮಾಡು. ದೇವದೇವಾ! ನಿನ್ನ ಮಗನಿಗೆ ನಾವುಗಳೆಲ್ಲ ಭಯಗೊಂಡಿದ್ದೇವೆ.

೬. ಸ್ವಾಮಿನ್ ಶಂಕರನೇ! ನಿನಗೆ ಮಕ್ಕಳಾಗುವುದೇ ಬೇಡ. ನಾವುಗಳೆಲ್ಲರೂ ನಿನ್ನ ಓಜಸ್ಸನ್ನು ತಡೆಯಲು ಅಶಕ್ತರಾಗಿದ್ದೇವೆ ಎಂದರು.

೭. ಭಗವಂತನಾದ ಶಂಕರನು ಹೇಳುತ್ತಾನೆ—ಎಲೈ ದೇವತೆಗಳೇ! ಇನ್ನುಮುಂದೆ ನಾನು ಊರ್ಧ್ವರೇತಸ್ಕನಾಗಿ ಸ್ಥಾಣುವಿನಂತೆ ಇರುತ್ತೇನೆ. ಇನ್ನುಮುಂದೆ ನನಗೆ “ ಸ್ಥಾಣು ” ವೆಂದೇ ಹೆಸರಾಗಲಿ.

**ತತಃ ಕ್ರುದ್ಧಾ ಉಮಾ ತೇಷಾಂ ದೇವಾನಾಂ ವಾಕ್ಯಮಬ್ರವೀತ್ ।**
**ವಿತಥಂ ಪುತ್ರಜಂ ಸೌಖ್ಯಂ ಭವದ್ಭಿರ್ಮೇ ಕೃತಂ ಸುರಾಃ ॥ ೮ ॥**

**ಯಸ್ಮಾತ್ತಸ್ಮಾದ್ಭವಂತೋಽಪಿ ನ ಪುತ್ರಾಞ್ಜನಯಿಷ್ಯಥ ।**
**ತತಃ ಪ್ರಭೃತಿ ವೈ ದೇವಾಃ ಪ್ರಸೂಯಂತೇ ನ ಭೂಪತೇ ॥ ೯ ॥**

**ದತ್ವಾ ಶಾಪಂ ತತೋ ದೇವೀ ದೇವಾನಾಂಮಾಹ ಶಂಕರಂ ।**
**ಪುತ್ರಜನ್ಮ ಮಯಾಪ್ರಾಪ್ತಂ ನ ತಾವಜ್ಜಗತಃ ಪತೇ ॥ ೧೦ ॥**

**ಅಪುತ್ರಸ್ಯ ಗತಿರ್ನಾಸ್ತಿ ಇತೀಯಂ ಶ್ರೂಯತೇ ಶ್ರುತಿಃ ।**
**ತದಾದಿಶ ಮಹಾಭಾಗ ಲೋಕದ್ವಯಹಿತಂ ಪ್ರಭೋ ॥ ೧೧ ॥**

**॥ ಭಗವಾನುವಾಚ ॥**

**ಅಪುತ್ರಃ ಪುರುಷೋ ಯಶ್ಚ ನಾರೀ ವಾ ಪರ್ವತಾತ್ಮಜೇ ।**
**ಸೌವರ್ಣಸ್ತೇನ ದಾತವ್ಯಃ ಕಲ್ಪವೃಕ್ಷೋ ಗುಣಾನ್ವಿತಃ ॥ ೧೨ ॥**

---

೮. ಆಗ ಪಾರ್ವತಿಯು ಕ್ರುದ್ಧಳಾಗಿ ದೇವತೆಗಳನ್ನು ಕುರಿತು—"ಎಲೈ ದೇವತೆಗಳೇ! ನೀವು ನನಗೆ ಪುತ್ರಸೌಖ್ಯವು ಲಭಿಸದಂತೆ ಮಾಡಿದ್ದೀರಿ.

೯. ಆದಕಾರಣ ನಿಮಗೂ ಸಹ ಪುತ್ರರು ಜನಿಸದೆ ಹೋಗಲಿ" ಎಂದು ಶಪಿಸಿದಳು. ಎಲೈ ಯುಧಿಷ್ಠಿರನೇ! ಅದು ಮೊದಲುಗೊಂಡು ದೇವತೆಗಳಿಗೆ ಮಕ್ಕಳೇ ಆಗಲಿಲ್ಲ.

೧೦. ಪಾರ್ವತಿಯು ದೇವತೆಗಳನ್ನು ಈ ಪ್ರಕಾರ ಶಪಿಸಿ ಈಶ್ವರನನ್ನು ಕುರಿತು "ಎಲೈ ಜಗತ್ಪತಿಯೇ! ನನಗಾದರೋ ಪುತ್ರರನ್ನು ಪಡೆದು ಆನಂದಿಸುವ ಭಾಗ್ಯ ದೊರಕಲಿಲ್ಲ.

೧೧. ಪುತ್ರರಿಲ್ಲದವರಿಗೆ ಸದ್ಗತಿಯು ಉಂಟಾಗುವುದಿಲ್ಲ ಎಂಬದಾಗಿ ವೇದದಲ್ಲಿ ಉಕ್ತವಾಗಿದೆ. ಆದುದರಿಂದ ಎಲೈ ಪ್ರಭುವೇ! ಇಹಪರಗಳೆರಡರಲ್ಲೂ ಹಿತವಾಗುವ ಪ್ರಕಾರವನ್ನು ನನಗೆ ಅಪ್ಪಣೆಕೊಡಿಸು" ಎಂದು ಕೇಳಿದಳು.

೧೨-೧೩. ಈಶ್ವರನು ಹೇಳುತ್ತಾನೆ—ಪುತ್ರರಹಿತನಾದ ಪುರುಷನೇ ಆಗಲಿ ಸ್ತ್ರೀಯೋ ಆಗಲಿ ಗುಣಾನ್ವಿತರಾಗಿ ಚಿನ್ನದ ಕಲ್ಪವೃಕ್ಷವನ್ನು ದಾನಮಾಡಬೇಕು.

ಕೃತಿಮಂ ವಾಪಿ ಗೃಹ್ಣೀಯಾದ್ವೃಕ್ಷಂ ವಾ ಸ್ಥಾವರಾದಿಕಂ ।
ಜಾತಪುತ್ರೋಽಥವಾ ಪುತ್ರಃ ಪುತ್ರತ್ವೇ ಪರಿಕಲ್ಪಯೇತ್ ॥ ೧೩ ॥

ತೇನ ಪುತ್ರವತಾಂ ಲೋಕಾ ದೇವಿ ತಸ್ಯ ನ ಸಂಶಯಃ ।
ಕಲ್ಪವೃಕ್ಷಸ್ತು ಕರ್ತವ್ಯಃ ಶುದ್ಧಕಾಂಚನಸಂಭವಃ ॥ ೧೪ ॥

ಬಹುಶಾಖಃ ಸುವರ್ಣಾಂಗೋಽಪ್ಯನೇಕಕುಸುಮಾನ್ವಿತಃ ।
ಮಹಾಸ್ಕಂಧಸ್ವರೂಪಶ್ಚ ರತ್ನಾಲಂಕೃತವಿಗ್ರಹಃ ॥ ೧೫ ॥

ಫಲಾನಿ ತಸ್ಯ ದಿವ್ಯಾನಿ ಸೌವರ್ಣಾನಿ ಪ್ರಕಲ್ಪಯೇತ್ ।
ಕುರ್ಯಾದ್ವಿಂಶತ್ಪಲಾದೂರ್ಧ್ವಂ ಶಕ್ತ್ಯಾ ವಾ ನೃಪಸತ್ತಮ ॥ ೧೬ ॥

ದಾನಮೇತತ್ಪ್ರದಾತವ್ಯಂ ರಾಜತಂ ಚೈವಮುತ್ತಮಂ ।
ಪ್ರವಾಲಾಂಕುರಸಂಛನ್ನಂ ಮುಕ್ತಾದಾಮಾವಲಂಬಿತಂ ॥ ೧೭ ॥

---

ಪುತ್ರನು ಹುಟ್ಟಿದ್ದು ಮೃತನಾಗಿ ಹೋದವನು ಅಥವಾ ಪುತ್ರನೇ ಇಲ್ಲದವನು ಕೃತ್ರಿಮ ವೃಕ್ಷವನ್ನೋ ಅಥವಾ ಸ್ಥಾವರ ಕಲ್ಪವೃಕ್ಷವನ್ನೋ ಪುತ್ರನೆಂದು ಭಾವಿಸಬೇಕು.

೧೪. ಎಲೈ ದೇವಿಯೇ! ಆಗ ಅವರು ಪುತ್ರವಂತರಾದಂತೆಯಾಗುತ್ತಾರೆ. ಆಗ ಅಂತಹವನಿಗೆ ಸದ್ಗತಿಯುಂಟಾಗುವುದರಲ್ಲಿ ಸಂಶಯವಿಲ್ಲ. ಶುದ್ಧವಾದ ಚಿನ್ನದಿಂದ ಕಲ್ಪವೃಕ್ಷವನ್ನು ರಚಿಸಬೇಕು.

೧೫. ಆ ಕಲ್ಪವೃಕ್ಷವು ಅನೇಕ ಕೊಂಬೆಗಳುಳ್ಳದ್ದಾಗಿಯೂ ಮತ್ತು ತುಂಬಾ ಹೂಗಳಿಂದ ಕೂಡಿದುದಾಗಿಯೂ ದಪ್ಪವಾದ ತಾಳು ಉಳ್ಳದ್ದಾಗಿಯೂ, ರತ್ನದಿಂದ ಅಲಂಕರಿಸಲ್ಪಟ್ಟ ಅವಯವಗಳುಳ್ಳದ್ದಾಗಿಯೂ ಚಿನ್ನದಿಂದ ರಚಿಸಲ್ಪಟ್ಟು ಇರಬೇಕು.

೧೬. ಆ ಕಲ್ಪವೃಕ್ಷದಲ್ಲಿ ಇಪ್ಪತ್ತುಪಲ ತೂಕಕ್ಕಿಂತಲೂ ಹೆಚ್ಚಾಗಿ ಅಥವಾ ತನ್ನ ಶಕ್ತ್ಯನುಸಾರ ಚಿನ್ನದ ಫಲಗಳನ್ನು ಮಾಡಿಸಬೇಕು.

೧೭. ಇದೇ ಪ್ರಕಾರ ರಚಿತವಾಗಿ ಚಿಗುರು, ಕುಡಿ ಇವುಗಳಿಂದ ಕೂಡಿದುದೂ, ಮುತ್ತಿನ ಹಗ್ಗಗಳಿಂದ ಕಟ್ಟಲ್ಪಟ್ಟುದ್ದೂ ಆದ ಬೆಳ್ಳಿಯ ವೃಕ್ಷವನ್ನಾದರೂ ಮಾಡಿಸಿ ದಾನಮಾಡಬಹುದು.

**ಚತುಷ್ಕೋಣೇಷು ಕುರ್ವೀತ ಚತುರಃ ಕಾಂಚನದ್ರುಮಾನ್ ।**
**ಸುವರ್ಣಸ್ಯ ಪ್ರಮಾಣಂ ಚ ಕಥಯಾಮಿ ವರಾನನೆ ॥ ೧೮ ॥**

**ಸಹಸ್ರೇಣ ತದರ್ಧೇನ ತಸ್ಯಾಪ್ಯರ್ಧೇನ ವಾ ಪುನಃ ।**
**ನದ್ಯಾಸ್ತೀರೇ ಗೃಹೇ ವಾಪಿ ದೇವತಾಯತನೇ ತಥಾ ॥ ೧೯ ॥**

**ಪ್ರಾಗುದಕ್ಪ್ರವಣೇ ದೇಶೇ ಮಂಡಪಂ ತತ್ರ ಕಾರಯೇತ್ ।**
**ದಶಹಸ್ತಪ್ರಮಾಣೇನ ದಶಹಸ್ತಾಶ್ಚ ವೇದಿಕಾಃ ॥ ೨೦ ॥**

**ಹಸ್ತಮಾತ್ರ ಪ್ರಮಾಣೇನ ಕುಂಡಮೇಕಂ ಸುಶೋಭನಂ ।**
**ಆಗ್ನೇಯ್ಯಾಂ ಕಾರಯೇದ್ರಾಜನ್ ಮೇಖಲಾ ಮುಪಲೇಪನಂ ॥೨೧॥**

---

೧೮. ಎಲೌ ಮಂಗಳಮುಖಿಯಾದ ಪಾರ್ವತಿಯೇ! ಆ ವೃಕ್ಷದ ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಚಿನ್ನದ ವೃಕ್ಷಗಳನ್ನು ಮಾಡಬೇಕು. ಅದಕ್ಕೆ ಆಗ ಬೇಕಾದ ಚಿನ್ನದ ತೂಕದ ಪ್ರಮಾಣವನ್ನು ಹೇಳುತ್ತೇನೆ.

೧೯. ಸಾವಿರ ಹಣತೂಕ ಅಥವಾ ಅದರ ಅರ್ಧ (500) ಹಣತೂಕ ಅಥವಾ ಅದರ ಅರ್ಧ (250) ಹಣತೂಕ ಉಳ್ಳ ಚಿನ್ನದಿಂದ ಮಾಡಿಸಬೇಕು. ಈ ಸಮಾರಂಭಕ್ಕೆ ನದೀತೀರ, ಮನೆ, ಅಥವಾ ದೇವಸ್ಥಾನ ಇವು ಯಾವುದರಲ್ಲಿ ಯಾದರೂ ಏರ್ಪಡಿಸಬೇಕು.

೨೦. ಪೂರ್ವಕ್ಕೆ ಅಥವಾ ಉತ್ತರಕ್ಕೆ ಇಳಿಜಾರಾಗಿರುವ ಪ್ರದೇಶದಲ್ಲಿ ಒಂದು ದೊಡ್ಡ ಮಂಡಪವನ್ನೂ ಅದರಲ್ಲಿ ಹತ್ತುಹಸ್ತ ಉದ್ದ ಅಗಲದ ಪ್ರಮಾಣದ ಹತ್ತು ವೇದಿಕೆಗಳನ್ನು ಮಾಡಿಸಬೇಕು.

೨೧. ಪ್ರತಿ ವೇದಿಕೆಯಲ್ಲಿ ಆಗ್ನೇಯ ದಿಕ್ಕಿನಲ್ಲಿ ಒಂದೇಹಸ್ತ ಪ್ರಮಾಣ ಉಳ್ಳ ಒಂದು ಶುಭಕರವಾದ ಕುಂಡವನ್ನು ಲಕ್ಷಣಯುಕ್ತವಾಗಿ ಒಂದು ಮೇಖಲೆ ಸಹಿತವಾಗಿ ಮಾಡಿಸಬೇಕು.

ತತ್ರ ವೈ ಬ್ರಾಹ್ಮಣಾ ಯೋಜ್ಯಾ ಋಗ್ಯಜುಃ ಸಾಮಪಾಠಕಾಃ ।
ಉಪದೇಷ್ಟಾ ಚ ತತ್ರೈವ ತೃತೀಯಃ ಪಂಚಮೋಽಥವಾ ॥ ೨೨ ॥

ಸರ್ವಾಭರಣಸಂಪನ್ನಾಃ ತಾಮ್ರಪಾತ್ರದ್ವಯಾನ್ವಿತಾಃ ।
ಅನುಲಿಪ್ತಾಶ್ಚಂದನೇನ ವಸ್ತ್ರಮಾಲ್ಯಾದಿಭೂಷಿತಾಃ ॥ ೨೩ ॥

ಗುಡಪ್ರಸ್ಥೋಪರಿಷ್ಟಾಚ್ಚ ಸ್ಥಾಪಯೇತ್ಕಲ್ಪಪಾದಪಂ ।
ಬ್ರಹ್ಮವಿಷ್ಣುಶಿವೋಪೇತಂ ಪಂಚಶಾಖಂ ಸಭಾಸ್ಕರಂ ॥ ೨೪ ॥

ಕಾಮದೇವಮಧಸ್ತಾಚ್ಚ ಸಕಲತ್ರಂ ಪ್ರಯೋಜಯೇತ್ ।
ಸಂತಾನಂ ಸಹ ಗಾಯತ್ರ್ಯಾ ಪೂರ್ವತೋ ಲವಣೋಪರಿ ॥ ೨೫ ॥

ಮಂದಾರಂ ದಕ್ಷಿಣೇ ಪಾರ್ಶ್ವೇ ಶ್ರಿಯಾ ಸಹ ತಥಾ ಘೃತೇ ।
ಪಶ್ಚಿಮೇ ಪಾರಿಜಾತಂ ತು ಉಮಯಾ ಸಹ ಪಾದಪಂ ॥ ೨೬ ॥

---

೨೨. ಅಲ್ಲಿ ಋಗ್ವೇದ, ಯಜುರ್ವೇದ ಮತ್ತು ಸಾಮವೇದ ಇವುಗಳನ್ನು ಪಾರಾಯಣಮಾಡುವುದಕ್ಕೆ ಬ್ರಾಹ್ಮಣರನ್ನೂ ಮತ್ತು ಮೂರನೆಯವನನ್ನೊ ಅಥವಾ ಐದನೆಯವನನ್ನೊ ಉಪದೇಷ್ಟೃವನ್ನಾಗಿ ನಿಯಮಿಸಬೇಕು.

೨೩. ಆ ಬ್ರಾಹ್ಮಣರು ಸಕಲ ಆಭರಣಗಳಿಂದ ಕೂಡಿದವರಾಗಿ ಚಂದನದಿಂದ ಅವಯವಗಳನ್ನು ಲೇಪಿಸಿಕೊಂಡವರಾಗಿ ವಸ್ತ್ರ, ಹೂಮಾಲೆ ಇತ್ಯಾದಿಗಳಿಂದ ಅಲಂಕೃತರಾಗಿ ಎರಡು ತಾಮ್ರದ ಪಾತ್ರೆ ಸಮೇತರಾಗಿ ಇರಬೇಕು.

೨೪. ಆ ಕಲ್ಪವೃಕ್ಷವು ಬ್ರಹ್ಮ, ವಿಷ್ಣು, ಈಶ್ವರ ಮತ್ತು ಭಾಸ್ಕರ ಇವರುಗಳಿಂದ ಕೂಡಿದುದೂ ಮತ್ತು ಐದು ಶಾಖೆಗಳುಳ್ಳದ್ದೂ ಆಗಿರಬೇಕು. ಇದನ್ನು ಒಂದುಪ್ರಸ್ಥ ಪರಿಮಿತಿಯುಳ್ಳ ಗುಡದ ಮೇಲೆ ಸ್ಥಾಪಿಸಬೇಕು.

೨೫. ಪ್ರತಿಮೆಯ ಕೆಳಭಾಗದಲ್ಲಿ ಪತ್ನೀಸಮೇತನಾದ ಮನ್ಮಥನನ್ನೂ ಮತ್ತು ಪೂರ್ವದಿಕ್ಕಿನಲ್ಲಿ ಲವಣದ ಮೇಲೆ ಗಾಯತ್ರಿದೇವಿಯನ್ನೂ ಸಂತಾನ ವೃಕ್ಷವನ್ನೂ ರಚಿಸಬೇಕು.

೨೬. ದಕ್ಷಿಣದಿಕ್ಕಿನಲ್ಲಿ ತುಪ್ಪದ ಮೇಲೆ ಲಕ್ಷ್ಮಿಯನ್ನೂ, ಮಂದಾರವೃಕ್ಷವನ್ನೂ, ಪಶ್ಚಿಮದಿಕ್ಕಿನಲ್ಲಿ ಪಾರ್ವತೀದೇವಿಯನ್ನೂ ಪಾರಿಜಾತವೃಕ್ಷವನ್ನೂ ರಚಿಸಬೇಕು.

ಸುರಭೀ ಸಂಯುತಂ ತದ್ವತ್ತಿಲೇಷು ಹರಿಚಂದನಂ ।
ಕೌಶೇಯ ವಸ್ತ್ರಸಂಯುಕ್ತಾನಿಕ್ಷುಮಾಲ್ಯ ಫಲಾನ್ವಿತಾನ್ ॥ ೨೭ ॥

ತಥಾಷ್ಟೌ ಪೂರ್ಣಕಲಶಾನ್ ಸಮಂತಾತ್ಪರಿಕಲ್ಪಯೇತ್ ।
ಅಗ್ನಿ ಪ್ರಣಯನಂ ಕೃತ್ವಾ ಅಧಿವಾಸ್ಯ ಚ ಪಾದಪಾನ್ ॥ ೨೮ ॥

ಧಾನ್ಯಾನಿ ಚೈವ ಸರ್ವಾಣಿ ಸಮಂತಾತ್ಪರಿಕಲ್ಪಯೇತ್ ।
ನಾನಾಭಕ್ಷ್ಯಾಣಿ ನೈವೇದ್ಯಂ ಸರ್ವಂ ತತ್ರ ನಿಯೋಜಯೇತ್ ॥ ೨೯ ॥

ದೀಪಮಾಲಾ ವಿಚಿತ್ರಾಶ್ಚ ಜ್ವಾಲಯೇತ ಸಮಂತತಃ ।
ಮಂತ್ರೇಣ ಯೋಜಯಿತ್ವಾ ತಾ ಮಯೋಕ್ತೇವ ವರಾನನೇ ॥ ೩೦ ॥

ಕಾಮದದಸ್ತ್ವಂ ಹಿ ದೇವಾನಾಂ ಕಾಮವೃಕ್ಷಸ್ತ್ವತಃ ಸ್ಮೃತಃ ।
ಮಯಾ ಸಂಪೂಜಿತೋ ಭಕ್ತ್ಯಾ ಪೂರಯಸ್ವ ಮನೋರಥಾನ್ ॥೩೧॥

---

೨೭. ಅದರಂತೆಯೇ ಎಳ್ಳಿನಲ್ಲಿ ಕಾಮಧೇನುವನ್ನೂ ಹರಿಚಂದನವೃಕ್ಷವನ್ನೂ ಉತ್ತರದಿಕ್ಕಿನಲ್ಲಿ ರಚಿಸಿ ಆ ಪ್ರತಿಮೆಗೆ ಪೀತಾಂಬರವನ್ನೂ ಹೊದ್ದಿಸಿ ಕಬ್ಬಿನಜಲ್ಲೆ, ಹೂವಿನಿಂದ ಫಲಸಹಿತವಾಗಿರುವಂತೆ ಮಾಡಬೇಕು.

೨೮. ಎಂಟು ಜಲಪೂರ್ಣ ಕಲಶಗಳನ್ನು ಸುತ್ತಲೂ ಇಡಬೇಕು. ಅನಂತರ ಅಗ್ನಿಯನ್ನು (ವೇದಿಕೆಗೆ ತರಿಸಿ) ಪ್ರತಿಷ್ಠಿಸಿ ವೃಕ್ಷಪ್ರತಿಮೆಗಳನ್ನು ಅಧಿವಾಸನಕ್ಕೆ ಸಿದ್ಧಮಾಡಿಸಬೇಕು.

೨೯. ಮತ್ತು ಸುತ್ತಲೂ ಯಥೋಕ್ತ ಧಾನ್ಯಗಳನ್ನು ಹಾಕಬೇಕು. ಮತ್ತು ಅನೇಕವಿಧ ಭಕ್ಷ್ಯಗಳನ್ನು ನೈವೇದ್ಯಕ್ಕಾಗಿ ಇರಿಸಬೇಕು.

೩೦. ಎಲೌ ಮಂಗಳಮುಖಿಯಾದ ಪಾರ್ವತಿಯೇ! ಚಿತ್ರಚಿತ್ರಗಳಾದ ದೀಪಗಳನ್ನು ಜ್ವಲಿಸುವಂತೆ ಮಾಡಿ ಈ ಮುಂದೆ ಹೇಳತಕ್ಕ ಮಂತ್ರವನ್ನುಚ್ಚರಿಸಬೇಕು.

೩೧. ಎಲೈ ವೃಕ್ಷವೇ! ನೀನು ದೇವತೆಗಳ ಇಷ್ಟವನ್ನು ಕೂಡ ನೆರವೇರಿಸುತ್ತೀಯೆ. ಅದರಿಂದಲೇ ನಿನಗೆ ಕಾಮವೃಕ್ಷವೆಂದು ಹೆಸರಾಗಿರುತ್ತದೆ. ನಿನ್ನನ್ನು ಭಕ್ತಿಯಿಂದ ಪೂಜಿಸುವ ನಮಗೂ ಮನೋರಥಗಳನ್ನು ಪೂರ್ಣಮಾಡು.

**ಏವಂ ಸಂಪೂಜ್ಯ ವಿಧಿನಾ ಜಾಗರಂ ತತ್ರ ಕಾರಯೇತ್ ।**
**ಶಂಖ ವಾದಿತ್ರ ನಿರ್ಘೋಷೈಃ ವೇದಧ್ವನಿವಿಮಿಶ್ರಿತೈಃ ॥ ೩೨ ॥**

**ಹೋಮಂ ಚ ಬ್ರಾಹ್ಮಣಾಃ ಕುರ್ಯುಃ ಮದ್ಗತೇನಾಂತರಾತ್ಮನಾ ।**
**ಆಘಾರಾವಾಜ್ಯ ಭಾಗೌ ತು ಪೂರ್ವಂ ಹುತ್ವಾ ವಿಚಕ್ಷಣಃ ॥ ೩೩ ॥**

**ತಲ್ಲಿಂಗೈಃ ಸ್ಥಾಪಿತಾನ್ ದೇವಾನ್ ಹೋಮೇನಾಪ್ಯಾಯಯೇತ್ತತಃ ।**
**ಮಹಾವ್ಯಾಹೃತಿಭಿಶ್ಚೈವ ಹೋಮಂ ಕುರ್ಯಾಸ್ತತಃ ಪರಂ ॥ ೩೪ ॥**

**ಅಯುತೇನ ಭವೇತ್ಸಿದ್ಧಿಃ ಯಜ್ಞಸ್ಯವರವರ್ಣಿನಿ ।**
**ತತಃ ಪ್ರಭಾತೇ ಚೋತ್ಥಾಯ ಸ್ನಾತ್ವಾ ಶುಕ್ಲಾಂಬರಃ ಶುಚಿಃ ॥ ೩೫ ॥**

---

೩೨. ಈ ವಿಧಿಯಿಂದ ಪೂಜೆಯನ್ನು ಮಾಡಿ ಆ ದಿನ ವೇದಪಾರಾಯಣ, ಶಂಖ, ತೂರ್ಯ, ಇತ್ಯಾದಿ ಘೋಷಗಳೊಡನೆ ಜಾಗರಣೆಯನ್ನು ಮಾಡಬೇಕು.

೩೩. ಬುದ್ಧಿವಂತರಾದ ಬ್ರಾಹ್ಮಣರು ಪರಮಾತ್ಮನಲ್ಲಿ ಮನಸ್ಸಿಟ್ಟವರಾಗಿ ಮೊದಲು ಆಘಾರ, ಆಜ್ಯಭಾಗ, ಹೋಮಗಳನ್ನು ಮಾಡಿ ಅನಂತರ ಆಹುತಿ ಹೋಮವನ್ನು ಮಾಡಬೇಕು.

೩೪. ಹೋಮೋದ್ದೇಶದಿಂದಲೇ ವೇದಿಯಲ್ಲಿ ಸ್ಥಾಪಿಸಿರತಕ್ಕ ದೇವತೆಗಳನ್ನು ಆಯಾ ದೇವತಾಸಂಜ್ಞಕ ಮಂತ್ರಗಳ ಪೂರ್ವಕವಾದ ಆಹುತಿಹೋಮದಿಂದ ಸಂತೋಷಗೊಳಿಸಬೇಕು. ಅನಂತರ ಮಹಾವ್ಯಾಹೃತಿ ಮಂತ್ರಗಳಿಂದ ಹೋಮವನ್ನು ಮಾಡಬೇಕು.

೩೫. ಎಲೌ ಮಂಗಳಾಂಗಿಯೇ! ಹತ್ತುಸಹಸ್ರ ಹೋಮಮಾಡುವುದರಿಂದ ಸಂಪೂರ್ಣ ಸಿದ್ಧಿಯು ಉಂಟಾಗುತ್ತದೆ. ಅನಂತರ ಮಾರನೇ ಬೆಳಿಗ್ಗೆ ಪ್ರಭಾತಕಾಲದಲ್ಲಿಯೇ ಎದ್ದು ಸ್ನಾನಮಾಡಿ, ಶುಭ್ರವಸ್ತ್ರ (ಮಡಿಬಟ್ಟೆ) ಧಾರಿಯಾಗಿ ಶುಚಿರ್ಭೂತನಾಗಿರಬೇಕು.

**ದದ್ಯಾತ್ಪರ್ವಸಮೀಪೇ ತು ಕಲ್ಪವೃಕ್ಷಂ ಸ ದಕ್ಷಿಣಂ ।**
**ತ್ರಿಃ ಪ್ರದಕ್ಷಿಣಮಾವೃತ್ಯ ಮಂತ್ರಮೇತದುದೀರಯೇತ್ ॥ ೩೬ ॥**

**ನಮಸ್ತೇ ಕಲ್ಪವೃಕ್ಷಾಯ ಚಿತಾರ್ಥಪ್ರದಾಯ ಚ ।**
**ವಿಶ್ವಂಭರಾಯ ದೇವಾಯ ನಮಸ್ತೇ ವಿಶ್ವಮೂರ್ತಯೇ ॥ ೩೭ ॥**

**ಯಸ್ಮಾತ್ತ್ವಮೇವ ವಿಶ್ವಾತ್ಮಾ ಬ್ರಹ್ಮಸ್ಥಾಣುದಿವಾಕರಾಃ ।**
**ಮೂರ್ತಾಮೂರ್ತಪರಂ ಬೀಜಂ ಅತಃ ಪಾಹಿ ಸನಾತನ ॥ ೩೮ ॥**

**ಏವಮಾಮಂತ್ರ್ಯ ತಂ ದೃಷ್ಟ್ವಾ ಗುರವೇ ಕಲ್ಪಪಾದಪಂ ।**
**ಚತುರ್ಭ್ಯಶ್ಚಾಪಿ ಋತ್ವಿಗ್ಭ್ಯಃ ಸಾಮಂತಾದೀನ್ ಪ್ರಕಲ್ಪಯೇತ್॥ ೩೯॥**

**ಅನೇನ ವಿಧಿನಾ ಯಸ್ತು ದಾನಮೇತತ್ಪ್ರಯಚ್ಛತಿ ।**
**ತಸ್ಯ ಪುಣ್ಯ ಫಲಂ ದೇವಿ ಶ್ರುಣುಷ್ವ ಗದತೋ ಮಮ ॥ ೪೦ ॥**

---

೩೬. ಅನಂತರ ಪರ್ವಕಾಲ ಸನ್ನಿಹಿತವಾದ ದಿವಸದಲ್ಲಿ ದಕ್ಷಿಣಾಯುತವಾಗಿ ದಾನಮಾಡಬೇಕು. ಆ ಕಲ್ಪವೃಕ್ಷವನ್ನು ಮೂರು ಪ್ರದಕ್ಷಿಣೆಮಾಡುವಾಗ ಈ ಮುಂದೆ ಹೇಳತಕ್ಕ ಮಂತ್ರವನ್ನು ಹೇಳಬೇಕು.

೩೭. ಎಲೈ ಕಲ್ಪವೃಕ್ಷವೇ! ನೀನು ಸಕಲ ಅಭೀಷ್ಟಗಳನ್ನು ಕೊಡುವವನೂ ಮತ್ತು ಪ್ರಪಂಚವನ್ನೇ ಸಂರಕ್ಷಣೆಮಾಡತಕ್ಕವನೂ, ಪ್ರಪಂಚಸ್ವರೂಪನೂ ಆಗಿರುತ್ತೀಯೆ. ಅಂತಹ ನಿನಗೆ ನಮಸ್ಕಾರ.

೩೮. ವಿಶ್ವಾತ್ಮನೂ, ಬ್ರಹ್ಮ, ಈಶ್ವರ, ಸೂರ್ಯ ಇವರ ಸ್ವರೂಪನೂ ನೀನೇ. ಮೂರ್ತಸ್ವರೂಪವೂ, ಅಮೂರ್ತಸ್ವರೂಪವೂ ಆದ ವಸ್ತುಗಳಿಗೆ ಬೀಜಭೂತನು ನೀನೇ ಆಗಿದ್ದೀಯೆ. ಆದುದರಿಂದ ನನ್ನನ್ನು ರಕ್ಷಿಸು. (ಇದು ಮಂತ್ರಾರ್ಥ)

೩೯. ಈ ರೀತಿ ಮಂತ್ರವನ್ನು ಉಚ್ಚರಿಸಿ ಅದನ್ನು ವೀಕ್ಷಿಸಿ ಆಚಾರ್ಯನಿಗೆ ಆ ಕಲ್ಪವೃಕ್ಷವನ್ನೂ ಇತರ ನಾಲ್ವರು ಋತ್ವಿಜರಿಗೆ ಸಾಮಂತವೃಕ್ಷಗಳನ್ನೂ ಪೂರ್ವ, ದಕ್ಷಿಣ, ಇತ್ಯಾದಿ ದಿಕ್ಕುಗಳಲ್ಲಿ ಇಟ್ಟಿದ್ದ ಪೂರ್ಣಕಲಶ ಇತ್ಯಾದಿಗಳನ್ನೂ ದಾನಮಾಡಬೇಕು.

೪೦. ಎಲೌ ದೇವೀ! ಈ ವಿಧಿಯನನ್ನನುಸರಿಸಿ ದಾನಮಾಡುವವನಿಗೆ ಉಂಟಾಗುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

ವಿಮಾನವರಮಾರುಹ್ಯ ಸೂರ್ಯತೇಜಃಸಮಪ್ರಭಂ ।
ಅಪ್ಸರೋಗಣಸಂಕೀರ್ಣಂ ಕಿಂಕಿಣೀಜಾಲಮಾಲಿತಂ ॥ ೪೧ ॥

ಯಾತಿ ಲೋಕಂ ಸುರೇಶಸ್ಯ ಸರ್ವಬಾಧಾವಿವರ್ಜಿತಂ ।
ಪುನಃ ಕರ್ಮಕ್ಷಿತಾವೇತ್ಯ ಜಾಯತೇ ಶ್ರೋತ್ರಿಯೇ ಕುಲೇ ॥ ೪೨ ॥

ಯಜ್ವಾ ಶೂರೋಽಪಿ ವಿದ್ವಾಂಶ್ಚ ನರೋ ಭವತಿ ಧಾರ್ಮಿಕಃ ।
ಪುನರಂತೇ ಪ್ರಾಪ್ನುಯಾದ್ವೈ ಲೋಕಂ ದೇವಸ್ಯ ಶಾರ್ಙ್ಗಿಣಃ ॥ ೪೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ಕಲ್ಪವೃಕ್ಷದಾನವಿಧಿವರ್ಣನಂ
ನಾಮ ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ.



---

೪೧-೪೨. ಈ ದಾನಮಾಡಿದವನು ಸೂರ್ಯನ ತೇಜಸ್ಸಿನಂತೆ ಕಾಂತಿಯುಳ್ಳುದೂ ಮತ್ತು ಅಪ್ಸರಸ್ತ್ರೀಯರಿಂದ ವ್ಯಾಪೃತವಾದುದೂ ಕಿರುಗಂಟೆಗಳ ಸಮೂಹವನ್ನು ಮಾಲಾಕಾರವಾಗಿ ಕಟ್ಟಿರುವುದೂ ಆದ ಶ್ರೇಷ್ಠವಾದ ವಿಮಾನವನ್ನು ಹತ್ತಿ, ಯಾವ ತೊಂದರೆಯ ಸಂಭವವೂ ಇಲ್ಲದಿರುವ ಇಂದ್ರನ ಲೋಕವನ್ನು ಸೇರಿ ಅಲ್ಲಿ ಪಲವು ಕಾಲವಿದ್ದು ಮತ್ತೆ ಕರ್ಮಭೂಮಿಯಲ್ಲಿ ಶ್ರೋತ್ರಿಯರ ವಂಶದಲ್ಲಿ ಹುಟ್ಟುತ್ತಾನೆ.

೪೩. ಆಗ ಆತನು ಶೂರನೂ, ವಿದ್ವಾಂಸನೂ, ಧಾರ್ಮಿಕನೂ ಆಗಿ ಸಕಲ ಯಾಗಗಳನ್ನೂ ಮಾಡಿ ಅದರಿಂದುಂಟಾದ ಫಲದಿಂದ ಮತ್ತೆ ಇಂದ್ರ ಲೋಕವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಕಲ್ಪವೃಕ್ಷದಾನವಿಧಿವರ್ಣನೆ ಎಂಬ
ನೂರಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕೋನಾಶೀತ್ಯುತ್ತರಶತತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಭಗವನ್ ಸರ್ವಭೂತೇಶ ಸರ್ವಲೋಕನಮಸ್ಕೃತ ।
ಅನುಗ್ರಹಾಯ ಲೋಕಾನಾಂ ಕಥಯಸ್ವ ಮಮಾಪರಂ || ೧ ||

ನಿಷ್ಪಾಪೋ ಜಾಯತೇ ಯೇನ ಆಯುಷಾ ಯಶಸಾ ಶ್ರಿಯಾ ।
ತನ್ಮೇ ಕಥಯ ದೇವೇಶ ದಾನಂ ವ್ರತಮಥಾಪಿ ವಾ || ೨ ||

---

## ನೂರಎಪ್ಪತ್ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ—ಸಕಲ ಭೂತಗಳಿಗೂ ಒಡೆಯನೂ ಸಕಲ ಜನಗಳಿಂದ ನಮಸ್ಕೃತನೂ ಆಗಿರತಕ್ಕ ಶ್ರೀಕೃಷ್ಣನೇ! ಲೋಕಗಳಿಗೆ ಅನುಗ್ರಹಮಾಡುವುದಕ್ಕಾಗಿ ನನಗೆ ಇನ್ನೊಂದು ವಿಚಾರವನ್ನು ನಿರೂಪಿಸು.

೨. ದೇವೇಶನಾದ ಕೃಷ್ಣಪರಮಾತ್ಮನೇ! ಯಾವುದನ್ನು ಆಚರಿಸುವುದರಿಂದ ಮನುಷ್ಯನು ಪಾಪರಹಿತನಾಗಿ ಸಕಲವಾದ ಯಶಸ್ಸು, ಸಂಪತ್ತು ಮತ್ತು ಆಯುಸ್ಸು ಎಲ್ಲವನ್ನೂ ಪಡೆಯಬಹುದೋ ಅಂತಹ ದಾನ ಅಥವಾ ವ್ರತಮುಂತಾದುವುಗಳಲ್ಲಿ ಯಾವುದನ್ನಾದರೂ ಉಪದೇಶಮಾಡು ಎಂದನು.

॥ ಶ್ರೀಕೃಷ್ಣ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ತವ ಲೋಕಹಿತೇಪ್ಸಯಾ ।
ಯೇನೋಪಾಯೇನ ಜಾಯಂತೇ ಸಭಾಗ್ಯಾ ಮಾನವಾ ಭುವಿ ॥ ೩ ॥

ನ ವ್ರತೈರ್ನೋಪವಾಸೈಶ್ಚ ನ ತೀರ್ಥಗಮನೈರಪಿ ।
ಮಹಾಪಥಾದಿಮರಣೈರ್ನ ಯಜ್ಞೈರ್ನ ಶ್ರುತೇನ ಚ ॥ ೪ ॥

ಪ್ರಾಪ್ಯತೇ ಮಮ ಲೋಕೋಽಯಂ ದುಷ್ಪ್ರಾಪ್ಯಸ್ತ್ರಿದಶೈರಪಿ ।
ಪಾರ್ಥ ಸ್ನೇಹಾನ್ಮಹಾಭಾಗ ಪ್ರವಕ್ಷ್ಯಾಮಿ ಹಿತಂ ತವ ॥ ೫ ॥

ವಕ್ಷ್ಯೇ ಕಲ್ಪಲತಾದಾನಂ ಶೋಭನಂ ವಿಧಿಪೂರ್ವಕಂ ।
ಸರ್ವಂ ಪೂರ್ವವಿಧಾನಂ ಚ ತತ್ರ ತಂತ್ರೇ ಪ್ರಕಲ್ಪಯೇತ್ ॥ ೬ ॥

---

೩. ಶ್ರೀಕೃಷ್ಣಪರಮಾತ್ಮನು ಹೇಳುತ್ತಾನೆ—ಎಲೈ ರಾಜನೇ! ಮನುಜರು ಭಾಗ್ಯಶಾಲಿಗಳಾಗಲು ಆಚರಿಸಬೇಕಾದ ಉಪಾಯವೊಂದನ್ನು ಜನಗಳ ಹಿತದೃಷ್ಟಿಯನ್ನು ಗಮನಿಸಿ ನಾನು ನಿನಗೆ ಹೇಳುತ್ತೇನೆ ಕೇಳು.

೪. ವ್ರತ, ಉಪವಾಸ, ತೀರ್ಥಯಾತ್ರೆ ಮತ್ತು ಪುಣ್ಯಕ್ಷೇತ್ರಗಳಲ್ಲಿ ಮರಣ, ಯಜ್ಞ ಇತ್ಯಾದಿಯಾದ ಯಾವುದರಿಂದಲೂ ವಿಷ್ಣುಲೋಕ ಪ್ರಾಪ್ತಿಯು ದುರ್ಲಭ.

೫. ದೇವತೆಗಳಿಗೂ ಸಹ ವಿಷ್ಣುಲೋಕ ಪ್ರಾಪ್ತಿಯಾಗುವುದು ಅಷ್ಟು ಸುಲಭವಲ್ಲ. ಇದು ವಾಸ್ತವ, ಎಲೈ ಯುಧಿಷ್ಠಿರ! ನಿನ್ನ ಮೇಲಿನ ಸ್ನೇಹದಿಂದ ನಿನಗೆ ಹಿತವಾದ ವಿಚಾರವನ್ನು ಹೇಳಬಯಸಿದೇನೆ.

೬. ಈಗ ಮನೋಹರವಾಗಿರತಕ್ಕ ಕಲ್ಪಲತೆಯ ದಾನಕ್ರಮವನ್ನು ವಿಧಿಪೂರ್ವಕವಾಗಿ ಹೇಳುತ್ತೇನೆ. ಹಿಂದೆ ಹೇಳಿದ ಕಲ್ಪವೃಕ್ಷದ ದಾನದಲ್ಲಿ ಏರ್ಪಡಿಸಿದ ವಿಧಾನವನ್ನೇ ಈ ದಾನದಲ್ಲೂ ಅನುಸರಿಸಬೇಕು.

ದಿಕ್ಪಾಲೇಭ್ಯೋ ಬಲಿಂ ತತ್ರ ಕ್ಷಿಪೇದ್ವೈ ವಿಧಿಪೂರ್ವಕಂ ।
ಆಘಾರಾವಾಜ್ಯಭಾಗೌ ತು ಪೂರ್ವಂ ಹುತ್ವಾ ವಿಚಕ್ಷಣಃ ॥ ೭ ॥

ತತೋ ಗ್ರಹಮುಖಂ ಕುರ್ಯಾದ್ಧೋಮಂ ವ್ಯಾಹೃತಿಭಿಸ್ತತಃ ।
ಅಯುತೇನೈವ ಹೋಮಸ್ಯ ಸಮಾಪ್ತಿರಿಹ ಕಥ್ಯತೇ ॥ ೮ ॥

ತತಃ ಪರ್ವಸಮೀಪೇ ತು ಸ್ನಾತಃ ಶುಕ್ಲಾಂಬರಃ ಶುಚಿಃ ।
ಪುಷ್ಪಧೂಪೈರಥಾಭ್ಯರ್ಚ್ಯ ವಾಸೋಭಿಃ ಸಫಲಾಕ್ಷತೈಃ ॥ ೯ ॥

ನಮೋನಮಃ ಪಾಪವಿನಾಶಿನೀಭ್ಯೋ ।
ಬ್ರಹ್ಮಾಂಡಲೋಕೇಶ್ವರಪಾಲನೀಭ್ಯಃ ॥
ಆಶಾಶತಾಧಿಕ್ಯಫಲಪ್ರದಾಭ್ಯಃ- ।
ದಿಗ್ಭ್ಯಸ್ತಥಾ ಕಲ್ಪಲತಾವಧೂಭ್ಯಃ ॥ ೧೦ ॥

೭. ಹೋಮಕಾರ್ಯದಲ್ಲೂ ಅಲ್ಲಿಯಂತೆಯೇ ಮೊದಲು ಯಥಾವಿಧಿಯಾಗಿ ಆಘಾರ, ಆಜ್ಯಭಾಗ, ಹೋಮಗಳನ್ನು ಮಾಡಿದ ಅನಂತರ ದಿಕ್ಪಾಲಕರಿಗೆ ಬಲಿಯನ್ನು ಸಮರ್ಪಿಸಬೇಕು.

೮. ಆ ಬಳಿಕ ಮೊದಲು ಗ್ರಹಯಜ್ಞವೇ ಮೊದಲಾದ ಹೋಮವನ್ನು ಮಾಡಿ ಅನಂತರ ವ್ಯಾಹೃತಿಮಂತ್ರಗಳಿಂದ ಹತ್ತುಸಾವಿರ ಹೋಮಮಾಡಿ ಸಮಾಪ್ತಿಮಾಡಬೇಕೆಂದು ಹೇಳಿದೆ.

೯. ಅನಂತರ ಪರ್ವಕಾಲ ಪ್ರಾಪ್ತವಾಗುವ ಸಮಯದಲ್ಲಿ ಯಜಮಾನನು ಸ್ನಾನಮಾಡಿ ಶುಚಿರ್ಭೂತನಾಗಿ ಶುಭ್ರವಸ್ತ್ರವನ್ನು ಧರಿಸಿ ಹೂ, ಧೂಪ, ಅಕ್ಷತೆ ಇತ್ಯಾದಿಗಳಿಂದಲೂ ಮತ್ತು ವಸ್ತ್ರಗಳಿಂದಲೂ ಹತ್ತು ಕಲ್ಪಲತೆಗಳನ್ನು ಅರ್ಚಿಸಬೇಕು. ಮತ್ತು ಫಲವನ್ನು ನಿವೇದಿಸಬೇಕು.

೧೦. ಅನಂತರ ನಮಸ್ಕಾರ ಮಾಡುವಾಗ “ ಸಕಲ ಪಾಪಗಳನ್ನೂ ನಾಶ ಮಾಡುವಂಥದೂ, ಬ್ರಹ್ಮಾಂಡವನ್ನೂ ಲೋಕಪಾಲಕರನ್ನೂ ರಕ್ಷಿಸತಕ್ಕಂಥದೂ ಮತ್ತು ನೂರಾರು ಅಪೇಕ್ಷೆಗಳಿಗಿಂತ ಅಧಿಕವಾಗಿ ಫಲದಾಯಕವೂ ಆದ ವಧುಗಳಂತಿರತಕ್ಕ ಕಲ್ಪಲತೆಗಳಿಗೂ ಮತ್ತು ದಿಕ್ಕುಗಳಿಗೂ ಮತ್ತೆ ಮತ್ತೆ ನಮಸ್ಕಾರ” ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಬೇಕು.

ಯಾ ಯಸ್ಯ ಶಕ್ತಿಃ ಪರಮಾ ಪ್ರದಿಷ್ಟಾ ।
ವೇದೇ ಪುರಾಣೇ ಸುರಸತ್ತಮಸ್ಯ ॥
ತಾಂ ಪೂಜಯಾಮೀಹ ಪರೇಣ ಸಾಮ್ನಾ ।
ಸಾ ಮೇ ಶುಭಂ ಯಚ್ಛತು ತಾಂ ನತೋಽಸ್ಮಿ ॥ ೧೧ ॥

ಏವಮುಚ್ಚಾರ್ಯ ತಾಃ ಸರ್ವಾಃ ಬ್ರಾಹ್ಮಣೇಭ್ಯೋ ನಿವೇದಯೇತ್ ।
ದಶಾಶಾಃ ಪರಯಾ ಭಕ್ತ್ಯಾ ತಾಸ್ತಾಃ ಸಂಕಲ್ಪ್ಯ ಚೇತಸಿ ॥ ೧೨ ॥

ತತಃ ಕ್ಷಮಾಪಯೇದ್ವಿಪ್ರಾನ್ ಪ್ರಣಿಪತ್ಯ ಸದಕ್ಷಿಣಾನ್ ।
ಅನೇನ ವಿಧಿನಾ ಯಸ್ತು ದಾನಮೇತತ್ಪ್ರಯಚ್ಛತಿ ॥ ೧೩ ॥

ತಸ್ಯ ಪುಣ್ಯಫಲಂ ರಾಜನ್ ಕಥ್ಯಮಾನಂ ನಿಬೋಧ ಮೇ ।
ಇಹಲೋಕೇ ಸ ವಿಜಯೀ ಧನವಾನ್ ಪುತ್ರವಾನ್ ಭವೇತ್ ॥ ೧೪ ॥

---

೧೧. ದೇವದೇವೋತ್ತಮನಲ್ಲಿ ಯಾವ ಶಕ್ತಿಯು ಇರುತ್ತದೆಂದು ವೇದಗಳೂ ಪುರಾಣಗಳೂ ಸಹ ಸಾರುತ್ತಿವೆಯೋ ಅಂತಹ ಶಕ್ತಿದೇವತೆಯನ್ನು ಏಕಮನಸ್ಸಿನಿಂದ ಪೂಜಿಸುತ್ತೇನೆ. ಆ ಸರ್ವಶಕ್ತಿಯು ನನಗೆ ಮಂಗಳವನ್ನುಂಟು ಮಾಡಲಿ, ಇದೋ ನನ್ನ ನಮಸ್ಕಾರ ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೧೨. ಈರೀತಿ ಉಚ್ಚರಿಸಿ ಹತ್ತು ಲತೆಗಳನ್ನೂ ವೀಕ್ಷಿಸಿ ಭಕ್ತಿಯಿಂದ ಮನಸ್ಸಿನಲ್ಲಿ ಸಂಕಲ್ಪಮಾಡಿಕೊಂಡು ಎಲ್ಲವನ್ನೂ ಬ್ರಾಹ್ಮಣರಿಗೆ ನಿವೇದಿಸಬೇಕು.

೧೩. ಅನಂತರ ಬ್ರಾಹ್ಮರಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿ ಕ್ಷಮಾಪಣೆಯನ್ನು ಬೇಡಬೇಕು. ದಾತೃವು ವಿಧಿಯನ್ನನುಸರಿಸಿಯೇ ಈ ದಾನವನ್ನು ಕೊಡಬೇಕು.

೧೪. ಎಲೈ ರಾಜನೇ! ಈ ಪ್ರಕಾರ ದಾನಮಾಡಿದವನಿಗೆ ಉಂಟಾಗತಕ್ಕ ಪುಣ್ಯಫಲವನ್ನು ಹೇಳುವೆನು ಕೇಳು. ಈ ಲೋಕದಲ್ಲಿ ಸರ್ವತ್ರ ವಿಜಯಿಯೂ ಧನವಂತನೂ ಪುತ್ರವಂತನೂ ಆಗುತ್ತಾನೆ.

ಮೃತೋ ಲೋಕಾಧಿಪಪುರೇ ಪ್ರತಿಮನ್ವಂತರಂ ವಸೇತ್ ।
ಮಹಾಶಕ್ತಿವೃತಃ ಪಶ್ಚಾದೇತ್ಯ ರಾಜನ್ ರಸಾತಲಂ ॥ ೧೫ ॥

ಜಿತಸರ್ವಮಹೀಪಾಲಃ ಚಕ್ರವರ್ತೀ ಭವೇದ್ಭುವಿ ।
ಯಾ ಚ ನಾರೀ ಮಹಾರಾಜ ದಾನಮೇತತ್ಪ್ರಯಚ್ಛತಿ ॥ ೧೬ ॥

ಸಾ ಚಕ್ರವರ್ತಿನಂ ಪುತ್ರಂ ಸೂತೇ ಶಕ್ತಿಸಮನ್ವಿತಂ ।
ಯಶ್ಚ ಪಶ್ಯೇದ್ದೀಯಮಾನಂ ದತ್ತಂ ಯಶ್ಚಾನುಮೋದತೇ । ॥ ೧೭ ॥

ಶೃಣೋತಿ ವಾಚ್ಯಮಾನಂ ಚ ಸೋಽಪಿ ಪ್ರೇತ್ಯ ವಿಮುಚ್ಯತೇ ॥ ೧೮ ॥

ಯಾಃ ಶಕ್ರವಹ್ನಿಯಮನೈಋತಪಾಶಹಸ್ತಾಃ ।
ವಾತೇಂದುರಾಜಶಿವಕೇಶವಶಂಭುಶಕ್ತ್ಯಃ ॥

---

೧೫. ಎಲೈ ರಾಜನೇ! ಆತನು ಮೃತನಾದ ಮೇಲೆ ಮಹಾಶಕ್ತಿಯಿಂದ ಕೂಡಿದವನಾಗಿ ಜಗತ್ಪತಿಯಾದ ವಿಷ್ಣುವಿನ ಲೋಕ (ವೈಕುಂಠ) ದಲ್ಲಿ ಪ್ರತಿ ಮನ್ವಂತರಗಳಲ್ಲಿಯೂ ವಾಸಮಾಡುತ್ತಾನೆ. ಅನಂತರ ಪಾತಾಲಲೋಕವನ್ನು ಪ್ರವೇಶಿಸುತ್ತಾನೆ.

೧೬. ಅನಂತರ ಭೂಮಂಡಲದ ಸಕಲ ರಾಜರನ್ನೂ ಗೆದ್ದು ಚಕ್ರವರ್ತಿಯಾಗುವನು.

೧೭. ಎಲೈ ಮಹಾರಾಜನೇ! ಯಾವ ಸ್ತ್ರೀಯು ಕಲ್ಪಲತಾ ದಾನಮಾಡುವಳೋ ಅವಳಿಗೆ ಸರ್ವಶಕ್ತಿಯಿಂದ ಕೂಡಿದವನೂ ಮತ್ತು ಚಕ್ರವರ್ತಿಯಾಗಲು ಯೋಗ್ಯತೆಯುಳ್ಳವನೂ ಆದ ಮಗನು ಜನಿಸುತ್ತಾನೆ.

೧೮. ಈ ದಾನಮಾಡುವುದನ್ನು ಆಸಕ್ತಿಯಿಂದ ನೋಡುವವನು ಮತ್ತು ದಾನಕೊಡುವುದನ್ನು ಅನುಮೋದಿಸುವವನು ಅಥವಾ ದಾನಕಲ್ಪವನ್ನು ಓದುವವನು ಅಥವಾ ಓದುತ್ತಿರುವುದನ್ನು ಕೇಳುವವನು ಇವರೆಲ್ಲರೂ ಕಾಲಕ್ರಮದಲ್ಲಿ ಮೋಕ್ಷವನ್ನು ಪಡೆಯುತ್ತಾರೆ.

೧೯. ಎಲೈ ಯುಧಿಷ್ಠಿರನೇ! ಮೂರು ಲೋಕಗಳನ್ನು ಗೆಲ್ಲಬೇಕೆಂಬ ಬುದ್ಧಿಯು ನಿನಗೆ ಇರುವುದಾದರೆ ಅಭಿಮಾನಿಗಳಾದ ಇಂದ್ರ, ಅಗ್ನಿ, ಯಮ,

**ತಾ ವೈ ಪ್ರಪೂಜ್ಯ ದಶಕಲ್ಪಲತಾ ದ್ವಿಜೇಭ್ಯೋ ।**
**ದೇಹಿ ತ್ರಿಲೋಕವಿಜಯೇ ಯದಿತೇಽಸ್ತಿಬುದ್ಧಿಃ ॥ ೧೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ಕಲ್ಪಲತಾದಾನವಿಧಿವರ್ಣನಂ ನಾಮ ಏಕೋನಾಶೀತ್ಯುತ್ತರಶತತಮೋಽಧ್ಯಾಯಃ.**



---

ನಿಋಋತಿ, ಪಾಶಹಸ್ತನಾದ ವರುಣ, ವಾಯು, ರಾಜರಾಜನಾದ ಕುಬೇರ, ಈಶಾನ, ವಿಷ್ಣುಶಕ್ತಿ, ಶಿವಶಕ್ತಿ ಇವರುಗಳೊಡನೆ ಅದನ್ನು ಪೂಜಿಸಿ ಆ ದಶಕಲ್ಪ ಲತೆಗಳನ್ನು ಬ್ರಾಹ್ಮಣನಿಗೆ ದಾನಮಾಡು ಎಂದು ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಕಲ್ಪಲತೆಯುದಾನವಿಧಿವರ್ಣನೆಯೆಂಬ ನೂರಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಶೀತ್ಯುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಭಗವನ್ ಕ್ಷತ್ರಿಯೈಃ ಶೂರೈಃ ಸ್ವವೀರ್ಯೋಪಾತ್ತಸಂಚಯೈಃ ।
ಕಾನಿ ದಾನಾನಿ ದೇಯಾನಿ ಪವಿತ್ರಾಣಿ ಶುಭಾನಿ ಚ ॥ ೧ ॥

ಅನ್ಯೈರ್ವಾ ಪುರುಷೈಃ ಕೃಷ್ಣ ಅಧರ್ಮಭಯಭೀರುಭಿಃ ।
ಗ್ರಹಪೀಡಾಭಿಸಂತಪ್ತೈಃ ದುಃಸ್ವಪ್ನಾದ್ಯುಪತಾಪಿತೈಃ ॥ ೨ ॥

ಇಹ ಲೋಕೇ ಪರೇಽಚೈವ ವಿಹಿತಂ ಸರ್ವಕಾಮದಂ ।
ವಿಶೇಷ ವಿಹಿತಂ ದಾನಂ ಕಥಯಸ್ವ ಮಹಾಮತೇ ॥ ೩ ॥

---

## ನೂರಎಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ—ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣನೇ! ಶೂರರಾದ ಕ್ಷತ್ರಿಯರು ತಮ್ಮ ಶೌರ್ಯದಿಂದ ಸಂಪಾದನೆ ಮಾಡಿದ ಧನಗಳಿಂದ ಶುಭಕರಗಳೂ, ಪವಿತ್ರಗಳೂ ಆದ ಯಾವ ದಾನವನ್ನು ಮಾಡಬೇಕು?

೨-೩. ಎಲೈ ಕೃಷ್ಣನೇ! ಕ್ಷತ್ರಿಯರಿಗೆ ಮಾತ್ರವಲ್ಲದೆ ಭಯಂಕರವಾದ ಅಧರ್ಮಾಚರಣಕ್ಕೆ ಹೆದರುವ ಇತರ ಜನರಿಗೂ ದುಷ್ಟಗ್ರಹಗಳಿಂದ ಪೀಡಿತರಿಗೂ ದುಃಸ್ವಪ್ನವೇ ಮೊದಲಾದುವುಗಳಿಂದ ತಾಪಗೊಳಿಸಲ್ಪಟ್ಟವರಿಗೂ ಅದು ಶಮನವಾಗಿ ಈ ಲೋಕ ಮತ್ತು ಪರಲೋಕಗಳಲ್ಲಿ ಸಕಲ ಅಭೀಷ್ಟಗಳನ್ನು ಉಂಟುಮಾಡುವಂತಹದೂ ವಿಶೇಷವಾಗಿ ವಿಹಿತವಾದುದೂ ಆದ ಯಾವ ದಾನವನ್ನು ಮಾಡಬೇಕು? ಎಂಬುದನ್ನು ಹೇಳು ಎಂದನು.

॥ ಶ್ರೀಕೃಷ್ಣ ಉವಾಚ ॥

ಶೃಣು ಭೂಪಾಲ ಭದ್ರಂ ತೇ ದಾನಧರ್ಮಮನುತ್ತಮಂ ।
ವಿಶೇಷೇಣ ಮಹೀಪಾನಾಂ ಹಿತಾಯ ಚ ನ ಸಂಶಯಃ ॥ ೪ ॥

ದಾನಾನಿ ಬಹುರೂಪಾಣಿ ನಾನಾಶಾಸ್ತ್ರೋದಿತಾನಿ ಚ ।
ಗೋದಾನಾದೀನಿ ರಾಜೇಂದ್ರ ಪ್ರಧಾನಾನಿ ನ ಸಂಶಯಃ ॥ ೫ ॥

ಕಿಂ ತು ಪ್ರಧಾನಮೇಕಂ ತೇ ದಾನಂ ವಕ್ಷ್ಯಾಮಿ ಭಾರತ ।
ವೈರೋಚನಾಯ ಯತ್ಸರ್ವಂ ಶುಕ್ರಃ ಪ್ರೋವಾಚ ಭಾರತ ॥ ೬ ॥

॥ ಶುಕ್ರ ಉವಾಚ ॥

ಶೃಣು ದೈತ್ಯಪತೇ ದಾನಂ ಸರ್ವಪಾಪಪ್ರಣಾಶನಂ ।
ಆಧಯೋ ವ್ಯಾಧಯಶ್ಚೈವ ಗ್ರಹಪೀಡಾಃ ಸುದಾರುಣಾಃ ॥ ೭ ॥

ಯೇನ ದತ್ತೇನ ನಶ್ಯಂತಿ ಪುಣ್ಯಮಾಪ್ನೋತಿ ಚೋತ್ತಮಂ ।
ಕಾರ್ತಿಕ್ಯಾಮಯನೇ ಚೈವ ಗ್ರಹಣೇ ಶಶಿಸೂರ್ಯಯೋಃ ॥ ೮ ॥

---

೪. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಭೂಪಾಲಕನೇ! ಸಕಲ ಜನರಿಗೂ ಹಿತಕರವೂ ವಿಶೇಷತಃ ರಾಜರಿಗೆ ಹಿತವಾದುದೂ ಮಂಗಳದಾಯಕವೂ ಆದ ಸರ್ವೋತ್ತಮವಾದ ದಾನವನ್ನು ಹೇಳುತ್ತೇನೆ ಕೇಳು.

೫. ಎಲೈ ರಾಜಶ್ರೇಷ್ಠನೇ! ಅನೇಕ ವಿಧಗಳಾದ ದಾನಗಳುಂಟು ಅವುಗಳಲ್ಲಿ ಗೋದಾನಾದಿಗಳು ಪ್ರಧಾನವಾದುವುಗಳೆಂದು ಅನೇಕ ಶಾಸ್ತ್ರಗಳು ಹೇಳುತ್ತವೆ. ಇದರಲ್ಲಿ ಸಂಶಯವಿಲ್ಲ.

೬. ಅಯ್ಯಾ ಯುಧಿಷ್ಠಿರನೇ! ಹಿಂದೆ ಶುಕ್ರಾಚಾರ್ಯರು ವಿರೋಚನನಿಗೆ ಅನೇಕ ದಾನವಿಚಾರಗಳನ್ನು ಹೇಳಿದ್ದರು. ಅವುಗಳಲ್ಲಿ ಬಹು ಮುಖ್ಯವಾದ ಒಂದು ದಾನವನ್ನು ಅವರು ಹೇಳಿದಂತೆ ಹೇಳುವೆನು.

೭–೮. ಶುಕ್ರಾಚಾರ್ಯರು ಹೇಳುತ್ತಾರೆ—ಎಲೈ ರಾಕ್ಷಸಾಧಿಪನೇ! ಕೇಳು. ಮಾನಸಿಕ ವ್ಯಥೆಗಳು, ವ್ಯಾಧಿಗಳು, ತೀಕ್ಷ್ಣಗಳಾದ ಗ್ರಹಪೀಡೆಗಳು ಇವುಗಳನ್ನೆಲ್ಲ ನಿವಾರಣೆಮಾಡತಕ್ಕದ್ದೂ, ಸಕಲ ಪಾಪಗಳನ್ನು ನಾಶಮಾಡತಕ್ಕದ್ದೂ ಮತ್ತು ಉತ್ತಮವೂ ಆದ ದಾನವನ್ನು ಹೇಳುವೆನು ಕೇಳು.

ದಾನಮೇತತ್ಪ್ರದಾತವ್ಯಂ ವಿಷುವೇ ಸೂರ್ಯಸಂಕ್ರಮೇ ।
ಪುಣ್ಯಂ ದಿನಮಥಾಸಾದ್ಯ ಜಿತಕ್ರೋಧೋ ಜಿತೇಂದ್ರಿಯಃ ॥ ೯ ॥

ಸಂಸ್ಥಾಪ್ಯ ದಾರುಜಂ ದಿವ್ಯಂ ಹೇಮಪಟ್ಟೈರಲಂಕೃತಂ ।
ರಥಂ ಸುಚಕ್ರಾಕ್ಷಧರಂ ಯುಗಯೋಕ್ತ್ರಸಮನ್ವಿತಂ ॥ ೧೦ ॥

ಸುವರ್ಣಧ್ವಜಸಂಯುಕ್ತಂ ಸಿತಾಸಿತಪತಾಕಿನಂ ।
ಪುಷ್ಪಪ್ರಕರಸಂಕೀರ್ಣೇ ಪ್ರಾಗುದಕ್ಪ್ರವಣೇ ಶುಭೇ ॥ ೧೧ ॥

ನದ್ಯಾಸ್ತೀರೇಽಥವಾ ಗೋಷ್ಠೇ ವಿಚಿತ್ರೇ ವಾ ಗೃಹಾಂಗಣೇ ।
ರಥಸ್ಯ ಪೂರ್ವಭಾಗೇ ತು ಕೃತ್ವಾ ವೇದೀಮನುತ್ತಮಾಂ ॥ ೧೨ ॥

---

೯. ದಾತೃವು ಕೋಪರಹಿತನೂ ಇಂದ್ರಿಯಗಳನ್ನು ಜಯಿಸಿದವನೂ ಆಗಿ ಕಾರ್ತಿಕಮಾಸ, ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳು, ಚಂದ್ರ, ಸೂರ್ಯರ ಗ್ರಹಣ ದಿವಸ, ವಿಷುವತ್ಪುಣ್ಯಕಾಲ. ಸೂರ್ಯಸಂಕ್ರಮಣ, ಮುಂತಾದ ಪುಣ್ಯದಿನಗಳಲ್ಲಿ ಈ ದಾನವನ್ನು ಮಾಡಬೇಕು.

೧೦. ಒಂದು ಮನೋಹರವಾದ ರಥವನ್ನು ಮರದಿಂದ ರಚಿಸಿ, ಸುವರ್ಣದ ಪಟ್ಟಿಗಳಿಂದ ಅಲಂಕೃತವಾಗಿರುವಂತೆಯೂ, ಚಕ್ರ ಮತ್ತು ಮೂಕಿಯ ಮರ, ನೊಗ ಇವುಗಳಿಂದ ಕೂಡಿರುವಂತೆಯೂ ಮಾಡಬೇಕು.

೧೧. ಮತ್ತು ಅದಕ್ಕೆ ಚಿನ್ನದ ಧ್ವಜವನ್ನು ಏರಿಸಬೇಕು. ಬಳಿಯ ಬಣ್ಣದ ಮತ್ತು ಕಪ್ಪುಬಣ್ಣದ ಪತಾಕೆಗಳನ್ನು ಕಟ್ಟಿರಬೇಕು. ಅದನ್ನು ಪೂರ್ವ ಅಥವಾ ಉತ್ತರದ ಕಡೆಗೆ ಇಳಿಜಾರಾಗಿರುವಂತೆ ನಿಲ್ಲಿಸಿ ಪುಷ್ಪಮಾಲೆಗಳಿಂದ ಅಲಂಕರಿಸಿ ಶುಭಕರವಾಗಿಡಬೇಕು.

೧೨. ಅದನ್ನು ನದಿಯ ತೀರ, ದನಗಳ ಕೊಟ್ಟಿಗೆ, ಚಿತ್ರಚಿತ್ರವಾದ ಮನೆಯ ಅಂಗಣ ಇನ್ನೆಲ್ಲಿಯಾದರೂ ಇರಿಸಬೇಕು. ಆ ರಥದ ಪೂರ್ವಭಾಗದಲ್ಲಿ ಅತ್ಯುತ್ತಮವಾದ ಒಂದು ವೇದಿಕೆಯನ್ನು ರಚಿಸಬೇಕು.

ಪುರಾಣವೇದವಿದ್ಯಾವಾನ್ ವಿನಯಾಚಾರಸಂಯುತಃ ।
ತಸ್ಯಾಂ ಸಂಸ್ಥಾಪಯೇದ್ದೇವಾನ್ ಬ್ರಹ್ಮಾದೀನ್ ಕಥಯಾಮಿ ತೇ॥೧೩॥

ಮಧ್ಯೇ ಬ್ರಹ್ಮಾ ಪ್ರತಿಷ್ಠಾಪ್ಯಃ ಪೂಜಯೇತ್ಪ್ರಣವೇನ ತಂ ।
ವಿಷ್ಣುರುತ್ತರತಃ ಸ್ಥಾಪ್ಯಃ ಪೌರುಷೇಣ ತಮರ್ಚಯೇತ್ ॥ ೧೪ ॥

ಸೂಕ್ತೇನ ರುದ್ರಂ ರೌದ್ರೇಣ ದಕ್ಷಿಣಸ್ಯಾಂ ಸಮರ್ಚಯೇತ್ ।
ಗ್ರಹಾನ್ ಸೂರ್ಯಮುಖಾಂಶ್ಚೈವ ವಿಧಿವತ್ಪೂಜಯೇತ್ತಥಾ ॥
ಪುಷ್ಪೈರ್ಗಂಧೈಃ ಫಲೈರ್ಭಕ್ಷ್ಯೈರ್ದೀಪಮಾಲಾಭಿರೇವಚ ॥ ೧೫ ॥

ಪೂಜಯೇದ್ಗಂಧಕುಸುಮೈಃ ಶ್ವೇತವಸ್ತ್ರೈಃ ಸಚಂದನೈಃ ।
ಶಂಖಭೇರೀಮೃದಂಗಾನಾಂ ಶಬ್ದೈಃ ಸರ್ವತ್ರಗಾಮಿಭಿಃ ॥ ೧೬ ॥

ಬ್ರಹ್ಮಘೋಷವಿಮಿಶ್ರೈಶ್ಚ ಕಾರಯೇತ ಮಹೋತ್ಸವಂ ।
ಕುಂಡಂ ಕೃತ್ವಾ ವಿಧಾನೇನ ಹಸ್ತಮಾತ್ರ ಪ್ರಮಾಣತಃ ॥ ೧೭ ॥

೧೩. ಯಜಮಾನನು ಪುರಾಣ, ವೇದ ಇತ್ಯಾದಿಗಳನ್ನು ತಿಳಿದವನೂ ವಿನೀತನೂ ಆಚಾರಸಂಪನ್ನನೂ ಆಗಿ, ಆ ವೇದಿಕೆಯಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳನ್ನು ಸ್ಥಾಪಿಸಬೇಕು. ಆ ವಿವರವನ್ನು ಹೇಳುತ್ತೇನೆ.

೧೪. ಆ ವೇದಿಕೆಯ ಮಧ್ಯಭಾಗದಲ್ಲಿ ಬ್ರಹ್ಮನನ್ನು ಪ್ರತಿಷ್ಠಿಸಿ ಪ್ರಣವ ಮಂತ್ರದಿಂದ ಆರಾಧಿಸಬೇಕು. ಉತ್ತರಭಾಗದಲ್ಲಿ ವಿಷ್ಣುವನ್ನು ಸ್ಥಾಪಿಸಿ ಪುರುಷ ಸೂಕ್ತ ಮಂತ್ರದಿಂದ ಅರ್ಚಿಸಬೇಕು.

೧೫. ದಕ್ಷಿಣಭಾಗದಲ್ಲಿ ರುದ್ರನನ್ನು ಆವಾಹಿಸಿ ರುದ್ರಸೂಕ್ತ ಮಂತ್ರದಿಂದ ಆರಾಧಿಸಬೇಕು. ಇದರಂತೆಯೇ ಸೂರ್ಯನೇ ಮೊದಲಾದ ಗ್ರಹಗಳನ್ನೂ ಯಥಾವಿಧಿಯಾಗಿ ಪೂಜೆಮಾಡತೊಡಗಿ,

೧೬. ಬಿಳಿಯ ವಸ್ತ್ರಗಳು, ಚಂದನ, ಗಂಧ, ಹೂವು, ಭಕ್ಷ್ಯ, ಧೂಪ, ದೀಪ ಇತ್ಯಾದಿಗಳಿಂದ ಪೂಜಿಸಬೇಕು. ಪೂಜಾಕಾಲದಲ್ಲಿ ಶಂಖ, ಭೇರಿ, ಮೃದಂಗ ಇತ್ಯಾದಿ ವಾದ್ಯಶಬ್ದಗಳು ಎಲ್ಲ ಕಡೆಗೂ ಕೇಳಿಸಬೇಕು.

೧೭. ಇದರ ಜತೆಗೆ ವೇದಘೋಷಗಳನ್ನು ಏರ್ಪಡಿಸಿ ಮಹೋತ್ಸವವನ್ನು ಮಾಡಿಸಬೇಕು. ಈ ಕಾರ್ಯಾಂಗವಾಗಿ ವೇದಿಯ ಆಗ್ನೇಯ ದಿಕ್ಕಿನಲ್ಲಿ ಹಸ್ತ ಪ್ರಮಾಣವುಳ್ಳ ಒಂದು ಕುಂಡವನ್ನು ಯಥಾವಿಧಿಯಾಗಿ ನಿರ್ಮಿಸಬೇಕು.

**ಆಗ್ನೇಯ್ಯಾಂ ದಿಶಿ ರಾಜೇಂದ್ರ ಬ್ರಾಹ್ಮಣಾಂಸ್ತತ್ರ ಪೂಜಯೇತ್ ।**
**ಚತುಶ್ಚಾರಣಿಕಾನ್ ವಿಪ್ರಾನ್ ಪೂಜಿತಾನ್ ಬ್ರಹ್ಮಭೂಷಣೈಃ ॥ ೧೮ ॥**

**ಚತುರೋಽಷ್ಟೌ ಮಹಾರಾಜ ಗುರುರೇಕೋಽಥವಾ ಭವೇತ್ ।**
**ಹೋಮೋಪಕರಣಂ ಸರ್ವಂ ಮೇಲಯಿತ್ವಾ ತಿಲಾನ್ ಘೃತಂ ॥ ೧೯ ॥**

**ಅಗ್ನಿಕಾರ್ಯಂ ತತಃ ಕುರ್ಯಾದ್ಯಥಾವದ್ವಿಧಿಪೂರ್ವಕಂ ।**
**ಆಘಾರಾವಾಜ್ಯಭಾಗೌ ತು ಹುತ್ವಾ ಪ್ರಾಗ್ವಚ್ಚ ತೌ ತತಃ ॥ ೨೦ ॥**

**ವಿಷ್ಣವೇ ಶಿತಿಕಂಠಾಯ ಮಂತ್ರೈಃ ಪೂರ್ವೋದಿತೈಃ ಶುಭೈಃ ।**
**ಗ್ರಹಯಜ್ಞೋದಿತೈಶ್ಚೈವ ಗ್ರಹಾಣಾಂ ಹೋಮ ಇಷ್ಯತೇ ॥ ೨೧ ॥**

**ಏವಂ ಯಜ್ಞವಿಧಿಂ ಕೃತ್ವಾ ಯಜಮಾನೋ ದ್ವಿಜೈಃ ಸಹ ।**
**ಯೋಜಯೇತ ರಥೇ ದಾಂತೌ ಗಜೌ ಲಕ್ಷಣಸಂಯುತೌ ॥ ೨೨ ॥**

---

೧೮. ಎಲೈ ರಾಜಶ್ರೇಷ್ಠನೇ! ನಾಲ್ಕು ಅರಣಿಗಳಿಗಾಗಿ ಬ್ರಾಹ್ಮಣರನ್ನು ನಿಯಮಿಸಿ ಆ ಬ್ರಾಹ್ಮಣರನ್ನು ಯೋಗ್ಯವಾದ ಭೂಷಣಾದಿಗಳಿಂದ ಪೂಜಿಸಬೇಕು.

೧೯. ಎಲೈ ಮಹಾರಾಜನೇ! ಋತ್ವಿಜರು ಮುಂತಾದ ಸ್ಥಾನಗಳಿಗೆ ನಾಲ್ಕುಜನ ಅಥವಾ ಎಂಟುಜನರನ್ನೂ, ಗುರುವಾಗಿ ಒಬ್ಬನನ್ನೂ ನಿಯಮಿಸಿ ಕೊಳ್ಳಬೇಕು. ಹೋಮೋಪಕರಣಗಳನ್ನೂ ಘೃತವನ್ನೂ ಮತ್ತು ತಿಲವನ್ನೂ ಸೇರಿಸಬೇಕು.

೨೦. ಆ ಮಿಶ್ರಣಮಾಡಿದ ದ್ರವ್ಯದಿಂದ ಯಥಾವಿಧಿಯಾಗಿ ಹೋಮ ಕಾರ್ಯವನ್ನು ಮಾಡಬೇಕು. ಮೊದಲು ಆಘಾರಹೋಮ, ಆಜ್ಯಭಾಗಹೋಮ, ಇವುಗಳನ್ನು ಹಿಂದಿನ ಕಲ್ಪದಲ್ಲಿ ಹೇಳಿದಂತೆ ಮಾಡಬೇಕು.

೨೧. ಹಿಂದಿನ ಕಲ್ಪದಲ್ಲಿ ಹೇಳಿರತಕ್ಕ ಆ ಮಂತ್ರಗಳಿಂದಲೇ ವಿಷ್ಣು ಮತ್ತು ಈಶ್ವರ ಇವರಿಗೂ, ಗ್ರಹಯಜ್ಞದಲ್ಲಿ ವಿಹಿತವಾದ ಮಂತ್ರಗಳಿಂದ ಆದಿತ್ಯಾದಿ ಗ್ರಹಗಳಿಗೂ ಹೋಮಾಹುತಿಗಳನ್ನು ಕೊಡಬೇಕು ಎಂಬುದು ಉಕ್ತವಾದ ಕ್ರಮ.

೨೨. ಯಜಮಾನನು ಬ್ರಾಹ್ಮಣರೊಡಗೂಡಿ ಈರೀತಿ ಯಜ್ಞದ ಕಾರ್ಯಗಳನ್ನು ಪೂರಯಿಸಿ ರಥಕ್ಕೆ ಸರ್ವಲಕ್ಷಣಸಂಪನ್ನಗಳೂ, ದಂತವುಳ್ಳವೂ ಆದ ಎರಡು ಆನೆಗಳನ್ನು ಹೂಡಬೇಕು.

**ವಿಚಿತ್ರತನುಸಂವೀತೌ ಶುಭಕಕ್ಷ್ಯೌ ಸುಘಂಟಿಕೌ ।**
**ಹೇಮಪಟ್ಟೈಃ ಸುತಿಲಕೈಃ ಶೋಭಿತೌ ಶಂಖಚಾಮರೈಃ ॥ ೨೩ ॥**

**ದಿವ್ಯಮುಕ್ತಾಪರಿಚ್ಛನ್ನೌ ದಿವ್ಯಾಂಕುಶಸಮನ್ವಿತೌ ।**
**ಮಹಾಮಾತ್ರಾನ್ವಿತೌ ಚೈವ ಸರ್ವಾಭರಣಭೂಷಿತೌ ॥ ೨೪ ॥**

**ಏವಂ ವಿಧಿಂ ತತಃ ಕೃತ್ವಾ ರಥಂ ತಂ ಸಗಜಂ ನರಃ ।**
**ಆರೋಪಯೇತ್ತತಸ್ತಸ್ಮಿನ್ ಬ್ರಾಹ್ಮಣಂ ಶಂಸಿತವ್ರತಂ ॥ ೨೫ ॥**

**ಭೂಷಿತಂ ಕಂಠಕಟಕೈಃ ಕರ್ಣವೇಷ್ಟಾಂಗುಲೀಯಕೈಃ ।**
**ಆಗುಪ್ತಚೋಲಕಚ್ಛತ್ರವಸ್ತ್ರಾಯುಧ ಸಮನ್ವಿತಂ ॥ ೨೬ ॥**

**ಬದ್ಧತೂಣಿಂ ಧನುಷ್ಪಾಣಿಂ ಬಹುಚರ್ಮವಿಭೂಷಿತಂ ।**
**ಖಡ್ಗಧೇನುಕಯಾ ನದ್ಧಂ ಹಾರಾಲಂಕೃತವಿಗ್ರಹಃ ॥ ೨೭ ॥**

---

೨೩. ಆ ಆನೆಗಳ ಶರೀರವನ್ನು ಚಿತ್ರಯುಕ್ತಗಳಾಗಿಯೂ, ಚಿನ್ನದ ಪಟ್ಟೆಯಿಂದ ರಚಿಸಿದ ತಿಲಕಯುಕ್ತವಾದುದನ್ನಾಗಿಯೂ ಶಂಖ ಮತ್ತು ಚಾಮರ ಇವುಗಳಿಂದ ಶೋಭಿಸುವಂತೆಯೂ ಮತ್ತು ಕೊರಳಿನಲ್ಲಿ ಒಳ್ಳೆಯ ಘಂಟೆಗಳನ್ನು ಕಟ್ಟಿಯೂ ಅಲಂಕರಿಸಬೇಕು.

೨೪. ಆ ಎರಡು ಆನೆಗಳೂ ಜೋಲಾಡುವ ದಿವ್ಯವಾದ ಮುತ್ತಿನ ಸರವುಳ್ಳವುಗಳಾಗಿಯೂ, ದಿವ್ಯವಾದ ಅಂಕುಶಗಳಿಂದ ಕೂಡಿದವುಗಳಾಗಿಯೂ, ಸರ್ವಾಭರಣಗಳಿಂದ ಅಲಂಕೃತಗಳಾಗಿಯೂ ಇರಬೇಕು.

೨೫–೨೬. ಯಜಮಾನನು ಆ ರಥವನ್ನು ಈ ಪ್ರಕಾರವಾಗಿರುವ ಆನೆಯಿಂದ ಕೂಡಿರುವಂತೆ ಮಾಡಬೇಕು. ಅನಂತರ ಆ ಆನೆಯಮೇಲೆ ಮಹಾನೇಮಿಷ್ಠನೂ ಪ್ರಶಂಸನೀಯ ಚರಿತ್ರನೂ, ಸುವರ್ಣದ ಹಾರ, ಕರ್ಣಕುಂಡಲ, ಉಂಗುರ ಇವುಗಳಿಂದ ಅಲಂಕೃತನೂ, ತನ್ನ ರಕ್ಷಣೆಗಾಗಿ ಕವಚ, ಛತ್ರಿ, ವಸ್ತ್ರ, ಆಯುಧ ಇವುಗಳನ್ನು ಧರಿಸಿರುವನೂ ಆದ ಒಬ್ಬ ಬ್ರಾಹ್ಮಣನನ್ನು ಕೂರಿಸಬೇಕು.

೨೭. ಮತ್ತು ಆ ಬ್ರಾಹ್ಮಣನು ಬೆನ್ನಿನಲ್ಲಿ ಬತ್ತಳಿಕೆಯನ್ನು ಧರಿಸಿದವನೂ, ಕೈಯ್ಯಲ್ಲಿ ಧನುಸ್ಸುಳ್ಳವನೂ, ಗುರಾಣಿಗಳಿಂದ ಅಲಂಕೃತನೂ, ಶ್ರೇಷ್ಠವಾದ ಖಡ್ಗಗಳಿಂದ ಕೂಡಿದವನೂ, ಹಾರಾದಿಗಳಿಂದ ಪರಿಶೋಭಿತನೂ ಆಗಿರಬೇಕು.

ಯಜಮಾನಸ್ತತಃ ಪ್ರಾಜ್ಞಃ ಶುಕ್ಲಾಂಬರಧರಃ ಶುಚಿಃ ।
ರಥಂ ಪ್ರದಕ್ಷಿಣೀಕೃತ್ಯ ಗೃಹೀತಕುಸುಮಾಂಜಲಿಃ
ಇಮಮುಚ್ಚಾರಯೇನ್ಮಂತ್ರಂ ಸರ್ವಪಾಪಪ್ರಣಾಶನಂ ॥ ೨೮ ॥

ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥವಾಮನಃ ।
ಸುಪ್ರತೀಕೋಂಜನಃ ಸಾರ್ವಭೌಮೋಽಷ್ಟೌ ದೇವಯೋನಯಃ ॥೨೯॥

ತೇಷಾಂ ವಂಶಪ್ರಸೂತೌ ತು ಬಲರೂಪಸಮನ್ವಿತೌ ।
ತದ್ಯುಕ್ತ ರಥದಾನೇನ ಮಮ ಸ್ಯಾತಾಂ ವರಪ್ರದೌ ॥ ೩೦ ॥

ರಥೋಽಯಂ ಯಜ್ಞಪುರುಷೋ ಬ್ರಾಹ್ಮಣೋತ್ರ ಶಿವಃ ಸ್ವಯಂ ।
ಮಮೋಭರಥದಾನೇನ ಪ್ರೀಯೇತಾಂ ಶಿವಕೇಶವೌ ॥ ೩೧ ॥

---

೨೮. ಅನಂತರ ಪ್ರಾಜ್ಞನಾದ ಯಜಮಾನನು ಶುಕ್ಲವಸ್ತ್ರವನ್ನು ಧರಿಸಿ, ಶುಚಿರ್ಭೂತನಾಗಿ ತನ್ನ ಬೊಗಸೆಯಲ್ಲಿ ಹೂಗಳನ್ನು ಹಿಡಿದು ಆ ರಥವನ್ನು ಪ್ರದಕ್ಷಿಣೆಮಾಡುತ್ತಾ ಸರ್ವಪಾಪನಾಶಕವಾದ ಈ ಮಂತ್ರವನ್ನು ಉಚ್ಚರಿಸಬೇಕು.

೨೯. ಕುಮುದ, ಐರಾವತ, ಪದ್ಮ (ಪುಂಡರೀಕ), ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ, ಸಾರ್ವಭೌಮ ಈ ಎಂಟು ಗಜಗಳೂ ದೇವಯೋನಿಯವು.

೩೦. ಅಂಥದ್ದರ ವಂಶದಲ್ಲಿ ಹುಟ್ಟಿದವುಗಳೂ, ಬಲ ರೂಪ ಇತ್ಯಾದಿಗಳಿಂದ ಕೂಡಿದುವೂ ಆಗಿರತಕ್ಕ ಈ ಆನೆಗಳ ಸಮೇತವಾಗಿ ರಥವನ್ನು ದಾನಮಾಡುವುದರಿಂದ ಆ ದೇವಯೋನಿ ಗಜಗಳು ಸುಪ್ರೀತಗಳಾಗಿ ನಮಗೆ ವರವನ್ನು ಕೊಡಲಿ.

೩೧. ಈ ರಥವೇ ಯಜ್ಞಪುರುಷನೂ ಇಲ್ಲಿರುವ ಬ್ರಾಹ್ಮಣನೇ ಸಾಕ್ಷಾಚ್ಛಿವನೂ ಆಗಿ ಇದ್ದಾರೆ. ಇವರುಗಳಿಂದ ಕೂಡಿದ ಈ ಗಜರಥವನ್ನು ದಾನಮಾಡುವುದರಿಂದ ಈಶ್ವರ ಮತ್ತು ಕೇಶವ ಇವರೀರ್ವರೂ ಪ್ರೀತರಾಗಲಿ.

ಇತ್ಯುಚ್ಚಾರ್ಯ ಮಹಾಭಾಗ ಪೂಜಯಿತ್ವಾ ಪುನಃಪುನಃ ।
ಆರೋಪಯೇತ್ತತಸ್ತಸ್ಮಿನ್ ಬ್ರಾಹ್ಮಣಂ ಶಂಸಿತವ್ರತಂ ॥ ೩೨ ॥

ಸ್ವದಾರನಿರತಂ ಶಾಂತಂ ವೇದವೇದಾಂಗಪಾರಗಂ ।
ಪಂಚಾಗ್ನ್ಯಭಿಮತಂ ಚೈವ ಅವ್ಯಂಗಂ ವ್ಯಾಧಿವರ್ಜಿತಂ ॥ ೩೩ ॥

ಪುನಃ ಪ್ರದಕ್ಷಿಣೀಕೃತ್ಯ ರಥಸ್ಥಂ ದ್ವಿಜಸತ್ತಮಂ ।
ಆದ್ವಾರಮನುಗಚ್ಛೇಚ್ಚ ಪ್ರಣಿಪತ್ಯ ಗೃಹಂ ವಿಶೇತ್ ॥ ೩೪ ॥

ತತೋ ಯಜ್ಞಾವಸಾನೇ ತು ದೀನಾಂಧಾದೀನ್ ಜಡಾನ್ ಕೃಶಾನ್ ।
ಪೂಜಯೇದ್ವಿವಿಧೈರ್ದಾನೈರ್ವಸ್ತ್ರಗೋದಾನಭೋಜನೈಃ ॥ ೩೫ ॥

---

೩೨. ಎಲೈ ಮಹಾಭಾಗ್ಯಶಾಲಿಯಾದ ಯುಧಿಷ್ಠಿರನೇ! ಈ ರೀತಿ ಮಂತ್ರವನ್ನುಚ್ಚರಿಸಿ ಪುನಃ ಪೂಜೆಮಾಡಿ ಅನಂತರ ಆ ರಥದಲ್ಲಿ ಮಹಾನೇಮಿಷ್ಟನೂ ಪ್ರಶಂಸನೀಯವಾದ ಚರಿತ್ರೆಯುಳ್ಳವನೂ,

೩೩. ಏಕಪತ್ನೀವ್ರತಸ್ಥನೂ ಶಾಂತಸ್ವಭಾವವುಳ್ಳವನೂ ವೇದವೇತ್ತನೂ ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ಆರು ಶಾಸ್ತ್ರಗಳಲ್ಲಿ ನಿಷ್ಣಾತನೂ, ಪಂಚಾಗ್ನಿಯ ಅಭಿಮತವುಳ್ಳವನೂ, ಅಂಗಹೀನನಲ್ಲದವನೂ, ವ್ಯಾಧಿರಹಿತನೂ, ಆಗಿರುವ ಬ್ರಾಹ್ಮಣನನ್ನು ಕೂರಿಸಬೇಕು.

೩೪. ಮತ್ತೆ ಆ ರಥದಲ್ಲಿರುವ ಬ್ರಾಹ್ಮಣನನ್ನು ಪ್ರದಕ್ಷಿಣೆಮಾಡಿ ಬಾಗಿಲಿನವರೆಗೂ ಅನುಸರಿಸಿ ಹೋಗಿ ಸಾಗಕಳುಹಿಸಬೇಕು. ಅಲ್ಲಿ ಪುನಃ ನಮಸ್ಕರಿಸಿ ಮನೆಗೆ ಬರಬೇಕು.

೩೫. ಯಜ್ಞಸಮಾಪ್ತಿಕಾಲದಲ್ಲಿ ಬಡವರು, ಕುರುಡರು, ಜಡರು, ಕೃಶರು ಇಂತಹವರನ್ನು ವಸ್ತ್ರ, ಗೋವು ಇತ್ಯಾದಿ ವಿವಿಧದಾನಗಳಿಂದಲೂ ಭೋಜನಗಳಿಂದಲೂ ಸಂತುಷ್ಟಿಪಡಿಸಬೇಕು.

**ಅನೇನೈವ ವಿಧಾನೇನ ಸಂಕಲ್ಪ್ಯ ರಥಮುತ್ತಮಂ ।**
**ಕುಂಡಮಂಡಪಸಂಭಾರಭೂಷಣಾಚ್ಛಾದನಾದಿಕಂ ॥ ೩೬ ॥**

**ತದೇವ ಹೋಮದ್ರವ್ಯಂ ಚ ಹೋಮಮಂತ್ರಾಸ್ತ ಏವ ಹಿ ।**
**ವಿಶೇಷೋಽಶ್ವರಥೇ ರಾಜನ್ ಕಥ್ಯಮಾನೋ ನಿಬೋಧ್ಯತಾಂ ॥ ೩೭ ॥**

**ಹಯೌ ಲಕ್ಷಣಸಂಯುಕ್ತೌ ಖಲೀನಾಲಂಕೃತಾನನೌ ।**
**ವಿಚಿತ್ರವಸ್ತ್ರಸಂವೀತೌ ಕಂಠಾಭರಣಭೂಷಿತೌ ॥ ೩೮ ॥**

**ಸುಪ್ರಗ್ರಹಯುತೌ ಯೋಜ್ಯೌ ದಾತಾ ತಸ್ಮಿನ್ ರಥೋತ್ತಮೇ ।**
**ತಂ ಪ್ರದಕ್ಷಿಣಮಾವೃತ್ಯ ಮಂತ್ರಮೇತಮುದೀರಯೇತ್ ॥ ೩೯ ॥**

**ನಮೋಽಸ್ತು ತೇ ವೇದತುರಂಗಮಾಯ ।**
**ತ್ರಯೀಮಯಾಯ ತ್ರಿಗುಣಾತ್ಮಕಾಯ ॥**

---

೩೬-೩೭. ಎಲೈ ರಾಜನೇ! ಇದೇ ವಿಧಿಯಂತೆ ಸಂಕಲ್ಪಮಾಡಿ ಉತ್ತಮವಾದ ರಥ, ಕುಂಡ, ಮಂಡಪ, ಭೂಷಣ, ಆಚ್ಛಾದನೆ ಇತ್ಯಾದಿಗಳೂ ಮತ್ತು ಅದೇ ಸಂಭಾರ, ಹೋಮದ್ರವ್ಯ ಮತ್ತು ಹೋಮದ ಮಂತ್ರ ಇವೆಲ್ಲ ಉಳ್ಳ ಹಾಗೆ ಅಶ್ವರಥದ ದಾನವನ್ನೂ ಮಾಡಬಹುದೆಂದು ಉಕ್ತವಾಗಿರದೆ ಅದರಲ್ಲಿನ ವಿಶೇಷವನ್ನು ಹೇಳುವೆನು ಕೇಳು.

೩೮-೩೯. ಅಶ್ವರಥವನ್ನು ದಾನಮಾಡುವಾಗ ಕುದುರೆಗಳು ಸರ್ವಲಕ್ಷಣಗಳಿಂದ ಕೂಡಿದವೂ ಮತ್ತು ಕಡಿವಾಣದಿಂದ ಅಲಂಕೃತವಾದ ಮುಖಗಳುಳ್ಳವೂ ಚಿತ್ರವಸ್ತ್ರಗಳಿಂದ ಅಲಂಕೃತಗಳೂ, ಕಂಠಾಭರಣ (ಹಾರ) ದಿಂದ ಭೂಷಿತಗಳೂ ಚೆನ್ನಾದ ಹಗ್ಗದಿಂದ ಕೂಡಿದುವೂ ಆದ ಎರಡು ಕುದುರೆಗಳನ್ನು ಆ ರಥಕ್ಕೆ ಕಟ್ಟಬೇಕು. ಅಶ್ವಸಮೇತವಾದ ರಥಕ್ಕೆ ಪ್ರದಕ್ಷಿಣೆಮಾಡಿ ಮುಂದೆ ಹೇಳುವ ಈ ಮಂತ್ರವನ್ನು ಹೇಳಬೇಕು.

೪೦. ಎಲೈ ರಥವೇ! ನೀನು ಸಾಕ್ಷಾತ್ ಋಗ್ಯಜುಃಸಾಮ ಎಂಬ ಮೂರು ವೇದಗಳನ್ನು ಕುದುರೆಗಳಾಗಿ ಹೊಂದಿದ್ದೀಯೆ. ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಸ್ವರೂಪವಾಗಿದ್ದೀಯೇ. ದುರ್ಗಮನಾದ ಮಾರ್ಗ

ಸುದುರ್ಗಮಾರ್ಗೇ ಸುಖಪಾನಪಾತ್ರೇ ।
ನಮೋಽಸ್ತು ತೇ ವಾಜಿಧರಾಯ ನಿತ್ಯಂ ॥ ೪೦ ॥

ರಥೋಽಯಂ ಸವಿತಾಸಾಕ್ಷಾದ್ವೇದಾಶ್ಚಾಮೀ ತುರಂಗಮಾಃ ।
ಅರುಣೋ ಬ್ರಾಹ್ಮಣಶ್ಚಾಯಂ ಪ್ರಯಚ್ಛಂತು ಸುಖಂ ಮಮ ॥ ೪೧ ॥

ಇತ್ಯುಚ್ಚಾರ್ಯ ತತಸ್ತಸ್ಮಿನ್ ರಥೇ ಬ್ರಾಹ್ಮಣಸತ್ತಮಂ ।
ಆರೋಪಯೇದ್ಗೃಹಾದ್ದ್ವಾರಂ ಯಾವದೇತಮನುವ್ರಜೇತ್ ॥ ೪೨ ॥

ಅನೇನ ವಿಧಿನಾ ಯಸ್ತು ದದ್ಯಾದ್ವಾಜಿರಥಂ ಬುಧಃ ।
ತಸ್ಮಾದ್ವಾಹರಥಂ ರಾಜನ್ ತಸ್ಯ ಪುಣ್ಯಫಲಂ ಶೃಣು ॥ ೪೩ ॥

ಸರ್ವಪಾಪವಿನಿರ್ಮುಕ್ತಃ ಸರ್ವಾಮಯವಿವರ್ಜಿತಃ ।
ಮನ್ವಂತರಶತಂ ಯಾವತ್ಸ್ವರ್ಗಭೋಗಸಮನ್ವಿತಃ ॥ ೪೪ ॥

---

ದಲ್ಲಿ ಸುಖಜಲವನ್ನು ಕುಡಿಯತಕ್ಕ ಪಾತ್ರೆಯಂತಿರುವ ಕುದುರೆಯಿಂದ ಕೂಡಿದ್ದೀಯೆ. ಇಂಥಾ ನಿನಗೆ ನಮಸ್ಕಾರ.

೪೧. ಈ ರಥವೇ ಸಾಕ್ಷಾತ್ ಸೂರ್ಯಸ್ವರೂಪ. ಈ ಕುದುರೆಗಳೇ ಸಾಕ್ಷಾತ್ ವೇದಗಳು. ಈ ಬ್ರಾಹ್ಮಣನೇ ಸಾಕ್ಷಾತ್ ಅರುಣನು. ಹೀಗೆ ಸೇರಿರುವ ಈ ಸಮುದಾಯವು ನನಗೆ ಸುಖವನ್ನುಂಟುಮಾಡಲಿ.

೪೨. ಈರೀತಿ ಮಂತ್ರವನ್ನುಚ್ಚರಿಸಿ ಆ ರಥದಲ್ಲಿ ಶ್ರೇಷ್ಠನಾದ ಆ ಬ್ರಾಹ್ಮಣನನ್ನು ಕೂರಿಸಬೇಕು. ಮತ್ತು ಮನೆಯಿಂದಾಚೆಗೆ ಸ್ವಲ್ಪದೂರ ಹಿಂಬಾಲಿಸಿ ಹೋಗಬೇಕು.

೪೩. ಎಲೈ ರಾಜನೇ! ಬುದ್ಧಿವಂತನಾದವನು ಈ ವಿಧಿಯನ್ನನುಸರಿಸಿ ಕುದುರೆಯಿಂದ ಕೂಡಿದ ರಥವನ್ನೋ, ಆನೆಯಿಂದ ಕೂಡಿದ ರಥವನ್ನೋ ದಾನ ಮಾಡಿದರೆ ಅವನಿಗೆ ಉಂಟಾಗುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೪೪. ಅಂತಹವನು ಸಕಲ ಪಾಪಗಳಿಂದಲೂ ಸಕಲ ರೋಗಾದಿಗಳಿಂದಲೂ ಬಿಡುಗಡೆಯನ್ನು ಹೊಂದಿ ನೂರು ಮನ್ವಂತರಗಳಕಾಲ ಸಕಲ ಭೋಗಗಳನ್ನು ಅನುಭವಿಸುತ್ತಾನೆ.

**ಅಪ್ಸರೋಗಣಸಂಕೀರ್ಣೇ ವಿಮಾನೇ ಸೂರ್ಯವರ್ಚಸೇ ।**
**ದಿವ್ಯಭೋಗಾನ್ವಿತಃ ಶ್ರೀಮಾನ್ ಕಾಮಚಾರೀ ವಸೇದ್ದಿವಿ ॥ ೪೫ ॥**

**ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।**
**ಪುತ್ರಪೌತ್ರಾನ್ವಿತಶ್ಚೈವ ಚಿರಂಜೀವೀ ಪ್ರಿಯಾತಿಥಿಃ ॥ ೪೬ ॥**

**ಗಜೇನೈಕೇನ ನಿರ್ದಿಷ್ಟಃ ಕಶ್ಚಿದ್ಗಜರಥೋ ನೃಪ ।**
**ಏಕೇನಾಶ್ವೇನಾಶ್ವರಥಃ ಕಥ್ಯತೇ ವೇದವಾದಿಭಿಃ ॥ ೪೭ ॥**

**ದಾನಮಂತ್ರಾಸ್ತ ಏವೋಕ್ತಾಃ ಫಲಂ ತತ್ರ ನಿಗದ್ಯತೇ ॥ ೪೮ ॥**

**ಯಚ್ಛಂತಿ ಯೇ ರಥವರಂ ಸುಧುರಾಕ್ಷಚಕ್ರಂ ।**
**ವಿಕ್ರಾಂತವಾರಣಯುತಂ ತುರಗಾನ್ವಿತಂ ವಾ ॥**

---

೪೫. ಅನಂತರ ಸೂರ್ಯಸದೃಶವಾದುದೂ ಮತ್ತು ಅಪ್ಸರಸ್ತ್ರೀಯರಿಂದ ಕೂಡಿರತಕ್ಕದ್ದೂ ಆದ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾನೆ. ಮತ್ತು ಅಲ್ಲಿ ಸಂಪದ್ಯುಕ್ತನಾಗಿ ಸಕಲ ದಿವ್ಯಭೋಗಗಳನ್ನೂ ಅನುಭವಿಸಿ ಇಚ್ಛಾನುಸಾರ ಸಂಚಾರಮಾಡುವ ಮಹಿಮೆಯನ್ನು ಹೊಂದುತ್ತಾನೆ.

೪೬. ಆ ಪುಣ್ಯವು ಕ್ಷಯಿಸಿದನಂತರ ಭೂಲೋಕದಲ್ಲಿ ಜನಿಸಿ ಧಾರ್ಮಿಕನಾದ ರಾಜನೆನಿಸಿ ಪುತ್ರಪೌತ್ರಾದಿಗಳನ್ನು ಪಡೆದು ಅತಿಥಿಗಳ ಪ್ರೀತಿಗೆ ಪಾತ್ರನಾಗಿ ಬಹುಕಾಲ ಜೀವಿಸುತ್ತಾನೆ.

೪೭. ಎಲೈ ರಾಜನೇ! ಒಂದೇ ಗಜಯುಕ್ತವಾದ ರಥ ಮತ್ತು ಒಂದೇ ಕುದುರೆಯಿಂದ ಕೂಡಿದ ರಥ ಇವುಗಳನ್ನಾದರೂ ದಾನಮಾಡಬಹುದೆಂದು ಕೆಲವು ಮಂದಿ ವೇದಜ್ಞರು ಹೇಳುತ್ತಾರೆ.

೪೮. ಈ ರಥದ ದಾನಗಳಿಗೂ ಅದೇ ದಾನಮಂತ್ರಗಳೆಂದು ಹೇಳಲ್ಪಟ್ಟಿದೆ. ಫಲವೂ ಕೂಡ ಯಥೋಕ್ತವಾದ್ದೇ.

೪೯. ಚೆನ್ನಾಗಿ ಭಾರವನ್ನು ತಡೆಯುವ ಮೂಕಿಮರ, ಪಟ್ಟಿಗಳು ಚಕ್ರಗಳು ಉಳ್ಳದಾಗಿ ಬಲಶಾಲಿಯಾದ ಆನೆಯಿಂದ ಕೂಡಿದ ಗಜರಥವನ್ನಾಗಲಿ

**ಸೋಪಸ್ಕರಂ ಕನಕಪಟ್ಟವಿಚಿತ್ರಿತಾಂಗಂ ।**
**ತೇ ಸ್ಯಂದನೇನ ಸುರರಾಜಪುರಂ ಪ್ರಯಾಂತಿ ॥ ೪೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಗಜರಥಾಶ್ವರಥದಾನವಿಧಿವರ್ಣನಂ ನಾಮ ಅಶೀತ್ಯುತ್ತರಶತತಮೋಽಧ್ಯಾಯಃ.**



---

ಅಥವಾ ಸುವರ್ಣದ ಪಟ್ಟಿಗಳಿಂದ ಚಿತ್ರಿತವಾಗಿರುವ ರಥಾವಯುವಗಳುಳ್ಳದ್ದಾಗಿ ಕುದುರೆಯುನ್ನು ಕಟ್ಟಿರುವ ಅಶ್ವರಥವನ್ನಾಗಲಿ ದಾನಮಾಡುವ ಪುಣ್ಯಾತ್ಮರು ವಿಮಾನಾರೂಢರಾಗಿ ಇಂದ್ರಲೋಕಕ್ಕೆ ಹೋಗುತ್ತಾರೆ ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಆನೆಯ ರಥ, ಕುದುರೆಯ ರಥದ ದಾನವಿಧಿವರ್ಣನೆಯೆಂಬ ನೂರಎಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕಾಶೀತ್ಯುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ದಾನಾನ್ಯನ್ಯಾನಿ ಮೇ ಕೃಷ್ಣ ಕಥಯಸ್ವ ಯದೂತ್ತಮ ।
ಮಂಗಲ್ಯಾನಿ ಪವಿತ್ರಾಣಿ ಸರ್ವಪಾಪಹರಾಣಿ ಚ ॥ ೧ ॥

ಸಂಸಾರಸಾಗರೋತ್ತಾರಹೇತುಭೂತೋಽಸಿ ಮಾಧವ ।
ಧರ್ಮಾಧರ್ಮಪರಿಜ್ಞಾನೇ ತ್ವದನ್ಯೋ ನೇಹ ಕಶ್ಚನ ॥ ೨ ॥

॥ ಶ್ರೀಕೃಷ್ಣ ಉವಾಚ ॥

ದಾನಾನಿ ಬಹು ರೂಪಾಣಿ ಕಥಿತಾನಿ ಮಯಾ ತವ ।
ಪುನರೇವ ಪ್ರವಕ್ಷ್ಯಾಮಿ ಯದ್ಯಸ್ತಿ ತವ ಕೌತುಕಂ ॥ ೩ ॥

---

## ನೂರಎಂಭತ್ತೊಂದನೆಯ ಅಧ್ಯಾಯ

೧-೨. ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ—ಯದುವಂಶ ಶ್ರೇಷ್ಠನೂ ಲಕ್ಷ್ಮೀದೇವಿಗೆ ಒಡೆಯನೂ ಆಗಿರತಕ್ಕ ಎಲೈ ಶ್ರೀಕೃಷ್ಣನೇ! ನೀನು ಸಂಸಾರವೆಂಬ ಸಾಗರದಿಂದ ಪಾರುಮಾಡಲು ಸಮರ್ಥನಾಗಿದ್ದೀಯೆ. ಧರ್ಮ, ಅಧರ್ಮ ಎಂಬುದರ ಪರಿಜ್ಞಾನದಲ್ಲಿ ಸಮರ್ಥರು ನಿನ್ನ ಹೊರತು ಮತ್ತಾರೂ ಇಲ್ಲ. ಆದುದರಿಂದ ಮಂಗಳದಾಯಕವೂ ಸರ್ವಪಾಪಗಳನ್ನು ನಿವಾರಣೆ ಮಾಡುವುದೂ ಪರಿಶುದ್ಧವೂ ಆಗಿರತಕ್ಕ ಇತರ ದಾನಗಳ ವಿಚಾರವನ್ನೂ ಹೇಳು.

೩. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ನಾನು ನಿನಗೆ ಅನೇಕವಿಧದ ದಾನಗಳನ್ನು ವಿವರಿಸಿದುದಾಯಿತು. ನಿನಗೆ ಕೌತುಕವಿರುವ ಪಕ್ಷದಲ್ಲಿ ಇನ್ನೂ ಕೆಲವನ್ನು ಹೇಳುತ್ತೇನೆ.

ಕಥಿತಾನಿ ಮಯಾ ತುಭ್ಯಂ ಕಥಯಿಷ್ಯಾಮಿ ಯಾನಿ ಚ ।
ಮಹತಾರ್ಥೇನ ಸಿಧ್ಯಂತಿ ಪ್ರಯಚ್ಛಂತಿ ಮಹಾಫಲಂ ॥ ೪ ॥

ಕಾಮ್ಯೋ ದಾನವಿಧಿಃ ಪಾರ್ಥ ಕ್ರಿಯಮಾಣಃ ಪ್ರಯತ್ನತಃ ।
ಫಲಾಯ ಮುನಿಭಿಃ ಪ್ರೋಕ್ತೋ ವಿಪರೀತೋ ಭಯಾಯ ಚ ॥ ೫ ॥

ಜ್ಞೇಯಂ ನಿಷ್ಕಶತಂ ಸರ್ವದಾನೇಷು ವಿಧಿರುತ್ತಮಃ ।
ಮಧ್ಯಮಸ್ತು ತದರ್ಧೇನ ತದರ್ಧೇನಾವರಃ ಸ್ಮೃತಃ ॥ ೬ ॥

ಏವಂ ವೃಕ್ಷರಥೇಂದ್ರಾಣಾಂ ಧೇನೋಃ ಕೃಷ್ಣಾಜಿನಸ್ಯ ಚ ।
ಅಶಕ್ತಸ್ಯಾಽಪಿ ಕೃಷ್ಣೋಽಯಂ ಪಂಚಸೌವರ್ಣಿಕೋ ವಿಧಿಃ ॥ ೭ ॥

---

೪. ನಾನು ನಿನಗೆ ಇದುವರೆಗೆ ಯಾವ ದಾನವನ್ನು ಹೇಳಿದೆನೋ ಮತ್ತು ಹೇಳುವೆನೋ ಅವುಗಳೆಲ್ಲವೂ ಬಹು ದ್ರವ್ಯವ್ಯಯದಿಂದ ಸಾಧಿಸತಕ್ಕವು. ಅದರಂತೆಯೇ ಬಹು ಫಲವನ್ನೂ ಕೊಡುತ್ತವೆ.

೫. ಅಯ್ಯಾ ಯುಧಿಷ್ಠಿರ! ಋಷಿಗಳು ಭಯನಾಶಕ್ಕಾಗಿಯೂ ಫಲಗಳ ಪ್ರಾಪ್ತಿಗಾಗಿಯೂ ಕಾಮ್ಯವಾದ ದಾನವಿಧಿಯನ್ನು ಹೇಳಿರುವರು ಅದನ್ನು ಅವಶ್ಯವಾಗಿ ಆಚರಿಸಬೇಕು.

೬. ನೂರು ಸುವರ್ಣನಾಣ್ಯ ದಾನವು ಸಕಲ ದಾನಗಳಲ್ಲಿ ಉತ್ತಮವೆಂತಲೂ, ಅದರ ಅರ್ಧವಾದ ಐವತ್ತು ಸುವರ್ಣನಾಣ್ಯದ ದಾನವು ಮಧ್ಯಮವೆಂದೂ, ಅದರಲ್ಲೂ ಅರ್ಧ ಎಂದರೆ ಇಪ್ಪತ್ತೈದು ಸುವರ್ಣನಾಣ್ಯ ದಾನವು ಅಧಮವೆಂದೂ ತಿಳಿಯಬೇಕು.

೭. ಇದೇ ರೀತಿ ವಿಧಿಯಲ್ಲಿ ಕಲ್ಪವೃಕ್ಷದಾನ, ರಥದಾನ, ಧೇನುದಾನ, ಕೃಷ್ಣಾಜಿನದಾನ ಈ ದಾನಗಳು ಧನಿಕರಿಗೆ ಉಕ್ತವಾಗಿದೆ. ಈ ವಿಧಿಯನ್ನನುಸರಿಸಲಾರದ ಅಶಕ್ತನಿಗೆ ಐದು ಸುವರ್ಣಗಳನ್ನು ದಾನಮಾಡುವ ವಿಧಿಯು ಉಕ್ತವಾಗಿರುತ್ತದೆ.

**ಅತೋಽಪ್ಯನ್ಯೇನ ಯೋ ದದ್ಯಾನ್ಮಹಾದಾನಂ ನರಾಧಿಪ ।**
**ಪ್ರತಿಗೃಹ್ಣಾತಿ ವಾ ತಸ್ಯ ದುಃಖಶೋಕಾವಹಂ ಭವೇತ್ ॥ ೮ ॥**

**ಆದೌ ತಾವತ್ಪ್ರವಕ್ಷ್ಯಾಮಿ ಕಾಲಾಖ್ಯಂ ಪುರುಷಂ ತವ ।**
**ಸಪ್ತಸಾಗರ ದಾನಂ ಚ ಮಹಾಭೂತಘಟಂ ತಥಾ ॥ ೯ ॥**

**ಅರ್ಘ್ಯಪ್ರದಾನಮುತ್ರ್ಪೋಕ್ತಮಾತ್ಮಪ್ರತಿಕೃತಿಸ್ತಥಾ ।**
**ಸುವರ್ಣಾಶ್ವಃ ಸ್ಮೃತಃ ಷಷ್ಠಃ ಸುವರ್ಣಾಶ್ವರಥೋಽಪರಃ ॥ ೧೦ ॥**

**ಸರ್ವ ದಾನೋತ್ತಮಂ ರಾಜನ್ ಕೃಷ್ಣಾಜಿನಮಥಾಷ್ಟಮಂ ।**
**ವಿಶ್ವಚಕ್ರಂ ಚ ನವಮಂ ಹೈಮೋ ಗಜರಥಸ್ತಥಾ ॥ ೧೧ ॥**

**ಏತತ್ತೇ ದಾನದಶಕಂ ವೇದ್ಮಿ ಪಾರ್ಥಿವಸತ್ತಮ ।**
**ದೇಹಿ ದಾಪಯ ಸದ್ಬುದ್ಧಿಂ ದಾನೇ ನೃಪನರೋತ್ತಮ ॥ ೧೨ ॥**

---

೮. ಎಲೈ ರಾಜನೇ! ಇದಕ್ಕಿಂತಲೂ ಕಡಮೆ ದ್ರವ್ಯರೂಪವಾದ ಮಹಾದಾನಗಳನ್ನು ಕೊಡುವವನೂ, ಮತ್ತು ಅದನ್ನು ಸ್ವೀಕರಿಸುವವನೂ ಬಹುವಾಗಿ ದುಃಖಶೋಕಗಳಿಗೀಡಾಗುತ್ತಾರೆ.

೯. ಮೊದಲು ದಾನಗಳಾವುವೆಂಬುದನ್ನು ಹೇಳುತ್ತೇನೆ. ಕಾಲಪುರುಷ ದಾನದ ವಿಷಯ ಮೊದಲನೆಯದು. ಏಳು ಸಮುದ್ರಗಳ ದಾನ ಎರಡನೆಯದು. ಮಹಾಭೂತಘಟದಾನವು ಮೂರನೆಯದು.

೧೦. ಅರ್ಘ್ಯಪ್ರದಾನ ದಾನ ನಾಲ್ಕನೆಯದು. ತನ್ನ ಆತ್ಮಪ್ರತಿಮಾ ದಾನವು ಐದನೆಯದು. ಚಿನ್ನದ ಕುದುರೆಯ ದಾನ ಆರನೆಯದು. ಮತ್ತು ಚಿನ್ನದ ಕುದುರೆಯಿಂದ ಕೂಡಿದ ರಥದಾನವು ಏಳನೆಯದು.

೧೧. ಎಲೈ ರಾಜನೇ! ಸರ್ವೋತ್ತಮವಾದ ಕೃಷ್ಣಾಜಿನದಾನವು ಎಂಟನೆಯದು. ವಿಶ್ವಚಕ್ರದ ದಾನವು ಒಂಭತ್ತನೆಯದು. ಆನೆಯನ್ನು ಕಟ್ಟಿದ ಚಿನ್ನದ ರಥದ ದಾನವು ಹತ್ತನೆಯದು.

೧೨. ಎಲೈ ರಾಜವರ್ಯನೇ! ಈ ಹತ್ತು ದಾನಗಳನ್ನು ನಿನಗೆ ವಿವರಿಸುತ್ತೇನೆ. ನೀನು ಈ ದಾನಮಾಡುವಾಗ ಒಳ್ಳೆಯ ಮನಸ್ಸಿನಿಂದ ದಾನ ಮಾಡು. ಮತ್ತು ಅದೇರೀತಿ ಸದ್ಬುದ್ಧಿಯುತರಾಗಿರುವಂತೆ ಮಾಡಿ ಇತರರಿಂದಲೂ ಕೊಡಿಸು.

ದಾನಾದೃತೇ ನೋಪಕಾರೋ ವಿದ್ಯತೇ ಧನಿನೋಽಪರಃ ।
ದೀಯಮಾನೋ ಹಿ ನಾಪ್ನೈತಿ ಭೂಯ ಏವಾಭಿವರ್ಧತೇ ॥ ೧೩ ॥

ಕೂಪ ಉಲ್ಲಿಖ್ಯಮಾನೋಽಪಿ ಭವತ್ಯೇವ ಬಹೂದಕಃ ।
ಪುಣ್ಯಂದಿನಮಥಾಸಾದ್ಯ ಭೂಮಿಭಾಗೇ ಸಮೇ ಶುಭೇ ॥ ೧೪ ॥

ಚತುರ್ಥ್ಯಾಂ ವಾ ಚತುರ್ದಶ್ಯಾಂ ವಿಷ್ಟ್ಯಾಂ ವಾ ಪಾಂಡುನಂದನ ।
ಪುಮಾನ್ ಕೃಷ್ಣತಿಲೈಃ ಕಾರ್ಯೋ ರೌಪ್ಯದಂತಃ ಸುವರ್ಣದೃಕ್॥೧೫॥

ಖಡ್ಗೋದ್ಯತಕರೋ ದೀರ್ಣೋ ಜಪಾಕುಸುಮಕುಂಡಲಃ ।
ರಕ್ತಾಂಬರಧರಃ ಸ್ರಗ್ವೀ ಶಂಖಮಾಲಾವಿಭೂಷಿತಃ ॥ ೧೬ ॥

---

೧೩. ಧನಿಕನಾದವನು ಉಪಕಾರಮಾಡುವುದೆಂದರೆ ದಾನಮಾಡುವುದನ್ನು ಬಿಟ್ಟರೆ ಮತ್ತಾವುದೂ ಇಲ್ಲ. ಈರೀತಿ ದಾನಮಾಡಿದ ಧನವು ನಾಶವಾಗದೆ ಮತ್ತೆ ಮತ್ತೆ ಅಭಿವೃದ್ಧಿಯಾಗುತ್ತದೆ.

೧೪. ಕೂಪವನ್ನು ಆಳವಾಗಿ ತೋಡಿದಷ್ಟೂ ಬಹು ನೀರುಳ್ಳದ್ದಾಗಿರುವುದೇ ನಿದರ್ಶನ. ದಿನಶುದ್ಧಿಯುಳ್ಳಶುಭದಿದಸದಲ್ಲಿ ಒಂದೇಸಮ ಮಟ್ಟವಾಗಿಯೂ ಶುಭಕರವಾಗಿಯೂ ಇರತಕ್ಕ ಭೂಮಿಯನ್ನು ಈ ಕಾರ್ಯಕ್ಕಾಗಿ ಗೊತ್ತುಮಾಡಬೇಕು.

೧೫. ಎಲೈ ಪಾಂಡುನಂದನನಾದ ಯುಧಿಷ್ಠಿರನೇ ! ಚೌತಿ ಚತುರ್ದಶಿ, ವಿಷ್ಟಿ ಇವುಗಳಲ್ಲಿ ಯಾವುದರಲ್ಲಿಯಾದರೂ ಬೆಳ್ಳಿಯ ಹಲ್ಲುಗಳೂ ಮತ್ತು ಚಿನ್ನದ ಕಣ್ಣುಗಳೂ ಉಳ್ಳ, ಒಬ್ಬ ಮನುಷ್ಯಪ್ರತಿಮೆಯನ್ನು ಕರಿಯ ಎಳ್ಳಿನಿಂದ ನಿರ್ಮಿಸಬೇಕು.

೧೬. ಆ ಪ್ರತಿಮೆಯು ಕೈಯನ್ನು ತೀಕ್ಷ್ಣವಾದ ಖಡ್ಗ ಮೇಲಕ್ಕೆತ್ತಿ ಹಿಡಿದಿರಬೇಕು. ಅದರಲ್ಲಿ ಕೆಂಪುದಾಸವಾಳದ ಹೂವಿನ ಕುಂಡಲ ಕಿವಿಯಲ್ಲಿರಬೇಕು. ಕೆಂಪುಬಟ್ಟೆಯನ್ನು ಧರಿಸಿ ಹೂವಿನ ಹಾರವನ್ನು ಹಾಕಿಕೊಂಡು ಶಂಖದ ಮಾಲೆಯಿಂದ ಅಲಂಕೃತವಾಗಿ ಇರಬೇಕು.

**ತೀಕ್ಷ್ಣಾಸಿಪತ್ರಧನುಷಾ ವಿಸ್ಫಾರಿತಕಟೇತಟಃ ।**
**ಉಪಾನದ್ಯುಗಯುಕ್ತೋ ಹಿ ಕೃಷ್ಣಕಂಬಲಪಾರ್ಶ್ವಗಃ ॥ ೧೭ ॥**

**ಗೃಹೀತಮಾಂಸಪಿಂಡಶ್ಚ ವಾಮೇ ಕರತಲೇ ತಥಾ ।**
**ಏವಂ ವಿಧಂ ನರಂ ಕೃತ್ವಾ ಗೃಹೀತಕುಸುಮಾಂಜಲಿಃ ॥ ೧೮ ॥**

**ಸಂಪೂಜ್ಯ ಗಂಧಕುಸುಮೈರ್ನೈವೇದ್ಯಂ ವಿನಿವೇದ್ಯ ಚ ।**
**ತಿಲಾಜ್ಯಂ ಜುಹುಯಾತ್ತತ್ರ ತ್ರ್ಯಂಬಕೇತಿ ಚ ಮಂತ್ರತಃ ॥ ೧೯ ॥**

**ಸ್ವಗೃಹ್ಯೋಕ್ತ ವಿಧಾನೇನ ಶತಮಷ್ಟೋತ್ತರಂ ಯಜೇತ್ ।**
**ಯಜಮಾನಃ ಪ್ರಸನ್ನಾತ್ಮಾ ಇಮಂ ಮಂತ್ರಮುದೀರಯೇತ್ ॥ ೨೦ ॥**

**ಸರ್ವಂ ಕಲಯಸೇ ಯಸ್ಮಾತ್ಕಾಲಸ್ತ್ವಂ ತೇನ ಭಣ್ಯಸೇ ।**
**ಬ್ರಹ್ಮವಿಷ್ಣುಶಿವಾದೀನಾಂ ತ್ವಮಸಾಧ್ಯೋಽಸಿ ಸುವ್ರತ ॥ ೨೧ ॥**

---

೧೭. ಸೊಂಟದಲ್ಲಿ ವಿಶಾಲವೂ ತೀಕ್ಷ್ಣವೂ ಆದ ಕತ್ತಿಯನ್ನೂ ಧನುಸ್ಸನ್ನೂ ಧರಿಸಿರಬೇಕು. ಕಾಲುಗಳಿಗೆ ಎರಡು ಪಾದರಕ್ಷೆಗಳನ್ನು ಹಾಕಿರಬೇಕು. ಪಾರ್ಶ್ವದಲ್ಲಿ ಕರೀಕಂಬಳಿಯನ್ನು ಇಟ್ಟಿರಬೇಕು.

೧೮. ಆ ತಿಲಪ್ರತಿಮೆಯು ಎಡದ ಕೈಯಲ್ಲಿ ಮಾಂಸಪಿಂಡವನ್ನು ಹಿಡಿದಿರಬೇಕು. ಇಂತಹ ನರಪ್ರತಿಮೆಯನ್ನು ರಚನೆಮಾಡಿ ತಾನು ಅಂಜಲಿಯಲ್ಲಿ ಕುಸುಮವನ್ನು ಹಿಡಿದು.

೧೯. ಗಂಧ, ಹೂವು ಇವುಗಳಿಂದ ಆ ಪ್ರತಿಮೆಗೆ ಪೂಜೆಮಾಡಿ ನೈವೇದ್ಯವನ್ನು ಸಮರ್ಪಿಸಿ "ತ್ರ್ಯಂಬಕಂ" ಎಂಬ ಮಂತ್ರದಿಂದ ಎಳ್ಳು, ಆಜ್ಯ ಇವನ್ನು ಹೋಮ ಮಾಡಬೇಕು.

೨೦. ಯಜಮಾನನು ಸ್ವಶಾಖೆಯಲ್ಲಿ ಹೇಳಿರತಕ್ಕ ವಿಧಾನದಿಂದ ನೂರೆಂಟು ಹೋಮವನ್ನು ಮಾಡಬೇಕು. ಮತ್ತು ಪ್ರಸನ್ನಾತ್ಮನಾಗಿ ಈ ಮುಂದೆ ಹೇಳುವ ಮಂತ್ರವನ್ನು ಹೇಳಬೇಕು.

೨೧. ಎಲೈ ಕಾಲನೇ! ನೀನು ಸುಚರಿತ್ರೆಯುಳ್ಳವನಾಗಿದ್ದಿ. ನೀನು ಎಲ್ಲವನ್ನೂ ಒಟ್ಟುಗೂಡಿಸುತ್ತೀಯಾದುದರಿಂದಲೇ ಕಾಲನೆಂದು ಹೇಳಿಸಿಕೊಳ್ಳುತ್ತೀಯೆ. ಇಂತಹ ನೀನು ಬ್ರಹ್ಮ, ವಿಷ್ಣು, ಶಿವ ಇವರಿಗೂ ಕೂಡ ಜಯಿಸಲು ಅಸಾಧ್ಯನಾಗಿದ್ದೀಯೆ.

ಪೂಜಿತಸ್ತ್ವಂ ಮಯಾ ಭಕ್ತ್ಯಾ ಪ್ರಾರ್ಥಿತಶ್ಚ ತಥಾ ಸುಖಂ ।
ಯದುಚ್ಯತೇ ತವ ವಿಭೋ ತತ್ಕುರುಷ್ವ ನಮೋ ನಮಃ ॥ ೨೨ ॥

ಏವಂ ಸಂಪೂಜಯಿತ್ವಾ ತಂ ಬ್ರಾಹ್ಮಣಾಯ ನಿವೇದಯೇತ್ ।
ಬ್ರಾಹ್ಮಣಂ ಪ್ರಥಮಂ ಪೂಜ್ಯ ವಾಸೋಭಿರ್ಭೂಷಣೈಸ್ತಥಾ ॥ ೨೩ ॥

ದಕ್ಷಿಣಾಂ ಶಕ್ತಿತೋ ದದ್ಯಾತ್ಪ್ರಣಿಪತ್ಯ ವಿಸರ್ಜಯೇತ್ ।
ಅನೇನ ವಿಧಿನಾ ಯಸ್ತು ದಾನಮೇತತ್ಪ್ರಯಚ್ಛತಿ ॥ ೨೪ ॥

ನಾಪಮೃತ್ಯುಭಯಂ ತಸ್ಯ ನ ಚ ವ್ಯಾಧಿಕೃತಂ ಭಯಂ ।
ಭವತ್ಯವ್ಯಾಹತೈಶ್ವರ್ಯಃ ಸರ್ವಬಾಧಾ ವಿವರ್ಜಿತಃ ॥ ೨೫ ॥

---

೨೨. ಅಂತಹ ನಿನ್ನನ್ನು ನಾನು ಭಕ್ತಿಯಿಂದ ಪೂಜಿಸುತ್ತೇನೆ. ನನ್ನಿಂದ ಸುಖವನ್ನು ಪ್ರಾರ್ಥಿಸುತ್ತೇನೆ. ನಿನ್ನ ಮಹಿಮೆಯು ಯಾವರೀತಿ ಉಪಕಾರವಾಗಿರುವದೋ ಆ ರೀತಿ ಸಫಲಮಾಡು. ನಿನಗೆ ಮತ್ತೆ ಮತ್ತೆ ನಮಸ್ಕಾರ.

೨೩. ಈ ರೀತಿ ಅದನ್ನು ಪೂಜೆಮಾಡಿ ದಾನಮಾಡಬೇಕು. ದಾನಕ್ಕೆ ಮೊದಲು ಬ್ರಾಹ್ಮಣನನ್ನು ಭೂಷಣ ಇತ್ಯಾದಿಗಳಿಂದ ಪೂಜಿಸಿ ಅನಂತರ ಆ ಕಾಲಪುರುಷ ವಿಗ್ರಹವನ್ನು ಆ ಬ್ರಾಹ್ಮಣನಿಗೆ ದಾನಮಾಡಬೇಕು.

೨೪. ಆ ಸಂದರ್ಭದಲ್ಲಿ ಲೋಭಮಾಡದೆ ತನ್ನ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಡಬೇಕು. ಅನಂತರ ಬ್ರಾಹ್ಮಣನನ್ನು ನಮಸ್ಕರಿಸಿ ಬೀಳ್ಕೊಡಬೇಕು.

೨೫. ಈ ವಿಧಿಗನುಸಾರವಾಗಿ ದಾನಮಾಡತಕ್ಕ ಮನುಜನಿಗೆ ಯಾವ ಆಪಮೃತ್ಯು ಭಯವಾಗಲಿ ವ್ಯಾಧಿಗಳ ಭಯವಾಗಲಿ ಇರುವುದಿಲ್ಲ. ಮತ್ತು ಆತನು ಎಂದೂ ನಾಶವಾಗದಂತಹ ಸಂಪತ್ತುಳ್ಳವನೂ ಸಕಲ ಬಾಧಾರಹಿತನೂ ಆಗುತ್ತಾನೆ.

**ದೇಹಾಂತೇ ಸೂರ್ಯಭವನಂ ಭಿತ್ವಾ ಯಾತಿ ಪರಂ ಪದಂ ।**
**ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ॥**
**ಸಂತತ್ಯಾ ಚ ಶ್ರಿಯಾ ಯುಕ್ತಃ ಪುತ್ರಪೌತ್ರಸಮನ್ವಿತಃ ॥ ೨೬ ॥**

**ಸಂಪೂಜ್ಯ ಕಾಲಪುರುಷಂ ವಿಧಿವದ್ದ್ವಿಜಾಯ ।**
**ದತ್ವಾ ಶುಭಾಶುಭಫಲೋದಯಹೇತುಭೂತಃ ॥**
**ರೋಗಾಂತರೇ ಸಕಲ ದೋಷಮಯೇ ಚ ದೇಹೀ ।**
**ನೋ ವಧ್ಯಭಾವಮುಪಗಚ್ಛತಿ ತತ್ಪ್ರಭಾವಾತ್ ॥ ೨೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಕಾಲಪುರುಷದಾನವಿಧಿವರ್ಣನಂ ನಾಮ ಏಕಾಶೀತ್ಯುತ್ತರಶತತಮೋಽಧ್ಯಾಯಃ.**

---

೨೬. ದೇಹಾವಸಾನದಲ್ಲಿ ಸೂರ್ಯಮಂಡಲವನ್ನು ಭೇದಿಸಿಕೊಂಡು ಸರ್ವೋತ್ತಮವಾದ ಸ್ಥಾನವನ್ನು ಪಡೆಯುತ್ತಾನೆ. ಅಲ್ಲಿ ಪುಣ್ಯವು ಕ್ಷಯವಾಗುವ ವರೆಗೂ ಇದ್ದು ಅನಂತರ ಭೂಮಿಯಲ್ಲಿ ಜನಿಸಿ ಧರ್ಮಿಷ್ಠನಾದ ರಾಜನಾಗಿ ಸತ್ಸಂತತಿಯುಳ್ಳವನೂ ಸಂಪದ್ಯುಕ್ತನೂ ಮಕ್ಕಳು ಮೊಮ್ಮಕ್ಕಳು ಇತ್ಯಾದಿಗಳಿಂದ ಕೂಡಿದವನೂ ಆಗುತ್ತಾನೆ.

೨೭. ಜನ್ಮವೆತ್ತಿದ್ದಕ್ಕೆ ಮನುಜನು ಕಾಲಪುರುಷನನ್ನು ವಿಧಿಪ್ರಕಾರವಾಗಿ ಪೂಜಿಸಿ ಬ್ರಾಹ್ಮಣನಿಗೆ ದಾನಮಾಡಿದರೆ ತನ್ನ ಒಳ್ಳೆಯ ಫಲಗಳ ಆವಿರ್ಭಾವಕ್ಕೂ ಮತ್ತು ಕೆಟ್ಟ ಫಲಗಳ ನಾಶಕ್ಕೂ ಕಾರಣನಾಗುತ್ತಾನೆ. ಅವನಿಗೆ ಯಾವ ರೋಗವೇ ಬರಲಿ ಮತ್ತು ಇತರ ಯಾವ ವಿಪತ್ತುಗಳೇ ಒದಗಲಿ ಅವನು ಈ ದಾನದ ಮಹಿಮೆಯಿಂದ ಮೃತಿಹೊಂದುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಕಾಲಪುರುಷ ದಾನವಿಧಿವರ್ಣನೆಯೆಂಬ ನೂರಎಂಭತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಅಥಾತಃ ಸಂಪ್ರವಕ್ಷ್ಯಾಮಿ ಪಾರ್ಥ ದಾನಮನುತ್ತಮಂ ।
ಸಪ್ತಸಾಗರಕಂ ನಾಮ ಸರ್ವಪಾಪಪ್ರಣಾಶನಂ || ೧ ||

ಪುಣ್ಯಂ ದಿನಮಥಾಸಾದ್ಯ ಯುಗಾದಿಗ್ರಹಣಾದಿಕಂ ।
ಕಾರಯೇತ್ಸಪ್ತಕುಂಡಾನಿ ಕಾಂಚನಾನಿ ವಿಚಕ್ಷಣಃ || ೨ ||

ಪ್ರಾದೇಶಮಾತ್ರಾಣಿ ತಥಾರತ್ನಿಮಾತ್ರಾಣಿ ವಾ ಪುನಃ ।
ಕುರ್ಯಾತ್ಸಪ್ತಶತಾದೂರ್ಧ್ವಮಾಸಹಸ್ರಾಚ್ಚ ಶಕ್ತಿತಃ || ೩ ||

---

## ನೂರಎಂಭತ್ತೆರಡನೆಯ ಅಧ್ಯಾಯ

೧. ಶ್ರೀ ಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಸಕಲ ಪಾಪನಿವಾರಕವೂ ಸರ್ವೋತ್ತಮವೂ ಆದ ಸಪ್ತಸಾಗರ ದಾನಕ್ರಮವನ್ನು ಹೇಳುತ್ತೇನೆ ಕೇಳು.

೨. ತಿಳಿವಳಿಕೆಯುಳ್ಳವನು ಯುಗಾದಿ ಅಥವಾ ಗ್ರಹಣ ಮೊದಲಾದ ಪುಣ್ಯದಿನದಲ್ಲಿ ಚಿನ್ನದಿಂದ ಏಳು ಕಲಶಗಳನ್ನು ಮಾಡಿಸಬೇಕು.

೩. ಆ ಕಲಶಗಳು ಒಂದುಚೋಟು ಪ್ರಮಾಣ, ಅಥವಾ ಕಿರುಬೆರಳು ನೀಡಿದ ಮುಷ್ಟಿಮೊಳದ ಪ್ರಮಾಣ ಉಳ್ಳವುಗಳಾಗಿರಬೇಕು. ಅವುಗಳಲ್ಲಿ ಏಳು ನೂರಕ್ಕಿಂತ ಮೇಲ್ಪಟ್ಟು ಸಾವಿರ ಪರ್ಯಂತವಾಗಿ ತನ್ನ ಶಕ್ತ್ಯನುಸಾರ ಭಾಗ ಗುರ್ತು ಮಾಡಬೇಕು.

ಸಂಸ್ಥಾಪ್ಯಾನಿ ಚ ಸರ್ವಾಣಿ ಕೃಷ್ಣಾಜಿನತಿಲೋಪರಿ ।
ಪ್ರಥಮಂ ಪೂರಯೇತ್ಕುಂಡಂ ಲವಣೇನ ವಿಚಕ್ಷಣಃ ॥ ೪ ॥

ದ್ವಿತೀಯಂ ಪಯಸಾ ತದ್ವತ್ ತೃತೀಯಂ ಸರ್ಪಿಷಾ ಪುನಃ ।
ಚತುರ್ಥಂ ತು ಗುಡೇನೈವ ದಧ್ನಾ ಪಂಚಮಮೇವ ಚ ॥ ೫ ॥

ಷಷ್ಠಂ ಶರ್ಕರಯಾ ತದ್ವತ್ಸಪ್ತಮಂ ತೀರ್ಥವಾರಿಣಾ ।
ಸ್ಥಾಪಯೇಲ್ಲವಣಸ್ಯಾಂತೇ ಬ್ರಹ್ಮಾಣಂ ಕಾಂಚನಂ ಶುಭಂ ॥ ೬ ॥

ಕೇಶವಂ ಕ್ಷೀರಮಧ್ಯೇ ತು ಘೃತಮಧ್ಯೇ ಮಹೇಶ್ವರಂ ।
ಭಾಸ್ಕರಂ ಗುಡಮಧ್ಯೇ ತು ದಧಿಮಧ್ಯೇ ಸುರಾಧಿಪಂ ॥ ೭ ॥

---

೪. ಕೃಷ್ಣಾಜಿನವನ್ನು ಹಾಸಿ ಅದರ ಮೇಲೆ ಎಳ್ಳನ್ನು ಸುರಿದು ಅದರ ಮೇಲೆ ಆ ಕಲಶಗಳನ್ನು ಇರಿಸಬೇಕು. ಮತ್ತು ಮೊದಲನೆಯ ಕಲಶವಲ್ಲಿ ಉಪ್ಪನ್ನು ತುಂಬಬೇಕು.

೫. ಇದರಂತೆಯೇ ಎರಡನೆಯ ಕಲಶದಲ್ಲಿ ಕ್ಷೀರವನ್ನೂ, ಮೂರನೆಯ ಕುಂಡದಲ್ಲಿ ತುಪ್ಪವನ್ನೂ ನಾಲ್ಕನೆಯ ಕುಂಡದಲ್ಲಿ ಬೆಲ್ಲವನ್ನೂ ಐದನೆಯ ಕುಂಡದಲ್ಲಿ ಮೊಸರನ್ನೂ ತುಂಬಬೇಕು.

೬. ಆರನೆಯ ಕುಂಡದಲ್ಲಿ ಸಕ್ಕರೆಯನ್ನೂ ಏಳನೆಯ ಕುಂಡದಲ್ಲಿ ಪುಣ್ಯತೀರ್ಥಗಳ ಜಲವನ್ನೂ ತುಂಬಬೇಕು. ಇವುಗಳನ್ನು ಹಿಂದೆ ಹೇಳಿದಂತೆ ಕೃಷ್ಣಾಜಿನದ ಮೇಲೆ ಹರಡಿದ ಎಳ್ಳಿನ ಮೇಲಿರಿಸಬೇಕು. ಇದಾದನಂತರ ಲವಣ ಕುಂಡದ ಮಧ್ಯದಲ್ಲಿ ಸುವರ್ಣದಿಂದ ಮಾಡಿದ ಬ್ರಹ್ಮನ ಪ್ರತಿಮೆಯನ್ನು ಇರಿಸಬೇಕು.

೭. ಹಾಲಿನ ಕಲಶದ ಒಳಗೆ ಸುವರ್ಣದ ಕೇಶವಪ್ರತಿಮೆಯನ್ನೂ, ತುಪ್ಪದ ಕಲಶದ ಮಧ್ಯದಲ್ಲಿ ಮಹೇಶ್ವರನ ಸ್ವರ್ಣಪ್ರತಿಮೆಯನ್ನೂ, ಬೆಲ್ಲದ ಕಲಶದ ಮಧ್ಯದಲ್ಲಿ ಭಾಸ್ಕರಪ್ರತಿಮೆಯನ್ನೂ, ಮೊಸರಿನ ಕಲಶದ ಮಧ್ಯದಲ್ಲಿ ಇಂದ್ರ ಪ್ರತಿಮೆಯನ್ನೂ ಸ್ಥಾಪಿಸಬೇಕು.

ಶರ್ಕರಾಯಾಂ ನ್ಯಸೇಲ್ಲಕ್ಷ್ಮೀಂ ಜಲಮಧ್ಯೇ ತು ಪಾರ್ವತೀಂ ।
ಸರ್ವೇಷು ಸರ್ವರತ್ನಾನಿ ಧಾನ್ಯಾನಿ ಚ ಸಮಂತತಃ ॥ ೮ ॥

ಸ್ಥಾಪಯೇತ್ಪುರುಷಶ್ರೇಷ್ಠ ಯಥಾಲಾಭಂ ಯಥಾಸುಖಂ ।
ತತಃ ಪರ್ವಸಮೀಪೇ ತು ಸ್ನಾತಃ ಶುಕ್ಲಾಂಬರೋ ಗೃಹೀ ॥ ೯ ॥

ತ್ರಿಃ ಪ್ರದಕ್ಷಿಣಮಾವೃತ್ಯ ಮಂತ್ರಾನೇತಾನುದೀರಯೇತ್ ।
ನಮೋ ವಃ ಸರ್ವಸಿಂಧೂನಾಮಾಧಾರೇಭ್ಯಃ ಸನಾತನಾಃ ॥ ೧೦ ॥

ಜಂತೂನಾಂ ಪ್ರಾಣದೇಭ್ಯಶ್ಚ ಸಮುದ್ರೇಭ್ಯೋ ನಮೋ ನಮಃ ।
ಪೂರ್ಣಾಃ ಸರ್ವೇ ಭವಂತೋ ವೈ ಕ್ಷಾರಕ್ಷೀರಘೃತೈಕ್ಷವೈಃ ॥ ೧೧ ॥

ದಧ್ನಾ ಶರ್ಕರಯಾ ತದ್ವತ್ ತೀರ್ಥವಾರಿಭಿರೇವ ಚ ।
ತಸ್ಮಾದಘೌಘವಿಧ್ವಂಸಂ ಕುರುಧ್ವಂ ಮಮ ಮಾನದಾಃ ॥ ೧೨ ॥

---

೮. ಅದರಂತೆಯೇ ಸಕ್ಕರೆಯ ಕಲಶದಲ್ಲಿ ಲಕ್ಷ್ಮಿಯ ಪ್ರತಿಮೆಯನ್ನೂ ತೀರ್ಥ ಕಲಶದಲ್ಲಿ ಪಾರ್ವತಿಯ ಪ್ರತಿಮೆಯನ್ನೂ ಸ್ಥಾಪಿಸಬೇಕು. ಮತ್ತು ಏಳು ಕಲಶಗಳಲ್ಲಿಯೂ ಸರ್ವರತ್ನಗಳನ್ನು ಹಾಕಬೇಕು. ಸುತ್ತಲೂ ಧಾನ್ಯವನ್ನು ಇರಿಸಬೇಕು.

೯. ಈ ಸಂದರ್ಭದಲ್ಲಿ ತನ್ನ ಶಕ್ತ್ಯನುಸಾರ ಎಂದರೆ ಆಗ್ಗೆ ದೊರೆತಷ್ಟು ಧಾನ್ಯವನ್ನು ಇರಿಸಬೇಕು. ಅನಂತರ ಆ ಗೃಹಸ್ಥನು ಪರ್ವಕಾಲ ಸಮೀಪಿಸುತ್ತಲೆ ಸ್ನಾನವನ್ನು ಮಾಡಿ ಶುಭ್ರವಸ್ತ್ರ ಧರಿಸಬೇಕು.

೧೦. ಬಳಿಕ ಆ ಕಲಶಗಳೆಲ್ಲಕ್ಕೂ ಮೂರು ಪ್ರದಕ್ಷಿಣೆಯನ್ನು ಮಾಡಿ “ ಸಕಲ ಸಮುದ್ರಗಳಿಗೂ ಆಧಾರಭೂತಗಳೂ ಸನಾತನಗಳೂ ಆಗಿರುವ ನಿಮಗೆ ನಮಸ್ಕಾರ ” ಎಂಬ ಅರ್ಥದ ಈ ಮಂತ್ರವನ್ನು ಹೇಳಬೇಕು.

೧೧. ಪ್ರಾಣಿಗಳಿಗೆ ಪ್ರಾಣದಾನವನ್ನು ಮಾಡತಕ್ಕ ಸಮುದ್ರಗಳೆನಿಸಿದ ನಿಮಗೆ ಮತ್ತೆ ಮತ್ತೆ ನಮಸ್ಕಾರ. ನೀವುಗಳು ಉಪ್ಪು, ಹಾಲು, ತುಪ್ಪ ಮತ್ತು ಬೆಲ್ಲ ಇವುಗಳಿಂದಲೂ,

೧೨. ಮೊಸರು, ಸಕ್ಕರೆ, ಶುದ್ಧೋದಕ ಇವುಗಳಿಂದಲೂ ಪೂರ್ಣರಾಗಿರುವ ಗೌರವದಾಯಕರಾದ ನೀವು ನನ್ನ ಪಾಪಗಳನ್ನೆಲ್ಲಾ ನಾಶಮಾಡಿರಿ.

**ಅಲಕ್ಷ್ಮೀಃ ಪ್ರಶಮಂ ಯಾತು ಲಕ್ಷ್ಮೀಶ್ಚಾಸ್ತು ಗೃಹೇ ಮಮ ।**
**ಏವಮುಚ್ಚಾರ್ಯ ತಾನ್ ದದ್ಯಾದ್ಬ್ರಾಹ್ಮಣೇಭ್ಯೋ ಯುಧಿಷ್ಠಿರ॥೧೩॥**

**ಏಕಮೇವಮಥಾಭ್ಯರ್ಚ್ಯ ಪುಷ್ಪವಸ್ತ್ರವಿಲೇಪನೈಃ ।**
**ಬಹೂನಾಮೇತದುದ್ದಿಷ್ಟಂ ದಾನಮೇಕಸ್ಯ ವಾ ಪುನಃ ॥ ೧೪ ॥**

**ದೇಯಂ ವಾ ಸರ್ವ ಸಾಮಾನ್ಯಂ ಕ್ರಿಯಾ ವಿಪ್ರಾನುರೂಪತಃ ।**
**ದಾನಂ ಸಪ್ತಸಮುದ್ರಾಖ್ಯಂ ಯಃ ಪ್ರಯಚ್ಛತಿ ಪಾರ್ಥಿವ ॥ ೧೫ ॥**

**ತಸ್ಯ ಗೃಹಾನ್ನ ಚಲತಿ ಲಕ್ಷ್ಮೀರ್ಯಾವತ್ಕುಲಾಷ್ಟಕಂ ।**
**ಪೂಜ್ಯಮಾನಃ ಸುರಗಣೈಃ ಸಿದ್ಧವಿದ್ಯಾಧರೋರಗೈಃ ॥ ೧೬ ॥**

**ದೇವಲೋಕಾನ್ನ ಚ್ಯವತೇ ಸಪ್ತಮನ್ವಂತರಾಣ್ಯಸೌ ।**
**ತತಶ್ಚ ವೇದಸಂಸ್ಕಾರಾತ್ ಪರಂ ಬ್ರಹ್ಮಾಧಿಗಚ್ಛತಿ ॥ ೧೭ ॥**

---

೧೩. ನನ್ನ ಮನೆಯಲ್ಲಿ ದಾರಿದ್ರ್ಯವು ನಾಶವಾಗಿ ಸಂಪತ್ತು ಸಮೃದ್ಧಿಯಾಗಿ ಉಂಟಾಗಲಿ. ಎಲೈ ಯುಧಿಷ್ಠಿರನೇ! ಮೇಲೆ ಹೇಳಿದಂತೆ ಮಂತ್ರಗಳನ್ನುಚ್ಚರಿಸಿ ಪ್ರಾರ್ಥಿಸಿ ಆ ಸಾಗರರೂಪೀ ಕಲಶಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.

೧೪. ಪುಷ್ಪ, ವಸ್ತ್ರ, ಗಂಧ ಇವುಗಳಿಂದ ಶ್ರೋತ್ರಿಯ ಬ್ರಾಹ್ಮಣನನ್ನು ಪೂಜಿಸಿ ಒಬ್ಬ ವಿಪ್ರನಿಗೇ ದಾನಮಾಡಬಹುದು. ಅಥವಾ ಅನೇಕರಿಗಾದರೂ ದಾನಮಾಡಬಹುದು.

೧೫–೧೬. ಅಥವಾ ಇದನ್ನು ದಾನಸ್ವೀಕಾರಕ್ಕೆ ಅನುರೂಪರಾದ ಕ್ರಿಯಾವಂತರಾದ ಬ್ರಾಹ್ಮಣ ಸಾಮಾನ್ಯಕ್ಕೂ ದಾನಮಾಡಬಹುದು. ಎಲೈ ರಾಜನೇ! ಈ ಸಪ್ತಸಮುದ್ರ ದಾನವನ್ನು ಮಾಡತಕ್ಕ ಮನುಷ್ಯನ ಮನೆಯಲ್ಲಿ ಸಂಪತ್ತು ಎಂಟು ತಲೆಮಾರಿನ ವರೆಗೂ ಚಲಿಸದೆ ಸ್ಥಿರವಾಗಿರುವುದು. ಆತನು ಸಿದ್ಧರು, ವಿದ್ಯಾಧರರು, ಉರಗರು ಮತ್ತು ದೇವಗಣ ಇವುಗಳಿಂದ ಪೂಜಿಸಲ್ಪಡುತ್ತಾನೆ.

೧೭. ಆತನು ಏಳು ಮನ್ವಂತರಗಳ ಕಾಲ ಚಲಿಸದೆ ದೇವಲೋಕದಲ್ಲಿ ಸ್ಥಿರವಾಗಿರುತ್ತಾನೆ. ಅಲ್ಲಿ ಆತನಿಗೆ ವೇದಸಂಸ್ಕಾರವುಂಟಾಗಿ ಅದರಿಂದ ಶಾಶ್ವತವಾದ ಬ್ರಹ್ಮಲೋಕವನ್ನು ಹೊಂದುತ್ತಾನೆ.

ಇತಿ ದದಾತಿ ರಸಾಮರಸಂಯುತಾ- ।
ಞ್ಛುಚಿರವಿಸ್ಮಯದಾನಿಹ ಸಾಗರಾನ್ ॥
ಅನಲಕಾಂಚನರತ್ನಮಯಾನಸೌ ।
ಪದಮುಪೈತಿ ಹರೇ ರಮಯಾ ವೃತಂ ॥ ೧೮ ॥

ದಾನಂ ಪ್ರಧಾನತರಮೇತದತೀವ ವಿಪ್ರೇ ।
ಪ್ರೋಕ್ತಂ ಯುಧಿಷ್ಠಿರ ಸಮಾಧಿಧಿಯಾ ವಿಚಿಂತ್ಯ ॥
ಹೈಮಾನ್ನಿಧಾಯ ಜಲಧೀನ್ನಿತರ ಸ್ವಶಕ್ತ್ಯಾ ।
ಪ್ರಾಪ್ನೋತಿ ಯೇನ ಸರಸಾನಿ ಸಮೀಹಿತಾನಿ ॥ ೧೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ಸಪ್ತಸಾಗರದಾನವಿಧಿವರ್ಣನಂ ನಾಮ ದ್ವ್ಯಶೀತ್ಯುತ್ತರಶತತಮೋऽಧ್ಯಾಯಃ.

---

೧೮. ದೇವತೆಗಳು ಪಾನಮಾಡಲು ಯೋಗ್ಯವಾದ ರಸಗಳಿಂದ ಕೂಡಿದುದೂ, ನೈರ್ಮಲ್ಯ ಶಾಂತಿ ಇವುಗಳನ್ನುಂಟುಮಾಡುವುದೂ ಮತ್ತು ಬೆಂಕಿ, ಚಿನ್ನ, ರತ್ನ ಇವುಗಳ ರೂಪವಾಗಿರತಕ್ಕದ್ದೂ ಆದ ಸಪ್ತಸಾಗರಗಳನ್ನು ದಾನ ಮಾಡತಕ್ಕವನು ಲಕ್ಷ್ಮೀದೇವೀಸಮೇತನಾದ ಶ್ರೀಹರಿಯು ಪದವಿಯನ್ನು ಪಡೆಯುತ್ತಾನೆ.

೧೯. ಅಯ್ಯಾ ಯುಧಿಷ್ಠಿರ! ಬ್ರಾಹ್ಮಣನು ಸಮಾಧಿಸ್ಥನಾದಂತೆ ನಿಶ್ಚಲವಾದ ಬುದ್ಧಿಯಿಂದ ಚೆನ್ನಾಗಿ ಆಲೋಚನೆಮಾಡಿ ತನ್ನ ಶಕ್ತ್ಯನುಸಾರ ಚಿನ್ನದ ಕಲಶದಲ್ಲಿ ಸಮುದ್ರಗಳನ್ನು ದಾನಮಾಡಬೇಕು. ಇದೇ ಬಹು ಪ್ರಧಾನವಾದ ದಾನ. ಇದನ್ನು ಮಾಡಿದರೆ ತನಗೆ ಸಮೀಚೀನವಾದ ಇಷ್ಟಾರ್ಥಗಳನ್ನೆಲ್ಲಾ ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದದಲ್ಲಿ ಸಪ್ತಸಮುದ್ರ ದಾನವಿಧಿವರ್ಣನೆ ಎಂಬ ನೂರಎಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ದಾನಮನ್ಯತ್ತಮೋತ್ತಮಂ ।
ಮಹಾಭೂತಘಟಂ ನಾಮ ಮಹಾಪಾತಕನಾಶನಂ ॥ ೧ ॥

ಪುಣ್ಯಾಂ ತಿಥಿಂ ಸಮಾಸಾದ್ಯ ಸ್ವನುಲಿಪ್ತೇ ಗೃಹಾಂಗಣೇ ।
ಕಾರಯೇತ್ಕಾಂಚನಂ ಕುಂಭಂ ಮಹಾರತ್ನಾನ್ವಿತಂ ಪುನಃ ॥ ೨ ॥

ಪ್ರಾದೇಶಾದಂಗುಲಶತಂ ಯಾವತ್ಕುರ್ಯಾತ್ಪ್ರಮಾಣತಃ ।
ಶಕ್ತ್ಯಾ ಪಂಚಪಲಾದೂರ್ಧ್ವಮಾಶತಾಚ್ಚ ನರೋತ್ತಮ ॥ ೩ ॥

---

## ನೂರಎಂಭತ್ತಮೂರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಮಹಾಪಾಪಗಳನ್ನು ನಾಶಮಾಡುವಂತಹುದೂ ಮತ್ತು ಇನ್ನೂ ಅತ್ಯುತ್ತಮವೂ ಆದ ಮಹಾಭೂತಘಟ ಎಂಬ ಹೆಸರುಳ್ಳ ಇನ್ನೊಂದು ದಾನವನ್ನು ನಿನಗೆ ಹೇಳುವೆನು.

೨. ಈ ದಾನಕ್ಕೆ ಒಂದು ಶುಭದಿನವನ್ನು ನಿಷ್ಕರ್ಶಿಸಿ ಮನೆಯ ಅಂಗಣದ ಸ್ಥಳವನ್ನು (ಗೋಮಯದಿಂದ) ಸಾರಿಸಿ ಈ ದಾನಕ್ಕಾಗಿ ಮಾಡಿಸಿದ ಚಿನ್ನದ ಒಂದು ಕುಂಭವನ್ನು ಇರಿಸಿ ಅದರಲ್ಲಿ ಮಹಾರತ್ನಗಳನ್ನು ಹಾಕಬೇಕು.

೩. ಅಯ್ಯಾ ನರಶ್ರೇಷ್ಠನೇ! ಕೊನೇಪಕ್ಷ ಒಂದುಚೋಟು ಉದ್ದದಿಂದ ಪರಮಾವಧಿ ನೂರುಅಂಗುಲ ಪ್ರಮಾಣದಲ್ಲಿ, ಕನಿಷ್ಠಪಕ್ಷ ಐದುಪಲ, ಪರಮಾವಧಿ ನೂರುಪಲಗಳ ಪರ್ಯಂತವಾಗಿ ತನ್ನ ಶಕ್ತ್ಯನುಸಾರದಷ್ಟು ಪಲಗಳಲ್ಲಿ ಆ ಕುಂಭಗಳನ್ನು ನಿರ್ಮಿಸಬೇಕು.

ಕ್ಷೀರಾಜ್ಯಪೂರಿತಂ ಕೃತ್ವಾ ಕಲ್ಪವೃಕ್ಷಸಮನ್ವಿತಂ ।
ಪದ್ಮಾಸನ ಗತಾಸ್ತತ್ರ ಬ್ರಹ್ಮವಿಷ್ಣುಮಹೇಶ್ವರಾಃ ॥ ೪ ॥

ಲೋಕಪಾಲಾ ಮಹೇಂದ್ರಾಶ್ಚ ಸ್ವವಾಹನಸಮಾಸ್ಥಿತಾಃ ।
ಋಗ್ವೇದಃ ಸಾಕ್ಷಸೂತ್ರಶ್ಚ ಯಜುರ್ವೇದಃ ಸಪಂಕಜಃ ॥ ೫ ॥

ವೀಣಾಧಾರೀ ಸಾಮವೇದೋ ಹ್ಯಥರ್ವಾ ಸ್ರಕ್ಶುಭಾನ್ವಿತಃ ।
ಪುರಾಣವೇದೋ ವರದಃ ಸಾಕ್ಷಸೂತ್ರಕಮಂಡಲುಃ ॥ ೬ ॥

ಸಪ್ತಧಾನ್ಯಾನಿ ಪುರತಃ ಸ್ಥಾಪಯೇಚ್ಛಕ್ತಿತೋ ಬುಧಃ ।
ಪಾದುಕೋಪಾನಹಚ್ಛತ್ರಂ ಚಾಮರಾಗ್ನ್ಯಾಸನಾಯುಧಾನ್ ॥ ೭ ॥

---

೪. ಅದರಲ್ಲಿ ಹಾಲು, ತುಪ್ಪ ಇವುಗಳನ್ನು ತುಂಬಬೇಕು. ರಚಿಸಿದ ಕಲ್ಪವೃಕ್ಷದ ಪ್ರತಿಮೆಯ ಹತ್ತಿರ ಇರಿಸಬೇಕು. ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳ ಪ್ರತಿಮೆಯನ್ನು ಪದ್ಮಾಸನಗತರಾಗಿರುವಂತೆ ರಚಿಸಬೇಕು.

೫. ಲೋಕಪಾಲಕರು, ಮಹೇಂದ್ರ ಇವರ ಪ್ರತಿಮೆಗಳು ವಾಹನ ಸಮೇತವಾಗಿ ಇರಬೇಕು. ಋಗ್ವೇದಾಭಿಮಾನದೇವತೆಯ ಕೈ ಅಕ್ಷಸೂತ್ರಯುತ ವಾಗಿಯೂ ಯಜುರ್ವೇದಾಭಿಮಾನದೇವತೆಯು ಕಮಲಯುತವಾಗಿಯೂ ಇರ ಬೇಕು.

೬. ಸಾಮವೇದಾಭಿಮಾನದೇವತೆಯು ವೀಣಾಧಾರಿಯಾಗಿಯೂ ಅಥ ರ್ವಣವೇದಾಭಿಮಾನದೇವತೆಯು ಶುಭವಾದ ಹಾರವನ್ನು ಧರಿಸಿಯೂ ಇರ ಬೇಕು. ಮತ್ತು ಪುರಾಣಾಭಿಮಾನದೇವತೆಯನ್ನು ಒಂದು ವರದಹಸ್ತಯುಕ್ತವೂ ಜಪಸರ ಮತ್ತು ಕಮಂಡಲು ಧರಿಸಿರುವಂತೆಯೂ ನಿರ್ಮಿಸಬೇಕು.

೭. ಮತ್ತು ಪ್ರಾಜ್ಞನು ಕುಂಭದ ಮುಂದೆ ತನ್ನ ಶಕ್ತ್ಯನುಸಾರ ಏಳು ಧಾನ್ಯಗಳನ್ನೂ ಮತ್ತು ಪಾದುಕೆ, ಛತ್ರಿ, ಚಾಮರ, ಅಗ್ನಿ, ಆಸನ, ಆಯುಧ ಇವುಗಳನ್ನೂ ಸ್ಥಾಪಿಸಬೇಕು.

ಏವಂ ಪ್ರಕಲ್ಪ್ಯ ವಿಧಿವನ್ಮಹಾಭೂತಘಟಂ ನರಃ ।
ಗುಡಸಾರೋಪರಿಗತಂ ಮಾಲ್ಯವಸ್ತ್ರೈರಥಾರ್ಚಯೇತ್ ॥ ೮ ॥

ಅಥ ಪರ್ವಸಮೀಪೇ ತು ಸ್ನಾತ್ವಾ ನಿಯತಮಾನಸಃ ।
ತ್ರಿಃ ಪ್ರದಕ್ಷಿಣಮಾವೃತ್ಯ ಮಂತ್ರಮೇತಮುದೀರಯೇತ್ ॥ ೯ ॥

ಯಸ್ಮಾನ್ನ ಕಿಂಚಿದಪ್ಯಸ್ತಿ ಮಹಾಭೂತೈರ್ವಿನಾ ಕೃತಂ ।
ಮಹಾಭೂತಮಯಶ್ಚಾಯಂ ತಸ್ಮಾಚ್ಛಾಂತಿಂ ದದಾತು ಮೇ ॥ ೧೦ ॥

ಅತ್ರ ಸನ್ನಿಹಿತಾ ದೇವಾಃ ಸ್ಥಾಪಿತಾ ವಿಶ್ವಕರ್ಮಣಾ ।
ತೇ ಮೇ ಶಾಂತಿಂ ಪ್ರಯಚ್ಛಂತು ಭಕ್ತಿಭಾವೇನ ಪೂಜಿತಾಃ ॥ ೧೧ ॥

ಇತ್ಯೇವಂ ಪೂಜಯಿತ್ವಾ ತು ಮಹಾಭೂತಘಟಂ ನರಃ ।
ಬ್ರಾಹ್ಮಣಂ ಪೂಜಯಿತ್ವಾ ತು ಭೂಷಣಾಚ್ಛಾದನಾದಿಭಿಃ ॥ ೧೨ ॥

---

೮. ವ್ರತಿಯಾದವನು ಈ ವಿಧಿಯಂತೆ ಮಹಾಭೂತಘಟವನ್ನು ನಿರ್ಮಿಸಿ ಅದನ್ನು ಬೆಲ್ಲದ ರಾಶಿಯ ಮೇಲೆ ಇರಿಸಿ, ಮಾಲೆ, ವಸ್ತ್ರ ಇತ್ಯಾದಿಗಳಿಂದ ಅರ್ಚಿಸಬೇಕು.

೯. ಪರ್ವಕಾಲ ಸನ್ನಿಹಿತವಾದ ಸಮಯದಲ್ಲಿ ಯಜಮಾನನು ಸ್ನಾನ ಮಾಡಿ ಶುದ್ಧಮನಸ್ಕನಾಗಿ ಪೂಜಿಸಿ ಆ ಘಟವನ್ನು ಮೂರು ಪ್ರದಕ್ಷಿಣೆ ಮಾಡಿ ಪ್ರಾರ್ಥನೆ ಮಾಡುವನಾಗಿ.

೧೦. ಮಹಾಭೂತಗಳಿಲ್ಲದೆ ಯಾವ ವಸ್ತುವೂ ಕೂಡ ನಿರ್ಮಾಣವಾಗಿಲ್ಲ. ಆದುದರಿಂದ ಈ ಕಲಶವು ಮಹಾಭೂತಗಳ ಸ್ವರೂಪವಾಗಿದೆ. ಇದನ್ನು ದಾನಮಾಡುವುದರಿಂದ ನನಗೆ ಸುಖವುಂಟಾಗಲಿ.

೧೧. ಸ್ಥಾಪಿಸಿರತಕ್ಕ ಈ ಕುಂಭದಲ್ಲಿ ವಿಶ್ವಕರ್ಮನು ನಿರ್ಮಿಸಿದ ದೇವತೆಗಳೆಲ್ಲರೂ ಸನ್ನಿಹಿತವಾಗಿರುತ್ತಾರೆ. ಅವರನ್ನು ನಾನು ಭಕ್ತಿಯಿಂದ ಪೂಜಿಸುವೆನು. ಆದುದರಿಂದ ಅವರು ನನಗೆ ಶಾಂತಿಯನ್ನುಂಟುಮಾಡಲಿ.

೧೨. ಎಂಬ ಈ ಮಂತ್ರವನ್ನುಚ್ಚರಿಸಿ ಆ ಕುಂಭವನ್ನು ಪ್ರಾರ್ಥಿಸಿದನಂತರ ಒಡವೆ, ವಸ್ತ್ರ ಇತ್ಯಾದಿಗಳಿಂದ ಬ್ರಾಹ್ಮಣನನ್ನು ಪೂಜಿಸಬೇಕು.

ಮಹಾಭೂತಘಟಂ ದದ್ಯಾತ್ಪರ್ವಕಾಲೇ ಯತವ್ರತಃ ।
ಪುನಃ ಪ್ರದಕ್ಷಿಣೀಕೃತ್ಯ ಬ್ರಾಹ್ಮಣಂ ತಂ ಕ್ಷಮಾಪಯೇತ್ ॥ ೧೩ ॥

ಅನೇನ ವಿಧಿನಾ ಯಶ್ಚ ದಾನಮೇತತ್ಪ್ರಯಚ್ಛತಿ ।
ಏಕವಿಂಶತ್ಕುಲೋಪೇತಃ ಶಿವಲೋಕೇ ಪ್ರಯಾತ್ಯಸೌ ॥ ೧೪ ॥

ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।
ಅಜೇಯಃ ಶತ್ರುಸಂಘಾತೈಃ ಮಹಾಬಲಪರಾಕ್ರಮಃ ॥ ೧೫ ॥

ಕ್ಷತ್ರಧರ್ಮರತೋ ವಿದ್ವಾನ್ ದೇವಬ್ರಾಹ್ಮಣಪೂಜಕಃ ॥ ೧೬ ॥

ಅಷ್ಟಾಪದೋತ್ತಮಘಟಂ ವಿಮಲಂ ವಿಧಾಯ ।
ಬ್ರಹ್ಮೇಶಕೇಶವಯುತಂ ಸಹ ಲೋಕಪಾಲೈಃ ॥

---

೧೩. ಈ ವ್ರತವನ್ನು ಆಚರಿಸತಕ್ಕವನು ಪರ್ವಕಾಲದಲ್ಲಿಯೇ ಆ ಕುಂಭವನ್ನು ಆ ಬ್ರಾಹ್ಮಣನಿಗೆ ದಾನಮಾಡಬೇಕು. ಅನಂತರ ಮತ್ತೆ ಪ್ರದಕ್ಷಿಣೆ ಮಾಡಿ ಆ ಬ್ರಾಹ್ಮಣನನ್ನು ಕ್ಷಮಾಪಣೆ ಕೇಳಬೇಕು.

೧೪. ಈ ವಿಧಿಯನ್ನು ಅನುಸರಿಸಿ ಕುಂಭದಾನ ಮಾಡತಕ್ಕ ಮನುಷ್ಯನು ತಾನು ಮಾತ್ರವಲ್ಲದೆ ತನ್ನ ಇಪ್ಪತ್ತೊಂದು ತಲೆಮಾರಿನವರೊಡನೆ ಶಿವಲೋಕಕ್ಕೆ ಹೋಗುತ್ತಾನೆ.

೧೫. ಆ ಪುಣ್ಯವು ಕ್ಷಯಿಸಿದನಂತರ ಭೂಮಿಯಲ್ಲಿ ಜನಿಸಿ ಧಾರ್ಮಿಕನೂ ಶತ್ರುಗಳನ್ನು ಜಯಿಸತಕ್ಕವನೂ ಪರಾಕ್ರಮಶಾಲಿಯೂ ಆದ ರಾಜನಾಗುತ್ತಾನೆ.

೧೬. ಮತ್ತು ಆತನು ಕ್ಷತ್ರಿಯಧರ್ಮವನ್ನು ಪಾಲಿಸುವವನೂ ದೇವರು ಬ್ರಾಹ್ಮಣ ಇವರನ್ನು ಪೂಜಿಸತಕ್ಕವನೂ ಆಗುತ್ತಾನೆ.

೧೭. ಎಲೈ ಯುಧಿಷ್ಠಿರನೇ! ಇತರ ನೂರಾರು ದಾನಗಳನ್ನು ಮಾಡಿದರೆ ತಾನೇ ಏನು ಪ್ರಯೋಜನ? ಸುವರ್ಣದಿಂದ ಉತ್ತಮವಾದ ಕುಂಭವನ್ನು ನಿರ್ಮಿಸಿ ಅದರಲ್ಲಿ ಹಾಲು, ತುಪ್ಪ ಇವುಗಳನ್ನು ತುಂಬಿ ಭಕ್ತಿಯಿಂದ ನಮಸ್ಕರಿಸಿ

ಕ್ಷೀರಾಜ್ಯಪೂರ್ಣ ವಿವರಂ ಪ್ರಣಿಪತ್ಯ ಭಕ್ತ್ಯಾ ।
ವಿಪ್ರಾಯ ದೇಹಿ ತವ ದಾನಶತೈಃ ಕಿಮನ್ಯೈಃ ॥ ೧೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ
ಸಂವಾದೇ ಮಹಾಭೂತಘಟದಾನ ವಿಧಿವರ್ಣನಂ
ನಾಮ ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ.



ಬ್ರಹ್ಮ, ಈಶ್ವರ, ಕೇಶವ ಇವರ ಪ್ರತಿಮೆಗಳೊಡನೆ ಬ್ರಾಹ್ಮಣನಿಗೆ ದಾನಮಾಡು ಎಂದು ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಮಹಾಭೂತಘಟ ದಾನದವಿಧಿವರ್ಣನೆಯೆಂಬ
ನೂರಎಂಭತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುರಶೀತ್ಯುತ್ತರಶತತಮೋಽಧ್ಯಾಯಃ

---

|| ಶ್ರೀಕೃಷ್ಣ ಉವಾಚ ||

ಶಯ್ಯಾದಾನಂ ಪ್ರವಕ್ಷ್ಯಾಮಿ ತವ ಪಾಂಡುಕುಲೋದ್ವಹ |
ಯದ್ದತ್ವಾ ಸುಖಭಾಗೀ ಸ್ಯಾದಿಹಲೋಕೇ ಪರತ್ರ ಚ || ೧ ||

ಶಯ್ಯಾದಾನಂ ಪ್ರಯುಚ್ಛಂತಿ ಸರ್ವದೈವ ದ್ವಿಜೋತ್ತಮಾಃ |
ಅನಿತ್ಯಂ ಜೀವಿತಂ ಯಸ್ಮಾತ್ ಕೋಽನ್ಯಃ ಪಶ್ಚಾತ್ಪ್ರದಾಸ್ಯತಿ || ೨ ||

---

## ನೂರಎಂಭತ್ತನಾಲ್ಕನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಎಲೈ ಪಾಂಡುವಂಶೋತ್ಪನ್ನನಾದ ಯುಧಿಷ್ಠಿರನೇ! ಮನುಜನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಕೂಡ ಸುಖಭಾಗಿಯಾಗುವಂತಹ ಫಲಪ್ರದವಾದ ಶಯ್ಯಾದಾನ ವಿಚಾರವನ್ನು ಹೇಳುತ್ತೇನೆ.

೨. ವಿಪ್ರವರ್ಯರು ಯಾವಾಗಲೂ ಶಯ್ಯಾದಾನವನ್ನು ಮಾಡುತ್ತಿರುತ್ತಾರೆ. ಜೀವನವು ಅನಿತ್ಯವಾದುದು. ಹೀಗಿರುವಲ್ಲಿ ಮೃತನಾದ ಅನಂತರ ಯಾವನು ತಾನೆ ದಾನಮಾಡಲು ಆದೀತು.

ತಾವತ್ಸ ಬಂಧುಸ್ಸ ಪಿತಾ ಯಾವಜ್ಜೀವತಿ ಭಾರತ ।
ಮೃತೋ ಮೃತ ಇತಿ ಜ್ಞಾತ್ವಾ ಕ್ಷಣಾತ್ಸ್ನೇಹೋ ನಿವರ್ತತೇ　　|| ೩ ||

ತಸ್ಮಾತ್ಸ್ವಯಂ ಪ್ರದಾತವ್ಯಂ ಶಯ್ಯಾಭೋಜ್ಯಜಲಾದಿಕಂ ।
ಆತ್ಮೈವಹ್ಯಾತ್ಮನೋ ಬಂಧುರಿತಿ ಸಂಚಿಂತ್ಯ ಚೇತಸಿ　　|| ೪ ||

ಆತ್ಮೈವ ಯೋ ಹಿ ನಾತ್ಮಾನಂ ದಾನಭೋಗೈಃ ಸಮರ್ಚಯೇತ್ ।
ಕೋಽನ್ಯೋ ಹಿತತರಸ್ತಸ್ಮಾತ್ ಕಃ ಪಶ್ಚಾತ್ಪೂಜಯಿಷ್ಯತಿ　　|| ೫ ||

ತಸ್ಮಾಚ್ಛಯ್ಯಾಂ ಸಮಾಸಾದ್ಯ ಸಾರದಾರುಮಯೀಂ ಧೃಢಾಂ ।
ದಂತಪತ್ರಚಿತಾಂ ರಮ್ಯಾಂ ಹೇಮಪಟ್ಟೈರಲಂಕೃತಾಂ　　|| ೬ ||

---

೩. ಎಲೈ ಯುಧಿಷ್ಠಿರನೇ ! ಮನುಜನು ತಾನು ಬದುಕಿರುವವರೆಗೆ ಮಾತ್ರ ಬಂಧುಸಮೇತನೂ, ಪಿತೃಸಮೇತನೂ ಎನಿಸಿ ಪ್ರೀತ್ಯಾಸ್ಪದನಾಗಿ ಇರುವನು. ಮೃತನಾದ ಕೂಡಲೆ ಆ ಸಂಗತಿ ತಿಳಿದ ಒಂದುಕ್ಷಣಕಾಲದಲ್ಲಿ ಅವರಲ್ಲಿ ಗಾಢವಾಗಿದ್ದ ಸ್ನೇಹವು ನಿರ್ನಾಮವಾಗಿ ಹೋಗುತ್ತದೆ.

೪. ಆದುದರಿಂದ ಮನುಜನು ಮನಸ್ಸಿನಲ್ಲಿ ತನಗೆ ತಾನೇ ಬಂಧುವೆಂಬುದನ್ನು ಚೆನ್ನಾಗಿ ಆಲೋಚಿಸಿ ತಾನೇ ಸಾಕ್ಷಾತ್ತಾಗಿ ಶಯ್ಯಾದಾನ, ಭೋಜ್ಯವಸ್ತುದಾನ, ಉದಕುಂಭದಾನ ಇತ್ಯಾದಿಗಳನ್ನು ಮಾಡಬೇಕು.

೫. ಯಾವ ಮನುಜನು ಸಾಕ್ಷಾತ್ತಾಗಿ ತಾನೇ ದಾನಮಾಡುವುದು ಮತ್ತು ಭೋಗಿಸುವುದು ಇತ್ಯಾದಿಗಳಿಂದ ತನ್ನ ಆತ್ಮವನ್ನು ಸಂತೋಷಪಡಿಸುವುದಿಲ್ಲವೋ ಅಂತಹವನಿಗೆ ಹಿತೈಷಿಗಳಾದವರು ಬೇರೆ ಯಾರುತಾನೆ ಇರುವರು? ಅಥವಾ ಇದ್ದರೂ ಯಾರುತಾನೆ ಇವನ ಕಾಲಾನಂತರ ಇವನನ್ನು ಸಂತೋಷಪಡಿಸಿಯಾರು ?

೬. ಆದುದರಿಂದ ಮನುಜನು ಭದ್ರವಾಗಿ ಗಟ್ಟಿಯಾದ ಮರದಿಂದ ರಚಿತವಾಗಿರತಕ್ಕುದೂ ಮತ್ತು ದಂತಪತ್ರದಿಂದ ಕೆತ್ತಲ್ಪಟ್ಟಿದೂ ಮತ್ತು ಸುವರ್ಣದ ಪಟ್ಟಿಗಳಿಂದ ಅಲಂಕೃತವೂ ಆದ ಒಂದು ಮಂಚವನ್ನು ಮಾಡಿಸಬೇಕು.

ಹಂಸತೂಲೀ ಪ್ರತಿಚ್ಛನ್ನಾಂ ಸುಭಗಾಂ ಸೋಪಧಾನಿಕಾಂ ।
ಪ್ರಚ್ಛಾದನಪಟೀಯುಕ್ತಾಂ ಗಂಧಧೂಪಾಧಿವಾಸಿತಾಂ ॥ ೭ ॥

ತಸ್ಯಾಂ ಸಂಸ್ಥಾಪಯೇದ್ಧೈಮಂ ಹರಿಂ ಲಕ್ಷ್ಮೀಸಮನ್ವಿತಂ ।
ಉಚ್ಛೀರ್ಷಕೇ ಧೃತಂ ಚೈವ ಕಲಶಂ ಪರಿಕಲ್ಪಯೇತ್ ॥ ೮ ॥

ವಿಜ್ಞೇಯಂ ಪಾಂಡವ ಸದಾ ಸನಿದ್ರಾಕಲ್ಪಕಂ ಬುಧೈಃ ।
ತಾಂಬೂಲಂ ಕುಂಕುಮಕ್ಷೋದಕರ್ಪೂರಾಗರುಚಂದನಂ ॥ ೯ ॥

ದೀಪಕೋಪಾನಹಚ್ಛತ್ರಚಾಮರಾಸನಭೋಜನಂ ।
ಪಾರ್ಶ್ವೇಷು ಸ್ಥಾಪಯೇಚ್ಛಕ್ತ್ಯಾ ಸಪ್ತಧಾನ್ಯಾನಿ ಚೈವ ಹಿ ॥ ೧೦ ॥

---

೭. ಆದರಲ್ಲಿ ಸುಂದರವಾದ ಮಗ್ಗುಲಹಾಸಿಗೆ ಮತ್ತು ಹೊದ್ದಿಕೆ ಸಮೇತವಾದ ಹಂಸತೂಲಿಕಾತಲ್ಪವನ್ನು ತಲೆದಿಂಬು ಸಮೇತ ಇರಿಸಬೇಕು. ಮತ್ತು ಆ ಹಾಸಿಗೆಯನ್ನು ಗಂಧ, ಧೂಪ ಇತ್ಯಾದಿಗಳಿಂದ ಸುವಾಸನಾಯುಕ್ತವಾದುದನ್ನಾಗಿ ಮಾಡಬೇಕು.

೮. ಆ ಮಂಚದಲ್ಲಿ ಸುವರ್ಣದಿಂದ ರಚಿತವಾದ ಲಕ್ಷ್ಮೀಸಮೇತನಾದ ವಿಷ್ಣುವನ್ನು ಸ್ಥಾಪಿಸಬೇಕು. ತಲೆಯ ಮೇಲೆ ಕಲಶವನ್ನು ಧರಿಸಿರುವಂತೆ ಆ ಪ್ರತಿಮೆಯನ್ನು ರಚಿಸಬೇಕು.

೯. ಎಲೈ ಯುಧಿಷ್ಠಿರನೇ! ವಿದ್ವಾಂಸರಾದವರು ಆ ಮಂಚದಲ್ಲಿ ಸ್ಥಾಪಿಸಿರುವ ಪ್ರತಿಮೆಯು ನಿದ್ರಿಸುತ್ತಿದೆಯೆಂದು ತಿಳಿಯಬೇಕು. ಮತ್ತು ಆ ಮಂಚದ ಬಳಿ ಕುಂಕುಮಕೇಸರಿಯ ಚೂರ್ಣ, ಪಚ್ಚಕರ್ಪೂರ, ಅಗರು, ಚಂದನ ಇವುಗಳನ್ನೂ ಮತ್ತು ತಾಂಬೂಲವನ್ನೂ ಇರಿಸಬೇಕು.

೧೦. ಮಂಚದ ಪಾರ್ಶ್ವದಲ್ಲಿ ದೀಪ, ಪಾದುಕೆ, ಛತ್ರಿ, ಚಾಮರ, ಆಸನ, ಭಕ್ಷ್ಯಭೋಜ್ಯ ಇವುಗಳನ್ನೂ ಮತ್ತು ಸಪ್ತಧಾನ್ಯಗಳನ್ನೂ ತನ್ನ ಶಕ್ತ್ಯನುಸಾರ ಸ್ಥಾಪಿಸಬೇಕು.

**ಶಯನಸ್ಥಸ್ಯ ಭವತಿ ಯದನ್ಯದುಪಕಾರಕಂ ।**
**ಭೃಂಗಾರಕಾದ್ಯಪುಷ್ಪಾಣಿ ಪಂಚವರ್ಣವಿತಾನಕಂ** ॥ ೧೧ ॥

**ಶಯ್ಯಾಮೇವಂ ವಿಧಾಂ ಕೃತ್ವಾ ಬ್ರಾಹ್ಮಣಾಯೋಪಪಾದಯೇತ್ ।**
**ಸಪತ್ನೀಕಾಯ ಸಂಪೂಜ್ಯ ಪುಣ್ಯೇಽಹ್ನಿ ವಿಧಿಪೂರ್ವಕಂ** ॥ ೧೨ ॥

**ನಮಸ್ತೇ ಸರ್ವದೇವೇಶ ಶಯ್ಯಾದಾನಂ ಕೃತಂ ಮಯಾ ।**
**ದೇಹಿ ತಸ್ಮಾಚ್ಛಾಂತಿಫಲಂ ನಮಸ್ತೇ ಪುರುಷೋತ್ತಮ** ॥ ೧೩ ॥

**ಯಥಾ ನ ಕೃಷ್ಣ ಶಯನಂ ಶೂನ್ಯಂ ಸಾಗರಜಾತಯಾ ।**
**ಶಯ್ಯಾ ಮಮಾಪ್ಯಶೂನಾಸ್ತು ತಥಾ ಜನ್ಮನಿ ಜನ್ಮನಿ** ॥ ೧೪ ॥

---

೧೧. ಮತ್ತು ಶಯನಮಾಡಿರುವ ಹರಿಯ ಪ್ರತಿಮೆಗೆ ಉಪಚಾರಾರ್ಥವಾಗಿ ಗಿಂಡಿಯಲ್ಲಿ ಪಾನೀಯ ನಾನಾವಿಧ ಪುಷ್ಪಗಳಿಂದ ರಚಿತವಾದ ಐದು ವರ್ಣವುಳ್ಳ ಚಪ್ಪರ ಮೇಲುಕಟ್ಟು ಇವನ್ನು ರಚಿಸಬೇಕು.

೧೨. ಈ ರೀತಿ ಶಯ್ಯಾಸಹಿತವಾದ ಮಂಚವನ್ನು ಸಿದ್ಧಮಾಡಿ ಸಪತ್ನೀಕನಾದ ಬ್ರಾಹ್ಮಣನನ್ನು ಶುಭದಿವಸದಲ್ಲಿ ಆಹ್ವಾನಿಸಿ ಯಥಾವಿಧಿಯಾಗಿ ಆ ದಂಪತಿಗಳನ್ನು ಸತ್ಕರಿಸಿ ಶಯ್ಯಾದಾನ ಮಾಡಬೇಕು.

೧೩. ಆ ಸಮಯದಲ್ಲಿ ಸಕಲ ದೇವತೆಗಳಿಗೂ ಒಡೆಯನಾದ ಶ್ರೀಕೃಷ್ಣ ಪರಮಾತ್ಮನೇ! ನಾನು ಶಯ್ಯಾದಾನ ಮಾಡಿರುವೆನು. ತತ್ಫಲವಾಗಿ ನನಗೆ ಶಾಂತಿಯನ್ನು ದಯಪಾಲಿಸು. ನಿನಗೆ ನಮಸ್ಕಾರ ಎಂದು ಹೇಳಬೇಕು.

೧೪. ಸ್ವಾಮಿ ಪರಮಾತ್ಮ! ಮಹಾವಿಷ್ಣುವಿನ ಶಯ್ಯೆಯು ಸಾಗರದಲ್ಲಿ ಉತ್ಪನ್ನಳಾದ ಲಕ್ಷ್ಮಿಯಿಂದ ಯಾವರೀತಿ ರಹಿತವಾಗಿರುವುದಿಲ್ಲವೋ (ಸದಾ ಲಕ್ಷ್ಮಿಯೊಡಗೂಡಿ ಇರುತ್ತದೊ) ಅದೇ ಪ್ರಕಾರ ನನಗೂ ಸಹ ಪ್ರತಿ ಜನ್ಮದಲ್ಲಿಯೂ ನನ್ನ ಶಯ್ಯೆಯು ಪತ್ನೀಸಮೇತವಾಗಿಯೇ ಇರಲಿ ಎಂಬದಾಗಿ ಪ್ರಾರ್ಥಿಸಬೇಕು.

ದತ್ತ್ವೈವಂ ತಲ್ಪಮಮಲಂ ಪ್ರಣಿಪತ್ಯ ವಿಸರ್ಜಯೇತ್ ।
ಏಕಾದಶಾಹೇಽಪಿ ತಥಾ ವಿಧಿರೇಷ ಪ್ರಕೀರ್ತಿತಃ ॥ ೧೫ ॥

ದದಾತಿ ಯದಿ ಧರ್ಮಾರ್ಥಂ ಮಾನವೋ ಬಾಂಧವೇ ಮೃತೇ ।
ವಿಶೇಷಂ ತತ್ರ ರಾಜೇಂದ್ರ ಕಥ್ಯಮಾನಂ ನಿಬೋಧ ಮೇ ॥ ೧೬ ॥

ತೇನೋಪಭುಕ್ತಂ ಯದ್ವಸ್ತು ಕಿಂಚಿತ್ಪೂರ್ವಂ ಗೃಹೇ ಸತಾ ।
ತದ್ಗಾತ್ರಲಗ್ನಂ ಚ ತಥಾ ವಸ್ತ್ರವಾಹನಭಾಜನಂ ॥ ೧೭ ॥

ಯದಿಷ್ಟಂ ಚ ತಥಾಸ್ಯಾಸೀತ್ ತತ್ಸರ್ವಂ ಪರಿಕಲ್ಪಯೇತ್ ।
ಸ ಏವ ಪುರುಷೋ ಹೈಮಸ್ತಸ್ಯಾಂತಂ ಸ್ಥಾಪಯೇತ್ತಥಾ ॥ ೧೮ ॥

ಪೂಜಯಿತ್ವಾ ಪ್ರದಾತವ್ಯಾ ಮೃತಶಯ್ಯಾ ಯಥೋದಿತಾ ।
ಸ್ವರ್ಗೇ ಪುರಂದರಗೃಹೇ ಸೂರ್ಯಪುತ್ರಾಲಯೇಽಥ ವಾ ॥ ೧೯ ॥

---

೧೫. ಈ ರೀತಿ ಶ್ರೇಷ್ಠವಾದ ಆ ಶಯ್ಯೆಯನ್ನು ದಾನಮಾಡಿದನಂತರ ಬ್ರಾಹ್ಮಣನನ್ನು ನಮಸ್ಕರಿಸಿ ಬೀಳ್ಕೊಡಬೇಕು. ಮೃತನ ಉತ್ತರಕ್ರಿಯೆಯ ಹನ್ನೊಂದನೆ ದಿನದಲ್ಲಿಯೂ ಕೂಡ ಶಯ್ಯಾದಾನದಲ್ಲಿ ಇದೇ ವಿಧಿಯನ್ನನುಸರಿಸಬೇಕೆಂದು ಉಕ್ತವಾಗಿರುತ್ತದೆ.

೧೬. ಎಲೈ ರಾಜಾಧಿರಾಜನಾದ ಯುಧಿಷ್ಠಿರನೇ! ಮಾನವನು ತನ್ನ ಬಂಧು ಮೃತನಾದಾಗ ಈ ರೀತಿ ಶಯ್ಯಾದಾನ ಮಾಡುವುದರಲ್ಲಿ ಸ್ವಲ್ಪ ವಿಶೇಷ ಕ್ರಮವಿದೆ ಅದನ್ನು ಹೇಳುವೆನು ಕೇಳು.

೧೭. ಮೃತನಾದವನು ಜೀವಂತನಾಗಿದ್ದಾಗ ಉಪಯೋಗಿಸಿದ ವಸ್ತುಗಳು, ಆತನ ದೇಹಸ್ಪರ್ಶವಾದ ವಸ್ತ್ರ, ವಾಹನ ಮತ್ತು ಪಾತ್ರೆ ಇತ್ಯಾದಿಗಳು.

೧೮-೧೯. ಮತ್ತು ಆತನಿಗೆ ಅಭೀಷ್ಟವಾದ ಸಕಲ ವಸ್ತುಗಳು, ಇವುಗಳನ್ನೆಲ್ಲ ಸಿದ್ಧಪಡಿಸಬೇಕು. ಆ ಮೃತನ ಪ್ರತಿಮೆಯನ್ನು ಸುವರ್ಣದಿಂದ ನಿರ್ಮಿಸಿ ಅದನ್ನೂ ಈ ವಸ್ತುವೆಲ್ಲವನ್ನೂ ಆ ತಲ್ಪದ ಮಧ್ಯದಲ್ಲಿ ಸ್ಥಾಪಿಸಬೇಕು. ಬಳಿಕ ಅವನ್ನು ಯಥಾವಿಧಿಯಾಗಿ ಪೂಜಿಸಿ ದಾನಮಾಡಬೇಕು. ಇದಕ್ಕೆ ಮೃತಶಯ್ಯೆಯೆಂದು ಹೆಸರು.

**ಸುಖಂ ವಸತ್ಯಸೌ ಜಂತುಃ ಶಯ್ಯಾದಾನಪ್ರಭಾವತಃ |**
**ಪೀಡಯಂತಿ ನ ತಂ ಯಾಮ್ಯಾಃ ಪುರುಷಾ ಭೀಷಣಾನನಾಃ || ೨೦ ||**

**ನ ಘರ್ಮೇಣ ನ ಶೀತೇನ ಬಾಧ್ಯತೇ ಸ ನರಃ ಕ್ವಚಿತ್ |**
**ಅಪಿ ಪಾಪಸಮಾಯುಕ್ತಃ ಸ್ವರ್ಗಲೋಕೇ ಮಹೀಯತೇ || ೨೧ ||**

**ವಿಮಾನವರಮಾರೂಢಃ ಸೇವ್ಯಮಾನೋಽಪ್ಸರೋಗಣೈಃ |**
**ಆಭೂತಸಂಪ್ಲವಂ ಯಾವತ್ತಿಷ್ಠೇತ್ಪಾತಕವರ್ಜಿತಃ || ೨೨ ||**

**ಶಯ್ಯಾ ಪ್ರದಾನಮಮಲಂ ತವ ಪಾಂಡುಪುತ್ರ |**
**ಸಂಕೀರ್ತಿತಂ ಸಕಲಸೌಖ್ಯನಿಧಾನಮೇತತ್ ||**

---

೨೦. ಈ ರೀತಿ ಶಯ್ಯಾದಾನವನ್ನು ಮಾಡಿದ ವ್ಯಕ್ತಿಯು ಆ ದಾನದ ಮಹಿಮೆಯಿಂದ ಇಂದ್ರನಗರಿಯಾದ ಸ್ವರ್ಗಲೋಕ, ಸೂರ್ಯನ ಮಗನಾದ ಯಮನಲೋಕ ಇವುಗಳಲ್ಲೆಲ್ಲಿಯಾದರೂ ಸುಖವಾಗಿ ವಾಸಮಾಡುತ್ತಾನೆ. ಮತ್ತು ಅಂತಹ ಮನುಜರಿಗೆ ಭಯಂಕರವಾದ ಮುಖಗಳುಳ್ಳ ಯಮಕಿಂಕರರು ಯಾವ ಪೀಡೆಯನ್ನೂ ಮಾಡುವುದಿಲ್ಲ.

೨೧. ಮತ್ತು ಅಂತಹ ಮನುಜನು ಯಾವಾಗಲೂ ಬಿಸಿಲಿನಿಂದಲೇ ಆಗಲಿ, ಶೀತ (ಛಳಿ) ಯಿಂದಲೇ ಆಗಲಿ ಹಿಂಸಿಸಲ್ಪಡುವುದಿಲ್ಲ. ಈ ಮೊದಲು ಪಾಪಯುಕ್ತನಾದ ಮನುಜನಾಗಿದ್ದರೂ ಅವುಗಳಿಂದ ಬಿಡುಗಡೆಹೊಂದಿ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

೨೨. ಆತನು ಪಾಪಗಳಿಂದ ಬಿಡಲ್ಪಟ್ಟವನಾಗಿ ಉತ್ತಮವಾದ ವಿಮಾನವನ್ನು ಹತ್ತಿ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುವವನಾಗಿ ಪ್ರಳಯಕಾಲ ಪರ್ಯಂತ ಸ್ವರ್ಗಲೋಕದಲ್ಲಿ ವಾಸಿಸುತ್ತಾನೆ.

೨೩. ಅಯ್ಯಾ ಪಾಂಡುಪುತ್ರನಾದ ಯುಧಿಷ್ಠಿರನೇ! ಲೋಕದಲ್ಲಿ ಸರ್ವ ಸೌಖ್ಯಕ್ಕೂ ಕಾರಣಭೂತವಾಗಿ ಇರುವ ಶಯ್ಯಾದಾನವು ಬಹು ಶ್ರೇಷ್ಠವಾದುದೆಂದು ನಿನಗೆ ತಿಳಿಸಿದುದಾಯಿತು. ಈಗ ಹೇಳಿದ ವಿಧಿಯನ್ನನುಸರಿಸಿ ಲೋಕದಲ್ಲಿ ಯಾವನು ಸಾಕ್ಷಾತ್ತಾಗಿ ದಾನವನ್ನು ಮಾಡುತ್ತಾನೆಯೋ ಅಂತಹ

**ತದ್ಯೋ ದದಾತಿ ವಿಧಿವತ್ಸ್ವಯಮೇವ ನಾಕೇ- ।**
**ಕಲ್ಪೇ ವಿಕಲ್ಪರಹಿತಃ ಸ ವಿಭಾತಿ ಸತ್ಯಂ ॥ ೨೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಶಯ್ಯಾದಾನವಿಧಿವರ್ಣನಂ ನಾಮ ಚತುರಶೀತ್ಯುತ್ತರಶತತಮೋಽಧ್ಯಾಯಃ.**



---

ಮನುಜನು ಪಾಪಕೃತ್ಯಗಳಿಂದ ಬಿಡುಗಡೆಯನ್ನು ಹೊಂದಿ ಸ್ವರ್ಗವೆಂಬ ಹಾಸಿಗೆಯಲ್ಲಿ ನಿಜವಾಗಿಯೂ ಶೋಭಿಸುತ್ತಾನೆ. ಎಂಬದಾಗಿ ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಶಯ್ಯಾದಾನದ ದಾನವಿಧಿವರ್ಣನೆಯೆಂಬ ನೂರಎಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಾಶೀತ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಆತ್ಮಪ್ರತಿಕೃತಿರ್ನಾಮ ಯಥೋಕ್ತಂ ಕಸ್ಯಚಿತ್ಪುರಾ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ದಾನಂ ಮಾನವಿವರ್ಧನಂ ॥ ೧ ॥

ದಾನಕಾಲಃ ಸತಾಂ ತಸ್ಯ ಮುನಿಭಿಃ ಪರಿಕೀರ್ತಿತಃ ।
ಪುಣ್ಯೈಃ ಪುಣ್ಯದಿನಂ ಪಾರ್ಥ ಪ್ರಾಪ್ಯತೇ ಜೀವಿತೈರ್ನ ಚ ॥ ೨ ॥

---

### ನೂರಎಂಭತ್ತೈದನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಯಾರೋ ಒಬ್ಬ ವ್ಯಕ್ತಿಗೆ ಪೂರ್ವದಲ್ಲಿ ಹೇಳಿದ್ದ ಗೌರವವರ್ಧಕವಾದ "ಆತ್ಮಪ್ರತಿಕೃತಿದಾನ" ಎಂಬ ಪ್ರಸಿದ್ಧವಾದ ದಾನವನ್ನು ನಾನು ನಿನಗೆ ಹೇಳುತ್ತೇನೆ.

೨. ದಾನಮಾಡುವಂತಹ ಸತ್ಪುರುಷರಿಗೆ ಮುನಿಗಳು ಯಾವುದನ್ನು ಪುಣ್ಯದಿನವೆಂದು ಹೇಳಿರುವರೋ ಅದೇ ಆತ್ಮಪ್ರತಿಕೃತಿಯ ದಾನಕ್ಕೆ ಅರ್ಹವಾದ ಕಾಲವೆಂದು ಪರಿಗಣಿಸಿರುತ್ತಾರೆ. ಎಲೈ ಕುಂತೀಪುತ್ರ! ಈ ದಾನವು ಪುಣ್ಯಜೀವಿಗಳಿಗಲ್ಲದೆ ಇತರರಿಗೆ ದೊರಕಲಾರದು.

ಲೋಹಜಾಂ ಪ್ರಕೃತಿಂ ಭವ್ಯಾಂ ಕಾರಯಿತ್ವಾತ್ಮನೋ ನೃಪ ।
ಅಭೀಷ್ಟವಾಹನಗತಾಂ ಇಷ್ಟಾಲಂಕಾರಸಂಯುತಾಂ ॥ ೩ ॥

ಅಭೀಷ್ಟಲೋಕಸಹಿತಾಂ ಸರ್ವೋಪಸ್ಕರ ಸಂಯುತಾಂ ।
ತತಃ ಪಟ್ಟಪಟೇವಸ್ತ್ರೈ ಛಾದಿತಾಂ ರತ್ನಭೂಷಿತಾಂ ॥ ೪ ॥

ಕುಂಕುಮೇನಾನುಲಿಪ್ತಾಂಗೀ ಕರ್ಪೂರಾಗರುವಾಸಿತಾಂ ।
ಸ್ತ್ರೀ ಚೇದ್ದದಾತಿ ಶಯನೇ ಶಯಿತಾಂ ಕಾರಯೇತ್ಸ್ವಯಂ ॥ ೫ ॥

ಯದ್ಯದಿಷ್ಟತಮಂ ಕಿಂಚಿತ್ತತ್ಸರ್ವಂ ಪಾರ್ಶ್ವತೋ ನ್ಯಸೇತ್ ।
ಉಪಕಾರಕರಂ ಸ್ತ್ರೀಣಾಂ ಸ್ವಶರೀರೇ ಚ ಯದ್ಭವೇತ್ ॥ ೬ ॥

---

೩. ಎಲೈ ರಾಜನೇ! ತನಗೆ ಇಷ್ಟವಾದ ವಾಹನವನ್ನೇರಿರುವಂತೆಯೂ ಮತ್ತು ಅಭೀಷ್ಟವಾದ ಆಲಂಕಾರದಿಂದ ಕೂಡಿರುವಂತೆಯೂ ಲೋಹದಿಂದ ತನ್ನ ಪ್ರತಿಕೃತಿಯನ್ನು ಮನೋಹರವಾಗಿರುವಂತೆ ಮಾಡಿಸಬೇಕು.

೪. ತನಗಿಷ್ಟವಾದ ಜನಸಹಿತವಾಗಿರುವಂತೆಯೂ ಮತ್ತು ಉಪಸ್ಕರ (ಅಡಿಗೆ ಸಾಮಗ್ರಿ) ದಿಂದ ಕೂಡಿರುವಂತೆಯೂ ಇರಬೇಕು. ಆ ಪ್ರತಿಮೆಗೆ ರೇಶ್ಮೆವಸ್ತ್ರಗಳನ್ನು ಹೊದ್ದಿಸಬೇಕು ಮತ್ತು ರತ್ನಗಳಿಂದ ಅಲಂಕರಿಸಬೇಕು.

೫. ಮತ್ತು ಆ ಪ್ರತಿಕೃತಿಯ ಅಂಗಗಳನ್ನು ಕುಂಕುಮಕೇಸರಿಯಿಂದ ಲೇಪನಮಾಡಿರಬೇಕು. ಮತ್ತು ಪಚ್ಚಕರ್ಪೂರ, ಅಗರು ಇವುಗಳಿಂದ ಸುವಾಸನಾ ಯುಕ್ತವಾದುವನ್ನಾಗಿ ಮಾಡಬೇಕು. ದಾನಮಾಡತಕ್ಕವಳು ಸ್ತ್ರೀಯಾದರೆ ತನ್ನ ಪ್ರತಿಮೆಯನ್ನು ಶಯನದಲ್ಲಿ ಮಲಗಿಸಿ ದಾನಮಾಡಬೇಕು.

೬. ಮತ್ತು ಸ್ತ್ರೀಯರಿಗೆ ಉಪಕಾರವಾಗತಕ್ಕ ವಸ್ತು ತನ್ನ ಶರೀರದಲ್ಲಿ ಯಾವುವು ಇರುವುವೋ ಅಂತಹ ತನಗೆ ಅಭೀಷ್ಟವಾದ ಸಕಲವನ್ನೂ ಮಂಚದ ಪಾರ್ಶ್ವದಲ್ಲಿರಿಸಬೇಕು.

**ತತ್ಸರ್ವಂ ಸ್ಥಾಪಯೇತ್ಪಾರ್ಶ್ವೇ ಸ್ವಯಂ ಸಂಚಿತ್ಯ ಚೇತಸಿ ।**
**ಏತತ್ಸರ್ವಂ ಮೇಲಯಿತ್ವಾ ಸ್ವೇ ಸ್ವೇ ಸ್ಥಾನೇ ನಿಧಾಯ ಚ　　॥ ೭ ॥**

**ಪೂಜಯಿತ್ವಾ ಲೋಕಪಾಲಾನ್ ಗ್ರಹಾನ್ ದೇವೀಂ ವಿನಾಯಕಂ ।**
**ತತಃ ಶುಕ್ಲಾಂಬರಃ ಸ್ನಾತ್ವಾ ಗೃಹೀತಕುಸುಮಾಂಜಲಿಃ　　॥ ೮ ॥**

**ಇಮಮುಚ್ಚಾರಯೇನ್ಮಂತ್ರಂ ವಿಪ್ರಸ್ಯ ಪುರತೋ ಬುಧಃ ।**
**ಆತ್ಮನಃ ಪ್ರತಿಮಾ ಚೇಯಂ ಸರ್ವೋಪಕರಣೈರ್ಯುತಾ　　॥ ೯ ॥**

**ಸರ್ವರತ್ನಸಮಾಯುಕ್ತಾ ತವ ವಿಪ್ರ ನಿವೇದಿತಾ ।**
**ಆತ್ಮಾ ಶಂಭುಃ ಶಿವಃ ಶೌರಿಃ ಶಕ್ರಃ ಸುರಗಣೈರ್ವೃತಃ　　॥ ೧೦ ॥**

**ತಸ್ಮಾದಾತ್ಮಪ್ರದಾನೇನ ಮಮಾತ್ಮಾ ಸುಪ್ರಸೀದತು ।**
**ಇತ್ಯುಚ್ಚಾರ್ಯ ತತೋ ದದ್ಯಾದ್ಬ್ರಾಹ್ಮಣಾಯ ಯುಧಿಷ್ಠಿರ ॥ ೧೧ ॥**

---

೭. ಇವುಗಳೆಲ್ಲವನ್ನೂ ತನ್ನ ಮನಸ್ಸಿನಲ್ಲಿ ಆಲೋಚಿಸಿಕೊಂಡು ಜ್ಞಾಪಕವಾಗಿ ಇರಿಸಬೇಕು. ಮತ್ತು ಇವುಗಳೆಲ್ಲವನ್ನೂ ಜೋಡಿಸಿದಂತೆ ಆಯಾಯಾ ಸ್ಥಾನಗಳಲ್ಲಿ ಇರಿಸಬೇಕು.

೮. ಇದಾದನಂತರ ಪ್ರಾಜ್ಞನಾದ ಯಜಮಾನನು ಸ್ನಾನಮಾಡಿ ಶುಭ್ರವಸ್ತ್ರಧಾರಿಯಾಗಿ ಶುಚಿರ್ಭೂತನಾಗಿ ಲೋಕಪಾಲಕರು, ನವಗ್ರಹಗಳು, ದುರ್ಗಾ, ಗಣಪತಿ, ಮೊದಲಾದವರನ್ನು ಅರ್ಚನೆಮಾಡಿ ಅಂಜಲಿಯಲ್ಲಿ ಕುಸುಮವನ್ನು ಹಿಡಿದು ಪ್ರಾರ್ಥನೆಮಾಡುವನಾಗಿ.

೯–೧೦. ಬ್ರಾಹ್ಮಣನ ಎದುರಿನಲ್ಲಿ ಈ ಅರ್ಥವುಳ್ಳ ಮಂತ್ರವನ್ನು ಹೇಳಬೇಕು. "ಎಲೈ ವಿಪ್ರನೇ! ಈ ಸಕಲ ಉಪಕರಣಗಳಿಂದಲೂ ಮತ್ತು ಸರ್ವರತ್ನಗಳಿಂದಲೂ ಯುಕ್ತವಾದ ಈ ಆತ್ಮಪ್ರತಿಮೆಯು ನಿನಗೆ ನಿವೇದಿಸಲ್ಪಟ್ಟಿರುತ್ತದೆ. ಮತ್ತು ಈ ಆತ್ಮನೇ ಶಂಭುವೆಂದೂ, ಶಿವನೆಂದೂ, ಶೌರಿಯೆಂದೂ ಮತ್ತು ದೇವಗಣದಿಂದ ಆವೃತನಾದ ದೇವೇಂದ್ರನೆಂದೂ ಭಾವಿಸಿದೆ.

೧೧. ಇಂತಹ ಆತ್ಮಪ್ರತಿಕೃತಿಯನ್ನು ದಾನಮಾಡುವುದರಿಂದ ನನ್ನ ಅಂತರಾತ್ಮನು ಸುಪ್ರಸನ್ನನಾಗಲಿ" ಎಂಬದಾಗಿ ಹೇಳಿ ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

ಬ್ರಾಹ್ಮಣಶ್ಚಾಪಿ ಗೃಹ್ಣೀಯಾತ್ ಕೋದಾದಿತಿ ಚ ಕೀರ್ತಯನ್ ।
ತತಃ ಪ್ರದಕ್ಷಿಣೀಕೃತ್ಯ ಪ್ರಣಿಪತ್ಯ ವಿಸರ್ಜಯೇತ್ ॥ ೧೨ ॥

ವಿಧಿನಾನೇನ ರಾಜೇಂದ್ರ ದಾನಮೇತತ್ಪ್ರಯಚ್ಛತಿ ।
ಯಃ ಪುಮಾನಥ ವಾ ನಾರೀ ಶ್ರುಣು ಯತ್ಫಲಮಾಪ್ನುಯಾತ್ ॥೧೩॥

ಸಾಗ್ರಂ ವರ್ಷಶತಂ ದಿವ್ಯಂ ಸ್ವರ್ಗಲೋಕೇ ಸುರೈರ್ವೃತಃ ।
ಅಭೀಷ್ಟಫಲದಾನೇನ ಹ್ಯಭೀಷ್ಟಫಲಭಾಗ್ಭವೇತ್ ॥ ೧೪ ॥

ಯತ್ರೈವೋತ್ಪದ್ಯತೇ ಜಂತುಃ ಪ್ರಾಪ್ತೇ ಕರ್ಮಕ್ಷಯೇ ಪುನಃ ।
ತತ್ರೈವ ಸರ್ವಕಾಮಾನಾಂ ಫಲಭಾಗ್ಭವತೇ ನೃಪ ॥ ೧೫ ॥

ಇಷ್ಟಬಂಧುಜನೈಃ ಸಾರ್ಧಂ ನ ವಿಯೋಗಂ ಕದಾಚನ ।
ಪ್ರಾಪ್ನೋತಿ ಪುರುಷೋ ರಾಜನ್ ಸ್ವರ್ಗೇ ಚಾನಂತ್ಯಮಶ್ನುತೇ ॥೧೬॥

೧೨. ಬ್ರಾಹ್ಮಣನೂ ಕೂಡ "ಯಾವನುತಾನೆ ಈ ರೀತಿ ದಾನಮಾಡಿಯಾನು?" ಎಂಬದಾಗಿ ಹೇಳುತ್ತಾ ಸ್ವೀಕರಿಸಬೇಕು. ಅನಂತರ ಬ್ರಾಹ್ಮಣನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಬೀಳ್ಕೊಡಬೇಕು.

೧೩. ಎಲೈ ರಾಜೇಂದ್ರನೇ! ಗಂಡಸಾಗಲಿ ಅಥವಾ ಸ್ತ್ರೀಯೇ ಆಗಲಿ ಯಾರು ಈ ದಾನವನ್ನು ಯಥಾವಿಧಿಯಾಗಿ ಕೊಡುತ್ತಾರೆಯೋ ಅಂಥವರಿಗೆ ಲಭ್ಯವಾಗುವ ಫಲವನ್ನು ಹೇಳುವೆನು ಕೇಳು.

೧೪. ಹೀಗೆ ದಾನಮಾಡಿದಾತನು ಅಭೀಷ್ಟಫಲವನ್ನು ದಾನಮಾಡಿದುದರ ಫಲವಾಗಿ ಸ್ವರ್ಗಲೋಕದಲ್ಲಿ ದೇವತೆಗಳಿಂದ ಪರಿವೃತನಾಗಿ ದೇವಮಾನದ ನೂರುವರ್ಷಕಾಲ ತನ್ನ ಅಭೀಷ್ಟಫಲವನ್ನು ಸಮಗ್ರವಾಗಿ ಪಡೆಯುತ್ತಾನೆ.

೧೫. ಎಲೈ ರಾಜನೇ! ಆ ರೀತಿ ದಾನಮಾಡಿದ ಮನುಜನು ತನ್ನ ಪುಣ್ಯಫಲವು ಮುಗಿದನಂತರ ಮತ್ತೆ ಜನ್ಮವೆತ್ತಿದಾಗ ಅಲ್ಲಿಯೂ ಆತನ ಸಕಲ ಅಭೀಷ್ಟಗಳೂ ಸಿದ್ಧಿಸುತ್ತವೆ.

೧೬. ಎಲೈ ರಾಜನೇ! ಅಂತಹ ಮನುಜನು ಯಾವಾಗಲೂ ತನ್ನ ಇಷ್ಟಜನರ ವಿಯೋಗವನ್ನು ಪಡೆಯುವುದಿಲ್ಲ. ಮತ್ತು ಸ್ವರ್ಗದಲ್ಲಿ ಅನಂತ ಸೌಖ್ಯವನ್ನು ಪಡೆಯುತ್ತಾನೆ.

ಯಶ್ಚಾತ್ಮನಃ ಪ್ರತಿಕೃತಿಂ ವರವಾಹನಸ್ಥಾಂ- ।
ಹೈಮೀಂ ವಿಧಾಯ ಧನಧಾನ್ಯಸಮಾಕುಲಾಂ ಚ ॥
ಸೋಪಸ್ಕರಂ ದ್ವಿಜವರಾಯ ದದಾತಿ ಭಕ್ತ್ಯಾ ।
ಚಂದ್ರಾರ್ಕವತ್ಸ ದಿವಿ ಭಾತಿ ಹಿ ರಾಜರಾಜಃ ॥ ೧೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ಆತ್ಮಪ್ರತಿಕೃತಿದಾನವಿಧಿವರ್ಣನಂ
ನಾಮ ಪಂಚಾಶೀತ್ಯುತ್ತರಶತತಮೋऽಧ್ಯಾಯಃ.



---

೧೭. ಯಾವ ಮನುಜನು ಶ್ರೇಷ್ಠವಾದ ವಾಹನಾರೂಢನಾಗಿರುವಂತೆ ತನ್ನ ಪ್ರತಿಮೆಯನ್ನು ಚಿನ್ನದಿಂದ ರಚಿಸಿ, ಸೋಪಸ್ಕರಗಳು ಮತ್ತು ಧನಧಾನ್ಯಗಳೊಡನೆ ಭಕ್ತಿಯಿಂದ ಬ್ರಾಹ್ಮಣಶ್ರೇಷ್ಠನಿಗೆ ದಾನಮಾಡುವನೋ ಅವನು ಅಂತರಿಕ್ಷದಲ್ಲಿ ಚಂದ್ರ ಮತ್ತು ಸೂರ್ಯರಂತೆ ದೇದೀಪ್ಯಮಾನನಾಗಿ ಚಕ್ರವರ್ತಿ ಪದವಿಯನ್ನು ಹೊಂದಿ ಪ್ರಕಾಶಿಸುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಆತ್ಮಬಿಂಬ ದಾನವಿಧಾನವರ್ಣನೆಯೆಂಬ
ನೂರಎಂಭತ್ತೈದನೆಯ ಅಧ್ಯಾಯವು ಮುಗಿದುದು.







॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಷಡಶೀತ್ಯುತ್ತರಶತತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಸಾಂಪ್ರತಂ ಸಂಪ್ರವಕ್ಷ್ಯಾಮಿ ಹಿರಣ್ಯಾಶ್ವವಿಧಿಂ ಪರಂ ।
ಯಸ್ಯ ಪ್ರಸಾದಾತ್ಪುರುಷಃ ಶಾಶ್ವತಂ ಫಲಮಶ್ನುತೇ ॥ ೧ ॥

ಪುಣ್ಯಂ ದಿನಮಥಾಸಾದ್ಯ ಪಾತ್ರಂ ವಾಽಪಿ ಗುಣಾಧಿಕಂ ।
ಶಕ್ತಿತಸ್ತ್ರಿಪಲಾದೂರ್ಧ್ವಮಾಶತಾಚ್ಚ ನರೋತ್ತಮ ॥ ೨ ॥

---

## ನೂರಎಂಭತ್ತಾರನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಹೇಳುತ್ತಾನೆ— ಎಲೈ ರಾಜನೇ! ಪುರುಷನು ಯಾವುದನ್ನು ಆಚರಿಸುವುದರಿಂದ ಈಶಾನುಗ್ರಹಕ್ಕೆ ಪಾತ್ರನಾಗಿ ಶಾಶ್ವತವಾದ ಫಲವನ್ನು ಪಡೆಯುತ್ತಾನೆಯೋ ಅಂತಹ ಸುವರ್ಣಾಶ್ವ ದಾನದ ವಿಧಿಯನ್ನು ಈಗ ಹೇಳುತ್ತೇನೆ.

೨. ಅಯ್ಯಾ ನರೋತ್ತಮನಾದ ಯುಧಿಷ್ಠಿರನೇ! ದಾನಕ್ಕೆ ಉಕ್ತವಾದ ಶುಭದಿನದಲ್ಲಿ ಅಥವಾ ಅಧಿಕ ಗುಣಗಳಿಂದ ಕೂಡಿದ ಸತ್ಪಾತ್ರನು ದೊರೆತ ದಿನದಲ್ಲಿ ಮೂರು ಪಲಗಳಿಗಿಂತಲೂ ಹೆಚ್ಚು ತೂಕದ್ದು ಪರಮಾವಧಿ ನೂರು ಪಲದವರೆಗೆ ತನ್ನ ಶಕ್ತ್ಯನುಸಾರ ಪ್ರಮಾಣದ ತೂಕವುಳ್ಳ ಸುವರ್ಣದಿಂದ ಒಂದು ಕುದುರೆಯನ್ನು ಮಾಡಿಸಬೇಕು.

**ಖಲೀನಾಲಂಕೃತಮುಖಂ ಕಾರಯೇದ್ಧೇಮ ವಾಜಿನಂ ।**
**ಮುಖರಂ ಸೋನ್ನತಸ್ಕಂಧಂ ಧೃಡಜಾನುಂ ಸವಾಲಧಿಂ ॥ ೩ ॥**

**ಸ್ಥಾಪಯೇದ್ವೇದಿಮಧ್ಯೇ ತು ಕೃಷ್ಣಾಜಿನತಿಲೋಪರಿ ।**
**ಕೌಶೇಯವಸ್ತ್ರಸಂವೀತಂ ಕುಂಕುಮೇನ ವಿಲೇಪಿತಂ ॥ ೪ ॥**

**ಸಂಪೂಜ್ಯ ಕುಸುಮೈಃ ಶ್ವೇತೈಶ್ಚಣಕಾನ್ವಿನಿವೇದ್ಯ ಚ ।**
**ತತಃ ಪರ್ವಸಮೀಪೇ ತು ಗೃಹೀತಕುಸುಮಾಂಜಲಿಃ ॥ ೫ ॥**

**ಇಮಮುಚ್ಚಾರಯೇನ್ಮಂತ್ರಂ ಪುರಾಣೋಕ್ತಂ ಯತವ್ರತಃ ।**
**ನಮಸ್ತೇ ಸರ್ವದೇವೇಶ ವೇದಾಹರಣಲಂಪಟ ॥ ೬ ॥**

---

೩. ಆ ಕುದುರೆಯ ಮುಖವು ಕಡಿವಾಣದಿಂದ ಅಲಂಕೃತವಾಗಿಯೂ ಮತ್ತು ಮುಖರವೂ ಎತ್ತರವಾದ ಭುಜಗಳೂ ದೃಢವಾದ ಮೊಳಕಾಲುಗಳೂ ಉಳ್ಳುದಾಗಿಯೂ ಬಾಲದಲ್ಲಿ ತುಂಬಾ ಕೂದಲುಗಳುಳ್ಳುದ್ದಾಗಿಯೂ ಇರಬೇಕು.

೪. ಮತ್ತು ಅದಕ್ಕೆ ಪೀತಾಂಬರವನ್ನು ಹೊದ್ದಿಸಿರಬೇಕು. ಅದರ ಅಂಗಗಳಿಗೆ ಕುಂಕುಮಕೇಸರಿಯಿಂದ ಲೇಪನಮಾಡಬೇಕು. ವೇದಿಯ ಮಧ್ಯೆ ಕೃಷ್ಣಾಜಿನದ ಮೇಲೆ ಎಳ್ಳನ್ನು ಹಾಕಿ ಅದರ ಮೇಲೆ ಈ ಕುದುರೆಯ ಪ್ರತಿಮೆಯನ್ನು ಸ್ಥಾಪಿಸಬೇಕು.

೫. ಮತ್ತು ಪರ್ವಕಾಲ ಸಮೀಪವಾದ ಸಮಯದಲ್ಲಿ ಬಿಳಿಯ ಪುಷ್ಪಗಳಿಂದ ಅದನ್ನು ಅರ್ಚಿಸಿ ನೆನಸಿದ ಕಡಲೆಯನ್ನು ನಿವೇದನಮಾಡಬೇಕು. ಬಳಿಕ ಪುಷ್ಪಾಂಜಲಿಯನ್ನು ಹಿಡಿದುಕೊಂಡು ಪ್ರಾರ್ಥಿಸುವಾಗ.

೬. ನಿಯಮನಿಷ್ಠನಾಗಿ ಪುರಾಣೋಕ್ತವಾದ ಈ ಮಂತ್ರವನ್ನು ಉಚ್ಚರಿಸಬೇಕು. ಸಕಲ ದೇವತೆಗಳಿಗೂ ಒಡೆಯನೂ ಮತ್ತು ವೇದಗಳನ್ನು ಸಂಪಾದಿಸುವುದರಲ್ಲಿ ಆಸಕ್ತವೂ ಆದ ಅಶ್ವವೇ ನಿನಗೆ ನಮಸ್ಕಾರ.

**ವಾಜಿರೂಪೇಣ ಮಾಮಸ್ಮಾತ್ಪಾಹಿ ಸಂಸಾರಸಾಗರಾತ್ ।**
**ತ್ವಮೇವ ಸಪ್ತಧಾ ಭೂತ್ವಾ ಛಂದೋರೂಪೇಣ ಭಾಸ್ಕರಂ ॥ ೭ ॥**

**ಯಸ್ಮಾದ್ಧಾರಯಸೇ ಲೋಕಾನತಃ ಪಾಹಿ ಸನಾತನ ।**
**ಏವಮುಚ್ಚಾರ್ಯ ತಂ ರಾಜನ್ ವಿಪ್ರಾಯ ಪ್ರತಿಪಾದಯೇತ್ ॥ ೮ ॥**

**ಪ್ರದಕ್ಷಿಣಂ ತತಃ ಕೃತ್ವಾ ಪ್ರಣಿಪತ್ಯ ವಿಸರ್ಜಯೇತ್ ।**
**ಅನೇನ ವಿಧಿನಾ ರಾಜನ್ ಹಿರಣ್ಯಾಶ್ವಮಲಂಕೃತಂ ॥ ೯ ॥**

**ದತ್ವಾ ಪಾಪಕ್ಷಯಾದ್ಭಾನೋರ್ಲೋಕಮಾಪ್ನೋತಿ ಶಾಶ್ವತಂ ।**
**ತಸ್ಮಿನ್ನಹನಿ ಭುಂಜೀತ ತೈಲಕ್ಷಾರವಿವರ್ಜಿತಂ ॥ ೧೦ ॥**

**ಪುರಾಣಶ್ರವಣಂ ತದ್ವತ್ ಕಾರಯೇದ್ಭೋಜನಾದನು ॥ ೧೧ ॥**

---

೭-೮. ಎಲೈ ಜಗತ್ಪತಿಯೇ! ನೀನು ಏಳು ಪ್ರಕಾರವಾಗಿ ಛಂದಸ್ಸಿನ ರೂಪದಿಂದ ಸೂರ್ಯನನ್ನು ಧರಿಸಿದ್ದೀಯೆ. ಆದುದರಿಂದ ಸನಾತನನೂ ಅಶ್ವರೂಪಿಯೂ ಆದ ನೀನು ನನ್ನನ್ನು ಈ ಸಂಸಾರಸಾಗರದಿಂದ ಪಾರುಮಾಡಿ ರಕ್ಷಿಸು ಎಂದು ಹೇಳಬೇಕು. ಎಲೈ ರಾಜನೇ! ಹೀಗೆಂದು ಹೇಳಿ ಆ ಅಶ್ವವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೯. ಅದಕ್ಕೆ ಮೊದಲು ಪ್ರದಕ್ಷಿಣಪೂರ್ವಕವಾಗಿ ನಮಸ್ಕರಿಸಿ ದಾನ ಮಾಡಬೇಕು. ಎಲೈ ರಾಜನೇ! ಈ ರೀತಿ ಅಲಂಕೃತವಾದ ಹಿರಣ್ಯಾಶ್ವವನ್ನು ಈ ವಿಧಿಗನುಸಾರವಾಗಿ ದಾನಮಾಡಬೇಕು.

೧೦. ನನ್ನ ಪಾಪಗಳನ್ನು ಹೋಗಲಾಡಿಸಿಕೊಂಡು ಶಾಶ್ವತವಾದ ಸೂರ್ಯ ಲೋಕವನ್ನು ಪಡೆಯುತ್ತಾನೆ. ಆ ದಾನಮಾಡುವ ದಿವಸ ಎಣ್ಣೆ ಮತ್ತು ಉಪ್ಪು ಇವುಗಳನ್ನು ಆಹಾರದಲ್ಲಿ ತಿನ್ನಕೂಡದು.

೧೧. ಮತ್ತು ಆ ದಿನ ಭೋಜನವಾದನಂತರ ಪುರಾಣಶ್ರವಣವನ್ನು ಮಾಡಿಸಬೇಕು.

ಇತ್ಥಂ ಹಿರಣ್ಯಾಶ್ವವಿಧಿಂ ಕರೋತಿ ಯಃ ।
ಸುಪುಣ್ಯಮಾಸಾದ್ಯ ದಿನಂ ನರೇಂದ್ರ ॥
ವಿಮುಕ್ತಪಾಪಃ ಸ ಪುರಂ ಮುರಾರೇಃ ।
ಪ್ರಾಪ್ನೋತಿ ಸಿದ್ಧೈರಭಿಪೂಜಿತಂ ಯತ್ ॥ ೧೨ ॥

ಇತಿ ಪಠತಿ ಯ ಇತ್ಥಂ ಹೈಮವಾಜಿಪ್ರದಾನಂ ।
ಸಕಲಕಲುಷಮುಕ್ತಃ ಸೋಽಶ್ವಯುಕ್ತೇನ ಭೂಪಃ ॥
ಕನಕಮಯವಿಮಾನೇನಾರ್ಕಲೋಕಂ ಪ್ರಯಾತಃ ।
ತ್ರಿದಶತತಿವಧೂಭಿಃ ಪೂಜ್ಯತೇ ಹರ್ಮ್ಯಭೋಗ್ಯೈಃ ॥ ೧೩ ॥

ಯೋ ವಾ ಶೃಣೋತಿ ಪುರುಷೋಽಪ್ಯಥ ವಾ ಸ್ಮರೇದ್ವಾ ।
ಹೈಮಾಶ್ವದಾನಮಭಿನಂದತಿ ದೀಯಮಾನಂ ॥

---

೧೨. ಎಲೈ ನರೇಂದ್ರನೇ! ಪುಣ್ಯಕರವಾದ ಶುಭದಿವಸದಲ್ಲಿ ಈ ವಿಧಿಯನ್ನನುಸರಿಸಿ ಸುವರ್ಣಾಶ್ವವನ್ನು ದಾನಮಾಡಿದವನು ಪಾಪರಹಿತನಾಗುತ್ತಾನೆ. ಮತ್ತು ಸಿದ್ಧರಿಂದ ಪೂಜಿಸಲ್ಪಡುವಂತಹ ಮುರಾರಿಯ ನಗರಿಯನ್ನು ಪಡೆಯುತ್ತಾನೆ.

೧೩. ಎಲೈ ರಾಜನೇ! ಸುವರ್ಣಾಶ್ವದಾನವಿಧಿಯನ್ನು ಯಾವನು ಭಕ್ತಿಯಿಂದ ಪಠಿಸುವನೋ ಅವನು ಸಕಲ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ. ಅಲ್ಲದೆ ಕುದುರೆಯಿಂದ ಕೂಡಿದುದೂ ಮತ್ತು ಸುವರ್ಣಮಯವೂ ಆದ ವಿಮಾನಾರೂಢನಾಗಿ ಸೂರ್ಯಲೋಕವನ್ನು ಸೇರುತ್ತಾನೆ. ಅಲ್ಲಿ ಉಪ್ಪರಿಗೆಗಳಲ್ಲಿ ವಾಸಮಾಡತಕ್ಕ ದೇವತಾಸ್ತ್ರೀಯರುಗಳಿಂದ ಪೂಜಿತನಾಗುತ್ತಾನೆ.

೧೪. ಯಾವ ಪುರುಷನು ದಾನಮಾಡಲ್ಪಡತಕ್ಕ ಈ ಅಶ್ವದಾನ ವಿಚಾರವನ್ನು ಶ್ರವಣಮಾಡುವವನೋ ಅಥವಾ ಸ್ಮರಿಸುವವನು ಅಭಿನಂದಿಸುವವವನು ಇವರೂ ಕೂಡ ತನ್ನ ಕಶ್ಮಲಗಳನ್ನೆಲ್ಲಾ ನಾಶಪಡಿಸಿಕೊಂಡು ಪರಿಶುದ್ಧವಾದ ದೇಹವುಳ್ಳವರಾಗಿ ಇಂದ್ರ ಮತ್ತು ಮಹೇಶ್ವರ ಇವರಿಂದ ಪ್ಯಾಪೃತವಾಗಿರತಕ್ಕ

**ಸೋಽಪಿ ಪ್ರಯಾತಿ ಹತಕಲ್ಮಷಶುದ್ಧದೇಹಃ ।**
**ಸ್ಥಾನಂ ಪುರಂದರಮಹೇಶ್ವರಲೋಕಜುಷ್ಟಂ ॥ ೧೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಹಿರಣ್ಯಾಶ್ವದಾನವಿಧಿವರ್ಣನಂ ನಾಮ ಷಡಶೀತ್ಯುತ್ತರಶತತಮೋಽಧ್ಯಾಯಃ.**



---

ಶ್ರೇಷ್ಠವಾದ ಸೂರ್ಯನಲೋಕವನ್ನು ಪಡೆಯುತ್ತಾರೆ ಎಂಬದಾಗಿ ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದದಲ್ಲಿ ಸುವರ್ಣದ ಅಶ್ವದಾನವಿಧಿವರ್ಣನೆ ಎಂಬ ನೂರಎಂಭತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

**ಅಥಾತಃ ಸಂಪ್ರವಕ್ಷ್ಯಾಮಿ ತವ ಪಾಂಡುಕುಲೋದ್ಭವ ।**
**ಪುಣ್ಯಂ ಹೇಮರಥಂ ನಾಮ ಮಹಾಪಾತಕನಾಶನಂ || ೧ ||**

**ಪುಣ್ಯೇಽಹ್ನಿ ವಿಪ್ರಕಥಿತೇ ಸ್ವನುಲಿಪ್ತೇ ಗೃಹಾಂಗಣೇ ।**
**ಕೃಷ್ಣಾಜಿನ ತಿಲಾನ್ ಕೃತ್ವಾ ಕಾಂಚನಂ ಸ್ಥಾಪಯೇದ್ರಥಂ || ೨ ||**

---

## ನೂರಎಂಭತ್ತೇಳನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುವಂಶಜನಾದ ಯುಧಿಷ್ಠಿರ! ಪವಿತ್ರವಾದುದೂ ಮತ್ತು ಮಹಾಪಾಪಗಳನ್ನು ನಾಶಮಾಡುವುದೂ ಆದ ಹೇಮರಥದ ದಾನವನ್ನು ಈಗ ನಿನಗೆ ಹೇಳುವೆನು.

೨. ದೈವಜ್ಞನಾದ ವಿಪ್ರನು ಈ ಕಾರ್ಯಕ್ಕಾಗಿ ನಿಷ್ಕರ್ಷೆಮಾಡಿದ ದಿವಸದಲ್ಲಿ ಮನೆಯ ಅಂಗಳ ಪ್ರದೇಶವನ್ನು ಗೋಮಯಾದಿಗಳಿಂದ ಸಾರಿಸಿ ಕೃಷ್ಣಾಜಿನವನ್ನು ಹಾಸಿ ಅದರ ಮೇಲೆ ಎಳ್ಳನ್ನು ಹರವಿ ಅದರ ಮೇಲೆ ಸುವರ್ಣದ ರಥವನ್ನು ಇರಿಸಬೇಕು.

ಚತುರಸ್ರಂ ಮಹಾಭಾಗ ಚತುಶ್ಚಕ್ರಂ ಸಕೂಬರಂ ।
ಬ್ರಹ್ಮಾಣಮಗ್ರತಃ ಕೃತ್ವಾ ಗೃಹೀತಪ್ರಗ್ರಹಂ ಶುಭಂ ॥ ೩ ॥

ಇಂದ್ರನೀಲೇನ ಕುಂಭೇನ ಧ್ವಜರೂಪೇಣ ಸಂಯುತಂ ।
ಲೋಕಪಾಲಾಷ್ಟಕೋಪೇತಂ ಪದ್ಮರಾಗದಲಾನ್ವಿತಂ ॥ ೪ ॥

ಚತ್ವಾರಃ ಪೂರ್ಣಕಲಶಾಃ ಧಾನ್ಯಾನ್ಯಷ್ಟಾದಶೈವ ತು ।
ಕೌಶೇಯವಸ್ತ್ರಸಂವೀತಂ ಉಪರಿಷ್ಟಾದ್ವಿತಾನಕಂ ॥ ೫ ॥

ಮಧ್ಯೇ ತು ಫಲಸಂಯುಕ್ತಂ ಪುರುಷೇಣ ಸಮನ್ವಿತಂ ।
ಯೋಗಯುಕ್ತಃ ಪುಮಾನ್ ಕಾರ್ಯಸ್ತಂ ಚ ತತ್ರಾಧಿವಾಸಯೇತ್ ॥

---

೩. ಎಲೈ ಮಹಾಭಾಗ್ಯಶಾಲಿಯಾದ ಯುಧಿಷ್ಠಿರನೇ ! ಆ ರಥವು ಚತುರಸ್ರಮಂಡಲಾಕಾರವಾಗಿಯೂ, ನಾಲ್ಕು ಚಕ್ರಗಳುಳ್ಳದ್ದಾಗಿಯೂ ನೊಗ ಸಹಿತವಾಗಿಯೂ ಮತ್ತು ಮುಂಭಾಗದಲ್ಲಿ ಬ್ರಹ್ಮನು ಹಗ್ಗವನ್ನು ಹಿಡಿದು ಕುಳಿತಿರುವಂತೆ ಮನೋಹರವಾಗಿಯೂ ರಚಿತವಾಗಿ ಇರಬೇಕು.

೪. ಮತ್ತು ಇಂದ್ರನೀಲಮಣಿಯ ಕುಂಭವು ಧ್ವಜದಲ್ಲಿ ರಚಿತವಾಗಿರಬೇಕು. ಮತ್ತು ಎಂಟು ದಿಕ್ಕುಗಳಲ್ಲಿಯೂ ಎಂಟುಜನ ಲೋಕಪಾಲಕರು ಕಮಲದ ಎಸಳುಗಳ ಮೇಲೆ ಮನೋಹರವಾಗಿ ರಚಿಸಲ್ಪಟ್ಟಿರಬೇಕು.

೫. ಸುತ್ತಲೂ ನಾಲ್ಕು ಪೂರ್ಣಕಲಶಗಳನ್ನೂ, ಹದಿನೆಂಟು ಬಗೆಯ ಧಾನ್ಯಗಳನ್ನೂ ಸಹ ಇಟ್ಟಿರಬೇಕು. ಮತ್ತು ಆ ರಥವು ಪೀತಾಂಬರದಿಂದ ಆಚ್ಛಾದಿತವಾಗಿಯೂ ಮೇಲ್ಗಡೆ ಬಟ್ಟೆಯ ಚಪ್ಪರ, ಮೇಲುಕಟ್ಟುಗಳನ್ನು ಕಟ್ಟಿಯೂ ಇರಬೇಕು.

೬. ಮಧ್ಯಭಾಗದಲ್ಲಿ ಒಂದು ಫಲವನ್ನು ಇಟ್ಟಿರಬೇಕು. ಮತ್ತು ಧ್ಯಾನಾಸಕ್ತನಾಗಿರುವಂತೆ ರಚಿಸಿದ ಒಬ್ಬ ಪುರುಷನನ್ನು ಆ ರಥದಲ್ಲಿ ಅಧಿವಾಸಮಾಡಿಸಬೇಕು.

**ಏವಂ ವಿಧಂ ಪೂಜಯಿತ್ವಾ ಮಾಲ್ಯಗಂಧಾನುಲೇಪನೈಃ ।**
**ಚಕ್ರ ರಕ್ಷಾವುಭೌ ತಸ್ಯ ಕಾರ್ಯೌ ವಿಶ್ವಕುಮಾರಕೌ ॥ ೭ ॥**

**ಪುಣ್ಯಂ ಕಾಲಂ ತತಃ ಪ್ರಾಪ್ಯ ಸ್ನಾತಃ ಸಂಪೂಜ್ಯ ದೇವತಾಃ ।**
**ತ್ರಿಃ ಪ್ರದಕ್ಷಿಣಮಾವೃತ್ಯ ಗೃಹೀತ ಕುಸುಮಾಂಜಲಿಃ ॥ ೮ ॥**

**ಶುಕ್ಲಮಾಲ್ಯಾಂಬರಧರ ಇಮಂ ಮಂತ್ರಮುದೀರಯೇತ್ ॥ ೯ ॥**

**ನಮೋ ನಮಃ ಪಾಪವಿನಾಶನಾಯ ।**
**ವಿಶ್ವಾತ್ಮನೇ ದೇವತುರಂಗಮಾಯ ॥**
**ಧಾಮ್ನಾಮಧೀಶಾಯ ಭವಾಭವಾಯ ।**
**ರಥಸ್ಯ ದಾನಾನ್ಮಮ ದೇಹಿ ಶಾಂತಿಂ ॥ ೧೦ ॥**

---

೭. ಈ ಪ್ರಕಾರದ ರಥವನ್ನು ಹೂ, ಗಂಧ ಇತ್ಯಾದಿಗಳಿಂದ ಅರ್ಚನೆ ಮಾಡಿ ಅನಂತರ ಆ ರಥದ ಚಕ್ರಗಳ ಸುರಕ್ಷಿತತೆಗಾಗಿ ವಿಶ್ವ, ಕುಮಾರ ಎಂಬಿಬ್ಬರನ್ನು ಮಾಡಿಸಬೇಕು.

೮–೯. ಯಜಮಾನನು ಪುಣ್ಯಕರವಾದ ಪರ್ವಕಾಲದಲ್ಲಿ ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ದೇವತಾರ್ಚನಾದಿಗಳನ್ನು ಮಾಡಿ ಅನಂತರ ಈ ರಥವನ್ನು ಮೂರುಸಲ ಪ್ರದಕ್ಷಿಣೆಮಾಡಿ ಬೊಗಸೆಯಲ್ಲಿ ಪುಷ್ಪವನ್ನು ಹಿಡಿದುಕೊಂಡು ಪ್ರಾರ್ಥಿಸುವನಾಗಿ.

೧೦. "ಎಲೈ ರಥದಲ್ಲಿ ಅಧಿಷ್ಠಿತವಾಗಿರತಕ್ಕ ದೇವತೆಯೇ! ನೀನು ಸಕಲ ಪಾಪಗಳನ್ನು ನಾಶಪಡಿಸತಕ್ಕವನೂ, ಮತ್ತು ಸಾಕ್ಷಾತ್ ಪ್ರಪಂಚಸ್ವರೂಪನೂ, ತೇಜಸ್ಸಿಗೆ ಒಡೆಯನೂ, ಉತ್ಪತ್ತಿಸಹಿತನೂ ಮತ್ತು ಉತ್ಪತ್ತಿರಹಿತನೂ ಆಗಿ ಇರುವೆ. ಇಂತಹ ನಿನಗೆ ನಮಸ್ಕಾರ. ಈ ರಥವನ್ನು ದಾನಮಾಡುವುದರಿಂದ ನನಗೆ ಶಾಂತಿಯನ್ನು ಕರುಣಿಸು.

ವಸ್ವಷ್ಟಕಾದಿತ್ಯಮರುದ್ಗಣಾನಾಂ ।
ತ್ವಮೇವ ಧಾತಾ ಪರಮಂ ನಿಧಾನಂ ॥
ಯತಸ್ತತೋ ಮೇ ಹೃದಯಂ ಪ್ರಯಾತು ।
ಧರ್ಮೈಕತಾನತ್ವಮಘೌಘನಾಶಾತ್ ॥ ೧೧ ॥

ಇತಿ ತುರಗರಥಪ್ರದಾನಮೇತತ್ ।
ಭವಭಯಸೂದನಮತ್ರ ಯಃ ಕರೋತಿ ॥
ಸ ಕಲುಷಪಟಲೈರ್ವಿಮುಕ್ತದೇಹಃ ।
ಪರಮುಪೈತಿ ಪದಂ ಪಿನಾಕಪಾಣೇಃ ॥ ೧೨ ॥

ದೇದೀಪ್ಯಮಾನವಪುಷಾ ಚ ಜಿತಪ್ರಭಾವಂ ।
ಆಕ್ರಮ್ಯ ಮಂಡಲಮಖಂಡಲಚಂಡಭಾನೋಃ ॥
ಸಿದ್ಧಾಂಗನಾನಯನಯುಗ್ಮನಿಪೀಯಮಾನ ।
ವಕ್ತ್ರಾಂಬುಜೇಽಂಬುಜಭವೇನ ಚಿರಂ ಸಹಾಸ್ತೇ ॥ ೧೩ ॥

---

೧೧. ಮತ್ತು ಅಷ್ಟವಸುಗಳು, ದ್ವಾದಶಾದಿತ್ಯರು, ಮರುದ್ಗಣಗಳು ಇವುಗಳಿಗೆ ನೀನೇ ಆದಿಕಾರಣನೂ ಸೃಷ್ಟಿಕರ್ತೃವೂ ಆಗಿದ್ದೀಯೆ. ಆದುದರಿಂದ ಇಂತಹ ನಿನ್ನ ಸೇವೆಯಿಂದ ನನ್ನ ಹೃದಯವು ಸಕಲ ಪಾಪರಾಶಿಗಳನ್ನೂ ಹೋಗಲಾಡಿಸಿಕೊಂಡು ಧರ್ಮದೇವತೆಗೆ ಮುಖ್ಯವಾದ ಆಶ್ರಯವನ್ನು ಪಡೆಯಲಿ.

೧೨. ಈ ಕುದುರೆ ಸಹಿತವಾದ ಈ ರಥದ ದಾನವು ಸಂಸಾರಭಯನಾಶಕವಾದುದರಿಂದ ಈ ದಾನಮಾಡತಕ್ಕ ಮನುಜನು ಪಾಪಗಳ ಸಮೂಹದಿಂದ ಬಿಡುಗಡೆ ಹೊಂದಿ ಅತ್ಯುತ್ತಮವಾದ ಶಿವಸಾಯುಜ್ಯವನ್ನು ಪಡೆಯುತ್ತಾನೆ.

೧೩. ಈ ರಥದಾನ ಮಾಡಿದವನು ದೇದೀಪ್ಯಮಾನವಾದ ಶರೀರವುಳ್ಳವನಾಗಿ ಇತರರನ್ನು ಜಯಿಸುವ ಪ್ರಭಾವದಿಂದ ಕೂಡಿ, ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯನ ಸಮಗ್ರಮಂಡಲವನ್ನು ತನ್ನ ತೇಜಸ್ಸಿನಿಂದ ಆಕ್ರಮಿಸಿ ಸಿದ್ಧಯುವತಿಯರ ಕುತೂಹಲಾವಲೋಕನಕ್ಕೆ ಪಾತ್ರವಾದ ಮುಖಕಮಲವುಳ್ಳವನಾಗಿ ಬ್ರಹ್ಮನೊಡನೆ ಬಹುಕಾಲ ಸುಖವಾಗಿರುತ್ತಾನೆ.

ಇತಿ ಪಠತಿ ಶೃಣೋತಿ ವಾ ಯ ಏತತ್ ।
ಕನಕತುರಂಗರಥಪ್ರದಾನಮಸ್ಮಿನ್ ॥
ನ ಸ ನರಕಪುರಂ ವ್ರಜೇತ್ ಕದಾಚಿತ್ ।
ನರಕರಿಪೋರ್ಭವನಂ ಪ್ರಯಾತಿ ಭೂಯಃ ॥ ೧೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಹಿರಣ್ಯಾಶ್ವರಥದಾನವಿಧಿವರ್ಣನಂ ನಾಮ ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ.



---

೧೪. ಯಾವನು ಈ ಲೋಕದಲ್ಲಿ ಮುಖ್ಯವಾದ ಸುವರ್ಣದ ಕುದುರೆ ರಥದ ದಾನಪ್ರಕರಣವನ್ನು ಓದುವನೋ ಅಥವಾ ಶ್ರವಣಮಾಡುವನೋ ಅಂತಹ ಮಾನವನಿಗೆ ಯಾವಾಗಲೂ ನರಕಪ್ರಾಪ್ತಿಯೆಂಬುದು ಇಲ್ಲ. ಆತನು ನರಕಾಸುರನಿಗೆ ಶತ್ರುವಾದ ವಿಷ್ಣುಲೋಕವನ್ನು ಪಡೆಯುತ್ತಾನೆ ಎಂಬದಾಗಿ ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಚಿನ್ನದ ಕುದುರೆಯ ರಥದಾನದವಿಧಿವರ್ಣನೆಯೆಂಬ ನೂರಎಂಭತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟಾಶೀತ್ಯುತ್ತರಶತತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಕೃಷ್ಣಾಜಿನಪ್ರದಾನಸ್ಯ ವಿಧಿಕಾಲಂ ಮಮಾನಘ ।
ಬ್ರಾಹ್ಮಣಂ ಚ ಸಮಾಚಕ್ಷ್ವ ತತ್ರ ಮೇ ಸಂಶಯೋ ಮಹಾನ್ || ೧ ||

|| ಶ್ರೀಕೃಷ್ಣ ಉವಾಚ ||

ಯುಗಾದಿಷೂಪರಾಗೇಷು ಸಂಕ್ರಾಂತೌ ದಿನಸಂಕ್ಷಯೇ ।
ಮಾಘ್ಯಾಂ ವಾ ಗ್ರಹಪೀಡಾಸು ದುಃಸ್ವಪ್ನಾದ್ಭುತದರ್ಶನೇ || ೨ ||

---

### ನೂರಎಂಭತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ—ಸ್ವಾಮಿ ಶ್ರೀಕೃಷ್ಣ ಪರಮಾತ್ಮ! ಕೃಷ್ಣಾಜಿನವನ್ನು ದಾನಮಾಡತಕ್ಕ ವಿಧಿ ಯಾವುದು? ಮತ್ತು ದಾನಮಾಡಬೇಕಾದ ಕಾಲವಾವುದು? ಮತ್ತು ದಾನ ತೆಗೆದುಕೊಳ್ಳಲು ಬ್ರಾಹ್ಮಣನಲ್ಲಿರಬೇಕಾದ ಅರ್ಹತೆಯೇನು? ಎಂಬುದನ್ನು ಹೇಳು. ಅರ್ಹತೆಯುಳ್ಳ ಬ್ರಾಹ್ಮಣರ ವಿಷಯದಲ್ಲಿ ನನಗೆ ಸಂಶಯವು ಬಹುವಾಗಿರುತ್ತದೆ ಎಂದನು.

೨-೩. ಆಗ ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಚಾಂದ್ರಮಾನ, ಸೌರಮಾನ, ಯುಗಾದಿಗಳು, ಗ್ರಹಣಕಾಲ, ಸಂಕ್ರಮಣಗಳು, ಕೃಷ್ಣಪಕ್ಷ, ಮಾಘಮಾಸ ಮತ್ತು ಗ್ರಹಪೀಡಾಕಾಲ, ದುಃಸ್ವಪ್ನ, ದುಶ್ಶಕುನಗಳನ್ನು ಕಾಣು

**ದೇಯಮೇತನ್ಮಹಾದಾನಂ ದ್ರವ್ಯಮಾತ್ರಾಗಮೇ ತಥಾ ।**
**ಆಹಿತಾಗ್ನಿರ್ದ್ವಿಜೋ ಯಶ್ಚ ವೇದವೇದಾಂಗಪಾರಗಃ ॥ ೩ ॥**

**ಪುರಾಣಾಭಿರತೋ ದಕ್ಷೋ ದೇಯಂ ತಸ್ಮೈ ಚ ಪಾರ್ಥಿವ ।**
**ಯಥಾ ಯೇನ ವಿಧಾನೇನ ತನ್ಮೇ ನಿಗದತಃ ಶೃಣು ॥ ೪ ॥**

**ಗೋಮಯೇನೋಪಲಿಪ್ತೇ ತು ಶುಚೌ ದೇಶೇ ನರಾಧಿಪ ।**
**ಆದಾವೇವ ಸಮಾಸ್ತೀರ್ಯ ಶೋಭಿತಂ ವಸ್ತ್ರಮಾವಿಕಂ ॥ ೫ ॥**

**ಕರ್ತವ್ಯಂ ರುಕ್ಮಶೃಂಗಂ ತದ್ರೌಪ್ಯದಂತಂ ತಥೈವ ಚ ।**
**ಮುಕ್ತಾದಾಮ್ನಾ ತು ಲಾಂಗೂಲಂ ತಿಲಚ್ಛನ್ನಂ ತಥೈವ ಚ ॥ ೬ ॥**

**ತಿಲೈಃ ಕೃತ್ವಾ ಶಿರೋ ರಾಜನ್ ವಾಸಸಾಚ್ಛಾದಯೇದ್ಬುಧಃ ।**
**ಸುವರ್ಣೇನಾಭಿತಃ ಕುರ್ಯಾದಲಂಕುರ್ಯಾದ್ವಿಶೇಷತಃ ॥ ೭ ॥**

---

ವಿಕೆ ಇಂತಹ ಕಾಲಗಳಲ್ಲಿಯೂ ಅಥವಾ ದ್ರವ್ಯಾನುಕೂಲವು ಒದಗಿದಾಗಲೂ ಈ ಮಹಾದಾನವನ್ನು ಮಾಡಬೇಕು.

೪. ಎಲೈ ರಾಜನೇ ! ಯಾವ ಬ್ರಾಹ್ಮಣನು ಆಹಿತಾಗ್ನಿಯೂ ಮತ್ತು ವೇದಗಳು ಮತ್ತು ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಇವುಗಳಲ್ಲಿ ನಿಷ್ಣಾತನೂ ಪುರಾಣಗಳಲ್ಲಿ ಅಭಿರುಚಿಯುಳ್ಳವನೂ ಆಗಿರುವನೋ ಅಂತಹವನಿಗೆ ಇದನ್ನು ದಾನಮಾಡಬೇಕು. ಆ ವಿಧಾನವನ್ನು ಹೇಳುವೆನು ಕೇಳು.

೫. ಎಲೈ ನರಾಧಿಪನಾದ ಯುಧಿಷ್ಠಿರನೇ ! ಕೇಳು ಅನುಕೂಲವಾದ ಒಂದು ಸ್ಥಲವನ್ನು ಸಗಣಿಯಿಂದ ಸಾರಿಸಿ ಶುಚಿಯಾಗಿ ಮಾಡಿ ಅಲ್ಲಿ ಮನೋಹರವಾದ ಕುರಿಯ ತುಪ್ಪಟದಿಂದ ನಿರ್ಮಿಸಿದ ಶಾಲುವನ್ನು ಹಾಕಬೇಕು.

೬-೭. ಅಲ್ಲಿ ಚಿನ್ನದಿಂದ ಕೊಂಬುಗಳನ್ನೂ ಮತ್ತು ಬೆಳ್ಳಿಯಿಂದ ದಂತಗಳನ್ನೂ ಮುತ್ತಿನ ಸರಗಳಿಂದ ಬಾಲವನ್ನೂ ಮತ್ತು ಎಳ್ಳಿನಿಂದ ತಲೆ ಮತ್ತು ದೇಹ ಇವು ಮುಚ್ಚಲ್ಪಟ್ಟು ಇರುವಂತೆ ಜಿಂಕೆಯನ್ನು ನಿರ್ಮಿಸಬೇಕು. ಅದಕ್ಕೆ ವಸ್ತ್ರವನ್ನು ಹೊದ್ದಿಸಬೇಕು. ಮತ್ತು ಸುತ್ತಲೂ ಚಿನ್ನದ ಒಡವೆಗಳಿಂದ ಅಲಂಕರಿಸಬೇಕು.

ಪುಷ್ಪೈರ್ಗಂಧೈಃ ಫಲೈಶ್ಚೈವ ನೈವೇದ್ಯೇನ ಚ ಪೂಜಯೇತ್ ।
ರತ್ನೈರೇವಂ ಯಥಾ ಶಕ್ತ್ಯಾ ತಸ್ಯ ದಿಕ್ಷು ಚ ವಿನ್ಯಸೇತ್ ॥ ೮ ॥

ಕಾಂಸ್ಯಪಾತ್ರಾಣಿ ಚತ್ವಾರಿ ತೇಷು ದದ್ಯಾದ್ಯಥಾಕ್ರಮಂ ।
ಘೃತಂ ಕ್ಷೀರಂ ದಧಿ ಕ್ಷೌದ್ರಮೇವಂ ದತ್ವಾ ಯಥಾವಿಧಿ ॥ ೯ ॥

ತತಃ ಪರ್ವಸಮೀಪೇ ತು ಮಂತ್ರಮೇತ ಮುದೀರಯೇತ್ ।
ಕೃಷ್ಣಃ ಕೃಷ್ಣಮಲೋ ದೇವ ಕೃಷ್ಣಾಜಿನವರಸ್ತಥಾ ॥ ೧೦ ॥

ತ್ವದ್ದಾನಾಪಾಸ್ತಪಾಪಸ್ಯ ಪ್ರೀಯತಾಂ ಮೇ ನಮೋನಮಃ ।
ತ್ರಯಸ್ತ್ರಿಂಶತ್ಸುರಾಣಾಂ ಚ ಆಧಾರೇ ತ್ವಂ ವ್ಯವಸ್ಥಿತಃ ॥ ೧೧ ॥

---

೮. ಮತ್ತು ಹೂವು, ಗಂಧ, ರತ್ನಾದ್ಯಾಭರಣಗಳು ಇವುಗಳಿಂದ ಅರ್ಚಿಸಿ ಹಣ್ಣುಗಳನ್ನು ನಿವೇದನಮಾಡಬೇಕು.

೯. ಅದರ ನಾಲ್ಕು ದಿಕ್ಕುಗಳಲ್ಲಿಯೂ ತನ್ನ ಶಕ್ತ್ಯನುಸಾರ ಕಂಚಿನ ಪಾತ್ರೆಗಳನ್ನು ಇಟ್ಟು ಅದರಲ್ಲಿ ಅನುಕ್ರಮವಾಗಿ ಪೂರ್ವದಿಕ್ಕಿನ ಪಾತ್ರೆಯಲ್ಲಿ ತುಪ್ಪವನ್ನೂ, ದಕ್ಷಿಣದಿಕ್ಕಿನ ಪಾತ್ರೆಯಲ್ಲಿ ಹಾಲನ್ನೂ, ಪಶ್ಚಿಮದಿಕ್ಕಿನ ಪಾತ್ರೆಯಲ್ಲಿ ಮೊಸರನ್ನೂ, ಉತ್ತರದಿಕ್ಕಿನ ಪಾತ್ರೆಯಲ್ಲಿ ಜೇನುತುಪ್ಪವನ್ನೂ ಯಥಾವಿಧಿಯಾಗಿ ಇರಿಸಬೇಕು.

೧೦–೧೧. ಅನಂತರ ಪರ್ವಕಾಲ ಸಮೀಪಿಸಿದಾಗ ಈ ಮುಂದೆ ಸೂಚಿಸಿರುವ ಮಂತ್ರವನ್ನು ಹೇಳಬೇಕು. ಎಲೈ ದೇವನೇ! ನೀನು ಸಾಕ್ಷಾತ್ ಕೃಷ್ಣನಾಗಿಯೂ ಮತ್ತು ಕೃಷ್ಣನ ಮಲಿನವಾಗಿಯೂ, ಜಿಂಕೆಯ ಶ್ರೇಷ್ಠವಾದ ಚರ್ಮವಾಗಿಯೂ ಮತ್ತು ಮುವತ್ತುಮೂರುಕೋಟಿ ದೇವತೆಗಳಿಗೆ ಆಧಾರಭೂತನೆಂದು ವ್ಯವಸ್ಥಿತನಾಗಿಯೂ ಇರುತ್ತೀಯೆ. ಇಂತಹ ನಿನ್ನನ್ನು ದಾನಮಾಡತಕ್ಕ ನನಗೆ ಪಾಪಗಳೆಲ್ಲಾ ಪರಿಹಾರವಾಗಿ ಸುಖವುಂಟಾಗಲಿ. ನಿನಗೆ ಮತ್ತೆ ಮತ್ತೆ ನಮಸ್ಕಾರ.

ಕೃಷ್ಣೋಽಸಿ ಮೂರ್ತಿಮಾನ್ಸಾಕ್ಷಾತ್ ಕೃಷ್ಣಾಜಿನ ನಮೋಽಸ್ತುತೇ ।
ಏವಂ ಪ್ರದಕ್ಷಿಣೀಕೃತ್ಯ ಪ್ರಣಿಪತ್ಯ ಪುನಃ ಪುನಃ ॥ ೧೨ ॥

ತತ್ಪ್ರತಿಗ್ರಾಹಕಂ ವಿಪ್ರಂ ವೇದವೇದಾಂಗಪಾರಗಂ ।
ಸ್ನಾತಂ ವಸ್ತ್ರಯುಗಾಚ್ಛನ್ನಂ ಸ್ವಶಕ್ತ್ಯಾ ಚಾಪ್ಯಲಂಕೃತಂ ॥ ೧೩ ॥

ಪ್ರತಿಗ್ರಹಶ್ಚ ತಸ್ಯೋಕ್ತಃ ಪುಚ್ಛದೇಶೇ ಸ್ವಯಂಭುವಾ ।
ಪ್ರತಿಗ್ರಹಪ್ರದಗ್ಧಸ್ಯ ವಿಪ್ರಸ್ಯ ಚ ಸ ಭಾರತ ॥ ೧೪ ॥

ನ ಪಶ್ಯೇದ್ವದನಂ ಪಶ್ಚಾನ್ನ ಚೈನಮಭಿಭಾಷಯೇತ್ ।
ಅನೇನ ವಿಧಿನಾ ದತ್ವಾ ಯಥಾವತ್ಕೃಷ್ಣಮಾರ್ಗಣಂ ॥ ೧೫ ॥

ಸಮಗ್ರಂ ಭೂಮಿದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ।
ಕೃಷ್ಣಾಜಿನತಿಲಾನ್ಕೃತ್ವಾ ಹಿರಣ್ಯಂ ಮಧುಸರ್ಪಿಷೀ ॥ ೧೬ ॥

---

೧೨. ಎಲೈ ಕೃಷ್ಣಾಜಿನವೇ! ನೀನು ಮೂರ್ತಿಮತ್ತಾದ ಕೃಷ್ಣನೇ ಆಗಿರುತ್ತಿ. ಇಂತಹ ನಿನಗೆ ನಮಸ್ಕಾರ ಎಂದು ಹೇಳಿ ಪುನಃ ಪುನಃ ಪ್ರದಕ್ಷಿಣೆ ಮಾಡಿ ನಮಸ್ಕರಿಸಬೇಕು.

೧೩. ಈ ದಾನವನ್ನು ಪ್ರತಿಗ್ರಹಮಾಡತಕ್ಕನೂ ಕೂಡ ವೇದ ಮತ್ತು ವೇದಾಂಗಗಳಲ್ಲಿ ನಿಷ್ಣಾತನಾಗಿಯೂ ಮತ್ತು ಸ್ನಾನಮಾಡಿ ಎರಡು ಬಟ್ಟೆಗಳಿಂದ ಆಚ್ಛಾದಿತನಾಗಿಯೂ, ತನ್ನ ಶಕ್ತ್ಯನುಸಾರ ಅಲಂಕೃತನಾಗಿಯೂ ಇರಬೇಕು.

೧೪. ಎಲೈ ಯುಧಿಷ್ಠಿರನೇ! ಇದನ್ನು ದಾನ ತೆಗೆದುಕೊಳ್ಳುವಾಗ ಬಾಲದ ಕಡೆಯಿಂದ ತೆಗೆದುಕೊಳ್ಳಬೇಕೆಂದು ಬ್ರಹ್ಮನು ಹೇಳಿದಾನೆ. ಇದನ್ನು ತೆಗೆದುಕೊಂಡವನು ದಗ್ಧನಾದಂತೆ ಎಂದು ವಾಕ್ಯವಿರುವುದು.

೧೫. ಆದುದರಿಂದ ದಾನಕೊಟ್ಟ ಮೇಲೆ ಯಜಮಾನನು ಆ ಪ್ರತಿಗೃಹೀತೃವಿನ ಮುಖವನ್ನು ನೋಡಬಾರದು. ಮತ್ತು ಆತನೊಡನೆ ಮಾತಾಡಬಾರದು.

೧೬. ಈ ವಿಧಿಯಂತೆ ಯಾವ ಮಾನವನು ಕೃಷ್ಣಾಜಿನವನ್ನು ದಾನ ಮಾಡುವನೋ ಅವನು ಸಮಗ್ರವಾಗಿ ಭೂಮಿಯನ್ನು ದಾನಮಾಡಿದ ಫಲವನ್ನು ಖಂಡಿತ ಹೊಂದುತ್ತಾನೆ.

ಯೇ ಪ್ರಯಚ್ಛಂತಿ ವಿಪ್ರಾಯ ನ ತೇ ಶೋಚ್ಯಾ ಭವಂತಿ ವೈ |
ಸರ್ವಾಲ್ಲೋಕಾಂಶ್ಚರಂತ್ಯೇವ ಕಾಮಚಾರಾ ವಿಯದ್ಗತಾಃ || ೧೭ ||

ಅಭೂತಸಂಪ್ಲವಂ ಯಾವತ್ಸ್ವರ್ಗಂ ಪ್ರಾಪ್ತಾ ನ ಸಂಶಯಃ |
ಕೃಷ್ಣಾಜಿನಸಮಂ ದಾನಂ ನ ಚಾಸ್ತಿ ಭುವನತ್ರಯೇ || ೧೮ ||

ಪ್ರತಿಗ್ರಹೋಽಪಿ ಪಾಪೀಯಾನ್ ಇತಿ ವೇದವಿದೋ ವಿದುಃ |
ಅವಸ್ಥಾತ್ರಿತಯೇ ಯಚ್ಚ ತ್ರಿಧಾ ಯತ್ಸಮುಪಾರ್ಜಿತಂ || ೧೯ ||

ತತ್ಸರ್ವಂ ನಾಶಮಾಯಾತಿ ದತ್ವಾ ಕೃಷ್ಣಾಜಿನಂ ಕ್ಷಣಾತ್ || ೨೦ ||

ಕೃಷ್ಣೇಕ್ಷಣಂ ಕೃಷ್ಣಮೃಗಸ್ಯ ಚರ್ಮ |
ದತ್ವಾ ದ್ವಿಜೇಂದ್ರಾಯ ಸಮಾಹಿತಾತ್ಮಾ ||

---

೧೭-೧೮. ಯಾವ ಮನುಜರು ಕೃಷ್ಣಾಜಿನ ಸಮೀಪದಲ್ಲಿಟ್ಟಿದ್ದ ತಿಲ ವನ್ನೂ, ಸುವರ್ಣವನ್ನೂ, ಜೇನುತುಪ್ಪ, ತುಪ್ಪ ಇವುಗಳನ್ನು ಬ್ರಾಹ್ಮಣನಿಗೆ ದಾನಮಾಡುವರೋ ಅಂತಹವರು ಎಂದೂ ದುಃಖಭಾಗಿಗಳಾಗುವುದಿಲ್ಲ. ಆಕಾಶ ಮಾರ್ಗಗಮನದಿಂದ ತಮ್ಮ ಮನಬಂದಂತೆ ಸಕಲ ಲೋಕಗಳಲ್ಲಿಯೂ ಸಂಚರಿ ಸುತ್ತಾರೆ. ಮತ್ತು ಪ್ರಲಯ ಪರ್ಯಂತ ಸ್ವರ್ಗಲೋಕದಲ್ಲಿ ವಾಸಿಸುವರೆಂಬುದು ನಿಸ್ಸಂಶಯವಾದ ವಿಷಯ.

೧೯-೨೦. ಕೃಷ್ಣಾಜಿನದಾನಕ್ಕೆ ಸದೃಶವಾದ ದಾನವು ಮೂರುಲೋಕ ಗಳಲ್ಲಿಯೂ ಮತ್ತೊಂದಿಲ್ಲ. ವೇದವೇತ್ತರು ಈ ದಾನದ ಪ್ರತಿಗ್ರಹವು ಪಾಪಕರ ವಾದುದೆಂದು ಹೇಳುತ್ತಾರೆ. ಮನುಜನಿಗೆ ಮೂರು ಅವಸ್ಥೆಗಳಲ್ಲೂ ಮೂರು ಪ್ರಕಾರದಿಂದ ಪಾಪವು ಸಂಘಟಿಸುವುದಷ್ಟೆ. ಅವೆಲ್ಲವೂ ಕೃಷ್ಣಾಜಿನವನ್ನು ದಾನ ಮಾಡುವುದರಿಂದ ಒಂದು ಕ್ಷಣದಲ್ಲಿಯೇ ನಾಶವಾಗುತ್ತದೆ.

೨೧. ಜಿಂಕೆಯಚರ್ಮವನ್ನು ಆ ಜಿಂಕೆಯ ಕಣ್ಣಿನಭಾಗ ಸಹಿತವಾಗಿರು ವಂತೆಯೇ ಶ್ರೇಷ್ಠನಾದ ಬ್ರಾಹ್ಮಣನಿಗೆ ದಾನಮಾಡಿದರೆ ದಾತನಿಗೆ ಯಥೋಕ್ತ ಕ್ರಮವಾದ ಸಮಾಧಾನಚಿತ್ತದಿಂದ ಮರಣವು ಸಂಭವಿಸುತ್ತದೆ. ಅದಕ್ಕೆ ದುಃಖಿಸ

ಯಥೋಕ್ತಮೇತನ್ಮರಣಂ ನ ಶೋಚೇತ್ ।
ಪ್ರಾಪ್ನೋತ್ಯಭೀಷ್ಟಂ ಮನಸಃ ಫಲಂ ಯತ್ ॥ ೨೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ
ಸಂವಾದೇ ಕೃಷ್ಣಾಜಿನದಾನವಿಧಿವರ್ಣನಂ
ನಾಮ ಅಷ್ಟಾಶೀತ್ಯುತ್ತರಶತತಮೋಽಧ್ಯಾಯಃ.



---

ಬಾರದು. ದಾತನು ತನ್ನ ಮನೋಭೀಷ್ಟವಾದ ಫಲವನ್ನು ಪಡೆಯುತ್ತಾನೆ ಎಂಬದಾಗಿ ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಕೃಷ್ಣಾಜಿನ ದಾನವಿಧಿವರ್ಣನೆಯೆಂಬ
ನೂರಎಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನನವತ್ಯುತ್ತರಶತತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಕಥಯಿಷ್ಯೇ ಮಹಾರಾಜ ಹೇಮಹಸ್ತಿರಥಂ ತವ ।
ಯಸ್ಯ ಪ್ರದಾನಾದ್ಭವನಂ ವೈಷ್ಣವಂ ಯಾತಿ ಮಾನವಃ ॥ ೧ ॥

ಪರ್ವಕಾಲಂ ಸಮಾಸಾದ್ಯ ಸಂಕ್ರಾಂತೌ ಗ್ರಹಣೇಽಪಿ ವಾ ।
ಕುರ್ಯಾದ್ದೇವರಥಾಕಾರಂ ರಥಂ ಮಣಿವಿಭೂಷಿತಂ ॥ ೨ ॥

ವಲಭೀಭಿರ್ವಿಚಿತ್ರಾಭಿಃ ಚತುಶ್ಚಕ್ರಸಮನ್ವಿತಂ ।
ಚತುರ್ಭಿರ್ಹೇಮಮಾತಂಗೈಃ ಯುಕ್ತಂ ಹೇಮವಿಭೂಷಿತಂ ॥ ೩ ॥

---

### ನೂರಎಂಭತ್ತೊಂಭತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಎಲೈ ಮಹಾರಾಜನಾದ ಯುಧಿಷ್ಠಿರನೇ! ಸುವರ್ಣ ಹಸ್ತಿರಥದಾನವೆಂಬುದೊಂದಿದೆ. ಆ ದಾನವನ್ನು ಮಾಡುವುದರಿಂದ ವಿಷ್ಣುಲೋಕ ಪ್ರಾಪ್ತಿಯಾಗುವುದು. ಅದರ ವಿಧಾನವನ್ನು ನಿನಗೆ ಹೇಳುತ್ತೇನೆ.

೨. ಪರ್ವಕಾಲ, ಸಂಕ್ರಮಣ ಅಥವಾ ಗ್ರಹಣಕಾಲಗಳು ಇವು ಈ ದಾನಕ್ಕೆ ಉಕ್ತವಾಗಿದೆ. ದೇವರ ರಥಕ್ಕೆ ಸದೃಶವಾದ ಆಕಾರವುಳ್ಳಂತೆ ಒಂದು ರಥವನ್ನು ಮಣಿಗಳಿಂದ ಅಲಂಕೃತವಾಗಿರುವಂತೆ ನಿರ್ಮಿಸಬೇಕು.

೩. ಮತ್ತು ಆ ರಥದಲ್ಲಿ ಚಿತ್ರಚಿತ್ರಗಳಾದ ಲೋವೆಗಳ ಸಾಲುಗಳೂ ಮತ್ತು ನಾಲ್ಕು ಚಕ್ರಗಳೂ ಇರಬೇಕು. ಆ ರಥವು ಸುವರ್ಣದ ನಾಲ್ಕು ಆನೆಗಳಿಂದ ಯುಕ್ತವಾಗಿ ಸುತ್ತಲೂ ಸುವರ್ಣದಿಂದ ಅಲಂಕೃತವಾಗಿರಬೇಕು.

**ಧ್ವಜೇ ಚ ಗರುಡಂ ಕುರ್ಯಾತ್ಕೂಬರಾಗ್ರೇ ವಿನಾಯಕಂ ।**
**ಲೋಕಪಾಲಾಷ್ಟಕೋಪೇತಂ ಬ್ರಹ್ಮಾರ್ಕಶಿವಸಂಯುತಂ ॥ ೪ ॥**

**ಮಧ್ಯೇ ನಾರಾಯಣೋಪೇತಂ ಲಕ್ಷ್ಮೀಪುಷ್ಟಿಸಮನ್ವಿತಂ ।**
**ಕೃಷ್ಣಾಜಿನತಿಲದ್ರೋಣಂ ಕೃತ್ವಾ ತಂ ಸ್ಥಾಪಯೇದ್ರಥಂ ॥ ೫ ॥**

**ನಾನಾಫಲಸಮಾಯುಕ್ತಮುಪರಿಷ್ಟಾದ್ವಿತಾನಕಂ ।**
**ಕೌಶೇಯವಸ್ತ್ರಸಂವೀತಂ ಅಮ್ಲಾನಕುಸುಮಾರ್ಚಿತಂ ॥ ೬ ॥**

**ಕುರ್ಯಾತ್ಪಂಚಪಲಾದೂರ್ಧ್ವಮಾಶತಾಚ್ಚ ನರೋತ್ತಮ ।**
**ತತಃ ಸ್ನಾತ್ವಾ ಸಮಭ್ಯರ್ಚ್ಯ ಪಿತೄನ್ ದೇವಾನ್ ಯಥಾವಿಧಿ ॥ ೭ ॥**

---

೪. ರಥದ ಧ್ವಜದಲ್ಲಿ ಗರುಡ ಧ್ವಜದ ಮೂಕಿಯ ಮೇಲೆ ಮುಂಭಾಗದಲ್ಲಿ ವಿನಾಯಕ ಸುತ್ತಲೂ ಎಂಟುಜನ ಲೋಕಪಾಲಕರು ಮತ್ತು ಬ್ರಹ್ಮ, ಸೂರ್ಯ, ಈಶ್ವರ ಇವರ ಸಮೇತರಾಗಿರುವಂತೆ ನಿರ್ಮಿಸಬೇಕು.

೫. ಮತ್ತು ಮಧ್ಯಭಾಗದಲ್ಲಿ ಲಕ್ಷ್ಮೀ ಮತ್ತು ಪುಷ್ಟಿದೇವತೆಯರಿಂದ ಯುಕ್ತವಾದ ನಾರಾಯಣನನ್ನು ಇರಿಸಬೇಕು. ಅನಂತರ ಕೃಷ್ಣಾಜಿನದ ಮೇಲೆ ಒಂದು ದ್ರೋಣ (ಕೊಳಗ) ಎಳ್ಳನ್ನು ಹರಡಿ ಅದರ ಮೇಲೆ ಈ ರಥವನ್ನು ಸ್ಥಾಪಿಸಬೇಕು.

೬. ರಥದ ಮೇಲ್ಭಾಗದಲ್ಲಿ ಅನೇಕ ಫಲಗಳಿಂದಲೂ ಮತ್ತು ಅಲಂಕಾರ ವಾದ ಬಟ್ಟೆಯ ಮೇಲ್ಕಟ್ಟಿನಿಂದಲೂ ಕೂಡಿ ಶೋಭಿಸುತ್ತಿರಬೇಕು. ಪೀತಾಂಬರ ದಿಂದ ಅದನ್ನು ಆಚ್ಛಾದಿಸಬೇಕು. ಮತ್ತು ಬಾಡಿಹೋಗದೆ ಇರತಕ್ಕ ಹೂಗಳಿಂದ ಅಲಂಕಾರವಾಗಿ ಕಾಣುವಂತೆ ಪೂಜಿಸಿರಬೇಕು.

೭. ಆ ರಥವು ಕನಿಷ್ಠಪಕ್ಷ ಐದುಪಲ ತೂಕಕ್ಕಿಂತ ಮೇಲೆ ಪರಮಾವಧಿ ಯಾದರೆ ನೂರುಪಲಗಳಿರುವಂತೆ ಸುವರ್ಣದಿಂದ ರಚಿತವಾಗಿರಬೇಕು. ಯಜ ಮಾನನು ಸ್ನಾನಮಾಡಿ ಯಥಾವಿಧಿಯಾಗಿ ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಬೇಕು.

ತ್ರಿಃಪ್ರದಕ್ಷಿಣಮಾವೃತ್ಯ ಗೃಹೀತಕುಸುಮಾಂಜಲಿಃ ।
ಇಮಮುಚ್ಚಾರಯೇನ್ಮಂತ್ರಂ ಸರ್ವಸೌಖ್ಯಪ್ರದಾಯಕಂ ॥ ೮ ॥

ನಮೋ ನಮಃ ಶಂಕರಪದ್ಮಜಾರ್ಕ ।
ಲೋಕೇಶವಿದ್ಯಾಧರವಾಸುದೇವೈಃ ॥
ತ್ವಂ ಸೇವ್ಯಸೇ ವೇದಪುರಾಣಯಜ್ಞೈಃ ।
ತೇಜೋ ಹಿ ನಃ ಸ್ಯಂದನ ಪಾಹಿ ತಸ್ಮಾತ್ ॥ ೯ ॥

ಯತ್ತತ್ಪದಂ ಪರಮಗುಹ್ಯತಮಂ ಪುರಾಣಂ ।
ಆನಂದಹೇತುಗಣರೂಪವಿಮುಕ್ತಬಂಧಾಃ ॥
ಯೋಗೈಕಮಾನಸದೃಶೋ ಮುನಯಃ ಸಮಾಧೌ ।
ಪಶ್ಯಂತಿ ತತ್ತ್ವಮಸಿ ನಾಥ ರಥೇತಿರೂಢಃ ॥ ೧೦ ॥

ಯಸ್ಮಾತ್ತ್ವಮೇವ ಭವಸಾಗರಸಂಪ್ಲುತಾನಾಂ ।
ಆನಂದಭಾಂಡಚಿತಮಧ್ಯಗಪಾನಪಾತ್ರಂ ॥
ತಸ್ಮಾದಘೌಘಶಮನೇನ ಕುರು ಪ್ರಸಾದಂ ।
ಚಾಮೀಕರೇಭರಥ ಮಾಧವ ಸಂಪ್ರದಾನಾತ್ ॥ ೧೧ ॥

---

೮. ಪೂಜಿಸಿದ ಆ ರಥವನ್ನು ಮೂರು ಪ್ರದಕ್ಷಿಣೆಮಾಡಿ ಪುಷ್ಪಾಂಜಲಿ ಬದ್ಧನಾಗಿ ಸಕಲ ಸೌಖ್ಯದಾಯಕವಾದ ಈ ಮಂತ್ರವನ್ನು ಉಚ್ಚರಿಸಬೇಕು.

೯. ಎಲೈ ರಥವೇ ! ನೀನು ಶಂಕರ, ಬ್ರಹ್ಮ, ಸೂರ್ಯ, ಇಂದ್ರ, ವಿದ್ಯಾಧರ, ಶ್ರೀವಾಸುದೇವ ಮತ್ತು ವೇದ, ಪುರಾಣ, ಯಜ್ಞ ಇವೆಲ್ಲವುಗಳಿಂದ ಸೇವಿತನಾಗಿರುವೆ. ಅಂತಹ ನೀನು ನಮ್ಮ ತೇಜಸ್ಸನ್ನು ರಕ್ಷಿಸು.

೧೦. ಎಲೈ ರಥವೇ ! ಯೋಗದಲ್ಲಿಯೇ ಮುಖ್ಯವಾಗಿ ಮನಸ್ಸಿಟ್ಟಿರುವ ಋಷಿಗಳು ಸಮಾಧಿಯಲ್ಲಿರುತ್ತಾ ಬಹು ಪ್ರಾಚೀನವೂ, ಮತ್ತು ಆನಂದಕ್ಕೆ ಕಾರಣ ಭೂತವಾದ ರೂಪಾದಿಗಳಿಂದ ಬಿಡುಗಡೆ ಹೊಂದಿದುದೂ, ಬಹು ಗುಪ್ತವೂ ಆದ ನಿನ್ನನ್ನು “ ತತ್ವಮಸಿ ” ಸ್ವರೂಪವಾಗಿ ಕಾಣುತ್ತಾರೆ.

೧೧ ಸಂಸಾರಸಾಗರದಲ್ಲಿ ಮುಳುಗಿರತಕ್ಕವರಿಗೆ ನೀನೇ ಆನಂದವೆಂಬ ಭಾಂಡದ ಮಧ್ಯದಲ್ಲಿರತಕ್ಕ ಸಣ್ಣ ಪಾನಪಾತ್ರೆಯಂತೆ ಇದ್ದೀಯೆ ಎಲೈ ಮಾಧವಸ್ವರೂಪನಾಗಿರುವ ಗಜರಥವೇ ! ಇಂತಹ ನಿನ್ನನ್ನು ದಾನಮಾಡುವುದ ರಿಂದ ನನ್ನ ಸಕಲ ಪಾಪಗಳನ್ನೂ ನಾಶಮಾಡಿ ಅನುಗ್ರಹಿಸು.

ಇತ್ಥಂ ಪ್ರಣಮ್ಯ ಕನಕೇಭರಥಪ್ರದಾನಂ ।
ಯಃ ಕಾರಯೇತ್ಸಕಲಪಾಪವಿಮುಕ್ತದೇಹಃ ॥
ವಿದ್ಯಾಧರಾಮರಮುನೀಂದ್ರಗಣಾಭಿಜುಷ್ಟಂ ।
ಪ್ರಾಪ್ನೋತ್ಯಸೌ ಪದಮತೀಂದ್ರಿಯಮಿಂದುಮೌಳೇಃ ॥ ೧೨ ॥

ಕೃತದುರಿತವಿತಾನಾತುಷ್ಟಿಸದ್ವಹ್ನಿಪಾಲ ।
ವ್ಯತಿಕರಕೃತದೇಹೋದ್ವೇಗಭಾನೋಽಪಿ ಬಂಧೂನ್ ॥
ನಯತಿ ಚ ಪಿತೃಪೌತ್ರಾನ್ರೌರವಾದಪ್ಯಶೇಷಾ ।
ತ್ಕೃತಗಜರಥದಾನಃ ಶಾಶ್ವತಂ ಸದ್ಮ ವಿಷ್ಣೋಃ ॥ ೧೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಹೇಮಹಸ್ತಿರಥದಾನವಿಧಿವರ್ಣನಂ ನಾಮ ಏಕೋಽನನವತ್ಯುತ್ತರಶತತಮೋಽಧ್ಯಾಯಃ.

---

೧೨. ಈ ರೀತಿ ಹೇಳಿ ಸುವರ್ಣದ ಆನೆಯ ರಥವನ್ನು ನಮಸ್ಕರಿಸಿ ದಾನಮಾಡತಕ್ಕವನು ಸಕಲ ಪಾಪಗಳಿಂದಲೂ ಬಿಡುಗಡೆಹೊಂದಿ ವಿದ್ಯಾಧರರು, ಮುನಿಗಳು ಇವರ ಸಮೂಹಗಳಿಂದ ಕೂಡಿರತಕ್ಕವನೂ, ಅತೀಂದ್ರಿಯನೂ ಚಂದ್ರನೇ ಶಿರೋಭೂಷಣವಾಗಿ ಉಳ್ಳವನೂ ಆದ ಈಶ್ವರನ ಸ್ಥಾನವನ್ನು ಪಡೆಯುತ್ತಾನೆ.

೧೩. ಮೇಲೆ ಹೇಳಿದಂತೆ ಆನೆಯ ರಥವನ್ನು ದಾನಮಾಡಿದವನು ತಾನು ಮಾಡಿದ ದುರಿತರಾಶಿಗಳನ್ನೆಲ್ಲಾ ನಾಶಮಾಡಿಕೊಂಡು ತನಗೆ ತುಷ್ಟನಾಗುವ ಅಗ್ನಿಯ ಪ್ರಭಾವದಿಂದ ಸೂರ್ಯನನ್ನು ಮೀರಿಸುವಷ್ಟು ತೇಜೋಮಯನಾಗಿ ತನ್ನ ಬಂಧುಗಳು ಮತ್ತು ಸ್ವರ್ಗಸ್ಥ ಪಿತೃಗಳು ಮತ್ತು ಮಕ್ಕಳು, ಮೊಮ್ಮಕ್ಕಳು ಇವರನ್ನೆಲ್ಲಾ ಘೋರವಾದ ರೌರವನರಕದಿಂದ ದಾಟಿಸುತ್ತಾನೆ. ಮತ್ತು ತಾನು ಶಾಶ್ವತವಾದ ವಿಷ್ಣುಲೋಕವನ್ನು ಪಡೆಯುತ್ತಾನೆ ಎಂಬದಾಗಿ ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಆನೆಯ ರಥದ ದಾನವಿಧಿವರ್ಣನೆಯೆಂಬ ನೂರಎಂಭತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ನವತ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಪುನರೇವ ಪ್ರವಕ್ಷ್ಯಾಮಿ ದಾನಮತ್ಯದ್ಭುತಂ ತವ ।
ವಿಶ್ವಚಕ್ರಮಿತಿಖ್ಯಾತಂ ಸರ್ವಪಾಪವಿನಾಶನಂ ॥ ೧ ॥

ತಪನೀಯಸ್ಯ ಶುದ್ಧಸ್ಯ ವಿಶುದ್ಧಾತ್ಮಾಽಥ ಕಾರಯೇತ್ ।
ಶ್ರೇಷ್ಠಂ ಪಲಸಹಸ್ರೇಣ ತದರ್ಧೇನ ತು ಮಧ್ಯಮಂ ॥ ೨ ॥

---

## ನೂರತೊಂಭತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಸಕಲ ಪಾಪನಿವಾರಕವೂ ವಿಶ್ವಚಕ್ರವೆಂದು ಪ್ರಸಿದ್ಧವೂ ಅದ್ಭುತವೂ ಆದ ದಾನ ವನ್ನು ನಿನಗೆ ಹೇಳುವೆನು.

೨. ಮಾನವನು ನಿರ್ಮಲಾಂತಃಕರಣನಾಗಿ ಒಂದುಸಾವಿರ ಪಲಪ್ರಮಾಣ ಉಳ್ಳ ಶುದ್ಧವಾದ ಚಿನ್ನದಿಂದ ವಿಶ್ವಚಕ್ರವನ್ನು ರಚಿಸಬೇಕು. ಈ ರೀತಿ ಮಾಡಿದರೆ ಉತ್ತಮವಿಧಾನವೆನಿಸುವುದು. ಆದರ ಅರ್ಧ ಅಂದರೆ ಐದುನೂರು ಪಲಪ್ರಮಾಣದಿಂದ ಮಾಡಿದರೆ ಮಧ್ಯಮವಿಧಾನವೆನಿಸುವುದು.

**ತಸ್ಯಾಪ್ಯರ್ಧಂ ಕನಿಷ್ಠಂ ಸ್ಯಾದ್ವಿಶ್ವಚಕ್ರಮುದಾಹೃತಂ ।**
**ತಥಾ ವಿಂಶತ್ಪಲಾದೂರ್ಧ್ವಮಶಕ್ತೋಽಪಿ ನಿವೇದಯೇತ್ ॥ ೩ ॥**

**ಷೋಡಶಾರಂ ತತಶ್ಚಕ್ರಂ ಭ್ರಮನ್ನೇಮ್ಯಷ್ಟಕಾವೃತಂ ।**
**ನಾಭಿಪದ್ಮೇ ಸ್ಥಿತಂ ವಿಷ್ಣುಂ ಯೋಗಾರೂಢಂ ಚತುರ್ಭುಜಂ ॥ ೪ ॥**

**ಶಂಖಚಕ್ರೇಽಸ್ಯ ಪಾರ್ಶ್ವಸ್ಥೇ ದೇವ್ಯಷ್ಟಕಸಮಾವೃತಂ ।**
**ದ್ವಿತೀಯಾವರಣೇ ತದ್ವತ್ ಪೂರ್ವತೋ ಜಲಶಾಯಿನಂ ॥ ೫ ॥**

**ಅತ್ರಿರ್ಭೃಗುರ್ವಶಿಷ್ಠಶ್ಚ ಬ್ರಹ್ಮಾ ಕಶ್ಯಪ ಏವ ಚ ।**
**ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹೋಥ ವಾಮನಃ ॥ ೬ ॥**

---

೩. ಅದಕ್ಕೂ ಅರ್ಧ ಅಂದರೆ ಇನ್ನೂರೈವತ್ತು ಪಲಪ್ರಮಾಣದಿಂದ ಮಾಡಿದರೆ ಕನಿಷ್ಠವಿಧಾನವೆನಿಸುವುದು. ಹೀಗೆ ಮಾಡತಕ್ಕ ಚಕ್ರಕ್ಕೆ ವಿಶ್ವಚಕ್ರವೆಂದು ಹೆಸರು. ಆದರೆ ಎಂತಹ ಅಶಕ್ತನಾದರೂ ಇಪ್ಪತ್ತು ಪಲಗಳಿಗಿಂತ ಹೆಚ್ಚಿನ ಪ್ರಮಾಣ ಚಿನ್ನದಿಂದಲೇ ಮಾಡಿಸಬೇಕು.

೪. ಈ ಚಕ್ರವು ಹದಿನಾರು ಅರೆಕಾಲುಗಳಿಂದಲೂ ಮತ್ತು ಎಂಟು ನೇಮಿಗಳಿಂದಲೂ ಸಹಿತವಾಗಿರುವಂತೆ ರಚಿತವಾಗಿರಬೇಕು. ಮತ್ತು ಯೋಗಾರೂಢನಾದ ಬ್ರಹ್ಮನು ಕಮಲದಲ್ಲಿ ಕುಳಿತಿರುವಂತೆ ನಾಭಿಕಮಲ ಸಹಿತನಾಗಿಯೂ ಚತುರ್ಭುಜಯುಕ್ತನೂ ಶಂಖಚಕ್ರಧರನೂ.

೫. ಪಾರ್ಶ್ವಗಳಲ್ಲಿ ಅಷ್ಟಮಹಿಷಿಯರಿಂದ ಆವೃತನೂ ಜಲಶಾಯಿಯೂ ಆಗಿರುವಂತೆ ವಿಷ್ಣುವನ್ನು ರಚಿಸಬೇಕು.

೬–೭. ದ್ವಿತೀಯಾವರಣದಲ್ಲಿ ಪೂರ್ವದಿಕ್ಕಿನಿಂದ ಮೊದಲುಮಾಡಿ ಅತ್ರಿ, ಭೃಗು, ವಸಿಷ್ಠ, ಬ್ರಹ್ಮ, ಕಶ್ಯಪ ಎಂಬ ಋಷಿಗಳನ್ನು ಮತ್ತು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ರಾಮ, ಪರಶುರಾಮ, ಕೃಷ್ಣ, ಬುದ್ಧ, ಕಲ್ಕಿ

**ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕೀ ಚ ತೇ ದಶ ।**
**ತೃತೀಯಾವರಣೇ ಗೌರೀ ಮುನಿಭಿರ್ವಸುಭಿರ್ಯುತಾ ॥ ೭ ॥**

**ಚತುರ್ಥೇ ದ್ವಾದಶಾದಿತ್ಯಾ ವೇದಾಶ್ಚತ್ವಾರ ಏವ ಚ ।**
**ಪಂಚಮೇ ಪಂಚಭೂತಾನಿ ರುದ್ರಾಶ್ಚೈಕಾದಶೈವ ತು ॥ ೮ ॥**

**ಲೋಕಪಾಲಾಷ್ಟಕಂ ಷಷ್ಠೇ ದಿಙ್ಮಾತಂಗಾಸ್ತಥೈವ ಚ ।**
**ಸಪ್ತಮೇಽಸ್ತ್ರಾಣಿ ಸರ್ವಾಣಿ ಮಂಗಲಾನಿ ಚ ಕಾರಯೇತ್ ॥ ೯ ॥**

**ಅಂತರಾಂತರತೋ ದೇವಾನ್ವಿನ್ಯಸೇದಷ್ಟಮೇ ಪುನಃ ।**
**ದಶಹಸ್ತಂ ತತಃ ಕೃತ್ವಾ ಪತಾಕಾತೋರಣಾನ್ವಿತಂ ॥ ೧೦ ॥**

**ಮಂಡಪಂ ಕುಂಡಮೇಕಂ ಚ ಕಾರಯೇದ್ವಸ್ತ್ರಸಂಯುತಂ ।**
**ಚತುರ್ಹಸ್ತಾ ಭವೇದ್ವೇದೀ ಮಧ್ಯೇ ತಸ್ಯಾಸ್ತತೋ ನ್ಯಸೇತ್ ॥ ೧೧ ॥**

ಎಂಬ ಹತ್ತು ಮೂರ್ತಿಗಳನ್ನು ನಿರ್ಮಿಸಬೇಕು. ಮೂರನೆಯ ಆವರಣದಲ್ಲಿ ಗೌರಿ, ಸಪ್ತಋಷಿಗಳು, ಅಷ್ಟವಸುಗಳು ಇವರನ್ನು ನಿರ್ಮಿಸಬೇಕು.

೮. ನಾಲ್ಕನೆಯ ಆವರಣದಲ್ಲಿ ದ್ವಾದಶಾದಿತ್ಯರನ್ನೂ ಮತ್ತು ನಾಲ್ಕು ವೇದಗಳನ್ನೂ, ಐದನೆಯ ಆವರಣದಲ್ಲಿ ಪಂಚಭೂತಗಳನ್ನೂ, ಏಕಾದಶರುದ್ರರನ್ನೂ ನಿರ್ಮಿಸಬೇಕು.

೯. ಆರನೆಯ ಆವರಣದರಲ್ಲಿ ಅಷ್ಟದಿಕ್ಪಾಲಕರನ್ನೂ, ಅಷ್ಟದಿಗ್ಗಜಗಳನ್ನೂ ಮತ್ತು ಏಳನೆಯ ಆವರಣದಲ್ಲಿ ಮಂಗಳಕರಗಳಾದ ಸಕಲ ಅಸ್ತ್ರಗಳನ್ನೂ ನಿರ್ಮಿಸಬೇಕು.

೧೦. ಎಂಟನೆಯ ಆವರಣದಲ್ಲಿ ಮಧ್ಯೆ ಅಲ್ಲಲ್ಲಿ ದೇವತೆಗಳನ್ನು ಮತ್ತೆ ನಿರ್ಮಿಸಬೇಕು. ಈ ಸಮಾರಂಭಕ್ಕಾಗಿ ಧ್ವಜ ಪತಾಕೆ ಮತ್ತು ತೋರಣ ಇವುಗಳಿಂದ ಸಹಿತವಾದುದೂ ಹತ್ತುಹಸ್ತ ಪ್ರಮಾಣವುಳ್ಳುದೂ ಆದ.

೧೧. ಒಂದು ಮಂಡಪವನ್ನು ವಸ್ತ್ರದಿಂದ ಕೂಡಿರುವಂತೆ ರಚಿಸಿ ನಾಲ್ಕು ಹಸ್ತ ಪ್ರಮಾಣವುಳ್ಳ ಒಂದು ಯಜ್ಞವೇದಿಕೆಯನ್ನು ರಚಿಸಿ ಮಧ್ಯದಲ್ಲಿ ಒಂದು ಕುಂಡವನ್ನು ನಿರ್ಮಿಸಿ ವೇದಿಯ ಮೇಲೆ ವಿಶ್ವಚಕ್ರವನ್ನಿರಿಸಲು ಸಿದ್ಧಮಾಡಿ.

**ಕೃಷ್ಣಾಜಿನೋಪರಿಗತಂ ವಿಶ್ವಚಕ್ರಂ ವಿಧಾನತಃ ।**
**ತಥಾಷ್ಟಾ ದಶಧಾನ್ಯಾನಿ ರಸಾಶ್ಚ ಲವಣಾದಯಃ ॥ ೧೨ ॥**

**ಪೂರ್ಣಕುಂಭಾಷ್ಟಕಂ ತದ್ವದ್ವಸ್ತ್ರಮಾಲ್ಯವಿಭೂಷಿತಂ ।**
**ಫಲಾನಿ ದಾಪಯೇತ್ಪಾರ್ಶ್ವೇ ಪಂಚವರ್ಣವಿತಾನಕಂ ॥ ೧೩ ॥**

**ಅಧಿವಾಸ್ಯ ತತಶ್ಚಕ್ರಂ ಪಶ್ಚಾದ್ಧೋಮಂ ಸಮಾಚರೇತ್ ।**
**ಚತುಶ್ಚಾರಣಿಕಾಂಸ್ತತ್ರ ಬ್ರಾಹ್ಮಣಾಂಶ್ಚತುರೋಽಭವಾ ॥ ೧೪ ॥**

**ಹೋಮಂ ಕುರ್ಯುರ್ಜಿತಾತ್ಮಾನೋ ವಸ್ತ್ರಾಭರಣಭೂಷಿತಾಃ ।**
**ಹೋಮದ್ರವ್ಯಸಮೋಪೇತಾಃ ಸ್ರುಕ್ಸ್ರುವೈಸ್ತಾಮ್ರಭಾಜನೈಃ ॥ ೧೫ ॥**

---

೧೨. ಈ ವಿಶ್ವಚಕ್ರವನ್ನು ಯಥಾವಿಧಿಯಾಗಿ ಕೃಷ್ಣಾಜಿನದ ಮೇಲೆ ಇರಿಸಬೇಕು. ಪಕ್ಕದಲ್ಲಿ ಹದಿನೆಂಟು ಧಾನ್ಯಗಳನ್ನೂ ಮತ್ತು ಲವಣವೇ ಮುಂತಾದ ರಸದ್ರವ್ಯಗಳನ್ನೂ ಇರಿಸಬೇಕು.

೧೩. ಮತ್ತು ಹಿಂದಿನಂತೆಯೇ ವಸ್ತ್ರ, ಹೂಮಾಲೆ ಇತ್ಯಾದಿಗಳಿಂದ ಅಲಂಕೃತಗಳಾದ ಎಂಟು ಪೂರ್ಣಕುಂಭಗಳನ್ನೂ ಮತ್ತು ಪಾರ್ಶ್ವದಲ್ಲಿ ಫಲಗಳನ್ನೂ ಇರಿಸಿ ಆ ಪ್ರದೇಶದಲ್ಲಿ ಪಂಚವರ್ಣಗಳುಳ್ಳ ಚಪ್ಪರವನ್ನು ರಚಿಸಬೇಕು.

೧೪. ಮೊದಲು ಚಕ್ರವನ್ನು ಅಧಿವಾಸಮಾಡಿಸಿ ಅನಂತರ ಹೋಮ ಮಾಡಬೇಕು. ಈ ಕಾರ್ಯಕ್ಕೆ ನಾಲ್ಕು ಅರಣಿಗಳನ್ನು ಮತ್ತು ನಾಲ್ಕುಜನ ಬ್ರಾಹ್ಮಣರನ್ನು ನಿಯಮಿಸಬೇಕು.

೧೫. ಆ ಬ್ರಾಹ್ಮಣರು ವಸ್ತ್ರ, ಆಭರಣ ಇತ್ಯಾದಿಗಳಿಂದ ಅಲಂಕೃತರೂ, ಹೋಮದ್ರವ್ಯಗಳು ಮತ್ತು ಸ್ರುಕ್ಕು, ಸ್ರುವ, ತಾಮ್ರದ ಪಾತ್ರೆ ಇತ್ಯಾದಿಗಳಿಂದ ಯುಕ್ತರೂ ಆಗಿರಬೇಕು. ಅವರು ಜಿತಾತ್ಮರಾಗಿ ಏಕಾಗ್ರಚಿತ್ತದಿಂದ ಹೋಮ ಮಾಡಬೇಕು.

ಚಕ್ರಪ್ರತಿಷ್ಠಿತಾನಾಂ ತು ಸುರಾಣಾಂ ಹೋಮ ಇಷ್ಯತೇ ।
ತಲ್ಲಿಂಗೈರ್ಜುಹುಯಾನ್ಮಂತ್ರೈಃ ಸರ್ವೋಪದ್ರವಶಾಂತಯೇ ॥ ೧೬ ॥

ತತೋ ಮಂಗಲಶಬ್ದೇನ ಸ್ನಾತಃ ಶುಕ್ಲಾಂಬರೋ ಗೃಹೀ ।
ಹೋಮಾಧಿವಾಸನಾಂತೇ ತು ಗೃಹೀತಕುಸುಮಾಂಜಲಿಃ ॥ ೧೭ ॥

ಇಮಮುಚ್ಚಾರಯೇನ್ಮಂತ್ರಂ ಕೃತ್ವಾ ತತ್ರಿಃ ಪ್ರದಕ್ಷಿಣಂ ।
ನಮೋ ವಿಶ್ವಂಭರಾಯೇತಿ ವಿಶ್ವಚಕ್ರಾತ್ಮನೇ ನಮಃ ॥
ಪರಮಾನಂದ ರೂಪೀ ತ್ವಂ ಪಾಹಿ ನಃ ಪಾಪಕರ್ದಮಾತ್ ॥ ೧೮ ॥

ತೇಜೋಮಯಮಿದಂ ಯಸ್ಮಾತ್ಸದಾ ಪಶ್ಯಂತಿ ಸೂರಯಃ ।
ಹೃದಿ ತತ್ರ ಗುಣಾತೀತಂ ವಿಶ್ವಚಕ್ರಂ ನಮಾಮ್ಯಹಂ ॥ ೧೯ ॥

---

೧೬. ಆ ಚಕ್ರದಲ್ಲಿ ಆವಾಹನೆಮಾಡಲ್ಪಟ್ಟಿರುವ ಎಲ್ಲ ದೇವತೆಗಳನ್ನು ದ್ದೇಶಿಸಿ ಹೋಮಮಾಡಬೇಕೆಂದು ಉಕ್ತವಾಗಿರುತ್ತದೆ. ಆಯಾ ದೇವತೆಗಳಿಗೆ ಉಕ್ತವಾಗಿರುವ ಮಂತ್ರಗಳಿಂದಲೂ ಹೋಮದ್ರವ್ಯಗಳಿಂದಲೂ ಹೋಮಮಾಡ ಬೇಕು. ಸರ್ವ ಅರಿಷ್ಟಗಳ ನಿವೃತ್ತಿಯಾಗಲಿ ಎಂಬ ಉದ್ದೇಶದಿಂದ ಈ ಕಾರ್ಯ ನಡೆಸಬೇಕು.

೧೭. ಗೃಹಸ್ಥನು ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಶುಚಿಯಾಗಿ, ಮಂಗಳವಾದ್ಯವಾಗುವಾಗ ಹೋಮ, ಅಧಿವಾಸ ಇವುಗಳನ್ನು ಮುಗಿಸಿದ ನಂತರ ಪುಷ್ಪಾಂಜಲಿಬದ್ಧನಾಗಿ ಮೂರು ಪ್ರದಕ್ಷಿಣೆಗಳನ್ನು ಮಾಡಿ ಈ ಮುಂದೆ ಹೇಳುವ ಮಂತ್ರವನ್ನು ಉಚ್ಚರಿಸಬೇಕು.

೧೮. ಎಲೈ ವಿಶ್ವಚಕ್ರಾತ್ಮನೇ ! ನೀನು ಪ್ರಪಂಚವನ್ನು ರಕ್ಷಿಸುವವನೂ ಜಗಚ್ಚಕ್ರಸ್ವರೂಪನೂ ಆಗಿದ್ದೀ. ಪರಮಾನಂದಸ್ವರೂಪನಾದ ನೀನು ನಮ್ಮನ್ನು ಪಾಪರಾಶಿಯಿಂದ ಪಾರುಮಾಡು. ಇಂತಹ ನಿನಗೆ ನಮಸ್ಕಾರ ಎಂದು ಹೇಳಬೇಕು.

೧೯–೨೦. ವಿದ್ವಾಂಸರು ನಿನ್ನನ್ನು ಸಕಲ ಗುಣಾತೀತನಾಗಿಯೂ ತೇಜೋ ಮಯನಾಗಿಯೂ ಇರುವಂತೆ ತಮ್ಮ ಹೃದಯದಲ್ಲಿ ನೋಡುತ್ತಾರೆ. ಇಂತಹ

**ವಾಸುದೇವೇ ಸ್ಥಿತಂ ಚಕ್ರಂ ತಸ್ಯ ಮಧ್ಯೇ ತು ಮಾಧವಃ |**
**ಅನ್ಯೋನ್ಯಾಧಾರರೂಪೇಣ ಪ್ರಣಮಾಮಿ ಸ್ಥಿತಾವಿಹ || ೨೦ ||**

**ವಿಶ್ವಚಕ್ರಮಿದಂ ಯಸ್ಮಾತ್ಸರ್ವಪಾಪಹರಂ ಹರೇಃ |**
**ಆಯುಧಂ ಚಾಧಿವಾಸಶ್ಚ ತಸ್ಮಾಚ್ಛಾಂತಿಂ ದದಾತು ಮೇ || ೨೧ ||**

**ಇತ್ಯಾಮಂತ್ರ್ಯ ಚ ಯೋ ದದ್ಯಾದ್ವಿಶ್ವಚಕ್ರಂ ವಿಮತ್ಸರಃ |**
**ವಿಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕೇ ಮಹೀಯತೇ || ೨೨ ||**

**ವೈಕುಂಠಲೋಕಮಾಸಾದ್ಯ ಚತುರ್ಬಾಹುನರಾವೃತಂ |**
**ಸೇವ್ಯತೇಽಪ್ಸರಸಾಂ ಸಂಘೈಸ್ತಿಷ್ಠೇತ್ಕಲ್ಪಶತತ್ರಯಂ || ೨೩ ||**

---

ವಿಶ್ವಚಕ್ರರೂಪಿಯಾದ ನಿನ್ನನ್ನು ನಮಸ್ಕರಿಸುವೆನು. ಚಕ್ರವನ್ನು ವಾಸುದೇವನು ಹಸ್ತದಲ್ಲಿ ಧರಿಸಿ ಚಕ್ರಧರನಾಗಿದ್ದಾನೆ. ಚಕ್ರಮಧ್ಯದಲ್ಲಿ ಮಾಧವನು (ಕೃಷ್ಣನು) ಇರುತ್ತಾನೆ. ಈ ರೀತಿ ಅನ್ಯೋನ್ಯವಾಗಿ ಆಧಾರಭೂತವಾಗಿರತಕ್ಕ ಚಕ್ರ ವಿಷ್ಣು ಗಳಿಬ್ಬರನ್ನು ನಮಸ್ಕರಿಸುತ್ತೇನೆ.

೨೧. ಇದು ಭಕ್ತನ ಸಕಲ ಪಾಪಗಳನ್ನೂ ಪರಿಹರಿಸತಕ್ಕದ್ದು. ಶ್ರೀಹರಿಯ ಆಯುಧಸ್ವರೂಪವಾದ ವಿಶ್ವಚಕ್ರವಾಗಿರುತ್ತದೆ. ಅಧಿವಾಸಾದಿ ಸಂಸ್ಕಾರ ಹೊಂದಿದ ಇದು ನನಗೆ ಶಾಂತಿಯನ್ನು ಉಂಟುಮಾಡಲಿ.

೨೨. ಎಲೈ ಯುಧಿಷ್ಠಿರನೇ! ಯಾವ ಮಾನವನು ಮಾತ್ಸರ್ಯರಹಿತ ನಾಗಿ ಬ್ರಾಹ್ಮಣನನ್ನು ಆಹ್ವಾನಿಸಿ ವಿಶ್ವಚಕ್ರವನ್ನು ದಾನಮಾಡುವನೋ ಅಂತಹ ವನು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ವೈಕುಂಠದಲ್ಲಿ ಪೂಜಿತನಾಗುತ್ತಾನೆ.

೨೩. ವಿಷ್ಣುಸಾರೂಪ್ಯಹೊಂದಿ ನಾಲ್ಕು ಬಾಹುಗಳುಳ್ಳ ನರರಿಂದ ವ್ಯಾಪ್ತ ವಾಗಿರತಕ್ಕ ಆ ವೈಕುಂಠಲೋಕವನ್ನು ಸೇರಿ ಅಲ್ಲಿ ಅಪ್ಸರಸ್ತ್ರೀಸಮೂಹದಿಂದ ಸೇವಿಸಲ್ಪಡುತ್ತಾ ಮುನ್ನೂರು ಕಲ್ಪಗಳು ವಾಸವಾಗಿರುತ್ತಾನೆ.

ಪ್ರಣಮೇದ್ವಾಥ ಯಃ ಕೃತ್ವಾ ವಿಶ್ವಚಕ್ರಂ ದಿನೇದಿನೇ ।
ತಸ್ಯಾಯುರ್ವರ್ಧತೇ ದೀರ್ಘಂ ಲಕ್ಷ್ಮೀಸ್ತು ವಿಪುಲಾ ಭವೇತ್ ॥೨೪॥

ತಸ್ಮಾಚ್ಚಕ್ರಂ ಸದಾ ಕಾರ್ಯಂ ಧಾರ್ಯಂ ಚ ಸ್ವಗೃಹೇ ನರೈಃ ।
ಕಾಂಚನಂ ವಾಥ ರೌಪ್ಯಂ ವಾ ತದಭಾವೇಽಥ ತಾಮ್ರಜಂ ॥ ೨೫ ॥

ಇತಿ ಸಕಲ ಜಗತ್ಸುರಾಧಿವಾಸಂ ।
ವಿತರತಿ ಯಸ್ತಪನೀಯಷೋಡಶಾರಂ ॥
ಹರಿಭುವನಗತಃ ಸ ಸಿದ್ಧಸಂಘೈಃ ।
ಚಿರಮಧಿಗಮ್ಯ ನಮಸ್ಯತೇಽಪ್ಸರೋಭಿಃ ॥ ೨೬ ॥

ಅಥ ಸುದರ್ಶನತಾಂ ಪ್ರಯಾತಿ ಶತ್ರೋಃ ।
ಮದನಸುದರ್ಶನತಾಂ ಚ ಕಾಮಿನೀಭ್ಯಃ ॥

---

೨೪. ಯಾವ ಮಾನವನು ವಿಶ್ವಚಕ್ರವನ್ನು ನಿರ್ಮಿಸಿ ಅದನ್ನು ಪ್ರತಿದಿನದಲ್ಲಿಯೂ ಪೂಜಿಸಿ ನಮಸ್ಕರಿಸುವನೋ ಅಂತಹವನ ಆಯುಸ್ಸು ಅಭಿವೃದ್ಧಿಯಾಗುತ್ತದೆ. ಮತ್ತು ಐಶ್ವರ್ಯ ಸಮೃದ್ಧಿಯುಂಟಾಗುತ್ತದೆ.

೨೫. ಆದಕಾರಣ ನರರು ತಮ್ಮ ಮನೆಗಳಲ್ಲಿ ಚಿನ್ನ ಅಥವಾ ಬೆಳ್ಳಿ, ಇವುಗಳಿಂದಲೋ ಅಶಕ್ತನಾದರೆ ತಾಮ್ರದಿಂದಲೋ ವಿಶ್ವಚಕ್ರವನ್ನು ಮಾಡಿಸಿ ಯಾವಾಗಲೂ ಇಟ್ಟಿರಬೇಕು.

೨೬. ಸಕಲ ಜಗತ್ತುಗಳು ಮತ್ತು ದೇವತೆಗಳು ಇವರಿಗೆ ವಾಸಸ್ಥಾನವಾದುದೂ, ಮತ್ತು ಸುವರ್ಣದ ಹದಿನಾರು ಅರಗಳುಳ್ಳದೂ ಆದ ಚಕ್ರವನ್ನು ದಾನಮಾಡಿತಾತನು ವೈಕುಂಠವನ್ನು ಪಡೆದು, ಅಲ್ಲಿ ಸಿದ್ಧರೊಡಗೂಡಿ ಬಹುಕಾಲ ಅಪ್ಸರಸ್ತ್ರೀಯರಿಂದ ಪೂಜಿಸಲ್ಪಡುತ್ತಾನೆ.

೨೭. ಯಾವ ಮನುಜನು ಸುವರ್ಣದ ವಿಶ್ವಚಕ್ರವನ್ನು ದಾನಮಾಡುವನೋ ಅಂತಹವನು ತನ್ನ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಳ್ಳುತ್ತಾನೆ. ಮತ್ತು ವಿಷ್ಣುವಿನ ಸುದರ್ಶನ ಚಕ್ರದಂತೆ ತನ್ನ ಶತ್ರುವಿಗೆ ಭಯಂಕರನಾಗಿಯೂ,

ಸಸುದರ್ಶನಕೇಶವಾನುರೂಪಃ ।
ಕನಕಸುದರ್ಶನದಾನದಗ್ಧಪಾಪಃ ॥ ೨೭ ॥

ಕೃತ ಗುರುದುರಿತೋಽಪಿ ಷೋಡಶಾರ ।
ಪ್ರವಿತರಣಾತ್ಪ್ರವರಾಕೃತಿರ್ಮುರಾರೇಃ ॥
ಅಭಿಭವತಿ ಭವೋದ್ಭವಾನಿ ಭಿತ್ವಾ ।
ಭವಮಭಿತೋ ಭವನೇ ಭವಾನಿ ಭೂಯಃ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ವಿಶ್ವಚಕ್ರದಾನವಿಧಿವರ್ಣನಂ ನಾಮ ನವತ್ಯುತ್ತರಶತತಮೋಽಧ್ಯಾಯಃ.



---

ಕಾಮಿನಿಯರಿಗೆ ಮನ್ಮಥನಂತೆ ಸುಂದರನಾಗಿಯೂ ತೋರುತ್ತಾನೆ. ಸರ್ವರಿಗೂ ಸುದರ್ಶನ ಚಕ್ರಸಮೇತನಾದ ಶ್ರೀಕೃಷ್ಣನಿಗೆ ಸದೃಶನಾಗಿ ಕಾಣುತ್ತಾನೆ.

೨೮. ಸಾಮಾನ್ಯ ಮನುಜನು ತಾನು ಮಹಾಪಾತಕಿಯಾದರೂ ಕೂಡ ಹಿಂದೆ ಹೇಳಿದಂತೆ ಹದಿನಾರು ಅರಗಳುಳ್ಳ ವಿಶ್ವಚಕ್ರವನ್ನು ದಾನಮಾಡಿದರೆ ಸಂಸಾರದಿಂದ ಉತ್ಪನ್ನವಾದ ಕ್ಲೇಶಗಳನ್ನು ಭೇದಿಸಿ ವಿಷ್ಣುಸಾಯುಜ್ಯವನ್ನು ಪಡೆದು ಶ್ರೇಷ್ಠವಾದ ರೂಪನ್ನು ಪಡೆದು ನೂತನಗಳಾಗಿ ಉಂಟಾಗುವ ಪುನರ್ಜನ್ಮ ರಹಿತನಾಗುತ್ತಾನೆ. (ಮೋಕ್ಷವನ್ನು ಪಡೆಯುತ್ತಾನೆ.) ಎಂದು ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ವಿಶ್ವಚಕ್ರದಾನವಿಧಿವರ್ಣನೆಯೆಂಬ ನೂರತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕನವತ್ಯುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಪ್ರತಿಷ್ಠಾ ಶಾಶ್ವತೀ ಕೇನ ದಾನೇನ ಮಧುಸೂದನ ।
ಇಹ ಲೋಕೇ ಪರೇ ಚೈವ ಕೀರ್ತಿರತ್ಯದ್ಭುತಾ ತಥಾ ॥ ೧ ॥

ಸದ್ಗತಿಂ ಚ ತಥಾ ಯಾಂತಿ ಸರ್ವೇ ಪಿತೃಪಿತಾಮಹಾಃ ।
ಸಂತತಿಶ್ಚಾಕ್ಷಯಾ ಲೋಕೇ ವಿಭವಶ್ಚಾಪಿ ಪುಷ್ಕಲಃ ॥ ೨ ॥

ಸ್ಥಾಪನಾತ್ಸರ್ವದೇವಾನಾಂ ಕಥಂ ಸ್ಯಾದ್ಯದುನಂದನ ।
ತದಾಚಕ್ಷ್ವ ಮಹಾಭಾಗ ದಾನೇನ ನಿಯಮೇನ ವಾ ॥ ೩ ॥

---

### ನೂರತೊಂಭತ್ತೊಂದನೆಯ ಅಧ್ಯಾಯ

೧-೨. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಮಧುಸೂದನನೇ! ತನ್ನ ಪ್ರಭಾವವು ಶಾಶ್ವತವಾಗಿ ನಿಲ್ಲಬೇಕಾದರೂ ಮತ್ತು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅದ್ಭುತವಾದ ಕೀರ್ತಿಯನ್ನು ಪಡೆಯಬೇಕಾದರೂ ತನ್ನ ಪಿತೃ, ಪಿತಾಮಹ ಇವರೆಲ್ಲ ಸದ್ಗತಿಯನ್ನು ಪಡೆಯಬೇಕಾದರೂ ಮತ್ತು ಲೋಕದಲ್ಲಿ ಅಕ್ಷಯವಾದ ಸಂತತಿಯು ಮತ್ತು ವಿಪುಲೈಶ್ವರ್ಯವು ಲಭಿಸಬೇಕಾದರೂ ಯಾವ ದಾನವನ್ನು ಮಾಡಬೇಕು.

೩. ಎಲೈ ಮಹಾಭಾಗ್ಯಶಾಲಿಯಾದ ಯದುನಂದನನೇ! ಸಕಲ ದೇವತೆಗಳನ್ನೂ ಸ್ಥಾಪನೆಮಾಡತಕ್ಕದ್ದು ಯಾವ ದಾನ ಅಥವಾ ಯಾವ ವ್ರತ ಎಂಬುದನ್ನು ಹೇಳು ಎಂದನು.

॥ ಶ್ರೀಕೃಷ್ಣ ಉವಾಚ ॥

ಸಾಧುಪೃಷ್ಟಂ ತ್ವಯಾ ರಾಜನ್ ಲೋಕಾನಾಮುಪಕಾರಕಂ ।
ಶೃಣುಷ್ವೈಕಮನಾ ಭೂತ್ವಾ ಗುಹ್ಯಂ ಪರಮಸತ್ತಮಂ ॥ ೪ ॥

ಭುವನಾನಾಂ ಸಮಾಸೇನ ಪ್ರತಿಷ್ಠಾಂ ಕಥಯಾಮಿ ತೇ ।
ದೇವಾಸುರಾಸ್ತಥಾ ನಾಗಾ ಗಂಧರ್ವಾಯಕ್ಷ ರಾಕ್ಷಸಾಃ ॥ ೫ ॥

ಪ್ರೇತಾಃ ಪಿಶಾಚಾ ಭೂತಾಶ್ಚ ಸ್ಥಾಪಿತಾಸ್ಯುರ್ನ ಸಂಶಯಃ ।
ಕಾರಕಸ್ಯಾನುಕೂಲೇತು ಮುಹೂರ್ತೇ ವಿಜಯೇ ಶುಭೇ ॥ ೬ ॥

ಪುಣ್ಯೇ ತಿಥೌ ಶಿವಕ್ಷೇತ್ರೇ ದಿನೇ ಸೌಮ್ಯಗ್ರಹಾನ್ವಿತೇ ।
ಸಪ್ತ ಹಸ್ತಂ ಪಟಂ ಕೃತ್ವಾ ಚತುರಸ್ರಂ ಸುಸಂಹತಂ ॥ ೭ ॥

ಅಭಿನ್ನಾಂಗಂ ದೃಢಂ ಶುದ್ಧಂ ಶುದ್ಧಸ್ಫಟಿಕವರ್ಚಸಂ ।
ತಸ್ಮಿನ್ಸರ್ವಾಣಿ ರಾಜೇಂದ್ರ ಭುವನಾನಿ ಚ ಲೇಖಯೇತ್ ॥ ೮ ॥

---

೪. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಎಲೈ ರಾಜನೇ! ಸಕಲ ಲೋಕಗಳಿಗೂ ಉಪಕಾರವಾಗುವಂತಹ ವಿಚಾರವನ್ನು ಪ್ರಶ್ನೆ ಮಾಡಿರುವುದು ಬಹು ಸಮಂಜಸವಾಗಿದೆ. ಆದುದರಿಂದ ಬಹು ಗುಹ್ಯವೂ ಮತ್ತು ಸರ್ವೋತ್ತಮವೂ ಆದ ಒಂದು ವಿಧಾನವನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೫. ಚತುರ್ದಶಭುವನಗಳನ್ನು ಒಟ್ಟುಗೂಡಿಸಿ ಪ್ರತಿಷ್ಠಾಪಿಸಿ ಮಾಡುವ ದಾನವನ್ನು ಹೇಳುವೆನು. ಇದರಲ್ಲಿ ದೇವತೆಗಳು, ರಾಕ್ಷಸರು, ಸರ್ಪಗಳು, ಗಂಧರ್ವರು, ಯಕ್ಷರು, ರಾಕ್ಷಸರು, ಪ್ರೇತಗಳು, ಪಿಶಾಚಗಳು, ಭೂತಗಳು, ಇವರೆಲ್ಲರೂ ಸ್ಥಾಪಿತರಾಗುತ್ತಾರೆ.

೬–೭. ದಾನಮಾಡತಕ್ಕ ಕರ್ತನಿಗೆ ಕಾರಕನೆಂದು ಹೆಸರು. ಕರ್ತನಿಗೆ ಅನುಕೂಲವಾಗಿರುವ ಶುಭತಿಥಿಯು ಬುಧವಾರ ಯುಕ್ತವಾದ ದಿನದಲ್ಲಿ ಈಶ್ವರನ ದೇವಾಲಯದಲ್ಲಿ ವಿಜಯದಾಯಕವಾದ ಶುಭಮುಹೂರ್ತದಲ್ಲಿ ಈ ಕಾರ್ಯ ನಡೆಸಬೇಕು. ಏಳುಹಸ್ತಪ್ರಮಾಣವುಳ್ಳಹಾಗೆ ಚಚ್ಚೌಕವಾಗಿ ಚೆನ್ನಾಗಿ ನೇಯ್ದಿರತಕ್ಕದ್ದೂ

೮. ಮತ್ತು ಹರುಕಿಲ್ಲದೆ ದೃಢವಾಗಿರತಕ್ಕದ್ದೂ ಶುದ್ಧವಾದ ಸ್ಫಟಿಕದಂತೆ ಶುಭ್ರವರ್ಣವಾಗಿರತಕ್ಕದ್ದೂ ಆದ ಒಂದು ಬಟ್ಟೆಯನ್ನು ತಂದು ಆ ಬಟ್ಟೆಯಲ್ಲಿ ಸಕಲ ಭುವನಗಳನ್ನು ಬರೆಯಿಸಬೇಕು.

ಚಾತುರ್ವರ್ಣ್ಯೈಕವಮಾನೀಯ ವಿಚಿತ್ರಂ ಚಿತ್ರಕರ್ಮಣಿ ।
ಯುವಾನಂ ವ್ಯಾಧಿರಹಿತಂ ಭವ್ಯಂ ಚಿತ್ರಕರಂ ಶುಭಂ ॥ ೯ ॥

ಸಂಪೂಜಯಿತ್ವಾ ಯತ್ನೇನ ದಿವ್ಯವಾಸೋವಿಭೂಷಣೈಃ ।
ತಸ್ಮಿನ್ಕರ್ಮಣಿ ಯುಂಜೀತ ಪಶ್ಯಮಾನೈರ್ದ್ವಿಜೋತ್ತಮೈಃ ॥ ೧೦ ॥

ಶಂಖಭೇರೀನಿನಾದೈಶ್ಚ ಗೀತಮಂಗಲನಿಸ್ವನೈಃ ।
ಪುಣ್ಯಾಹಜಯಘೋಷೈಶ್ಚ ಬ್ರಾಹ್ಮಣಾನ್ಪೂಜಯೇತ್ತತಃ ॥ ೧೧ ॥

ಆಚಾರ್ಯಮಪಿ ಸಂಪೂಜ್ಯ ವಾಸೋಭಿರ್ಭೂಷಣೈಸ್ತಥಾ ।
ಪ್ರಾರಂಭಂ ಕಾರಯೇದ್ರಾಜನ್ ಪಟೇ ತಸ್ಮಿನ್ ಯಥೋದಿತಂ ॥೧೨॥

---

೯. ಚಿತ್ರಕರ್ಮದರಲ್ಲಿ ಬುದ್ಧಿಶಾಲಿಯೂ, ವ್ಯಾಧಿರಹಿತನೂ ಮನೋಹರವಾಗಿ ಚಿತ್ರಗಳನ್ನು ರಚಿಸತಕ್ಕವನೂ ಆದ ಒಬ್ಬ ಚತುರ್ಥವರ್ಣದವನನ್ನು (ಶೂದ್ರನನ್ನು) ಕರೆಸಬೇಕು.

೧೦. ತನ್ನ ಶಕ್ತ್ಯನುಸಾರ ಒಳ್ಳೆಯ ಬಟ್ಟೆ, ಒಡವೆ ಇತ್ಯಾದಿಗಳನ್ನು ಕೊಟ್ಟು ಆತನನ್ನು ಸಂತೋಷಪಡಿಸಿ ಆ ಭುವನಗಳನ್ನು ಬರೆಯುವುದಕ್ಕೆ ನಿಯಮಿಸಬೇಕು. ಆ ಕಾಲದಲ್ಲಿ ಒಂದೆಡೆ ಬ್ರಾಹ್ಮಣರು ವೇದಪಾರಾಯಣ ಮಾಡುತ್ತಿರಬೇಕು.

೧೧. ಇನ್ನೊಂದೆಡೆ ಶಂಖ, ಭೇರಿ ಇತ್ಯಾದಿ ಮಂಗಳವಾದ್ಯಗಳು ಧ್ವನಿಗೈಯ್ಯುತ್ತಿರಬೇಕು. ಮತ್ತು ಪುಣ್ಯಾಹ, ಜಯಘೋಷ ಇತ್ಯಾದಿಗಳ ಶಬ್ದವಾಗುತ್ತಿರಬೇಕು. ಇಷ್ಟು ಆದನಂತರ ಬ್ರಾಹ್ಮಣರನ್ನು ಪೂಜಿಸಬೇಕು.

೧೨. ಎಲೈ ರಾಜನೇ! ಆಚಾರ್ಯನನ್ನು ಕೂಡ ವಸ್ತ್ರ, ಭೂಷಣ ಇತ್ಯಾದಿಗಳಿಂದ ಸಂತೋಷಪಡಿಸಿ ಈ ಮುಂದೆ ಹೇಳುವ ಪ್ರಕಾರ ಬರೆಸಲು ಆರಂಭಮಾಡಬೇಕು.

**ಮಧ್ಯೇ ಚ ಲೇಖಯೇದ್ರಾಜನ್ ಜಂಬೂದ್ವೀಪಂ ಸವಿಸ್ತರಂ ।**
**ತಸ್ಯ ಮಧ್ಯೇ ಸ್ಥಿತೋ ಮೇರುರ್ಮೇರೋರುಪರಿ ದೇವತಾಃ ॥ ೧೩ ॥**

**ದಿಶಾಸು ಲೋಕಪಾಲಾನಾಂ ಪುರೋऽಷ್ಟೌ ಸುರಸಂಯುತಾಃ ।**
**ಸಪ್ತದ್ವೀಪವತೀ ಪೃಥ್ವೀ ಸಪ್ತ ಚೈವ ಕುಲಾಚಲಾಃ ॥ ೧೪ ॥**

**ಸಾಗರಾಃ ಸಪ್ತ ಚಾತ್ರೈವ ನದ್ಯೋ ಹ್ರದಾಃ ಸರಾಂಸಿ ಚ ।**
**ಪಾತಾಲಾಃ ಸಪ್ತ ಚಾಶ್ಚೈವ ಸಪ್ತ ಸ್ವರ್ಗವಿಭೂತಯಃ ॥ ೧೫ ॥**

**ಬ್ರಹ್ಮವಿಷ್ಣುಶಿವಾದೀನಾಂ ಭುವನಾನಿ ಯಥಾಕ್ರಮಂ ।**
**ಧ್ರುವಮಾರ್ಗಸ್ತಥಾದಿತ್ಯೋ ಗ್ರಹತಾರಾಗಣೈರ್ಯುತಃ ॥ ೧೬ ॥**

**ದೇವದಾನವ ಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।**
**ಋಷಯೋ ಮುನಯೋ ಗಾವೋ ದೇವಮಾತರ ಏವ ಚ ॥ ೧೭ ॥**

---

೧೩. ಎಲೈ ರಾಜನೇ! ಆ ವಸ್ತ್ರದ ಮಧ್ಯದಲ್ಲಿ ಜಂಬೂದ್ವೀಪವನ್ನು ವಿಸ್ತಾರವಾಗಿ ಬರೆಸಬೇಕು. ಅದರ ಮಧ್ಯದಲ್ಲಿ ಮೇರುಪರ್ವತ, ಅದರ ಮೇಲೆ ದೇವತೆಗಳು ಈ ರೀತಿ ಬರೆಸಬೇಕು.

೧೪. ಸುತ್ತ ಎಂಟು ದಿಕ್ಕುಗಳಲ್ಲಿಯೂ ದೇವತೆಗಳ ಸಮೇತರಾಗಿರುವಂತೆ ಎಂಟುಜನ ಲೋಕಪಾಲಕರನ್ನೂ ಏಳು ದ್ವೀಪಗಳುಳ್ಳ ಭೂಮಿಯನ್ನೂ ಏಳು ಕುಲಾಚಲಗಳನ್ನೂ ಬರೆಸಬೇಕು.

೧೫. ಮತ್ತೆ ಏಳು ಸಾಗರಗಳು, ನದಿಗಳು, ಮಡುಗಳು, ಸರೋವರ ಗಳು, ಏಳು ಪಾತಾಲಗಳು, ಸ್ವರ್ಗದ ಏಳು ಐಶ್ವರ್ಯಗಳು ಇವುಗಳನ್ನೆಲ್ಲಾ ಬರೆಸಬೇಕು.

೧೬. ಯಥಾಕ್ರಮವಾಗಿ ಬ್ರಹ್ಮ, ವಿಷ್ಣು, ಶಿವ ಇವರ ಲೋಕಗಳನ್ನೂ ಧ್ರುವಲೋಕವನ್ನೂ ಆದಿತ್ಯಾದಿ ಗ್ರಹಗಳು, ನಕ್ಷತ್ರ ಸಮೂಹಗಳಿಂದ ಕೂಡಿದ ಚಂದ್ರ, ಇವನ್ನೆಲ್ಲಾ ಆ ಬಟ್ಟೆಯಲ್ಲಿ ಬರೆಸಬೇಕು.

೧೭. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಸರ್ಪಗಳು, ದೇವಋಷಿಗಳು, ಬ್ರಹ್ಮರ್ಷಿಗಳು, ದೇವಧೇನುಗಳು, ಸಪ್ತಮಾತೃಕೆ ಯರು ಇವರನ್ನೆಲ್ಲಾ ಬರೆಸಬೇಕು.

**ಸುಪರ್ಣಾದ್ಯಾಶ್ಚ ವಿಹಗಾಃ ನಾಗಾಶ್ಚೈರಾವತಾದಯಃ ।**
**ದಿಗ್ಗಜಾಷ್ಟಕಮತ್ರೈವ ಲೇಖಯೇನ್ಮದ ಮಂಡಿತಂ ॥ ೧೮ ॥**

**ಏವಂ ವಿಧಂ ಪಟಂ ರಾಜನ್ ಕಾರಯಿತ್ವಾ ಸುಶೋಭನಂ ।**
**ದಶೋತ್ತರೇಣ ಪಯಸಾ ಏತತ್ಸರ್ವಸಮಾವೃತಂ ॥ ೧೯ ॥**

**ತತ್ತೇಜಸಾ ವೃತಂ ಭೂಯೋ ಮಹತೋಗ್ರೇಣ ಸರ್ವತಃ ।**
**ತೇಜಸ್ತದ್ವಾಯುನಾ ವಾಯುರಾಕಾಶೇನ ಸಮಾವೃತಃ ॥ ೨೦ ॥**

**ಭೂತಾದಿನಾ ತಥಾಕಾಶಂ ಭೂತಾದಿರ್ಮಹತಾ ತಥಾ ।**
**ಅವ್ಯಕ್ತೇನ ಮಹಾಂಶ್ಚೈವ ವ್ಯಾಪ್ತೋ ವೈ ಶುದ್ಧಿಲಕ್ಷಣಃ ॥ ೨೧ ॥**

**ಅವ್ಯಕ್ತಂ ತಮಸಾ ವ್ಯಾಪ್ತಂ ತಮಶ್ಚ ರಜಸಾ ತಥಾ ।**
**ರಜಃ ಸತ್ವೇನ ಸಂವ್ಯಾಪ್ತಂ ತ್ರಿಧಾ ಪ್ರಕೃತಿರುಚ್ಯತೇ ॥ ೨೨ ॥**

---

೧೮. ಗರುಡನೇ ಮೊದಲಾದ ಪಕ್ಷಿಗಳು, ಮದವೇರಿ ಭೂಷಣವಾಗಿ ಶೋಭಿಸತಕ್ಕ ಐರಾವತವೇ ಮೊದಲಾದ ಅಷ್ಟದಿಗ್ಗಜಗಳನ್ನು ಬರೆಸಬೇಕು.

೧೯. ಎಲೈ ರಾಜನೇ ! ಈ ಹತ್ತು ಸಮುದಾಯಗಳಿಂದಲೂ ಸಮುದ್ರ ದಿಂದಲೂ ಈ ಪ್ರಕಾರ ಮನೋಹರವಾಗಿರುವಂತೆ ಆ ಚಿತ್ರಪಟವನ್ನು ಬರೆಯಿಸ ಬೇಕು.

೨೦. ಆ ಚಿತ್ರಪಟದ ತೇಜಸ್ಸು ಎಲ್ಲೆಡೆಯಲ್ಲಿಯೂ ಆ ತೇಜಸ್ಸು ವಾಯುವಿ ನೊಡನೆಯೂ ಆ ವಾಯುವು ಆಕಾಶದೊಡನೆಯೂ ವ್ಯಾಪಿಸುತ್ತದೆ.

೨೧. ಆ ಆಕಾಶವು ಭೂತಾದಿಗಳೊಡನೆಯೂ, ಆ ಭೂತಾಧಿಗಳು ಮಹತ್ತತ್ವದೊಡನೆಯೂ, ಆ ಮಹತ್ತತ್ವವು ಅವ್ಯಕ್ತದೊಡನೆಯೂ ವ್ಯಾಪಿಸುತ್ತದೆ. ಇದು ಸರ್ವದಾ ಶುದ್ಧಿಯಾಗಿರುತ್ತದೆ.

೨೨. ಆ ಅವ್ಯಕ್ತವು ತಮಸ್ಸಿನೊಡನೆಯೂ, ಆ ತಮಸ್ಸು ರಜಸ್ಸಿನೊಡ ನೆಯೂ, ರಜಸ್ಸು ಸತ್ವದೊಡನೆಯೂ ವ್ಯಾಪಿಸುತ್ತದೆ. ಈ ರೀತಿ ಪ್ರಕೃತಿ ಎಂಬುದು ಮೂರು ವಿಧವಾಗುತ್ತದೆ.

**ಏವಮಾವರಣೋಪೇತಂ ಬ್ರಹ್ಮಾಂಡಮಖಿಲಂ ನೃಪ ।**
**ಪುರುಷೇಣಾವೃತಂ ಸರ್ವಂ ಸ ಬಾಹ್ಯಾಭ್ಯಂತರಂ ತಥಾ　　॥ ೨೩ ॥**

**ಏತತ್ಸರ್ವಂ ಪಟಸ್ಥಂ ತು ಕೃತ್ವಾ ಚಿತ್ರಮಯಂ ಸುಧೀಃ ।**
**ಕಾರ್ತಿಕ್ಯಾಮಯನೇ ಚೈವ ವಿಷುವೇ ಗ್ರಹಣೇಽಪಿ ವಾ　　॥ ೨೪ ॥**

**ಪೂಜಯೇದ್ಯೇನ ವಿಧಿನಾ ತತ್ಸಮಾಸೇನ ಮೇ ಶೃಣು ।**
**ಪುರತೋ ಮಂಡಪಂ ತಸ್ಯ ವಿಚಿತ್ರಂ ಕಾರಯೇದ್ಬುಧಂ　　॥ ೨೫ ॥**

**ತತ್ರ ಕುಂಡಾನಿ ಚತ್ವಾರಿ ಚತುರಸ್ರಾಣಿ ಕಾರಯೇತ್ ।**
**ದ್ವೌ ದ್ವೌ ನಿಯೋಜಯೇತ್ತೇಷು ಬ್ರಾಹ್ಮಣೌ ವೇದಪಾರಗೌ　　॥ ೨೬ ॥**

---

೨೩. ಈ ಆವರಣಗಳಿಂದ ಕೂಡಿದರೆ ಅಖಿಲವಾದ ಬ್ರಹ್ಮಾಂಡವೆನಿಸುವುದು. ಎಲೈ ನೃಪನೇ! ಇವು ಒಳಗೆ ಹೊರಗೆ ಎಲ್ಲಾ ಕಡೆಯೂ ಪುರುಷನಿಂದ ಆವರಿಸಲ್ಪಟ್ಟಿರುತ್ತದೆ.

೨೪. ವಿದ್ವಾಂಸನಾದವನು ಮೇಲೆ ಹೇಳಿದ ಇವೆಲ್ಲವನ್ನೂ ಬಟ್ಟೆಯ ಮೇಲೆ ಚಿತ್ರಚಿತ್ರವಾಗಿರುವಂತೆ ಬರೆಸಿ ಸಿದ್ಧಪಡಿಸಬೇಕು. ಕಾರ್ತಿಕಮಾಸ, ದಕ್ಷಿಣಾಯಣ ಪುಣ್ಯಕಾಲ, ಉತ್ತರಾಯಣ ಪುಣ್ಯಕಾಲ, ವಿಷವತ್ಪುಣ್ಯಕಾಲ, ಗ್ರಹಣ ಈ ಕಾಲಗಳಲ್ಲಿ ಯಾವುದಾದರೂ ಒಂದು ದಿವಸವನ್ನು ಗೊತ್ತುಮಾಡಿ.

೨೫. ಆ ದಿನ ಅದನ್ನು ಪೂಜೆಮಾಡಬೇಕು. ಪೂಜಾವಿಧಾನವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ಅದರ ಮುಂಭಾಗದಲ್ಲಿ ವಿಚಿತ್ರವಾದ ಮಂಡಪವನ್ನು ಮಾಡಿಸಬೇಕು.

೨೬. ಅಲ್ಲಿ ಚತುರಸ್ರಾಕಾರವಾದ ನಾಲ್ಕು ಕುಂಡಗಳನ್ನು ಮಾಡಿಸಿ ಪ್ರತಿಯೊಂದು ಕುಂಡದಲ್ಲೂ ಹೋಮಮಾಡುವುದಕ್ಕೆ ವೇದಾಧ್ಯಯನಸಂಪನ್ನರಾದ ಇಬ್ಬಿಬ್ಬರು ಬ್ರಾಹ್ಮಣರನ್ನು ನಿಯಮಿಸಬೇಕು.

ಯುಜ್ಞೋಪಕರಣೋಪೇತೌ ವಸ್ತ್ರಾಭರಣಭೂಷಿತೌ ।
ಹೋಮಂ ಕುರ್ಯುರ್ಜಿತಾತ್ಮಾನೋ ಮೌನಿನಃ ಸರ್ವ ಏವ ತೇ॥೨೭॥

ಪಟೇ ಸ್ಥಿತಾನಾಂ ದೇವಾನಾಂ ಮಂತ್ರೈರೋಂಕಾರಪೂರ್ವಕೈಃ ।
ಯುಜಮಾನಸ್ತತಃ ಸ್ನಾತಃ ಸರ್ವಾಲಂಕಾರಭೂಷಿತಃ ॥ ೨೮ ॥

ಆಚಾರ್ಯೇಣ ಸಮಂ ಕುರ್ಯಾತ್ಪೂಜಾಮುಗ್ರೇ ಪಟಸ್ಯ ತು ।
ಪುಷ್ಪೈರ್ವಸ್ತ್ರೈಸ್ಸಮಭ್ಯರ್ಚ್ಯ ಮಂತ್ರಮೇತಮುದೀರಯೇತ್ ॥ ೨೯ ॥

ಬ್ರಹ್ಮಾಂಡೋದರವರ್ತೀನಿ ಭುವನಾನಿ ಚತುರ್ದಶ ।
ತಾನಿ ಸಂನಿಹಿತಾನ್ಯತ್ರ ಪೂಜಿತಾನಿ ಭವಂತು ಮೇ ॥ ೩೦ ॥

---

೨೭. ಆ ಬ್ರಾಹ್ಮಣರು ವಸ್ತ್ರ, ಆಭರಣ ಇವುಗಳಿಂದ ಅಲಂಕೃತರಾಗಿಯೂ ಯುಜ್ಞೋಪಕರಣ ಸಾಮಗ್ರಿ ಸಮೇತರಾಗಿಯೂ ಇರಬೇಕು. ಅವರು ಜಿತಾತ್ಮರೂ ಮೌನಿಗಳೂ ಆಗಿ ಹೋಮಕಾರ್ಯವನ್ನು ಮಾಡಬೇಕು.

೨೮. ಅವರು ಆ ವಸ್ತ್ರದಲ್ಲಿ ಉಲ್ಲೇಖಿಸಿರುವ ದೇವತೆಗಳನ್ನುದ್ದೇಶಿಸಿ ಆಯಾಯಾ ದೇವತಾಕವಾದ ಮಂತ್ರಗಳಿಂದ ಓಂಕಾರಪೂರ್ವಕವಾಗಿ ಹೋಮ ಮಾಡಬೇಕು. ಅನಂತರ ಯುಜಮಾನನು ತಾನು ಸ್ನಾನಮಾಡಿ ಸಕಲಾಲಂಕಾರ ಗಳನ್ನು ಮಾಡಿಕೊಳ್ಳಬೇಕು.

೨೯. ಅನಂತರ ತನ್ನ ಆಚಾರ್ಯನ ಸಹಾಯದಿಂದ ಚಿತ್ರಪಟವನ್ನು ಪುಷ್ಪ, ವಸ್ತ್ರ ಇತ್ಯಾದಿಗಳಿಂದ ಅರ್ಚಿಸಬೇಕು. ಮತ್ತು ಈ ಮಂತ್ರವನ್ನು ಹೇಳಬೇಕು.

೩೦. ಬ್ರಹ್ಮಾಂಡದಲ್ಲಿ ಅಡಗಿರತಕ್ಕ ಹದಿನಾಲ್ಕು ಭುವನಗಳೂ ಈ ಚಿತ್ರ ಪಟದಲ್ಲಿ ಸನ್ನಿಹಿತಗಳಾಗಿವೆ. ಇದನ್ನು ಪೂಜೆಮಾಡುವುದರಿಂದ ಅವೆಲ್ಲವನ್ನೂ ಪೂಜಿಸಿದಂತೆಯೇ ಸರಿ.

**ಬ್ರಹ್ಮಾ ವಿಷ್ಣುಸ್ತಥಾ ರುದ್ರೋ ಹ್ಯಾದಿತ್ಯಾ ವಸವಸ್ತಥಾ ।**
**ಪೂಜಿತಾಃ ಸುಪ್ರತಿಷ್ಠಾಶ್ಚ ಭವಂತು ಸತತಂ ಮಮ ॥ ೩೧ ॥**

**ಏವಂ ಪಟಂ ತಂ ಸಂಪೂಜ್ಯ ಕೃತ್ವಾ ಚೈವ ಪ್ರದಕ್ಷಿಣಂ ।**
**ಭಕ್ಷ್ಯೈರ್ನಾನಾವಿಧಾಂಶ್ಚೈವ ನೈವೇದ್ಯಂ ತತ್ರ ದಾಪಯೇತ್ ॥ ೩೨ ॥**

**ಶಂಖತೂರ್ಯನಿನಾದೈಶ್ಚ ಜಾಗರಂ ಕಾರಯೇತ್ತತಃ ।**
**ಬ್ರಹ್ಮಘೋಷೈರ್ವಿಚಿತ್ರೈಶ್ಚ ಗೀತಮಂಗಲನಿಸ್ವನೈಃ ॥ ೩೩ ॥**

**ಪುನಃ ಪ್ರಭಾತೇ ವಿಮಲೇ ಸ್ನಾತ್ವಾ ಶುಚಿರಲಂಕೃತಃ ।**
**ಪೂರ್ವೋಕ್ತವಿಧಿನಾನೇನ ಪುನಃ ಸಂಪೂಜ್ಯ ತಂ ಪಟಂ ॥ ೩೪ ॥**

**ಋತ್ವಿಕ್ಪೂಜಾಂ ತತಃ ಕೃತ್ವಾ ಗೋಶತೇನ ವಿಚಕ್ಷಣಃ ।**
**ಅಥವಾ ಗೋಯುಗಂ ದದ್ಯಾದೇಕೈಕಸ್ಯಾತ್ಯಲಂಕೃತಂ ॥ ೩೫ ॥**

---

೩೧. ಬ್ರಹ್ಮ, ವಿಷ್ಣು, ಈಶ್ವರ, ದ್ವಾದಶಾದಿತ್ಯರು, ಅಷ್ಟವಸುಗಳು, ಇವರೆಲ್ಲರೂ ಯಾವಾಗಲೂ ಸುಪ್ರತಿಷ್ಠಿತರಾಗಿ ನನ್ನಿಂದ ಪೂಜಿಸಲ್ಪಟ್ಟವರಾಗಲಿ.

೩೨. ಈ ಪ್ರಕಾರ ಚಿತ್ರಿತ ವಸ್ತ್ರವನ್ನು ಪೂಜೆಮಾಡಿ ಅನಂತರ ಪ್ರದಕ್ಷಿಣ ನಮಸ್ಕಾರಮಾಡಿ ಅನೇಕ ವಿಧಗಳಾದ ಭಕ್ಷ್ಯಗಳನ್ನು ನೈವೇದ್ಯಮಾಡಬೇಕು.

೩೩. ಅನಂತರ ಯಜಮಾನನು ಆ ದಿವಸ ಶಂಖ, ಭೇರಿ ಇತ್ಯಾದಿಗಳ ಶಬ್ದಗಳು, ವೇದಘೋಷಗಳು ಚಿತ್ರಚಿತ್ರವಾದ (ಮನೋಹರವಾದ) ಮಂಗಲ ಗೀತೆಗಳು ಮಂಗಳವಾದ್ಯ ಮುಂತಾದವುಗಳನ್ನು ಏರ್ಪಡಿಸಿ ಮೂಲಕ ರಾತ್ರಿ ಯೆಲ್ಲಾ ಜಾಗರಣೆಮಾಡಬೇಕು.

೩೪. ಅನಂತರ ಬೆಳಿಗ್ಯೆ ಸ್ನಾನಮಾಡಿ ಶುಚಿರ್ಭೂತನಾಗಿ ಹಿಂದೆ ಹೇಳಿದ ವಿಧಿಯಂತೆಯೇ ಆ ಪಟಕ್ಕೆ ಪುನಃ ಪೂಜೆಮಾಡಬೇಕು.

೩೫. ಅನಂತರ ವಿಚಕ್ಷಣೆಯಿಂದ ಕೂಡಿ ನೂರು ಗೋವುಗಳನ್ನು ದಾನ ಮಾಡುವುದರ ಮೂಲಕ ಎಲ್ಲ ಋತ್ವಿಜರನ್ನು ಪೂಜಿಸಬೇಕು ಅಷ್ಟು ಸಾಧ್ಯ ವಿಲ್ಲದಿದ್ದರೆ ಅಲಂಕಾರಮಾಡಿದ ಎರಡೆರಡು ಗೋವನ್ನು ಪ್ರತಿಯೊಬ್ಬ ಋತ್ವಿಜ ನಿಗೂ ದಾನಮಾಬೇಕು.

ಉಪಾನಹೌ ತಥಾ ಛತ್ರಂ ಗೃಹೋಪಕರಣಾನಿ ಚ ।
ಯದ್ಯದಿಷ್ಟತಮಂ ಕಿಂಚಿತ್ಸರ್ವಂ ದದ್ಯಾದ್ವಿಚಕ್ಷಣಃ ॥ ೩೬ ॥

ತತಃ ಪ್ರಕಲ್ಪಯೇದ್ಯಾನಂ ನಾಗಯುಕ್ತಮಲಂಕೃತಂ ।
ಅಲಾಭೇ ವಾಜಿಸಂಯುಕ್ತಂ ಪತಾಕಾಧ್ವಜಶಾಲಿನಂ ॥ ೩೭ ॥

ಸಹಸ್ರಂ ದಕ್ಷಿಣಾಂ ದತ್ವಾ ತತಸ್ತ್ವಾರೋಪಯೇತ್ಪಟಂ ।
ಬ್ರಾಹ್ಮಣಂ ವಾ ರಥೇನಾಥ ನಯೇದ್ದೇವಾಲಯಂ ಬುಧಃ ॥ ೩೮ ॥

ತತ್ರಸ್ಥಂ ಸ್ಥಾಪಯೇನ್ನೀತ್ವಾ ಗಂಧೈಃ ಪುಷ್ಪೈಶ್ಚ ಧೂಪಯೇತ್ ।
ತತ್ರಾಪಿ ಕುರ್ಯಾನ್ನೈವೇದ್ಯಂ ಕುರ್ಯಾಚ್ಚಾಪಿ ಮಹೋತ್ಸವಂ ॥

---

೩೬. ಇದಲ್ಲದೆ ಪಾದರಕ್ಷೆ, ಛತ್ರಿ ಮತ್ತು ಮನೆಯಲ್ಲಿ ಉಪಯೋಗಕ್ಕೆ ಬೇಕಾಗತಕ್ಕ ಇತರ ಉಪಕರಣ ಇವೇ ಮೊದಲಾದ ತನ್ನ ಅಭೀಷ್ಟವಾದ ಇತರ ವಸ್ತುಗಳನ್ನೂ ದಾನಮಾಡಬೇಕು.

೩೭. ಅನಂತರ ಆನೆಯನ್ನು ಕಟ್ಟಿ ಎಳೆಸುವ ರಥವನ್ನು ತರಬೇಕು. ಅದು ಸಿಕ್ಕದಿದ್ದರೆ ಕುದುರೆಯನ್ನು ಕಟ್ಟುವ ಒಂದು ವಾಹನವನ್ನು ತರಿಸಿ ಅದನ್ನು ಪತಾಕೆ, ಧ್ವಜ, ಇತ್ಯಾದಿಗಳಿಂದ ಶೃಂಗರಿಸಬೇಕು.

೩೮. ಮತ್ತು ಒಂದು ಸಾವಿರ ನಾಣ್ಯಗಳ ದಕ್ಷಿಣೆಯನ್ನು ಕೊಟ್ಟು ಆ ಪಟದ ಸಮೇತ ಬ್ರಾಹ್ಮಣನನ್ನು ಆ ರಥದಲ್ಲಿ ಕೂರಿಸಿ ಉತ್ಸವಪೂರ್ವಕವಾಗಿ ಅದಕ್ಕಾಗಿ ಗೊತ್ತಾದ ದೇವಾಲಯಕ್ಕೆ ಕರೆದುಕೊಂಡು ಹೋಗಬೇಕು.

೩೯. ಅಲ್ಲಿಗೆ ಹೋಗಿ ಆ ರಥದಲ್ಲಿರುವ ಪಟವನ್ನು ಆ ಬ್ರಾಹ್ಮಣನ ಕೈಯಿಂದ ದೇವಾಲಯದೊಳಗಿರಿಸಿ ಗಂಧ, ಹೂವು ಇತ್ಯಾದಿಗಳಿಂದ ಅಲ್ಲಿ ಅರ್ಚನೆಯನ್ನೂ, ನೈವೇದ್ಯವನ್ನೂ ಮಾಡಿಸಿ ಮಹೋತ್ಸವವನ್ನು ವಿಭವಯುಕ್ತವಾಗಿ ಮಾಡಬೇಕು.

**ಯಸ್ಮಿನ್ನಾಯತನೇ ತಸ್ಯ ಪ್ರತಿಷ್ಠಾ ಕ್ರಿಯತೇ ನೃಪ ।**
**ಪೂಜಾ ತತ್ರಾಪಿ ಮಹತೀ ಕರ್ತವ್ಯಾ ಭೂತಿಮಿಚ್ಛತಾ ॥ ೪೦ ॥**

**ಚಂದ್ರಾತಪತ್ರಂ ಘಂಟಾಂ ಚ ಧ್ವಜಾದ್ಯಂ ದಾಪಯೇತ್ಸುಧೀಃ ।**
**ಯಥಾ ಶಕ್ತ್ಯಾ ಚ ರಾಜೇಂದ್ರ ಗುರುಂ ಗೌರವಯಂತ್ರಿತಃ ॥ ೪೧ ॥**

**ಅಭ್ಯರ್ಚ್ಯ ದಕ್ಷಿಣಾಭಿಶ್ಚ ಬ್ರಾಹ್ಮಣಾಂಶ್ಚ ವಿಸರ್ಜಯೇತ್ ।**
**ದೀನಾಂಧಕೃಪಣಾನಾಂ ಚ ಭೋಜನಂ ಚಾಪ್ಯವಾರಿತಂ ॥ ೪೨ ॥**

**ತಸ್ಮಿನ್ನಹನಿ ದಾತವ್ಯಂ ಮಿತ್ರಸ್ವಜನಬಂಧುಷು ।**
**ಅನೇನ ವಿಧಿನಾ ಯಸ್ತು ಶ್ರದ್ಧಧಾನೋ ಜಿತೇಂದ್ರಿಯಃ ॥ ೪೩ ॥**

---

೪೦. ಎಲೈ ರಾಜನೇ! ಅದನ್ನು ಪ್ರತಿಷ್ಠಾಪಿಸುವ ದೇವಸ್ಥಾನದಲ್ಲಿ ಸಮಗ್ರವಾದ ಸಿದ್ಧತೆಯಿಂದ ಬಹು ವಿತರಣೆಯಿಂದ ಪೂಜಿಸಬೇಕು. ಇದರಿಂದ ಆತನಿಗೆ ಐಶ್ವರ್ಯವು ಲಭಿಸುತ್ತದೆ.

೪೧. ಎಲೈ ರಾಜನೇ! ಬುದ್ಧಿಶಾಲಿಯಾದ ಕರ್ತನು ತನ್ನ ಶಕ್ತ್ಯನುಸಾರ ಚಂದ್ರನಂತೆ ಶುಭ್ರವಾದ ಛತ್ರಿ, ಘಂಟೆ, ಧ್ವಜ ಮುಂತಾದುವುಗಳನ್ನು ಅಲ್ಲಿಗೆ ಅರ್ಪಿಸಬೇಕು.

೪೨. ಅನಂತರ ಗೌರವದಿಂದ ತನ್ನ ಆಚಾರ್ಯನಿಗೂ ಕೂಡ ಶಕ್ತ್ಯನುಸಾರ ದಕ್ಷಿಣೆಗಳನ್ನು ಕೊಟ್ಟು ಮಿಕ್ಕ ಬ್ರಾಹ್ಮಣರನ್ನು ಪೂಜಿಸಿ ಅನಂತರ ಬೀಳ್ಕೊಡಬೇಕು. ದರಿದ್ರರು, ಕುರುಡರು, ಕೃಪಣರು ಇವರಿಗೆಲ್ಲಾ ಭೋಜನವನ್ನು ಮಾಡಿಸಬೇಕು.

೪೩. ಆ ದಿವಸ ತನ್ನ ಮಿತ್ರರು, ಸ್ವಜನ, ಬಂಧುಗಳು ಇವರಿಗೂ ಭೋಜನವನ್ನು ಮಾಡಿಸಬೇಕು. ಈ ವಿಧಿಯನ್ನನುಸರಿಸಿ ಜಿತೇಂದ್ರಿಯನೂ ಶ್ರದ್ಧಾಳುವೂ ಆಗಿರಬೇಕು.

ಕುರ್ವನ್ನರೋ ವಾ ನಾರೀ ವಾ ಪ್ರತಿಷ್ಠಾಂ ಸಾರ್ವಲೌಕಿಕೀಂ ।
ಸ್ಥಾಪಿತಂ ತು ಭವೇತ್ತೇನ ತ್ರೈಲೋಕ್ಯಂ ಸ ಚರಾಚರಂ ॥ ೪೪ ॥

ಕುಲಂ ಚ ತಾರಿತಂ ತೇನ ಸತ್ಪುತ್ರೇಣ ಯುಧಿಷ್ಠಿರ ।
ಯಾವಚ್ಚ ದೇವತಾಗಾರೇ ಪಟಸ್ತಿಷ್ಠತಿ ಪೂಜಿತಃ ॥ ೪೫ ॥

ತಾವದಸ್ಯಾಕ್ಷಯಾ ಕೀರ್ತಿಸ್ತ್ರೈಲೋಕ್ಯೇ ಸಂಪ್ರಸರ್ಪತಿ ।
ದಾನೇನ ಕೀರ್ತಿರ್ಯಾವಂತಿ ಮರ್ತ್ಯಲೋಕೇಷು ಗೀಯತೇ ॥ ೪೬ ॥

ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಗಂಧರ್ವೈರ್ಗೀಯಮಾನಸ್ತು ಅಪ್ಸರೋಗಣಸೇವಿತಃ ॥ ೪೭ ॥

ವಸೇದ್ಧೃಷ್ಟಮನಾಃ ಸ್ವರ್ಗೇ ಯಾವದಿಂದ್ರಾಶ್ಚತುರ್ದಶ ।
ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ॥ ೪೮ ॥

---

೪೪. ಪುರುಷನೇ ಆಗಲಿ, ನಾರಿಯೇ ಆಗಲಿ ಸರ್ವಲೋಕಪ್ರತಿಷ್ಠೆ ಎಂಬ ಈ ವ್ರತವನ್ನು ಮಾಡಿದರೆ ಚರಾಚರಗಳಾದ ಮೂರುಲೋಕಗಳನ್ನು ಸ್ಥಾಪಿಸಿದಂತಾಗುತ್ತದೆ.

೪೫-೪೬. ಎಲೈ ಯುಧಿಷ್ಠಿರನೇ ! ಈ ವ್ರತಮಾಡತಕ್ಕವನು ಸತ್ಪುತ್ರನೆನಿಸಿ ತನ್ನ ಕುಲವನ್ನೇ ಉದ್ಧಾರಮಾಡುತ್ತಾನೆ. ಈ ಪಟವು ಆ ದೇವಸ್ಥಾನದಲ್ಲಿ ಎಲ್ಲಿಯವರೆಗೆ ಪೂಜಿಸಲ್ಪಡುತ್ತಿರುವುದೋ ಅಲ್ಲಿಯವರೆವಿಗೂ ಆತನ ಕೀರ್ತಿಯು ಮೂರುಲೋಕಗಳಲ್ಲಿಯೂ ಹರಡುತ್ತದೆ. ಮತ್ತು ಅತನ ಯಶಸ್ಸು ಮರ್ತ್ಯಲೋಕದಲ್ಲಿ ಸ್ತುತಿಸಲ್ಪಡುತ್ತದೆ.

೪೭. ಅಲ್ಲದೆ ಈತನು ಸ್ವರ್ಗಲೋಕದಲ್ಲಿ ಗಂಧರ್ವರ ಗಾನಸೇವೆಯನ್ನು ಕೈಕೊಳ್ಳುತ್ತಲೂ, ಅಪ್ಸರೋಗಣದಿಂದ ಸೇವಿಸಲ್ಪಡುತ್ತಲೂ ಸಾವಿರ ವರ್ಷಗಳು ಪೂಜಿತನಾಗಿರುತ್ತಾನೆ.

೪೮. ಮತ್ತು ಸ್ವರ್ಗದಲ್ಲಿ ಬಹು ಸಂತೋಷದಿಂದ ಹದಿನಾಲ್ಕು ಮಂದಿ ಇಂದ್ರರು ಪಟ್ಟವನ್ನೇರಿ ಆಳುವವರೆಗೂ ಅಂದರೆ ಹದಿನಾಲ್ಕು ಕಲ್ಪಗಳಕಾಲ ವಾಸವಾಗಿರುತ್ತಾನೆ. ಅನಂತರ ಆ ಪುಣ್ಯವು ಮುಗಿದ ಮೇಲೆ ಆತನು ಮತ್ತೆ ಭೂಲೋಕದಲ್ಲಿ ಜನ್ಮವೆತ್ತಿ ಧಾರ್ಮಿಕನಾದ ರಾಜನಾನುತ್ತಾನೆ.

**ಪುತ್ರಪೌತ್ರಾನ್ವಿತಃ ಶ್ರೀಮಾನ್ದೀರ್ಘಾಯುರತಿಧಾರ್ಮಿಕಃ ।**
**ದಶ ಜನ್ಮನಿ ರಾಜೇಂದ್ರ ಜಾಯಮಾನಃ ಪುನಃಪುನಃ ॥ ೪೯ ॥**

**ಶ್ರೂಯತೇ ಚ ಪುರಾ ರಾಜಾ ರಜಿರ್ನಾಮ ಮಹಾಬಲಃ ।**
**ಚಕ್ರವರ್ತೀ ದೃಢಮತಿರ್ಜಿತಾರಿರ್ವಿಜಿತೇಂದ್ರಿಯಃ ॥ ೫೦ ॥**

**ಮಹೀ ಯೇನ ಪುರಾ ದತ್ತಾ ದೇವರಾಜಸ್ಯ ಸಂಗರೇ ।**
**ಜಿತ್ವಾ ದೈತ್ಯಬಲಂ ಸರ್ವಂ ದತ್ತವಾಂಸ್ತ್ರಿದಿವಂ ಪುನಃ ॥ ೫೧ ॥**

**ಮಹೇಂದ್ರಾಯ ಮಹಾಭಾಗ ಸರ್ವಂ ನಿಹತಕಂಟಕಂ ।**
**ಸ ಕದಾಚಿತ್ಸಭಾಮಧ್ಯೇ ಯಾವದಾಸ್ತೇ ಮಹೀಪತಿಃ ॥ ೫೨ ॥**

**ತಾವತ್ತತ್ರಾಜಗಾಮಾಥ ಪುಲಸ್ತ್ಯೋ ಬ್ರಹ್ಮಣಃ ಸುತಃ ।**
**ಶಿಷ್ಯೈಃ ಪರಿವೃತಃ ಶ್ರೀಮಾನ್ ವೇದವೇದಾಂಗಪಾರಗೈಃ ॥ ೫೩ ॥**

---

೪೯. ಎಲೈ ರಾಜೇಂದ್ರನೇ! ಆತನು ಮಕ್ಕಳು, ಮೊಮ್ಮಕ್ಕಳು ಮೊದಲಾದವರಿಂದ ಕೂಡಿದವನೂ, ದೀರ್ಘಾಯುಸ್ಸುಳ್ಳವನೂ, ಬಹು ಧಾರ್ಮಿಕನೂ ಆಗಿರುತ್ತಾ ಇದೇರೀತಿ ಹತ್ತು ಜನ್ಮಗಳನ್ನು ಎತ್ತುತ್ತಾನೆ.

೫೦. ಪೂರ್ವಕಾಲದಲ್ಲಿ ಬಲಿಷ್ಠನೂ ದೃಢಮತಿಯೂ ಆದ ರಜಿ ಎಂಬ ಹೆಸರುಳ್ಳ ರಾಜನು ಬಹು ಜಿತೇಂದ್ರಿಯನೂ ಅನೇಕ ಶತ್ರುಗಳನ್ನು ಜಯಿಸಿ ಚಕ್ರವರ್ತಿಯೆನಿಸಿ ಪ್ರಖ್ಯಾತನೂ ಆಗಿ ಭೂದಾನ ಮಾಡಿದ್ದನು.

೫೧. ಅಯ್ಯಾ ಮಹಾಭಾಗನೇ! ಆತನು ಇಂದ್ರನ ಪಕ್ಷವಹಿಸಿ ನಿಂತು ಯುದ್ಧದಲ್ಲಿ ಸಕಲ ದೈತ್ಯಬಲವನ್ನೂ ಜಯಿಸಿ ಯಾವ ತೊಂದರೆಯೂ ಇಲ್ಲದಂತೆ ಮಾಡಿ ಸ್ವರ್ಗವನ್ನು ಇಂದ್ರನಿಗೆ ದಾನಮಾಡಿದನು.

೫೨-೫೩. ಆ ರಾಜನು ಒಂದಾನೊಂದು ಕಾಲದಲ್ಲಿ ತನ್ನ ಸಭೆಯಲ್ಲಿರಲು ಬ್ರಹ್ಮನ ಮಗನೆನಿಸಿಕೊಂಡು ವೇದವೇದಾಂಗ ಪಾರಂಗತನಾದ ಪುಲಸ್ತ್ಯನು ತನ್ನ ಶಿಷ್ಯರೊಡಗೂಡಿ ಅಲ್ಲಿಗೆ ಬಂದನು.

ದತ್ತ್ವಾರ್ಘ್ಯಸ್ತು ತದಾ ತೇನ ಉಪವಿಷ್ಟೋ ವರಾಸನೇ ।
ಶುಶುಭೇ ಪರಯಾ ಲಕ್ಷ್ಮ್ಯಾ ಪಿತಾಮಹ ಇವಾಪರಃ ॥ ೫೪ ॥

ಅಥ ತಂ ಪೂಜಯಿತ್ವಾಗ್ರೇ ಮಧುಪರ್ಕೇಣ ಪಾರ್ಥಿವಃ ।
ಪಪ್ರಚ್ಛ ವಿನಯೋಪೇತಃ ಕಥಾಮಾತ್ಮೋದ್ಭವಾಂ ನೃಪಃ ॥ ೫೫ ॥

ಭಗವನ್ಕೇನ ದಾನೇನ ತಪಸಾ ನಿಯಮೇನ ವಾ ।
ಶ್ರೀರಿಯಂ ಮಮ ಧರ್ಮಜ್ಞ ತೇಜಶ್ಚಾವ್ಯಾಹತಂ ಭುವಿ ॥ ೫೬ ॥

ಬಲಂ ಪುಷ್ಟಿಂ ಧನಂ ಧಾನ್ಯಂ ಪುತ್ರಪೌತ್ರಂ ತಥೋತ್ತಮಂ ।
ಏತನ್ಮೇ ಸರ್ವಮಾಚಕ್ಷ್ವ ಸರ್ವಜ್ಞೋಽಸಿ ದ್ವಿಜೋತ್ತಮ ॥ ೫೭ ॥

॥ ಪುಲಸ್ತ್ಯ ಉವಾಚ ॥

ಶೃಣು ರಾಜನ್ಕಥಾಮೇತಾಮಾತ್ಮೀಯಾಂ ಸುಮನೋಹರಾಂ ।
ಕಥ್ಯಮಾನಾಂ ಮಯಾ ಸಮ್ಯಕ್ಸಪ್ತಮೇ ತವ ಜನ್ಮನಿ ॥ ೫೮ ॥

---

೫೪. ಬಳಿಕ ಮಹಾರಾಜನು ಆ ಪುಲಸ್ತ್ಯನನ್ನು ಸತ್ಕರಿಸಿ ಉಚಿತವಾದ ಆಸನದಲ್ಲಿ ಕುಳ್ಳಿರಿಸಿದನು. ಆಗ ಆತನು ಸರ್ವೋತ್ತಮವಾದ ಕಾಂತಿಯಿಂದ ಕೂಡಿ ಎರಡನೆಯ ಬ್ರಹ್ಮನೋ ಎಂಬಂತೆ ಶೋಭಿಸಿದನು.

೫೫. ಆಗ ರಾಜನು ಆ ಪುಲಸ್ತ್ಯನಿಗೆ ಮಧುಪರ್ಕಸಮರ್ಪಣಪೂರ್ವಕ ವಾಗಿ ಪೂಜೆಮಾಡಿ ತನಗೆ ಸಮೃದ್ಧಿಯುಂಟಾದುದರ ಕಾರಣವನ್ನು ಕುರಿತ ಪೂರ್ವವೃತ್ತಾಂತವನ್ನು ವಿನಯದಿಂದ ಪ್ರಶ್ನಿಸತೊಡಗಿದನು.

೫೬–೫೭. "ಸ್ವಾಮಿಾ ಷಡ್ಗುಣೈಶ್ವರ್ಯಸಂಪನ್ನನಾದ ಪುಲಸ್ತ್ಯನೇ! ನೀನು ಧರ್ಮಸೂಕ್ಷ್ಮವನ್ನು ಅರಿತವನೂ ಸರ್ವಜ್ಞನೂ ಆದ ದ್ವಿಜವರ್ಯನೆನಿಸಿದ್ದೀಯೆ. ಈಗ ನನಗೆ ಒದಗಿರುವ ಈ ಸಂಪತ್ತು, ಈ ಅಸದೃಶವಾದ ತೇಜಸ್ಸು, ಶೌರ್ಯ, ಪುಷ್ಟಿ, ಧನ, ಧಾನ್ಯ, ಪುತ್ರರು, ಪೌತ್ರರು ಇವೆಲ್ಲಾ ಲಭಿಸಲು ನಾನು ಹಿಂದೆ ದಾನ, ತಪಸ್ಸು, ವ್ರತ ಇವುಗಳಲ್ಲಿ ಯಾವುದನ್ನು ಆಚರಿಸಿದ್ದೆನು? ಇದನ್ನು ನನಗೆ ಕೃಪೆಮಾಡಿ ತಿಳಿಸಬೇಕು" ಎಂದನು.

೫೮. ಎಲೈ ರಾಜನೇ! ಈಗ ನೀನು ಪಡೆದಿರುವುದು ಏಳನೆಯ ಜನ್ಮವು. ನಿನ್ನ ಹಿಂದಿನ ಜನ್ಮದ ಮನೋಹರವಾದ ವಿಚಾರವನ್ನು ಹೇಳುವೆನು.

**ಕಥೇಯಮಭಿನಿರ್ವೃತ್ತಾ ಶೃಣುಷ್ವೈಶ್ವರ್ಯವರ್ಧಿನೀಂ ।**
**ಆಸೀಸ್ತ್ವಂ ವೈಶ್ಯಜಾತೀಯೋ ವಾರಾಣಸ್ಯಾಂ ನರೋತ್ತಮ ॥ ೫೯ ॥**

**ಬಹುಭೃತ್ಯಪರೀವಾರೋ ಧನಧಾನ್ಯಸಮನ್ವಿತಃ ।**
**ಧಾರ್ಮಿಕಃ ಸತ್ಯನಿರತೋ ವಣಿಗ್ಧರ್ಮರತಃ ಸದಾ ॥ ೬೦ ॥**

**ತತ್ರ ತ್ವಯಾ ಶ್ರುತಾ ಧರ್ಮಾ ಧರ್ಮಾಖ್ಯಾನಗತೇನ ವೈ ।**
**ದಾನಾಶ್ರಯಾ ಬಹುವಿಧಾ ವ್ರತಾನಿ ವಿವಿಧಾನಿ ಚ ॥ ೬೧ ॥**

**ಪ್ರಸಂಗೇನ ಕದಾಚಿಚ್ಚ ಪ್ರತಿಷ್ಠಾ ಭೌವನೀ ತ್ವಯಾ ।**
**ಶ್ರುತಾ ರಾಜೇಂದ್ರ ವಿಧಿವತ್ಕೃತಾ ಚ ಬಹುಪುಣ್ಯದಾ ॥ ೬೨ ॥**

---

೫೯. ನಾನು ಹೇಳತಕ್ಕ ಕಥೆಯನ್ನು ಕೇಳು. ಇದರಿಂದ ನಿನಗೆ ಐಶ್ವರ್ಯವು ಇನ್ನೂ ಅಭಿವೃದ್ಧಿಯಾಗುತ್ತದೆ. ಮಾನವಶ್ರೇಷ್ಠನಾದ ಎಲೈ ರಾಜನೇ! ನೀನು ಹಿಂದೆ ಒಬ್ಬ ವೈಶ್ಯಜಾತಿಯವನಾಗಿ ಕಾಶಿಯಲ್ಲಿ ವಾಸಿಸುತ್ತಿದ್ದೆ.

೬೦. ಆಗ ನೀನು ಅನೇಕಮಂದಿ ಭೃತ್ಯರಿಂದ ಸೇವಿಸಲ್ಪಡುವವನೂ, ಧನ, ಧಾನ್ಯ ಇತ್ಯಾದಿಗಳಿಂದ ಕೂಡಿದವನೂ, ಧಾರ್ಮಿಕನೂ, ಸತ್ಯಸಂಧನೂ ಆಗಿ ವೈಶ್ಯಧರ್ಮಗಳಲ್ಲಿ ಆಸಕ್ತನಾಗಿ ಇದ್ದೆ.

೬೧. ಆಗ ನೀನು ಧರ್ಮಾಖ್ಯಾನದಲ್ಲಿ ಹೇಳಿರತಕ್ಕ ಸಕಲ ಧರ್ಮಗಳು, ದಾನಗಳು, ದಾನಕ್ಕೆ ಆಶ್ರಯಗಳಾಗಿರತಕ್ಕ ವಿವಿಧ ವ್ರತಗಳು ಇವುಗಳೆಲ್ಲವನ್ನೂ ಸಮಗ್ರವಾಗಿ ಕೇಳಿದ್ದೆ.

೬೨. ಎಲೈ ರಾಜನೇ! ಆಗ ಪ್ರಸಂಗವಶಾತ್ ನೀನು ಸಕಲ ಭುವನ ಪ್ರತಿಷ್ಠಾದಾನದ ವಿಚಾರವನ್ನು ಕೇಳಿದೆ. ಮತ್ತು ಬಹು ಪುಣ್ಯಕರವಾದ ಆ ದಾನವನ್ನು ಯಥಾವಿಧಿಯಾಗಿ ಭಕ್ತಿಯಿಂದ ಆಚರಿಸಿದೆ.

ಫಲೇನ ತೇನ ಜಾತೋಽಸಿ ಸಪ್ತ ಜನ್ಮಾನಿ ಭೂಪತಿಃ ।
ಕೀರ್ತಿಸ್ತೇ ಪ್ರಥಿತಾ ಲೋಕೇ ಬಲಂ ಚಾಪಿ ಮಹತ್ತ್ವಮ್ ॥ ೬೩ ॥

ಅಪರಾಣ್ಯಪಿ ಜನ್ಮಾನಿ ಸಪ್ತ ರಾಜಾ ಭವಿಷ್ಯಸಿ ।
ಪಶ್ಚಾದ್ಯೋಗಿಕುಲೇ ಭೂತ್ವಾ ನಿರ್ವಾಣಂ ಸಮವಾಪ್ಸ್ಯಸಿ ॥ ೬೪ ॥

ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ನಾರೀ ವಾ ಪುರುಷೋ ವಾಽಪಿ ಪ್ರತಿಷ್ಠಾಂ ಭೌವನೀಂ ತು ಯಃ ॥೬೫॥

ಪ್ರಕರೋತಿ ವಿಧಾನೇನ ಕೃತಕೃತ್ಯೋ ಭವೇದ್ಬುಧಃ ।
ಇತ್ಯುಕ್ತ್ವಾ ಸ ಮುನಿಸ್ತತ್ರ ರಾಜಾನಂ ಶಂಸಿತವ್ರತಃ ॥ ೬೬ ॥

ಯಯಾವದರ್ಶನಂ ತತ್ರ ಸೂರ್ಯವೈಶ್ವಾನರೋಪಮಃ ॥ ೬೭ ॥

---

೬೩. ಆ ದಾನದ ಮಹಿಮೆಯಿಂದ ನೀನು ಏಳು ಜನ್ಮಗಳಲ್ಲಿಯೂ ರಾಜನಾಗಿ ಜನಿಸಿದ್ದೀಯೆ. ಮತ್ತು ನಿನಗೆ ಈ ಪ್ರಖ್ಯಾತವಾದ ಕೀರ್ತಿಯೂ, ಮಹದ್ಬಲವೂ ಸಹ ಲಭಿಸಿವೆ.

೬೪. ಇಷ್ಟೇ ಅಲ್ಲದೆ ಮುಂದೆ ಏಳುಜನ್ಮಗಳಲ್ಲೂ ನೀನು ರಾಜನಾಗುತ್ತೀಯೆ. ಅನಂತರ ಯೋಗಿಗಳ ವಂಶದಲ್ಲಿ ಜನಿಸಿ ಮೋಕ್ಷವನ್ನು ಪಡೆಯುವೆ.

೬೫–೬೬. ಎಲೈ ರಾಜನೇ! ನಿನ್ನ ಪ್ರಶ್ನೆಗೆ ಉತ್ತರವನ್ನು ವಿವರಿಸಿದುದಾಯಿತು. ಲೋಕದಲ್ಲಿ ನಾರಿಯೇ ಆಗಲಿ, ಪುರುಷನೇ ಆಗಲಿ ಭುವನಪ್ರತಿಷ್ಠಾದಾನವನ್ನು ಯಥಾವಿಧಿಯಾಗಿ ನೆರವೇರಿಸಿದ ಪಕ್ಷದಲ್ಲಿ ಅವರು ಕೃತಕೃತ್ಯರಾಗುತ್ತಾರೆ ಎಂದು ತೀಕ್ಷ್ಣವಾದ ನಿಯಮವುಳ್ಳ ಆ ಪುಲಸ್ತ್ಯಮುನಿಯು ರಾಜನಿಗೆ ಹೇಳಿದನು.

೬೭. ಬಳಿಕ ಸೂರ್ಯನಿಗೂ ಅಗ್ನಿಗೂ ಸಮವಾದ ತೇಜಸ್ಸುಳ್ಳ ಆತನು ಅಲ್ಲಿಯೇ ಅಂತರ್ಧಾನನಾದನು.

ಧರ್ಮಂ ವಿವರ್ಧಯತಿ ಕೀರ್ತಿಶತಾನಿ ಧತ್ತೇ ।
ಕಾಮಂ ಪ್ರಸಾಧಯತಿ ಪಾಪಮಪಾಕರೋತಿ ॥
ಖ್ಯಾತಾ ಮಯೇಯಮಧುನಾ ತವ ದಾನನಿಷ್ಠಾ ।
ತನ್ನಾಸ್ತಿಯನ್ನಕುರುತೇ ಭುವನಪ್ರತಿಷ್ಠಾ ॥ ೬೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ಭುವನಪ್ರತಿಷ್ಠಾವಿಧಿವರ್ಣನಂ
ನಾಮ ಏಕನವತ್ಯುತ್ತರಶತತಮೋಽಧ್ಯಾಯಃ.



---

೬೮. ನಾನು ಈಗ ನಿನಗೆ ಹೇಳಿದ ಈ ಭುವನಪ್ರತಿಷ್ಠಾದಾನವು ಧರ್ಮವನ್ನು ವೃದ್ಧಿಪಡಿಸುತ್ತದೆ. ಅಪಾರವಾದ ಕೀರ್ತಿಲಭಿಸುವಂತೆ ಮಾಡುತ್ತದೆ. ಇಷ್ಟಾರ್ಥವನ್ನು ನೆರವೇರಿಸಿಕೊಡುತ್ತದೆ. ಮತ್ತು ಪಾಪಗಳನ್ನು ನಿವಾರಣೆ ಮಾಡುತ್ತದೆ. ಈ ಭುವನಪ್ರತಿಷ್ಠಾದಾನವನ್ನು ಯಾರು ಮಾಡುವುದಿಲ್ಲವೋ ಅವರಿಗೆ ಇವುಗಳಲ್ಲಿ ಯಾವುದೂ ಲಭಿಸುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಭುವನಪ್ರತಿಷ್ಠಾದಾನ ವಿಧಾನವರ್ಣನೆಯೆಂಬ
ನೂರತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ದ್ವಿನವತ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಶ್ರುತೋ ದಾನವಿಧಿಃ ಸರ್ವಃ ಪ್ರಸಾದಾತ್ತೇ ರಮಾಧವ ।
ನಕ್ಷತ್ರದಾನಸ್ಯೇದಾನೀಂ ದಾನಕಲ್ಪಂ ಪ್ರಚಕ್ಷ್ವ ಮೇ || ೧ ||

|| ಶ್ರೀಕೃಷ್ಣ ಉವಾಚ ||

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ದೇವಕ್ಯಾಶ್ಚೈವ ಸಂವಾದಂ ದೇವರ್ಷೇರ್ನಾರದಸ್ಯ ಚ || ೨ ||

---

### ನೂರತೊಂಭತ್ತೆರಡನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನಿಸುತ್ತಾನೆ—ಸ್ವಾಮಿಾ ಕೃಷ್ಣಪರಮಾತ್ಮಾ! ನಿನ್ನ ಅನುಗ್ರಹದಿಂದ ಸಕಲ ದಾನದ ವಿಧಿಗಳನ್ನು ಕೇಳಿದುದಾಯಿತು. ಈಗ ನನಗೆ ನಕ್ಷತ್ರದಾನದ ವಿಧಾನವನ್ನು ಹೇಳು ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಇದೇ ವಿಚಾರವಾಗಿ ದೇವಕಿಗೂ ಮತ್ತು ದೇವರ್ಷಿಯಾದ ನಾರದನಿಗೂ ಸಂವಾದ ನಡೆದ ಪುರಾತನವಾದ ಇತಿಹಾಸವು ಇದಕ್ಕೆ ಉದಾಹರಣೆಯಾಗಿದೆ.

**ದ್ವಾರಕಾಮನುಸಂಪ್ರಾಪ್ತಂ ನಾರದಂ ದೇವದರ್ಶನಂ |**
**ಪಪ್ರಚ್ಛೇದಂ ತಥಾ ಪ್ರಶ್ನಂ ದೇವಕೀ ಧರ್ಮದರ್ಶಿನೀ || ೩ ||**

**ತಸ್ಯಾಃ ಸಂಪೃಚ್ಛಮಾನಾಯಾ ದೇವರ್ಷಿರ್ನಾರದಸ್ತತಃ |**
**ಆಚಷ್ಟ ವಿಧಿವತ್ಸರ್ವಂ ಯತ್ತಚ್ಛೃಣು ವಿಶಾಂಪತೇ || ೪ ||**

**ನಕ್ಷತ್ರಯೋಗಂ ವಕ್ಷ್ಯಾಮಿ ಸರ್ವಪಾತಕನಾಶನಂ |**
**ಕೃತ್ತಿಕಾಸು ಮಹಾಭಾಗ ಪಾಯಸೇನ ಸಸರ್ಪಿಷಾ || ೫ ||**

**ಸಂತರ್ಪ್ಯ ಬ್ರಾಹ್ಮಣಾನ್ ಸಾಧೂನ್ ಲೋಕಾನ್ ಪ್ರಾಪ್ನೋತ್ಯನುತ್ತಮಾನ್ |**
**ರೋಹಿಣ್ಯಾಂ ಪಾಂಡವಶ್ರೇಷ್ಠ ಮಾಂಸೈರನ್ನೇನ ಸರ್ಪಿಷಾ || ೬ ||**

**ಸಂತರ್ಪ್ಯ ಬ್ರಾಹ್ಮಣಾನ್ ಸಾಧೂನ್ ಲೋಕಾನ್ ಪ್ರಾಪ್ನೋತ್ಯನುತ್ತಮಾನ್**
**ಪಯೋಽನ್ನದಾನಂ ದಾತವ್ಯಮಾನೃಣ್ಯಾರ್ಥಂ ದ್ವಿಜಾತಯೇ || ೭ ||**

---

೩. ದೇವತೆಗಳಿಗೆ ದರ್ಶನೀಯನಾದ ಆ ನಾರದನು ದ್ವಾರಕೆಗೆ ಬಂದುದನ್ನು ಕಂಡು ಧರ್ಮದರ್ಶಿನಿಯಾದ ದೇವಕಿಯು ಈ ನಕ್ಷತ್ರದಾನದ ವಿಚಾರವಾಗಿ ಪ್ರಶ್ನೆ ಮಾಡಿದಳು.

೪. ಅಯ್ಯಾ ಯುಧಿಷ್ಠಿರ! ದೇವಕಿ ಈ ಪ್ರಕಾರವಾಗಿ ಪ್ರಶ್ನೆಮಾಡಲು ದೇವರ್ಷಿಯಾದ ನಾರದನು ಆ ದೇವಕಿಗೆ ಏನು ಉತ್ತರ ಹೇಳಿದನೋ ಅವನ ಮಾತಿನಲ್ಲೇ ಹೇಳುತ್ತೇನೆ ಕೇಳು.

೫-೭. ಅಯ್ಯಾ ಮಹಾಭಾಗನಾದ ಯುಧಿಷ್ಠಿರ! "ಸಕಲ ಪಾಪವನ್ನು ನಿವಾರಿಸುವ ಮಹಿಮೆಯುಳ್ಳ ನಕ್ಷತ್ರಯೋಗವನ್ನು ಹೇಳುತ್ತೇನೆ. ಕೃತ್ತಿಕಾ ನಕ್ಷತ್ರಯುಕ್ತವಾದ ದಿನ ಪಾಯಸವನ್ನು ಮಾಡಿ ಸಾಧುಗಳಿಗೂ ಬ್ರಾಹ್ಮಣರಿಗೂ ಅಭಿಘಾರ ಸಹಿತ ಬಡಿಸಿ ಸಂತರ್ಪಣೆ ಮಾಡುವುದರಿಂದ ಸರ್ವೋತ್ತಮವಾದ ಲೋಕವನ್ನು ಪಡೆಯುತ್ತಾನೆ. ಅಯ್ಯಾ ಪಾಂಡುಶ್ರೇಷ್ಠನೇ! ಕೇಳು. ರೋಹಿಣೀ ನಕ್ಷತ್ರಯುಕ್ತವಾದ ದಿನ ಸಾಧುಗಳಿಗೂ ಬ್ರಾಹ್ಮಣರಿಗೂ (ಉದ್ದಿನಪುಡಿ ಅನ್ನ) ಮಾಷಾನ್ನ ತುಪ್ಪ ಇವುಗಳನ್ನು ಬಡಿಸಿ ಸಂತರ್ಪಣೆ ಮಾಡುವುದರಿಂದ ಉತ್ತಮ ಲೋಕಗಳನ್ನು ಪಡೆಯುತ್ತಾನೆ.

ದೋಗ್ಧ್ರೀಂ ಸವತ್ಸಾಂ ತು ನರೋ ನಕ್ಷತ್ರೇ ಸೋಮದೈವತೇ ।
ದತ್ವಾ ದಿವ್ಯವಿಮಾನಸ್ಥಃ ಸ್ವರ್ಗಂ ಪ್ರಾಪ್ನೋತ್ಯನುತ್ತಮಂ ॥ ೮ ॥

ಆರ್ದ್ರಾಯಾಂ ಕೃಶರಾಂ ದತ್ವಾ ತಿಲಮಿಶ್ರಾಂ ಸಮಾಹಿತಃ ।
ನರಸ್ತರತಿ ದುರ್ಗಾಣಿ ಸರ್ವಾಣ್ಯೇವ ನರೋತ್ತಮ ॥ ೯ ॥

ಪೂಪಾನ್ಪುನರ್ವಸೌ ದತ್ವಾ ಘೃತಪೂರ್ಣಾನ್ ಸುಪಾಚಿತಾನ್ ।
ಯಶಸ್ವೀ ರೂಪಸಂಪನ್ನಃ ಸಜ್ಜನೋ ಜಾಯತೇ ಕುಲೇ ॥ ೧೦ ॥

ಪುಷ್ಯೇ ತು ಕಾಂಚನಂ ದತ್ವಾ ಕೃತಂ ವಾಕೃತಮೇವ ವಾ ।
ಅನಾಲೋಕೇಷು ಲೋಕೇಷು ಸೋಮವತ್ಸ ವಿರಾಜತೇ ॥ ೧೧ ॥

---

೮. ಮೃಗಶಿರಾ ನಕ್ಷತ್ರದ ದಿನದಲ್ಲಿ ಬ್ರಾಹ್ಮಣನಿಗೆ ಹಾಲು ಅನ್ನವನ್ನು ದಾನಮಾಡಬೇಕು. ಎಳೆಗರುವಿನಿಂದ ಕೂಡಿದುದೂ ಚೆನ್ನಾಗಿ ಹಾಲುಕೊಡ ತಕ್ಕದ್ದೂ ಆದ ಗೋವನ್ನೂ ದಾನಮಾಡಬೇಕು. ಇದರಿಂದ ಆತನ ಋಣಬಾಧಾ ನಿವೃತ್ತಿಯಾಗಿ ದಿವ್ಯ ವಿಮಾನಾರೂಢನಾಗಿ ಸ್ವರ್ಗವನ್ನು ಪಡೆಯುತ್ತಾನೆ.

೯. ಆರ್ದ್ರಾ ನಕ್ಷತ್ರಯುಕ್ತವಾದ ದಿವಸ ಎಳ್ಳುಮಿಶ್ರಿತವಾಗಿರತಕ್ಕ ಚಿಗುಳಿಯ ದಾನಮಾಡಿದರೆ ದುರ್ಗವನ್ನು ದಾಟಿದಂತೆ ಸಕಲ ಕಷ್ಟಗಳಿಂದ ಪಾರಾಗುತ್ತಾನೆ.

೧೦. ಪುನರ್ವಸು ನಕ್ಷತ್ರಯುಕ್ತವಾದ ದಿವಸ ತುಪ್ಪದಲ್ಲಿ ಬೇಯಿಸಿದ ಅಪೂಪಗಳನ್ನು ದಾನಮಾಡಿದ ಮನುಜನು ಸತ್ಕುಲದಲ್ಲಿ ಜನಿಸಿ ಯಶಸ್ವಿಯೂ ರೂಪಸಂಪನ್ನನೂ ಆದ ಸಜ್ಜನನಾಗುವನು.

೧೧. ಪುಷ್ಯ ನಕ್ಷತ್ರಯುಕ್ತವಾದ ದಿನ ಸುವರ್ಣವನ್ನು ಸ್ವರೂಪದಲ್ಲಿಯೋ ಪ್ರತಿಮಾರೂಪದಲ್ಲಿಯೋ ದಾನಮಾಡಿದರೆ ಆತನು ಬೆಳಕಿಲ್ಲದ ಲೋಕಗಳಲ್ಲಿ ಚಂದ್ರನಂತೆ ಪ್ರಕಾಶಿಸುತ್ತಾನೆ.

**ಆಶ್ಲೇಷಾಸು ತಥಾ ರೌಪ್ಯಂ ಯಃ ಸುರೂಪಂ ಪ್ರಯಚ್ಛತಿ ।**
**ಸರ್ವಭೀತಿವಿನಿರ್ಮುಕ್ತಃ ಶಾಸ್ತ್ರವಾನಭಿಜಾಯತೇ ॥ ೧೨ ॥**

**ಮಘಾಸು ತಿಲಪೂರ್ಣಾನಿ ವರ್ಧಮಾನಾನಿ ಮಾನವಃ ।**
**ಪ್ರದಾಯ ಪಶುಮಾಂಶ್ಚೈವ ಪುತ್ರವಾಂಶ್ಚ ಪ್ರಜಾಯತೆ ॥ ೧೩ ॥**

**ಫಾಲ್ಗುನೀ ಪೂರ್ವಸಮಯೇ ವಡವಾಂ ದ್ವಿಜಪುಂಗವೇ ।**
**ದತ್ವಾ ಪುಣ್ಯಕೃತಾನ್ ಲೋಕಾನ್ ಪ್ರಾಪ್ನೋತಿ ಸುರಸೇವಿತಾನ್॥೧೪॥**

**ಉತ್ತರಾಫಾಲ್ಗುನೀಯೋಗೇ ದತ್ವಾ ಸೌವರ್ಣಪಂಕಜಂ ।**
**ಸೂರ್ಯಲೋಕಮವಾಪ್ನೋತಿ ಸರ್ವಬಾಧಾವಿವರ್ಜಿತಃ ॥ ೧೫ ॥**

**ಹಸ್ತೇ ತು ಹಸ್ತಿನಂ ದತ್ವಾ ಕಾಂಚನಂ ಶಕ್ತಿತಃ ಕೃತಂ ।**
**ಯಾತ್ಯಸೌ ಶಕ್ರಸದನಂ ವರವಾರಣಧೂರ್ಗತಃ ॥ ೧೬ ॥**

---

೧೨. ಆಶ್ಲೇಷಾ ನಕ್ಷತ್ರಯುಕ್ತವಾದ ದಿನದಲ್ಲಿ ಒಳ್ಳೆಯ ಬೆಳ್ಳಿಯನ್ನು ದಾನಮಾಡಿದ ಆತನು ಸಕಲ ಭೀತಿರಹಿತನೂ ಶಾಸ್ತ್ರವೇತ್ತನೂ ಆಗುತ್ತಾನೆ.

೧೩. ಮಘಾ ನಕ್ಷತ್ರಯುಕ್ತವಾದ ದಿನ ಎಳ್ಳಿನಿಂದ ಪೂರಿತಗಳಾದ ವರ್ಧಮಾನ ಎಂಬ ಪಾತ್ರೆಗಳನ್ನು ದಾನಮಾಡಿದರೆ ಪುತ್ರವಂತನೂ ಐಶ್ವರ್ಯವಂತನೂ ಆಗುತ್ತಾನೆ.

೧೪. ಪುಬ್ಬಾ ನಕ್ಷತ್ರಯುಕ್ತವಾದ ದಿನದಲ್ಲಿ ಶ್ರೇಷ್ಠನಾದ ಬ್ರಾಹ್ಮಣನಿಗೆ ಹೆಣ್ಣುಕುದುರೆಯನ್ನು ದಾನಮಾಡಿದರೆ ಆ ಪುಣ್ಯಪ್ರಭಾವದಿಂದ ದೇವತೆಗಳಿಂದ ಸೇವೆಮಾಡಿಸಿಕೊಳ್ಳುವ ಉತ್ತಮಲೋಕವನ್ನು ಪಡೆಯುತ್ತಾನೆ.

೧೫. ಉತ್ತರಾಫಲ್ಗುನೀ ನಕ್ಷತ್ರಯೋಗವಿರುವ ದಿನ ಸುವರ್ಣದ ಕಮಲವನ್ನು ದಾನಮಾಡಿದರೆ ಯಾವ ಬಾಧೆಗಳಿಗೂ ಸಿಕ್ಕದವನಾಗಿ ಸೂರ್ಯಲೋಕವನ್ನು ಪಡೆಯುತ್ತಾನೆ.

೧೬ ಹಸ್ತ ನಕ್ಷತ್ರಯುಕ್ತವಾದ ದಿನದಲ್ಲಿ ತನ್ನ ಶಕ್ತ್ಯನುಸಾರ ಸುವರ್ಣದಿಂದ ರಚಿಸಿದ ಆನೆಯ ಪ್ರತಿಮೆಯನ್ನು ದಾನಮಾಡಿದರೆ ಆತನು ಶ್ರೇಷ್ಠವಾದ ಆನೆಯನ್ನು ಹತ್ತಿ ಇಂದ್ರನ ನಗರವನ್ನು ಸೇರುತ್ತಾನೆ.

ಚಿತ್ರಾಸು ವೃಷಭಂ ದತ್ವಾ ಪುಣ್ಯಾನಾಂ ಪುಣ್ಯಮುತ್ತಮಂ ।
ಚರತ್ಯಪ್ಸರಸಾಂ ಲೋಕೇ ಮೋದತೇ ನಂದನೇ ವನೇ ॥ ೧೭ ॥

ಸ್ವಾತೀಷು ಚ ಧನಂ ದತ್ವಾ ಯದಭೀಷ್ಟಮಿಹಾತ್ಮನಃ ।
ಪ್ರಾಪ್ನೋತಿ ಚ ಶುಭಾನ್ಲೋಕಾನಿಹ ಲೋಕೇ ಮಹದ್ಯಶಃ ॥ ೧೮ ॥

ವಿಶಾಖಾಸು ಮಹಾರಾಜ ಧುರಂಧರ ವಿಭೂಷಿತಂ ।
ಸೋಪಸ್ಕರಂ ಚ ಶಕಟಂ ಸಧಾನ್ಯಂ ವಸ್ತ್ರಸಂಯುತಂ ॥ ೧೯ ॥

ದತ್ವಾ ಪ್ರೀಣಾತಿ ಸ ಪಿತುಃ ಪ್ರೇತ್ಯ ಚಾನಂತ್ಯಮಶ್ನುತೇ ।
ನ ಚ ದುರ್ಗಾಣ್ಯವಾಪ್ನೋತಿ ರೌರವಾದೀನಿ ಮಾನವಃ ॥ ೨೦ ॥

ದತ್ವಾ ಯಥೇಷ್ಟಂ ವಿಪ್ರೇಭ್ಯೋ ಗತಿಮಿಷ್ಟಾಂ ಸ ಗಚ್ಛತಿ ।
ಕಂಬಲಾನ್ಯನುರಾಧರ್ಕ್ಷೇ ದತ್ವಾ ಪ್ರಾವರಣಾನಿ ಚ ॥ ೨೧ ॥

---

೧೭. ಚಿತ್ರಾ ನಕ್ಷತ್ರಯುಕ್ತವಾದ ದಿನ ಉತ್ತಮ ವೃಷಭವನ್ನು ದಾನ ಮಾಡುವುದು ಬಹು ಪುಣ್ಯಕರವು. ಅವನು ಅಪ್ಸರರ ಲೋಕದಲ್ಲಿ ಸಂಚರಿಸುವ ಯೋಗವನ್ನು ಪಡೆದು ಇಂದ್ರನ ನಂದನವನದಲ್ಲಿ ಸಂತೋಷದಿಂದ ವಿಹರಿಸುತ್ತಾನೆ

೧೮. ಸ್ವಾತೀ ನಕ್ಷತ್ರಯುಕ್ತವಾದ ದಿನ ಧನವನ್ನು ದಾನಮಾಡಿದರೆ ತನಗೆ ಅಂತ್ಯತ ಪ್ರಿಯವೂ ಶುಭದಾಯಕವೂ ಆದ ಲೋಕಗಳನ್ನು ಪಡೆಯುವುದಲ್ಲದೆ ಇಹಲೋಕದಲ್ಲಿ ಬಹು ಯಶಸ್ಸನ್ನೂ ಸಹ ಪಡೆಯುತ್ತಾನೆ.

೧೯–೨೦. ಅಯ್ಯಾ ಯುಧಿಷ್ಠಿರ! ಸೋಪಸ್ಕರಗಳು, ಧಾನ್ಯಗಳು, ವಸ್ತ್ರಗಳು ಇವುಗಳನ್ನೂ, ಭಾರವನ್ನು ವಹಿಸುವಂತಹ ಶಕಟವನ್ನೂ, ವಿಶಾಖಾ ನಕ್ಷತ್ರ ಯುಕ್ತವಾದ ದಿವಸ ದಾನಮಾಡಿದರೆ ಆತನು ಲೋಕಾಂತರಗತನಾದ ತಂದೆಯನ್ನು ಸಂತುಷ್ಟಿಪಡಿಸಿದಂತಾಗುತ್ತದೆ. ಮತ್ತು ತಾನು ಮರಣಾನಂತರ ಅನಂತಸೌಖ್ಯವನ್ನು ಪಡೆಯುತ್ತಾನೆಯಲ್ಲದೆ ರೌರವಾದಿ ಮಹಾನರಕಗಳಿಗೆ ಗುರಿಯಾಗುವುದಿಲ್ಲ.

೨೧. ಅನೂರಾಧಾ ನಕ್ಷತ್ರಯುಕ್ತವಾದ ದಿನ ಬ್ರಾಹ್ಮಣರಿಗೆ ಯಥೇಷ್ಟವಾಗಿ ಕಂಬಳಿಗಳನ್ನೂ ಮತ್ತು ದುಪ್ಪಟಿಗಳನ್ನೂ ದಾನಮಾಡಿದರೆ ತನಗಭೀಷ್ಟವಾದ ಉತ್ತಮಗತಿಯನ್ನು ಪಡೆಯುತ್ತಾನೆ.

ಸ್ವರ್ಗೇ ವರ್ಷಶತಂ ಸಾಗ್ರಮಾಸ್ತೇ ಸುರಗಣೈರ್ವೃತಃ ।
ಕಾಲಶಾಕಂ ಚ ವಿಪ್ರೇಭ್ಯೋ ದತ್ವಾ ಮರ್ತ್ಯಃ ಸಮೂಲಕಂ ॥ ೨೨

ಜ್ಯೇಷ್ಠಾನುಜ್ಯೇಷ್ಠತಾಮೇತಿ ಗತಿಮಿಷ್ಟಾಂ ಚ ಗಚ್ಛತಿ ।
ಮೂಲೇ ಮೂಲಂ ಫಲಂ ದತ್ವಾ ಬ್ರಾಹ್ಮಣೇಭ್ಯಃ ಸಮಾಹಿತಃ ॥೨೩॥

ಪಿತೄನ್ ಪ್ರೀಣಯತೇ ಸರ್ವಾನ್ ಗತಿಂ ಪ್ರಾಪ್ನೋತ್ಯನುತ್ತಮಾಂ ।
ಅಥಪೂರ್ವಾಸ್ವಷಾಢಾಸು ದಧಿಪಾತ್ರಾಣಿ ಮಾನವಃ ॥ ೨೪ ॥

ಕುಲವೃತ್ತೋಪಸಂಪನ್ನೇ ಬ್ರಾಹ್ಮಣೇ ವೇದಪಾರಗೇ ।
ಪ್ರದಾಯ ಜಾಯತೇ ಪ್ರೇತ್ಯ ಕುಲೇ ಚ ಬಹು ಭೋಗವಾನ್ ॥೨೫॥

---

೨೨-೨೩. ಜ್ಯೇಷ್ಠಾ ನಕ್ಷತ್ರಯುಕ್ತವಾದ ದಿನದಲ್ಲಿ ವೇಧಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೆ ಮೂಲಂಗಿಯನ್ನು ಮತ್ತು ಆ ಮಾಸದಲ್ಲಿ ದೊರೆಯುವ ತರಕಾರಿ ಸಮೇತ ದಾನಮಾಡಿದರೆ ಸ್ವರ್ಗವನ್ನು ಪಡೆದು ಅಲ್ಲಿ ನೂರು ವರ್ಷಗಳು ಪೂರ್ತಿಯಾಗಿ ದೇವತೆಗಳ ಸಮೂಹದ ಮಧ್ಯೆ ಶೋಭಿಸುತ್ತಿರುತ್ತಾನೆ. ಮತ್ತು ಎಲ್ಲಕ್ಕಿಂತಲೂ ಮಿಗಿಲೂ ತನಗೆ ಅಭೀಷ್ಟವೂ ಆದ ಉತ್ತಮಗತಿಯನ್ನು ಪಡೆಯುತ್ತಾನೆ.

೨೪. ಮೂಲಾ ನಕ್ಷತ್ರಯುಕ್ತವಾದ ದಿನ ಗೆಣಸುಗಳನ್ನೂ, ನೆಲಗಡಲೆಯನ್ನೂ ಸದ್ಬ್ರಾಹ್ಮಣರಿಗೆ ದಾನಮಾಡಿದರೆ ಆತನ ಪಿತೃಗಳು ತೃಪ್ತರಾಗುತ್ತಾರೆ. ಆತನೂ ಸರ್ವೋತ್ತಮವಾದ ಗತಿಯನ್ನು ಪಡೆಯುತ್ತಾನೆ.

೨೫. ಪೂರ್ವಾಷಾಢ ನಕ್ಷತ್ರಯುಕ್ತವಾದ ದಿನದಲ್ಲಿ ಪಾತ್ರೆಗಳಲ್ಲಿ ಮೊಸರನ್ನು ತುಂಬಿ ಸತ್ಕುಲಪ್ರಸೂತನೂ, ಸುಚರಿತ್ರನೂ, ವೇದಾಧ್ಯಯನಸಂಪನ್ನನೂ ಆಗಿರುವ ಬ್ರಾಹ್ಮಣನಿಗೆ ದಾನಮಾಡಿದ ಮನುಷ್ಯನು ಮುಂದೆ ಸತ್ಕುಲದಲ್ಲಿ ಜನಿಸಿ ಬಹು ಭೋಗಶಾಲಿಯೂ ಪುತ್ರಪೌತ್ರಪರಿವೃತನೂ ಸಮೃದ್ಧಿಯಾಗಿ ಪಶುಗಳುಳ್ಳವನೂ ಧನಿಕನೂ ಆಗುತ್ತಾನೆ.

ಪುತ್ರಪೌತ್ರೈಃ ಪರಿವೃತಃ ಪಶುಮಾನ್ ಧನವಾಂಸ್ತಥಾ ।
ಉದಮಂಥಂ ಸಸರ್ಪಿಷ್ಕಂ ಪ್ರಭೂತಮಧುಫಾಣಿತಂ ॥ ೨೬ ॥

ದತ್ತ್ವೋತ್ತರಾಸ್ವಷಾಢಾಸು ಸರ್ವಾನ್ಕಾಮಾನವಾಪ್ನುಯಾತ್ ।
ದುಗ್ಧಂ ತ್ವಭಿಜಿತೋ ಭಾಗೇ ದತ್ವಾ ಘೃತಮಧುಪ್ಲುತಂ ॥ ೨೭ ॥

ಧರ್ಮನಿತ್ಯೋ ಮನೀಷಿಭ್ಯಃ ಸ್ವರ್ಗೇ ವಸತಿ ಪುಣ್ಯಭಾಕ್ ।
ಶ್ರವಣೇ ಪುಸ್ತಕಂ ಶ್ರೇಷ್ಠಂ ಪ್ರದದಾತೀಹ ಯೋ ನರಃ ॥ ೨೮ ॥

ಸ್ವೇಚ್ಛಯಾ ಯಾತಿ ಯಾನೇನ ಸರ್ವಾನ್ ಲೋಕಾನ್ನಸಂಶಯಃ ।
ಗೋಯುಗಂ ಚ ಧನಿಷ್ಠಾಸು ದತ್ವಾ ವಿಪ್ರಾಯ ಮಾನವಃ ॥ ೨೯ ॥

ಸರ್ವತ್ರ ಮಾನಮಾಪ್ನೋತಿ ಯತ್ರ ಯತ್ರೇಹ ಜಾಯತೇ ।
ತಥಾ ಶತಭಿಷಾಯೋಗೇ ದತ್ವಾ ಸಾಗುರು ಚಂದನಂ ॥ ೩೦ ॥

---

೨೬-೨೭. ಉತ್ತರಾಷಾಢಾ ನಕ್ಷತ್ರಯುಕ್ತವಾದ ದಿನದಲ್ಲಿ ಪಾತ್ರೆಯ ತುಂಬಾ ಜೇನುತುಪ್ಪವನ್ನೂ ಮತ್ತು ಬೆಣ್ಣೆ ಅಥವಾ ತುಪ್ಪದ ಪಾತ್ರೆಯನ್ನೂ ಉದಕುಂಭವನ್ನೂ ದಾನಮಾಡಿದ ಮನುಷ್ಯನು ತನ್ನ ಸಕಲ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ.

೨೮. ಧರ್ಮಾಭಿಲಾಷಿಯಾದವನು ಅಭಿಜಿತ್ ನಕ್ಷತ್ರದ ಯೋಗವಿರುವ ದಿನದಲ್ಲಿ ತುಪ್ಪಮಿಶ್ರವಾದ ಅಥವಾ ಮಧುಮಿಶ್ರವಾದ ಹಾಲನ್ನು ಬುದ್ಧಿಶಾಲಿಗಳಾದ ವಿದ್ವಾಂಸರಿಗೆ ದಾನಮಾಡಿದರೆ ಆತನು ಪುಣ್ಯಭಾಗಿಯಾಗಿ ಸ್ವರ್ಗವನ್ನು ಪಡೆಯುತ್ತಾನೆ.

೨೯. ಶ್ರವಣ ನಕ್ಷತ್ರಯುಕ್ತವಾದ ದಿನದಲ್ಲಿ ಪುಸ್ತಕದಾನವು ಬಹು ಶ್ರೇಷ್ಠವೆಂದು ಉಕ್ತವಾಗಿದೆ. ಆ ದಿನ ಶ್ರೇಷ್ಠವಾದ ಪುಸ್ತಕವನ್ನು ದಾನ ಮಾಡಿದರೆ ಆತನು ತನಗೆ ಇಷ್ಟವಾದ ವಾಹನಾರೂಢನಾಗಿ ಉತ್ತಮವಾದ ಲೋಕಗಳಲ್ಲಿ ಸಂಚರಿಸುತ್ತಾನೆಂಬುದು ಖಂಡಿತ.

೩೦. ಧನಿಷ್ಠಾ ನಕ್ಷತ್ರಯುಕ್ತವಾದ ದಿನದಲ್ಲಿ ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನಿಗೆ ಎರಡು ಗೋವುಗಳನ್ನು ದಾನಮಾಡಬೇಕು. ಹೀಗೆ ಮಾಡಿದರೆ ತಾನು ಎಲ್ಲೆಲ್ಲಿ ಜನಿಸುವನೋ ಅಲ್ಲೆಲ್ಲಾ ಮರ್ಯಾದೆಯನ್ನು ಸಂಪಾದನೆಮಾಡುತ್ತಾನೆ.

ಪ್ರಾಪ್ನೋತ್ಯಪ್ಸರಸಾಂ ಲೋಕೇ ಪ್ರೇತ್ಯ ಗಂಧಾಂಶ್ಚ ಶೋಭನಾನ್ ।
ಪೂರ್ವಭಾದ್ರಪದಾಯೋಗೇ ರಾಜಮಾಷಾನ್ ಪ್ರದಾಪಯೇತ್ ॥೩೧॥

ಸರ್ವಭಕ್ಷ್ಯಫಲೋಪೇತಃ ಸ ವೈ ಪ್ರೇತ್ಯ ಸುಖೀ ಭವೇತ್ ।
ರತ್ನ ಮುತ್ತರಯೋಗೇ ತು ಸುವಸ್ತ್ರಂ ಯಃ ಪ್ರಯಚ್ಛತಿ ॥ ೩೨ ॥

ಪಿತ್ರ್ಯಾನ್ ಪ್ರೀಣಾತಿ ಸಕಲಾನ್ ಪ್ರೇತ್ಯ ಚಾನಂತ್ಯಮಶ್ನುತೇ ।
ಕಾಂಸ್ಯೋಪದೋಹನಾಂ ಧೇನುಂ ರೇವತ್ಯಾಂ ಯಃ ಪ್ರಯಚ್ಛತಿ ॥೩೩॥

ಸ ಪ್ರೇತ್ಯ ಕಾಮಾನಾದಾಯ ದಾತಾರಮುಪಗಚ್ಛತಿ ।
ರಥಮಶ್ವಸಮಾಯುಕ್ತಂ ದತ್ವಾಶ್ವಿನ್ಯಾಂ ನರೋತ್ತಮ ॥ ೩೪ ॥

---

೩೧. ಶತಭಿಷಾ ನಕ್ಷತ್ರಯುಕ್ತವಾದ ದಿನದಲ್ಲಿ ಅಗರುಯುಕ್ತವಾದ ಚಂದನವನ್ನು ದಾನಮಾಡಿದರೆ ಅಪ್ಸರರ ಲೋಕವನ್ನು ಸೇರಿ ಮನೋಹರ ಗಳಾದ ಸುಗಂಧದ್ರವ್ಯಗಳನ್ನು ಸಮೃದ್ಧಿಯಾಗಿ ಪಡೆಯುತ್ತಾನೆ.

೩೨. ಪೂರ್ವಾಭಾದ್ರಪದ ನಕ್ಷತ್ರಯೋಗವಿದ್ದಾಗ ರಾಜಮಾಷವನ್ನು ದಾನಮಾಡಬೇಕು. ಹೀಗೆ ಮಾಡಿದರೆ ಭಕ್ಷಣೀಯವಾದ ಸಕಲ ಫಲಗಳನ್ನೂ ಹೊಂದಿ ಸುಖಿಯಾಗಿರುತ್ತಾನೆ.

೩೩. ಉತ್ತರಾಭಾದ್ರಪದ ನಕ್ಷತ್ರಯುಕ್ತವಾಗಿರುವ ದಿನದಲ್ಲಿ ಒಳ್ಳೆಯ ಬಟ್ಟೆಯನ್ನು ಮತ್ತು ರತ್ನವನ್ನು ದಾನಮಾಡಬೇಕು. ಹೀಗೆ ದಾನಮಾಡಿ ದಾತನು ತನ್ನ ಸಕಲ ಪಿತೃಗಳನ್ನೂ ಸಂತೋಷಪಡಿಸುತ್ತಾನೆ. ತಾನೂ ಅನಂತ ವಾದ ಸೌಖ್ಯವನ್ನು ಪಡೆಯುತ್ತಾನೆ.

೩೪. ರೇವತಿ ನಕ್ಷತ್ರದ ದಿನದಲ್ಲಿ ಹಾಲು ಕರೆಯುವ ಕಂಚಿನ ಪಾತ್ರೆಯ ಸಮೇತ ಎಳಗರುವಿನ ಹಸುವನ್ನು ದಾನಮಾಡಿದರೆ ದಾನಮಾಡತಕ್ಕವನಿಗೆ ಸಕಲ ಭೋಗಗಳೂ ಲಭಿಸುವುವು.

ಹಸ್ತ್ಯಶ್ವರಥಸಂಪೂರ್ಣೋ ವರ್ಚಸ್ವೀ ಜಾಯತೇ ಕುಲೇ ।
ಭರಣೀಷು ದ್ವಿಜಾತಿಭ್ಯಸ್ತಿಲಧೇನುಂ ಪ್ರದಾಯ ವೈ ॥ ೩೫ ॥

ಗಾಪಃ ಪ್ರಭೂತಾಃ ಪ್ರಾಪ್ನೋತಿ ನರಃ ಪ್ರೇತ್ಯ ಯಶಸ್ತಥಾ ।
ಇತ್ಯೇಷ ದಕ್ಷಿಣೋದ್ದೇಶಃ ಪ್ರೋಕ್ತೋ ನಕ್ಷತ್ರಯೋಗತಃ ॥ ೩೬ ॥

ದೇವಕ್ಯೈ ನಾರದೇನೈವ ಮಯಾಜ ಕಥಿತಸ್ತವ ।
ಸರ್ವಪಾಪಪ್ರಶಮನಃ ಸರ್ವೋಪದ್ರವನಾಶನಃ ॥ ೩೭ ॥

ನ ಚಾತ್ರ ಕಾಲನಿಯಮೋ ನಕ್ಷತ್ರ ಪ್ರಕ್ರಮಸ್ತಥಾ ।
ವಿತ್ತಂ ಶ್ರದ್ಧಾ ಚ ರಾಜೇಂದ್ರ ಕಾರಣಂ ಚಾತ್ರ ಕಥ್ಯತೇ ॥ ೩೮ ॥

---

೩೫. ಅಶ್ವಿನೀ ನಕ್ಷತ್ರಯೋಗವಿರುವ ದಿನ ಕುದುರೆಯ ಸಮೇತವಾದ ರಥವನ್ನು ದಾನಮಾಡಿದವನು ಆನೆ, ಕುದುರೆ, ರಥ ಇವುಗಳೆಲ್ಲಾ ಸಮೃದ್ಧಿಯಾಗಿ ಉಳ್ಳವರ ವಂಶದಲ್ಲಿ ಹುಟ್ಟಿ ತೇಜಸ್ವಿಯಾಗುತ್ತಾನೆ.

೩೬. ಭರಣೀ ಯುಕ್ತವಾದ ದಿನ ಎಳ್ಳಿನಿಂದ ಮಾಡಿದ ಧೇನುವನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಹೀಗೆ ಮಾಡಿದರೆ ಮುಂದಿನ ಜನ್ಮದಲ್ಲಿ ಸಮೃದ್ಧಿಯಾಗಿ ಗೋವುಗಳನ್ನೂ ಮತ್ತು ಒಳ್ಳೆಯ ಯಶಸ್ಸನ್ನೂ ಪಡೆಯುತ್ತಾನೆ. ಈ ದಾನಗಳೆಲ್ಲವೂ ಅನುರೂಪ ದಕ್ಷಿಣಾಸಮೇತವಾಗಿರಬೇಕು. ಮತ್ತು ಆ ನಕ್ಷತ್ರ ಯೋಗಗಳಿರುವಾಗ ಮಾತ್ರ ಮಾಡತಕ್ಕದ್ದು ಆಗಿದೆ.

೩೭. ಅಯ್ಯಾ ಯುಧಿಷ್ಠಿರ! ಈ ವಿಚಾರವನ್ನು ನಾರದನು ದೇವಕಿಗೆ ಹೇಳಿದ್ದ ರೀತಿಯಲ್ಲಿಯೇ ನಾನು ನಿನಗೆ ಹೇಳಿರುತ್ತೇನೆ. ಈ ದಾನವು ಸರ್ವ ಪಾಪನಾಶಕವೂ ಸಕಲ ಉಪದ್ರವಗಳನ್ನು ಪರಿಹಾರಮಾಡತಕ್ಕದ್ದೂ ಆಗಿರುತ್ತದೆ.

೩೮. ಎಲೈ ರಾಜನೇ! ಈ ದಾನದಲ್ಲಿ ಕ್ರಮವಾಗಿ ಬರತಕ್ಕ ನಕ್ಷತ್ರಗಳ ಯೋಗವಲ್ಲದೆ ಬೇರೆ ಇನ್ನು ಯಾವ ಕಾಲದ ವಿಷಯವೂ ನಿರೂಪಿತವಾಗಿಲ್ಲ. ಮತ್ತು ಈ ದಾನಕ್ಕೆ ದ್ರವ್ಯಾನುಕೂಲ, ಶ್ರದ್ಧೆ, ಇವೇ ಮುಖ್ಯವಾಗಿರುತ್ತದೆ.

ಯದ್ಯಚ್ಛ ತೇ ಭಗವತಾ ಕಮಲೋದ್ಭವಸ್ಯ ।
ಪುತ್ರೇಣ ದಾನಮುದಿತಂ ಪ್ರಸಮೀಕ್ಷ್ಯ ವೇದಾನ್ ॥
ತದ್ಯೋ ದದಾತಿ ವಿಭವೇ ಸತಿ ಸಾಧುವೃತ್ತೇ ।
ಕಿಂ ತೇನ ಪಾರ್ಥ ನ ಕೃತಂ ಭವತೀಹಲೋಕೇ ॥ ೩೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ನಕ್ಷತ್ರದಾನವಿಧಿವರ್ಣನಂ
ನಾಮ ದ್ವಿನವತ್ಯುತ್ತರಶತತಮೋಽಧ್ಯಾಯಃ.



---

೩೯. ಅಯ್ಯಾ ಯುಧಿಷ್ಠಿರ! ಬ್ರಹ್ಮನ ಮಗನೂ ಪೂಜ್ಯನೂ ಆದ ನಾರದನು ವೇದಪರಾಮರ್ಶೆಯಿಂದ ದೇವಕಿಗೆ ಹೇಳಿದಂತಹ ದಾನವನ್ನು ಈಗ ನಿನಗೆ ಹೇಳಿದೆನು. ಈ ದಾನವನ್ನು ಯಥಾಶಕ್ತಿ ವಿಭವದಿಂದ ಆಚರಿಸುವ ಮನುಷ್ಯನು ಈ ಲೋಕದಲ್ಲಿ ಸಕಲ ದಾನಗಳನ್ನೂ ಮಾಡಿದಂತೆಯೇ ಆಗುತ್ತದೆ ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ
ಸಂವಾದದಲ್ಲಿ ನಕ್ಷತ್ರದಾನವಿಧಿವರ್ಣನೆ ಎಂಬ
ನೂರತ್ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಿನವತ್ಯುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ತಿಥಿದಾನಮಿದಾನೀಂ ತೇ ಕಥಯಾಮಿ ಯುಧಿಷ್ಠಿರ ।
ಸರ್ವಪಾಪಪ್ರಶಮನಂ ಸರ್ವವಿಘ್ನವಿನಾಶನಂ ॥ ೧ ॥

ಮಾನಸಂ ವಾಚಿಕಂ ಚಾಪಿ ಕರ್ಮಜಂ ಯದಘಂ ಭವೇತ್ ।
ಸರ್ವಂ ಪ್ರಶಮಮಾಯಾತಿ ದಾನೇನಾನೇನ ಪಾಂಡವ ॥ ೨ ॥

---

## ನೂರತೊಂಭತ್ತಮೂರನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಯಾವ ತಿಥಿಯು ಯೋಗವಿರುವಾಗ ಯಾವ ದಾನವನ್ನು ಮಾಡಬೇಕು? ಮತ್ತು ಅದರಿಂದ ಸಕಲ ಪಾಪಗಳೂ ಮತ್ತು ಸಕಲ ವಿಘ್ನಗಳೂ ಹೇಗೆ ನಿವಾರಣೆಯಾಗುವವು ಎಂಬುದನ್ನು ಈಗ ನಾನು ನಿನಗೆ ಹೇಳುತ್ತೇನೆ.

೨. ಅಯ್ಯಾ ಪಾಂಡುಪುತ್ರನಾದ ಯುಧಿಷ್ಠಿರ! ಈ ದಾನಮಾಡುವುದರಿಂದ ಮಾನಸಿಕ (ಮನಸ್ಸಿನಲ್ಲಿ ಸಂಭವಿಸಿದ) ವಾಚಿಕ (ಮಾತಿನಿಂದ ಸಂಭವಿಸಿದ) ಮತ್ತು ಕರ್ಮಕೃತ (ಕಾರ್ಯದಿಂದ ಸಂಭವಿಸಿದ) ಸಕಲ ಪಾಪಗಳೂ ನಿವಾರಣೆಯಾಗುವುವು.

ಶ್ರಾವಣೇ ಕಾರ್ತಿಕೇ ಚೈತ್ರೇ ವೈಶಾಖೇ ಫಾಲ್ಗುನೇ ತಥಾ ।
ಸಿತಪಕ್ಷಾತ್ಪ್ರಭೃತ್ಯೇವ ದಾತವ್ಯಂ ಪುಣ್ಯವರ್ಧನಂ ॥ ೩ ॥

ವಿತ್ತಂ ಶ್ರದ್ಧಾಸಹಾಯಶ್ಚ ಪಾತ್ರಸ್ಪ್ರಾಪ್ತಿಸ್ತಥೈವ ಚ ।
ದಾನಕಾಲಃ ಸದೈವೇಹ ಕಥಿತಸ್ತತ್ವದರ್ಶಿಭಿಃ ॥ ೪ ॥

ತೀರ್ಥೇ ದೇವಾಲಯೇ ಗೋಷ್ಠೇ ಗೃಹೇ ವಾ ನಿಯತಾತ್ಮವಾನ್ ।
ಯದ್ದದಾತಿ ನರಶ್ರೇಷ್ಠಸ್ತದಾನಂತ್ಯಾಯ ಕಲ್ಪತೇ ॥ ೫ ॥

ಪ್ರತಿಪತ್ಸು ದ್ವಿಜಾನ್ಪೂಜ್ಯಾನ್ಪೂಜಯಿತ್ವಾ ಪ್ರಜಾಪತಿಂ ।
ಸೌವರ್ಣಮರವಿಂದಂ ಚ ಕಾರಯಿತ್ವಾಷ್ಟಪತ್ರಕಂ ॥ ೬ ॥

ಕೃತ್ವಾ ಚೌದುಂಬರೇ ಪಾತ್ರೇ ಸುಗಂಧಘೃತಪೂರಿತೇ ।
ಪುಷ್ಪೈರ್ಧೂಪೈಃ ಪೂಜಯಿತ್ವಾ ವಿಪ್ರಾಯ ಪ್ರತಿಪಾದಯೇತ್ ॥ ೭ ॥

---

೩. ಈ ದಾನವು ಪುಣ್ಯವರ್ಧಕವಾದುದು. ಇದನ್ನು ಶ್ರಾವಣ, ಕಾರ್ತಿಕ, ಚೈತ್ರ, ವೈಶಾಖ, ಫಾಲ್ಗುಣ ಈ ಮಾಸಗಳಲ್ಲಿ ಶುಕ್ಲಪಕ್ಷದಿಂದ ಆರಂಭಮಾಡಿ ಮುಂದುವರಿಸಬೇಕು.

೪. ದ್ರವ್ಯಾನುಕೂಲ, ಶ್ರದ್ಧೆ, ಜನಸಹಾಯ, ದಾನತೆಗೆದುಕೊಳ್ಳಲು ಸತ್ಪಾತ್ರನು ಸಿಕ್ಕುವುದು, ಇವುಗಳು ಯಾವಾಗ ಒದಗುವವೋ ಅದೇ ಈ ದಾನಕ್ಕೆ ಅರ್ಹವಾದ ಕಾಲವೆಂದು ತತ್ವಜ್ಞಾನಿಗಳು ಹೇಳಿರುತ್ತಾರೆ.

೫. ದಾನಮಾಡಲು ಅಪೇಕ್ಷೆಯುಳ್ಳ ಮಾನವನು ಪುಣ್ಯಕ್ಷೇತ್ರಗಳು, ದೇವಸ್ಥಾನ, ಹಸುವಿನ ಕೊಟ್ಟಿಗೆ ಅಥವಾ ಮನೆ ಇಂತಹ ಸ್ಥಳಗಳಲ್ಲಿ ದಾನ ಮಾಡಿದರೆ ಅದು ಅನಂತ ಫಲದಾಯಕವಾಗುತ್ತದೆ.

೬. ಪ್ರತಿಪತ್ತಿನ ದಿವಸ ಪೂಜ್ಯರಾದ ಬ್ರಾಹ್ಮಣರನ್ನು ಪೂಜೆಮಾಡಿ ಅನಂತರ ಚಿನ್ನದಿಂದ ಮಾಡಿದ ಅಷ್ಟದಳಪದ್ಮದಲ್ಲಿ ಬ್ರಹ್ಮನನ್ನು ಪೂಜಿಸಬೇಕು.

೭. ಸುವಾಸನೆಯಿಂದ ಕೂಡಿದ ತುಪ್ಪವನ್ನು ಅತ್ತಿಮರದ ಪಾತ್ರೆಯಲ್ಲಿ ತುಂಬಿ ಇಟ್ಟು ಅದನ್ನು ಹೂ, ಧೂಪ ಇತ್ಯಾದಿಗಳಿಂದ ಅರ್ಚಿಸಿ, ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನಿಗೆ ದಾನಮಾಡಬೇಕು.

ಅನೇನ ವಿಧಿನಾ ದತ್ವಾ ಕಮಲಂ ಕಮಲಾಲಯಂ ।
ಈಪ್ಸಿತಾನ್ಲಭತೇ ಕಾಮಾನ್ನಿಷ್ಕಾಮೋ ಬ್ರಹ್ಮಸಾತ್ಮಕಾಂ ॥ ೮ ॥

ವಹ್ನಿಂ ಪೂಜ್ಯ ದ್ವಿತೀಯಾಯಾಂ ಭೂರ್ಭುವಃಸ್ವರಿತಿಕ್ರಮಾತ್ ।
ತಿಲಾಜ್ಯೇನ ಶತಂ ಹುತ್ವಾ ದತ್ವಾ ಪೂರ್ಣಾಹುತಿಂ ತತಃ ॥ ೯ ॥

ವೈಶ್ವಾನರಂ ತು ಸೌವರ್ಣಂ ಸ್ಥಾಪಯೇತ್ತಾಮ್ರಭಾಜನೇ ।
ಗುಡಾಜ್ಯಪೂರಿತೇ ರಾಜಂಸ್ತೋಯಪೂರ್ಣಘಟೋಪರಿ ॥ ೧೦ ॥

ಪೂಜಯಿತ್ವಾ ವಸ್ತ್ರಮಾಲ್ಯೈ ರ್ಭಕ್ಷ್ಯಭೋಜ್ಯೈರನೇಕಧಾ ।
ತತಸ್ತಂ ಬ್ರಾಹ್ಮಣೇ ದದ್ಯಾದ್ವಹ್ನಿರ್ಮೇ ಪ್ರೀಯತಾಮಿತಿ ॥ ೧೧ ॥

ಯಾವಜ್ಜೀವಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಮೃತೋ ವಹ್ನಿಪುರಂ ಯಾತಿ ಪ್ರಾಹೇದಂ ನಾರದೋ ಮುನಿಃ ॥೧೨॥

---

೮. ಈ ವಿಧಿಯನ್ನನುಸರಿಸಿ ಕಮಲೋದ್ಭವನಾದ ಬ್ರಹ್ಮನನ್ನು ಕಮಲ ಸಮೇತ ದಾನಮಾಡಿದರೆ ಆತನ ಇಷ್ಟಾರ್ಥಗಳು ನೆರವೇರುತ್ತವೆ. ಇದರಿಂದ ಆತನು ನಿಷ್ಕಾಮಿಯಾಗಿ ಬ್ರಹ್ಮಸಾಯುಜ್ಯನನ್ನು ಪಡೆಯುತ್ತಾನೆ.

೯. ದ್ವಿತೀಯಾಯುಕ್ತವಾದ ದಿನದಲ್ಲಿ ಅಗ್ನಿಯನ್ನು ಪೂಜಿಸಿ ಕ್ರಮವಾಗಿ 'ಭೂರ್ಭುವಸ್ವಃ' ಎಂಬ ಮಂತ್ರಗಳಿಂದ ತಿಲಮಿಶ್ರವಾದ ಆಜ್ಯದಿಂದ ನೂರು ಆಹುತಿಗಳನ್ನು ಹೋಮಮಾಡಿ ಅನಂತರ ಪೂರ್ಣಾಹುತಿಯನ್ನು ಕೊಡಬೇಕು.

೧೦. ಎಲೈ ರಾಜನೇ! ಸುವರ್ಣದಿಂದ ಅಗ್ನಿಯ ಪ್ರತಿಮೆಯನ್ನು ನಿರ್ಮಿಸಿ ಅದನ್ನು ಬೆಲ್ಲ ಮತ್ತು ತುಪ್ಪ ಇವುಗಳ ಸಹಿತವಾದ ತಾಮ್ರದ ಬಟ್ಟಲಿನಲ್ಲಿಟ್ಟು ಆ ಪಾತ್ರೆಯನ್ನು ನೀರು ತುಂಬಿದ ಕಲಶದ ಮೇಲೆ ಇರಿಸಬೇಕು.

೧೧. ಅದನ್ನು ವಸ್ತ್ರ, ಹೂಮಾಲೆ ಮತ್ತು ಅನೇಕ ಭಕ್ಷ್ಯ ಭೋಜ್ಯ ನೈವೇದ್ಯ, ಇವುಗಳಿಂದ ಪೂಜೆಮಾಡಿ ವಹ್ನಿಯು ಸುಪ್ರೀತನಾಗಲಿ ಎಂದು ಹೇಳಿ ಆ ವಹ್ನಿಯ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೧೨. ಈ ರೀತಿ ಮಾಡಿದರೆ ತನ್ನ ಜೀವಮಾನದಲ್ಲಿ ಮಾಡಿದ ಪಾಪಗಳೆಲ್ಲವನ್ನೂ ಹೋಗಲಾಡಿಸಿಕೊಂಡು ಮೃತನಾದ ಮೇಲೆ ಅಗ್ನಿದೇವನ ರಾಜಧಾನಿಯನ್ನು ಸೇರುತ್ತಾನೆ. ಹೀಗೆಂಬದಾಗಿ ನಾರದಮುನಿಯು ಹೇಳಿದನು.

ತೃತೀಯಾಯಾಂ ಮಹಾರಾಜ ರಾಧಾಂ ಸ್ವರ್ಣಮಯೀಂ ಶುಭಾಂ ।
ಸ್ಥಾಪಯಿತ್ವಾ ತಾಮ್ರಪಾತ್ರೇ ಲವಣೋಪರಿ ವಿನ್ಯಸೇತ್ ॥ ೧೩ ॥

ಜೀರಕಂ ಕಟುಕಂ ಚೈವ ಗುಡಂ ಪಾರ್ಶ್ವೇಷು ದಾಪಯೇತ್ ।
ರಕ್ತವಸ್ತ್ರಯುಗಚ್ಛನ್ನಾಂ ಕುಂಕುಮೇನ ವಿಭೂಷಿತಾಂ ॥ ೧೪ ॥

ಪುಷ್ಪಧೂಪೈಃ ಸನೈವೇದ್ಯೈಃ ಪೂಜಯಿತ್ವಾ ದ್ವಿಜಾತಯೇ ।
ದತ್ವಾ ಯತ್ಫಲಮಾಪ್ನೋತಿ ಪಾರ್ಥ ತತ್ಕೇನ ವರ್ಣ್ಯತೇ ॥ ೧೫ ॥

ಪ್ರಾಸಾದಾ ಯತ್ರ ಸೌವರ್ಣಾ ನದ್ಯಃ ಪಾಯಸಕರ್ದಮಾಃ ।
ಗಂಧರ್ವಾಪ್ಸರಸೋ ಯತ್ರ ತತ್ರ ತೇ ಯಾಂತಿ ಮಾನವಾಃ ॥ ೧೬ ॥

---

೧೩. ಅಯ್ಯಾ ಮಹಾರಾಜ ! ಶುಭವಾದ ರಾಧಾಪ್ರತಿಮೆಯನ್ನು ಚಿನ್ನದಿಂದ ಮಾಡಿಸಿ ಅದನ್ನು ತದಿಗೆಯ ದಿನ ತಾಮ್ರ ಪಾತ್ರೆಯಲ್ಲಿಟ್ಟು ಅದನ್ನು ಉಪ್ಪಿನ ಮೇಲೆ ಇರಿಸಬೇಕು.

೧೪. ಜೀರಿಗೆ, ಉಪ್ಪು, ಬೆಲ್ಲ ಇವುಗಳನ್ನು ಅದರ ಪಾರ್ಶ್ವದಲ್ಲಿ ಇರಿಸಬೇಕು. ಮತ್ತು ಆ ಪ್ರತಿಮೆಯನ್ನು ಎರಡು ರಕ್ತವಸ್ತ್ರದಿಂದ ಆಚ್ಛಾದಿಸಬೇಕು. ಮತ್ತು ಕುಂಕುಮದಿಂದ ಅಲಂಕರಿಸಬೇಕು.

೧೫. ಅನಂತರ ಅದನ್ನು ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ಅರ್ಚಿಸಬೇಕು. ಅನಂತರ ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಅಯ್ಯಾ ಯುಧಿಷ್ಠಿರ! ಈ ಪ್ರಕಾರ ದಾನಮಾಡಿದರೆ ಉಂಟಾಗತಕ್ಕ ಪುಣ್ಯಫಲವನ್ನು ಯಾರುತಾನೆ ವರ್ಣಿಸಿಯಾರು ?

೧೬. ಈ ದಾತೃವು ವಿಶಾಲವಾದ ಸುವರ್ಣದ ಉಪ್ಪರಿಗೆಗಳು, ಪಾಯಸವೇ ಕೆಸರಾಗಿ ಉಳ್ಳ ನದಿಗಳು, ಗಂಧರ್ವಸ್ತ್ರೀಯರು, ಅಪ್ಸರಸ್ತ್ರೀಯರು, ಇತ್ಯಾದಿ ವೈಭವಗಳಿಂದ ಕೂಡಿದ ಸ್ವರ್ಗಕ್ಕೆ ಹೋಗುತ್ತಾರೆ.

ಸ್ವರ್ಗಾದಿಹೈತ್ಯ ಸಂಸಾರೇ ಸುರೂಪಃ ಸುಭಗೋ ಭವೇತ್ ।
ದಾತಾ ಭೋಕ್ತಾ ಬಹುಧನಃ ಪುತ್ರಪೌತ್ರಸಮನ್ವಿತಃ ॥ ೧೭ ॥

ನಾರೀ ವಾ ತದ್ಗುಣೈರ್ಯುಕ್ತಾ ಭವತೀಹ ನ ಸಂಶಯಃ ।
ಚತುರ್ಥ್ಯಾಂ ವಾರಣಂ ಹೈಮಂ ಪಲಾದೂರ್ಧ್ವಂ ಸುಶೋಭನಂ ॥೧೮॥

ಕಾರಯಿತ್ವಾಂಕುಶಯುತಂ ತಿಲದ್ರೋಣೋಪರಿ ನ್ಯಸೇತ್ ।
ವಸ್ತ್ರೈಃ ಪುಷ್ಪೈಃ ಪ್ರಪೂಜಯಿತ್ವಾ ನೈವೇದ್ಯಂ ವಿನಿವೇದ್ಯ ಚ ॥ ೧೯ ॥

ತತಸ್ತು ಬ್ರಾಹ್ಮಣೇ ದದ್ಯಾದ್ಗಣೇಶಃ ಪ್ರೀಯತಾಮಿತಿ ।
ಕಾರ್ಯಾರಂಭೇಷು ಸರ್ವೇಷು ತಸ್ಯ ವಿಘ್ನಂ ನ ಜಾಯತೇ ॥ ೨೦ ॥

ವಾರಣಾಃ ಸಪ್ತ ಜನ್ಮಾನಿ ಭವಂತಿ ಮದವಿಹ್ವಲಾಃ ।
ವಾರಣೇಂದ್ರಸಮಾರೂಢಸ್ತ್ರೈಲೋಕ್ಯವಿಜಯೀ ಭವೇತ್ ॥ ೨೧ ॥

---

೧೭. ಈ ಪುಣ್ಯವು ಕ್ಷಯಿಸಿದನಂತರ ಈ ಲೋಕದಲ್ಲಿ ಜನಿಸಿ ಸುರೂಪಿಯೂ, ಐಶ್ವರ್ಯಶಾಲಿಯೂ, ದಾನಶೀಲನೂ, ಭೋಗಿಯೂ, ಮಕ್ಕಳು ಮತ್ತು ಮೊಮ್ಮಕ್ಕಳುಗಳಿಂದ ಕೂಡಿದವನೂ ಆಗುತ್ತಾನೆ.

೧೮. ನಾರಿಯು ಈ ಪ್ರಕಾರ ದಾನವನ್ನು ಮಾಡಿದರೆ ಅದೇರೀತಿ ಫಲಗಳು ಉಂಟಾಗುತ್ತವೆಂಬುದು ಖಂಡಿತ.

೧೯–೨೦. ಒಂದು ಪಲಕ್ಕಿಂತ ಹೆಚ್ಚಾದ ಸುವರ್ಣದಿಂದ ಆನೆಯನ್ನು ನಿರ್ಮಾಣಮಾಡಿಸಿ ಮನೋಹರವಾಗಿರುವ ಗೌಸಿನ ಬಟ್ಟೆಯಿಂದ ಅಲಂಕರಿಸಿ ಚತುರ್ಥೀ ತಿಥಿಯಲ್ಲಿ ಅದನ್ನು ಒಂದುದ್ರೋಣ ಪರಿಮಿತಿಯುಳ್ಳ ಎಳ್ಳಿನಮೇಲಿರಿಸಿ ವಸ್ತ್ರಾದಿಗಳಿಂದ ಅರ್ಚನೆಮಾಡಿ ನೈವೇದ್ಯವನ್ನು ಸಮರ್ಪಿಸಬೇಕು. ಬಳಿಕ "ಗಣೇಶನು ಸುಪ್ರೀತನಾಗಲಿ" ಎಂದು ಹೇಳಿ ಅದನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಈರೀತಿ ಮಾಡಿದರೆ ಯಾವ ಕಾರ್ಯಗಳನ್ನು ಆರಂಭಮಾಡಿದಾಗ್ಯೂ ಆತನಿಗೆ ವಿಘ್ನವುಂಟಾಗುವುದಿಲ್ಲ.

೨೧. ಮತ್ತು ಆತನು ಮುಂದಿನ ಏಳು ಜನ್ಮಗಳಲ್ಲಿಯೂ ಮದವೇರಿ ಕೊಬ್ಬಿದ ಆನೆಗಳುಳ್ಳವನಾಗಿರುತ್ತಾನೆ. ಅಲ್ಲದೆ ಗಜೇಂದ್ರನನ್ನು ಹತ್ತಿ ಮೂರು ಲೋಕಗಳನ್ನೂ ಗೆಲ್ಲುವ ಜಯಶಾಲಿಯಾಗುತ್ತಾನೆ.

**ಪಂಚಮ್ಯಾಂ ಪನ್ನಗಂ ಚೈವ ಸ್ವರ್ಣೇನೈಕೇನ ಕಾರಯೇತ್ ।**
**ಕ್ಷೀರಾಜ್ಯಪಾತ್ರಮಧ್ಯಸ್ಥಂ ಪೂಜಯಿತ್ವಾ ಪ್ರದಾಪಯೇತ್ ॥ ೨೨ ॥**

**ದ್ವಿಜಂ ಸಂಪೂಜ್ಯ ವಾಸೋಭಿಃ ಪ್ರಣಿಪತ್ಯ ಕ್ಷಮಾಪಯೇತ್ ।**
**ಇಹ ಲೋಕೇ ಪರೇ ಚೈವ ದಾನಮೇತತ್ಸುಖಾವಹಂ ॥ ೨೩ ॥**

**ನಾಗೋಪದ್ರವವಿದ್ರಾವಿ ಸರ್ವದುಷ್ಟನಿಬರ್ಹಣಂ ।**
**ಪ್ರಾಯಶ್ಚಿತ್ತಂ ತಥಾ ಪ್ರೋಕ್ತಂ ನಾಗದಷ್ಟಸ್ಯ ಶಂಭುನಾ ॥ ೨೪ ॥**

**ಷಷ್ಠ್ಯಾಂ ಶಕ್ತಿಸಮೋಪೇತಂ ಕುಮಾರಂ ಶಿಖಿವಾಹನಂ ।**
**ಕಾರಯಿತ್ವಾ ಯಥಾಶಕ್ತ್ಯಾ ಹೇಮಮಾಲಾವಿಭೂಷಿತಂ ॥ ೨೫ ॥**

---

೨೨. ಒಂದುಪಲ ತೂಕ ಸುವರ್ಣದಿಂದ ಒಂದು ಸರ್ಪವನ್ನು ಮಾಡಿಸಿ ಅದನ್ನು ಪಂಚಮಿ ತಿಥಿಯಲ್ಲಿ ಹಾಲು, ತುಪ್ಪ ಇವನ್ನು ಹಾಕಿದ ಪಾತ್ರೆಯ ಮಧ್ಯ ದಲ್ಲಿಟ್ಟು ಅರ್ಚನೆಮಾಡಿ ಅನಂತರ ಬ್ರಾಹ್ಮಣನಿಗೆ ದಾನಮಾಡಬೇಕು.

೨೩. ಆ ಬ್ರಾಹ್ಮಣನನ್ನು ವಸ್ತ್ರಭೂಷಣಗಳಿಂದ ಪೂಜಿಸಿ, ನಮಸ್ಕರಿಸಿ ಕ್ಷಮಾಪಣೆಯನ್ನು ಬೇಡಬೇಕು. ಈ ದಾನವು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸಹ ಸೌಖ್ಯದಾಯಕವಾಗಿರುತ್ತದೆ.

೨೪. ಇದು ಸರ್ಪದಿಂದ ಉಂಟಾಗಬಹುದಾದ ಉಪದ್ರವವನ್ನೂ ಮತ್ತು ಸಕಲ ದೋಷಗಳನ್ನೂ ಕೂಡ ನಾಶಪಡಿಸುತ್ತದೆ. ಸರ್ಪ ಕಚ್ಚಿದ ಮನುಷ್ಯನು ಪ್ರಾಯಶ್ಚಿತ್ತಾರ್ಥವಾಗಿ ಈ ಸುವರ್ಣದ ನಾಗಪ್ರತಿಮೆಯನ್ನು ದಾನಮಾಡ ಬೇಕೆಂದು ಈಶ್ವರನೇ ಹೇಳಿದ್ದಾನೆ.

೨೫. ಶಕ್ತ್ಯಾಯುಧವನ್ನು ಧರಿಸಿದವನೂ ಶಿಖಿವಾಹನನೂ ಆಗಿರುವಂತೆ ಷಣ್ಮುಖಪ್ರತಿಮೆ ನಿರ್ಮಿಸಿ ಷಷ್ಠಿಯ ದಿವಸ ತನ್ನ ಶಕ್ತ್ಯನುಸಾರ ಸುವರ್ಣದ ಕಂಠಹಾರದಿಂದ ಶೃಂಗರಿಸಬೇಕು.

ತಂಡುಲೇನಾಥ ಶಿಖರೇ ವಾಸೋಭಿಃ ಪೂಜ್ಯ ಶಕ್ತಿತಃ ।
ಷಷ್ಠ್ಯಾಂ ಸ್ಕಂದಂ ಯಥಾಶಕ್ತಿ ಕೃತ್ವಾ ಸ್ಕಂದಂ ಹಿರಣ್ಮಯಂ ॥ ೨೬ ॥

ಪೂಜಯಿತ್ವಾ ಗಂಧಪುಷ್ಪಧೂಪೈರ್ನೈವೇದ್ಯತಸ್ತಥಾ ।
ನಮಸ್ಕೃತ್ಯ ತತೋ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ॥ ೨೭ ॥

ಇಹ ಭೂತಿಂ ಪರಾಂ ಪ್ರಾಪ್ಯ ಪ್ರೇತ್ಯ ಸ್ವರ್ಗೇ ಮಹೀಯತೇ ।
ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣೋ ಬ್ರಹ್ಮಲೋಕತಾಂ ॥೨೮॥

ಸಪ್ತಮ್ಯಾಂ ಭಾಸ್ಕರಂ ಪೂಜ್ಯ ಬ್ರಾಹ್ಮಣಾನಶ್ವಮುತ್ತಮಂ ।
ದದ್ಯಾದಲಂಕೃತಗ್ರೀವಂ ಸಪರ್ಯಾಣಂ ಸದಕ್ಷಿಣಂ ॥ ೨೯ ॥

---

೨೬. ಆ ಕುಮಾರಸ್ವಾಮಿಯ ಪ್ರತಿಮೆಯನ್ನೂ ಯಥಾಶಕ್ತಿ ಸುವರ್ಣದಿಂದಲೇ ನಿರ್ಮಿಸಿ ಅದನ್ನು ಅಕ್ಕಿಯ ರಾಶಿಯ ಮೇಲೆ ಇಟ್ಟು ವಸ್ತ್ರಾದಿಗಳಿಂದಲೂ.

೨೭. ಮತ್ತು ಗಂಧ, ಹೂ, ಧೂಪ ಇತ್ಯಾದಿಗಳಿಂದಲೂ ಅರ್ಚನೆಮಾಡಿ ನೈವೇದ್ಯವನ್ನು ಸಮರ್ಪಿಸಿ ಅನಂತರ ಸಪತ್ನೀಕನಾಗಿರುವ ಬ್ರಾಹ್ಮಣನನ್ನು ಪೂಜಿಸಿ ಆತನಿಗೆ ದಾನಮಾಡಬೇಕು.

೨೮. ಈ ಪ್ರಕಾರ ದಾನಮಾಡಿದರೆ ಈ ಲೋಕದಲ್ಲಿ ಅತಿಶಯವಾದ ಸಂಪತ್ತನ್ನು ಅನುಭವಿಸಿ ದೇಹಾವಸಾನದಲ್ಲಿ ಸ್ವರ್ಗಲೋಕದಲ್ಲಿ ಪೂಜ್ಯನಾಗುತ್ತಾನೆ. ಶೂದ್ರನು ಈ ದಾನವನ್ನು ಮಾಡಿದರೆ ಅವನು ಬ್ರಾಹ್ಮಣನಾಗಿ ಜನಿಸುತ್ತಾನೆ. ಬ್ರಾಹ್ಮಣನು ಈ ದಾನಮಾಡಿದರೆ ಆತನು ಶಾಶ್ವತವಾಗಿ ಬ್ರಹ್ಮಲೋಕವನ್ನು ಪಡೆಯುತ್ತಾನೆ.

೨೯. ಸಪ್ತಮಿಯ ದಿನ ಸೂರ್ಯನನ್ನು ಪೂಜಿಸಿ ಉತ್ತಮವಾದ ಸುವರ್ಣದ ಅಶ್ವವನ್ನು ಚಿನ್ನದ ಕಡಿವಾಣದಿಂದ ಅಲಂಕಾರಮಾಡಿ ಪೂಜಿಸಿ ದಕ್ಷಿಣೆ ಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು.

**ಸೂರ್ಯಲೋಕಮವಾಪ್ನೋತಿ ಸೂರ್ಯೇಣ ಸಹ ಮೋದತೇ ।**
**ಗಂಧರ್ವಾಸ್ತುಷ್ಟಿಮಾಯಾಂತಿ ದತ್ತೇಽಶ್ವೇ ಸಮಲಂಕೃತೇ ॥ ೩೦ ॥**

**ಅಷ್ಟಮ್ಯಾಂ ವೃಷಭಂ ಶ್ವೇತಮವ್ಯಂಗಾಂಗಂ ಧುರಂಧರಂ ।**
**ಸಿತವಸ್ತ್ರಯುಗಚ್ಛನ್ನಂ ಘಂಟಾಭರಣಭೂಷಿತಂ ॥ ೩೧ ॥**

**ದದ್ಯಾತ್ಪ್ರಣಮ್ಯ ವಿಪ್ರಾಯ ಪ್ರೀಯತಾಂ ವೃಷಭಧ್ವಜಃ ।**
**ಪ್ರದಕ್ಷಿಣಂ ತತಃ ಕೃತ್ವಾ ಆದ್ವಾರಾಂತಮನುವ್ರಜೇತ್ ॥ ೩೨ ॥**

**ದಾನೇನಾನೇನ ನೃಪತೇ ಶಿವಲೋಕೋ ನ ದುರ್ಲಭಃ ।**
**ವೃಷಸ್ಕಂಧೇ ಪ್ರತಿಷ್ಠಂತಿ ಭುವನಾನಿ ಚತುರ್ದಶ ॥ ೩೩ ॥**

---

೩೦. ಈ ಪ್ರಕಾರ ಅಲಂಕೃತವಾದ ಅಶ್ವವನ್ನು ದಾನಮಾಡಿದರೆ ಆತನು ಸೂರ್ಯಲೋಕವನ್ನು ಸೇರಿ ಅಲ್ಲಿ ಸೂರ್ಯನೊಡನೆ ಆನಂದಪಡುತ್ತಾನೆ. ಮತ್ತು ಇದರಿಂದ ಗಂಧರ್ವರೂ ಸಹ ಸಂತುಷ್ಟರಾಗುವರು.

೩೧. ಅಷ್ಟಮಿಯ ದಿವಸ ಸರಿಯಾದ ಅವಯವಗಳುಳ್ಳದೂ ಮತ್ತು ಭಾರವನ್ನು ವಹಿಸಲು ಸಾಮರ್ಥ್ಯವುಳ್ಳದೂ ಆದ ಬಿಳಿಯ ಎತ್ತನ್ನು ಶುಭ್ರವಸ್ತ್ರ ದ್ವಯದಿಂದ ಆಚ್ಛಾದನೆಮಾಡಿ, ಕುತ್ತಿಗೆಗೆ ಘಂಟೆಯನ್ನು ಕಟ್ಟಿ ಶೃಂಗರಿಸ ಬೇಕು.

೩೨. ಅದನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ವೃಷಭಧ್ವಜನಾದ ಶಿವನು ಪ್ರೀತನಾಗಲಿ ಎಂಬ ಉದ್ದೇಶದಿಂದ ಬ್ರಾಹ್ಮಣನಿಗೆ ನಮಸ್ಕರಿಸಿ ದಾನಮಾಡ ಬೇಕು. ಮನೆಯ ಹೊರಬಾಗಿಲಿನವರೆಗೂ ಆತನನ್ನು ಅನುಸರಿಸಿ ಹೋಗ ಬೇಕು.

೩೩. ಅಯ್ಯಾ ಯುಧಿಷ್ಠಿರ! ಪ್ರಾಪ್ತಿಗೆ ದುರ್ಲಭವಾದ ಶಿವಲೋಕವು ಈ ವೃಷಭದಾನದಿಂದ ಸುಲಭದಾಗಿ ಲಭಿಸುವುದು. ಈ ವೃಷಭದ ಸ್ಕಂಧಪ್ರದೇಶ ದಲ್ಲಿ ಹದಿನಾಲ್ಕು ಲೋಕಗಳೂ ನೆಲಸಿರುತ್ತವೆ.

ತಸ್ಮಾದ್ವೃಷಭದಾನೇನ ದತ್ತಾ ಭವತಿ ಭಾರತೀ
ನವಮ್ಯಾಂ ಕಾಂಚನಂ ಸಿಂಹಂ ಕಾರಯಿತ್ವಾ ಸ್ವಶಕ್ತಿತಃ ॥ ೩೪ ॥

ಮುಕ್ತಾಫಲಾಷ್ಟಕಯುತಂ ನೀಲವಸ್ತ್ರಾವಗುಂಠಿತಂ ।
ದದ್ಯಾದ್ದೇವೀಮನುಸ್ಮೃತ್ಯ ದುಷ್ಟದೈತ್ಯನಿಬರ್ಹಣೀಂ ॥ ೩೫ ॥

ದ್ವಿಜಾತಿಪ್ರವರಾಯೇತ್ಥಂ ಸರ್ವಾನ್ಕಾಮಾನ್ ಸಮಶ್ನುತೇ ।
ಕಾಂತಾರವನದುರ್ಗೇಷು ಚೌರವ್ಯಾಲಾಕುಲೇ ಪಥಿ ॥ ೩೬ ॥

ಹಿಂಸಕಾಸ್ತಂ ನ ಹಿಂಸಂತಿ ದಾನಸ್ಯಾಸ್ಯ ಪ್ರಭಾವತಃ ।
ಮೃತೋ ದೇವೀಪುರಂ ಯಾತಿ ಪೂಜ್ಯಮಾನಃ ಸುರಾಸುರೈಃ ॥ ೩೭ ॥

---

೩೪. ಇಂಥಾ ವೃಷಭವನ್ನು ದಾನಮಾಡಿದರೆ ಸಮಸ್ತ ಭೂಮಿಯನ್ನೇ ದಾನಮಾಡಿದಂತಾಗುತ್ತದೆ.

೩೫–೩೬. ನವಮಿಯ ದಿವಸ ತನ್ನ ಶಕ್ತ್ಯನುಸಾರ ಚಿನ್ನದಿಂದ ಒಂದು ಸಿಂಹವನ್ನು ನಿರ್ಮಿಸಿ ಎಂಟು ಮುಕ್ತಾಫಲಯುಕ್ತವಾಗಿ ಮಾಡಿ ನೀಲಿಯ ಬಟ್ಟೆಯನ್ನು ಹೊದ್ದಿಸಿ, ದುಷ್ಟದೈತ್ಯರನ್ನು ವಿನಾಶಮಾಡಿದ ದೇವಿಯನ್ನು ಧ್ಯಾನಿಸಿ ತತ್ಪ್ರೀತ್ಯರ್ಥವಾಗಿ ಶ್ರೇಷ್ಠನಾದ ಬ್ರಾಹ್ಮಣನಿಗೆ ಆ ಸಿಂಹಪ್ರತಿಮೆಯನ್ನು ದಾನ ಮಾಡಬೇಕು.

೩೭. ಈ ಪ್ರಕಾರ ದಾನಮಾಡಿದರೆ ಈ ದಾನದ ಪ್ರಭಾವದಿಂದ ಆತನ ಸಕಲ ಇಷ್ಟಾರ್ಥಗಳೂ ಕೈಗೂಡುವುವಲ್ಲದೆ ಜನಸಂಚಾರವಿಲ್ಲದಿರುವ ಅರಣ್ಯ, ದುರ್ಗ ಮತ್ತುಕಳ್ಳರು, ಕಾಡಾನೆ ಇವುಗಳಿಂದ ವ್ಯಾಪ್ತವಾಗಿರುವ ಮಾರ್ಗ ಇಂಥ ಸನ್ನಿವೇಶಗಳಲ್ಲಿ ಸಂಚರಿಸಿದಾಗ್ಯೂ ಯಾವ ಪ್ರಾಣಿಗಳೂ ಆತನನ್ನು ಹಿಂಸಿಸುವುದಿಲ್ಲ. ಆತನು ಮೃತನಾದನಂತರ ಆ ದೇವಿಯ ಲೋಕವನ್ನು ಸೇರಿ ಅಲ್ಲಿ ದೇವತೆಗಳು ಮತ್ತು ರಾಕ್ಷಸರು ಇವರುಗಳಿಂದ ಪೂಜಿತನಾಗುತ್ತಾನೆ.

ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।
ದಶಮ್ಯಾಂ ನೃಪಶಾರ್ದೂಲ ದಶಾಶಾಃ ಸ್ವರ್ಣನಿರ್ಮಿತಾಃ ॥ ೩೮ ॥

ಲವಣೇ ಚ ಗುಡೇ ಕ್ಷೀರೇ ನಿಷ್ಪಾವೇಷು ತಿಲೇಷು ಚ ।
ಗವ್ಯತ್ರಯೇ ತಂಡುಲೇಷು ಮಾಷಾಣಾಮುಪರಿ ಸ್ಥಿತಾಃ ॥ ೩೯ ॥

ಸಂಪೂಜ್ಯ ವಸ್ತ್ರಪುಷ್ಪಾದ್ಯೈರ್ದ್ವಿಜಾಯ ಪ್ರತಿಪಾದಯೇತ್ ।
ಅನೇನ ವಿಧಿನಾ ಯಸ್ತು ಪುಮಾನ್ ಸ್ತ್ರೀ ವಾಥ ವಾ ಪುನಃ ॥ ೪೦ ॥

ನಿರ್ವಾಪಯತಿ ರಾಜೇಂದ್ರ ತಸ್ಯ ಪುಣ್ಯಫಲಂ ಶೃಣು ।
ಇಹ ಲೋಕೇ ಭೂಪತಿಃ ಸ್ಯಾತ್ಪ್ರೇತ್ಯ ಸ್ವರ್ಗೇ ಮಹೀಯತೇ ॥೪೧॥

ಸಕಲಾಸ್ತಸ್ಯ ಸರ್ವಾಶಾ ಯಾಃ ಕಾಶ್ಚಿನ್ಮನಸೇಚ್ಛಿತಾಃ ।
ತತಃ ಸ್ವರ್ಗಾದಿಹಾಭ್ಯೇತ್ಯ ಕುಲೇ ಮಹತಿ ಜಾಯತೇ ॥ ೪೨ ॥

---

೩೮. ಆ ಪುಣ್ಯವು ಕ್ಷಯಿಸಿದನಂತರ ಭೂಲೋಕದಲ್ಲಿ ಜನಿಸಿ ಧಾರ್ಮಿಕನಾದ ರಾಜನೆನಿಸುತ್ತಾನೆ. ಅಯ್ಯಾ ಯುಧಿಷ್ಠಿರ! ಹತ್ತು ದಿಕ್ಕುಗಳ ಪ್ರತಿಮೆಗಳನ್ನು ಸುವರ್ಣದಿಂದ ನಿರ್ಮಿಸಬೇಕು.

೩೯. ಅವುಗಳನ್ನು ದಶಮಿಯ ದಿವಸ ಕ್ರಮವಾಗಿ ಉಪ್ಪು, ಬೆಲ್ಲ, ಹಾಲು, ಅವರೆ, ಎಳ್ಳು, ಮೊಸರು, ತುಪ್ಪ, ಬೆಣ್ಣೆ, ಅಕ್ಕಿ, ಉದ್ದು ಇವುಗಳ ಮೇಲೆ ಇರಿಸಬೇಕು.

೪೦. ಅವನ್ನು ವಸ್ತ್ರ, ಪುಷ್ಪ ಇತ್ಯಾದಿಗಳಿಂದ ಪೂಜೆಮಾಡಿ ಬ್ರಾಹ್ಮಣನಿಗೆ ದಾನಮಾಡಬೇಕು. ಪುರುಷನೇ ಆಗಲಿ, ಸ್ತ್ರೀಯೋ ಆಗಲಿ, ಈ ವಿಧಿಯ ಪ್ರಕಾರ ಆಚರಿಸಿದ ಪಕ್ಷದಲ್ಲಿ ಆಗುವ ಫಲವನ್ನು ಹೇಳುತ್ತೇನೆ ಕೇಳು.

೪೧. ಅಂತಹವನು ಈ ಲೋಕದಲ್ಲಿ ಪ್ರಜಾರಂಜಕನಾದ ರಾಜನಾಗುತ್ತಾನೆ. ಮೃತನಾದ ಮೇಲೆ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

೪೨. ಆತನಿಗೆ ಮನಸ್ಸಿನಲ್ಲಿ ಕೋರಿಕೊಂಡ ಸಮಸ್ತ ಅಭಿಲಾಷೆಗಳೂ ನೆರವೇರುತ್ತವೆ. ಆ ಪುಣ್ಯವು ಕ್ಷಯಿಸಿದನಂತರ ಈ ಲೋಕದಲ್ಲಿ ಶ್ರೇಷ್ಠವಾದ ಕುಲದಲ್ಲಿ ಜನಿಸುತ್ತಾನೆ.

**ಏಕಾದಶ್ಯಾಂ ಗರುತ್ಮಂತಂ ಕಾರಯಿತ್ವಾ ಹಿರಣ್ಮಯಂ ।**
**ಯಥಾಶಕ್ತ್ಯಾ ತಾಮ್ರಪಾತ್ರೇ ಘೃತಸ್ಯೋಪರಿ ಪೂಜಿತಂ ॥ ೪೩ ॥**

**ಪಂಚಾಗ್ನ್ಯಭಿರತೇ ವಿಪ್ರೇ ಪುರಾಣಜ್ಞೇ ವಿಶೇಷತಃ ।**
**ದತ್ವಾ ಕಿಂ ಬಹುನೋಕ್ತೇನ ವಿಷ್ಣುಲೋಕೇ ಮಹೀಯತೇ ॥ ೪೪ ॥**

**ಗಾಂ ವೃಷಂ ಮಹಿಷೀಂ ಹೇಮ ಸಪ್ತಧಾನ್ಯಾನ್ಯಜಾವಿಕಂ ।**
**ವಡವಾಂ ಗುಡರಸಾನ್ ಸರ್ವಾಂಸ್ತಥಾ ಬಹುಫಲದ್ರುಮಾನ್ ॥ ೪೫ ॥**

**ಪುಷ್ಪಾಣಿ ಚ ವಿಚಿತ್ರಾಣಿ ಗಂಧಾಂಶ್ಚೋಚ್ಚಾವಚಾನ್ಬಹೂನ್ ।**
**ಯಥಾಶಕ್ತ್ಯಾ ಮೇಲಯಿತ್ವಾ ವಸ್ತ್ರೈರಾಚ್ಛಾದಯೇನ್ನವೈಃ ॥ ೪೬ ॥**

**ದ್ವಾದಶ್ಯಾಂ ದ್ವಾದಶೈತಾನಿ ಬ್ರಾಹ್ಮಣೇಭ್ಯೋ ನಿವೇದಯೇತ್**
**ಏಕಸ್ಯ ವಾ ಮಹಾರಾಜ ಯತ್ಫಲಂ ತನ್ನಿಶಾಮಯ ॥ ೪೭ ॥**

---

೪೩. ಸುವರ್ಣದಿಂದ ಗರುಡಪ್ರತಿಮೆಯನ್ನು ನಿರ್ಮಿಸಿ ತಾಮ್ರಪಾತ್ರೆಯಲ್ಲಿ ತನ್ನ ಶಕ್ತ್ಯನುಸಾರ ತುಪ್ಪವನ್ನು ಹಾಕಿ ಅದರಲ್ಲಿಟ್ಟು ಏಕಾದಶಿಯ ದಿನ ಅರ್ಚನೆಮಾಡಬೇಕು.

೪೪. ಪಂಚಾಗ್ನಿ ತಪಸ್ಸಿನಲ್ಲಿ ಆಸಕ್ತನೂ ಮತ್ತು ವಿಶೇಷವಾಗಿ ಪುರಾಣವೇತ್ತನೂ ವೇದಾಧ್ಯಯನಸಂಪನ್ನನೂ ಆದ ಬ್ರಾಹ್ಮಣನಿಗೆ ಅದನ್ನು ದಾನ ಮಾಡಬೇಕು. ಇದರಿಂದ ಉಂಟಾಗುವ ಫಲವನ್ನು ಹೇಳಿ ಮುಗಿಸಲು ಯಾರಿಗೆ ತಾನೆ ಸಾಧ್ಯ? ಈತನು ವಿಷ್ಣುಲೋಕವಾದ ವೈಕುಂಠದಲ್ಲಿ ಪೂಜಿತನಾಗುತ್ತಾನೆ.

೪೫–೪೬. ಹಸು, ಎತ್ತು, ಎಮ್ಮೆ, ಸುವರ್ಣ, ಸಪ್ತಧಾನ್ಯಗಳು, ಆಡು, ಕುರಿ, ಕುದುರೆ, ಬೆಲ್ಲ ಮುಂತಾದ ರಸದ್ರವ್ಯಗಳು, ಬಹುವಿಧವಾದ ಫಲವೃಕ್ಷಗಳು, ವಿಚಿತ್ರ ಪುಷ್ಪಗಳು, ಶ್ರೇಷ್ಠವಾದ ವಿವಿಧ ಗಂಧ ಇವನ್ನೆಲ್ಲಾ ಶಕ್ತ್ಯನುಸಾರ ಇರಿಸಿ ನೂತನ ವಸ್ತ್ರದಿಂದ ಆಚ್ಛಾದಿಸಬೇಕು.

೪೭. ದ್ವಾದಶೀ ದಿನ ಈ ಹನ್ನೆರಡು ವಸ್ತುಗಳನ್ನೂ ಬ್ರಾಹ್ಮಣರಿಗೆ ಸಮರ್ಪಿಸಬೇಕು. ಅಯ್ಯಾ ಮಹಾರಾಜನೇ! ಅಷ್ಟು ಮಂದಿಗೆ ಕೊಡಲು ಶಕ್ತಿಸಾಲದಿದ್ದರೆ ಒಬ್ಬ ಬ್ರಾಹ್ಮಣನಿಗೇ ಇವನ್ನು ದಾನಮಾಡಬೇಕು. ಇದರಿಂದುಂಟಾಗುವ ಫಲವನ್ನು ಹೇಳುವೆನು ಕೇಳು.

**ಇಹ ಕೀರ್ತಿಂ ಪರಾಂ ಪ್ರಾಪ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।**
**ತತೋ ವಿಷ್ಣುಪುರಂ ಯಾತಿ ಸೇವ್ಯಮಾನೋಽಪ್ಸರೋಗಣೈಃ ॥ ೪೮ ॥**

**ಕರ್ಮಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।**
**ಯಜ್ಞಯಾಜೀ ದಾನಪತಿರ್ಜೀವೇಚ್ಚ ಶರದಾಂ ಶತಂ ॥ ೪೯ ॥**

**ಸ್ನಾಪಯೇದ್ಬ್ರಾಹ್ಮಣಾಂಶ್ಚಾತ್ರ ತ್ರಯೋದಶ್ಯಾಂ ತ್ರಯೋದಶ ।**
**ತಾನಾಚ್ಛಾದ್ಯ ನವೈರ್ವಸ್ತ್ರೈಃ ಗಂಧಪುಷ್ಪೈರಥಾರ್ಚಯೇತ್ ॥ ೫೦ ॥**

**ಭೋಜಯೀತ ಸುಮಿಷ್ಟಾನ್ನಂ ದಕ್ಷಿಣಾಂ ವಿನಿವೇದಯೇತ್ ।**
**ಯಥಾ ಶಕ್ತ್ಯಾ ಹೇಮ ಖಂಡಾನ್ ಧರ್ಮಾತ್ಮಾ ಪ್ರೀಯತಾಮಿತಿ ॥೫೧॥**

**ಧರ್ಮರಾಜಾಯ ಕಾಲಾಯ ಚಿತ್ರಗುಪ್ತಾಯ ದಂಡಿನೇ ।**
**ಮೃತ್ಯವೇ ಕ್ಷಯರೂಪಾಯ ಅಂತಕಾಯ ಯಮಾಯ ಚ ॥ ೫೨ ॥**

---

೪೮. ಈ ಲೋಕದಲ್ಲಿ ತನ್ನ ಇಚ್ಛಾನುಸಾರವಾಗಿ ಭೋಗಗಳನ್ನೆಲ್ಲಾ ಅನುಭವಿಸಿ, ಒಳ್ಳೆಯ ಯಶಸ್ಸನ್ನು ಸಂಪಾದನೆಮಾಡಿ ಅನಂತರ ವೈಕುಂಠಕ್ಕೆ ಹೋಗಿ ಅಲ್ಲಿ ಅಪ್ಸರ ಸ್ತ್ರೀಯರಿಂದ ಸೇವಿತನಾಗುತ್ತಾನೆ.

೪೯. ಪುಣ್ಯವು ಕ್ಷಯಿಸಿದ ಮೇಲೆ ಮತ್ತೆ ಈ ಭೂಲೋಕದಲ್ಲಿ ಜನಿಸಿ ಧರ್ಮಶೀಲನೂ ಮತ್ತು ಸದಾ ಯಜ್ಞವನ್ನು ಮಾಡುವವನೂ ದಾನಿಯೂ ಆದ ರಾಜನಾಗಿ ನೂರುವರ್ಷಗಳು ಜೀವಿಸುತ್ತಾನೆ.

೫೦. ತ್ರಯೋದಶಿಯ ದಿವಸ ಹದಿಮೂರು ಮಂದಿ ಬ್ರಾಹ್ಮಣರಿಗೆ ಸ್ನಾನ ಮಾಡಿಸಿ ಅವರಿಗೆ ನೂತನ ವಸ್ತ್ರಗಳನ್ನು ಧಾರಣೆಮಾಡಿಸಿ ಗಂಧ, ಪುಷ್ಪಾದಿಗಳಿಂದ ಅರ್ಚನೆಮಾಡಬೇಕು.

೫೧. ಅವರಿಗೆಲ್ಲ ಮೃಷ್ಟಾನ್ನವನ್ನು ಭೋಜನಮಾಡಿಸಬೇಕು. ಅನಂತರ "ಧರ್ಮರಾಜನು ಸಂತುಷ್ಟನಾಗಲಿ" ಎಂದು ಹೇಳಿ ತನ್ನ ಶಕ್ತ್ಯನುಸಾರ ಸುವರ್ಣದ ಚೂರುಗಳನ್ನು ದಕ್ಷಿಣೆಯನ್ನಾಗಿ ಕೊಡಬೇಕು.

೫೨-೫೩. ಧರ್ಮರಾಜ, ಕಾಲ, ಚಿತ್ರಗುಪ್ತ, ದಂಡಿ, ಮೃತ್ಯು, ಕ್ಷಯರೂಪಿ, ಅಂತಕ, ಯಮ, ಪ್ರೇತನಾಥ ರೌದ್ರ, ವೈವಸ್ವತ, ಮಹಿಷಾರೂಢ, ದೇವ

ಪ್ರೇತನಾಥಾಯ ರೌದ್ರಾಯ ತಥಾ ವೈವಸ್ವತಾಯಚ ।
ಮಹಿಷಸ್ಥಾಯ ದೇವಾಯ ನಾಮಾನೀಹ ತ್ರಯೋದಶ ॥ ೫೩ ॥

ಉಚ್ಚಾರ್ಯ ಶ್ರದ್ಧಯಾ ಯುಕ್ತಃ ಪ್ರಣಿಪತ್ಯ ವಿಸರ್ಜಯೇತ್ ।
ಯಃ ಕರೋತಿ ಮಹಾರಾಜ ಪೂಜಾಮೇತಾಂ ಮನೋರಮಾಂ ॥೫೪॥

ಯಮಾಯ ಸ ಸುಖಂ ಮರ್ತ್ಯೇ ಸ್ಥಿತ್ವಾ ವ್ಯಾಧಿವಿವರ್ಜಿತಃ ।
ಯಮಮಾರ್ಗಂ ಗತಃ ಪಶ್ಚಾದ್ದುಃಖಂ ನಾಪ್ನೋತ್ಯಸೌ ಪುನಃ॥೫೫॥

ನ ಪಶ್ಯತಿ ಪ್ರೇತಮುಖಂ ಪಿತೃಲೋಕಂ ಸ ಗಚ್ಛತಿ ।
ಪುಣ್ಯಕ್ಷಯಾದಿಹಾಭ್ಯೇತ್ಯ ನಸುಖೀ ನೀರುಜೋ ಭವೇತ್ ॥ ೫೬ ॥

ಮಹಿಷಂ ಸುಶುಭಂ ಕುಂಭಂ ಚತುರ್ದಶ್ಯಾಂ ಪಯೋಭೃತಂ ।
ತಂ ಕರ್ಷಕೇಣ ಸಂಯುಕ್ತಂ ಹೇಮ್ನಃ ಸದ್ವಸ್ತ್ರಸಂಯುತಂ ॥ ೫೭ ॥

---

ಎಂಬ ಈ ಹದಿಮೂರು ನಾಮಗಳೂ ಅದರ ಪೂಜೆಗೆ ಉಕ್ತವಾಗಿವೆ.

೫೪. ಯಜಮಾನನು ಈ ಹದಿಮೂರು ನಾಮಗಳನ್ನು ಹೇಳಿ ಪೂಜಿಸಿ ಶ್ರದ್ಧೆಯಿಂದ ಉಚ್ಚರಿಸಿ ನಮಸ್ಕರಿಸಬೇಕು. ಅಯ್ಯಾ ಯುಧಿಷ್ಠಿರ! ಯಮ ಪ್ರೀತ್ಯರ್ಥವಾಗಿ ಮನೋಹರವಾದ ಈ ಪೂಜೆಯನ್ನು ಮಾಡಬೇಕು.

೫೫. ಹೀಗೆ ಮಾಡಿದಾತನು ಮರ್ತ್ಯಲೋಕದಲ್ಲಿ ಯಾವ ವ್ಯಾಧಿಯೂ ಇಲ್ಲದೆ ಸುಖವಾಗಿ ಇರುವನು. ಯಮಲೋಕ ಮಾರ್ಗದಲ್ಲಿಯೂ ಆತನು ದುಃಖವನ್ನು ಹೊಂದುವುದಿಲ್ಲ.

೫೬. ಆತನು ಪ್ರೇತಗಳ ಮುಖದರ್ಶನವನ್ನೂ ಮಾಡುವುದಿಲ್ಲ. ಈ ಪ್ರಕಾರ ಪಿತೃಲೋಕವನ್ನು ಸೇರಿ ಅಲ್ಲಿ ಪುಣ್ಯ ಕ್ಷಯಿಸಿದನಂತರ ಈ ಲೋಕಲ್ಲಿ ಜನಿಸಿ ಸುಖಿಯೂ ರೋಗರೋಗರಹಿತನೂ ಆಗಿ ಇರುತ್ತಾನೆ.

೫೭–೫೮. ಚತುರ್ದಶಿಯಲ್ಲಿ ಮನೋಹರವಾಗಿಯೂ ಹಾಲಿನಿಂದ ಪೂರ್ಣ ವಾಗಿಯೂ ಇರತಕ್ಕ ಕುಂಭವನ್ನೂ ಚಿನ್ನದ ಮೊಖವಾಡ ಮತ್ತು ಒಳ್ಳೆಯ

**ಘಂಟಾಭರಣಶೋಭಾಢ್ಯಂ ವೃಷಭೇಣ ಸಮನ್ವಿತಂ ।**
**ಯೋ ದದ್ಯಾಚ್ಛಿವಭಕ್ತಾಯ ಬ್ರಾಹ್ಮಣಾಯ ಕುಟುಂಬಿನೇ ॥ ೫೮ ॥**

**ವೃಷಂ ದತ್ವಾ ನರಶ್ರೇಷ್ಠ ಶಿವಲೋಕೇ ಮಹೀಯತೇ ।**
**ತತ್ರ ಸ್ಥಿತ್ವಾ ಚಿರಂ ಕಾಲಂ ಕ್ರಮಾದೇತ್ಯ ಮಹೀತಲಂ ॥ ೫೯ ॥**

**ಆರೋಗ್ಯಧನಸಂಯುಕ್ತೇ ಕುಲೇ ಮಹತಿ ಜಾಯತೇ ।**
**ಸರ್ವಕಾಮಸಮೃದ್ಧ್ಯರ್ಥಂ ಯಾವಜ್ಜನ್ಮ ಶತತ್ರಯಂ ॥ ೬೦ ॥**

**ಪೌರ್ಣಮಾಸ್ಯಾಂ ವೃಷೋತ್ಸರ್ಗಂ ಕಾರಯಿತ್ವಾ ವಿಧಾನತಃ ।**
**ಚಂದ್ರಂ ರಜತನಿಷ್ಪನ್ನಂ ಪಲೇನೈಕೇನ ಶೋಭನಂ ॥ ೬೧ ॥**

---

ವಸ್ತ್ರಗಳ ಸಮೇತವಾದ ಮಹಿಷವನ್ನೂ ಕುತ್ತಿಗೆಗೆ ಘಂಟೆಯನ್ನು ಕಟ್ಟಿ ಶೋಭಿಸುತ್ತ ಇರುವ ವೃಷಭವನ್ನೂ ಸಪತ್ನೀಕನೂ ಮತ್ತು ಈಶ್ವರಭಕ್ತನೂ ಆದ ಬ್ರಾಹ್ಮಣನಿಗೆ ದಾನಮಾಡಬೇಕು.

೫೯. ಎಲೈ ಯುಧಿಷ್ಠಿರನೇ! ಈ ರೀತಿ ದಾನಮಾಡಿದವನು ಶಿವಲೋಕವನ್ನು ಸೇರಿ ಅಲ್ಲಿ ಪೂಜ್ಯನಾಗಿ ಬಹುಕಾಲ ಇದ್ದು ಆ ಪುಣ್ಯ ಕ್ಷಯವಾದನಂತರ ಭೂಮಿಯಲ್ಲಿ ಜನಿಸುವನು.

೬೦. ಹಾಗೆ ಜನಿಸುವಾಗ ತನ್ನ ಸಕಲ ಅಭೀಷ್ಟಗಳೂ ಸಿದ್ಧಿಸುವುದೂ ಆರೋಗ್ಯ ಮತ್ತು ಧನ ಇವು ಸಮೃದ್ಧಿಯಾಗಿ ಉಳ್ಳದ್ದೂ ಆದ ಶ್ರೇಷ್ಠವಂಶದಲ್ಲಿ ಮುನ್ನೂರು ಜನ್ಮಗಳನ್ನು ಎತ್ತುತ್ತಾನೆ.

೬೧. ಪೂರ್ಣಿಮೆಯ ದಿನದಲ್ಲಿ ಯಥಾವಿಧಿಯಾಗಿ ವೃಷೋತ್ಸರ್ಗವನ್ನು ಮಾಡತಕ್ಕದ್ದು ಶ್ರೇಷ್ಠ. ಇದಕ್ಕೆ ಒಂದುಪಲ ಪ್ರಮಾಣವುಳ್ಳ ಬೆಳ್ಳಿಯಿಂದ ಮನೋಹರವಾದ ಚಂದ್ರಪ್ರತಿಮೆಯನ್ನು ಮಾಡಿಸಬೇಕು.

ಪೂಜಯೇದ್ಗಂಧಕುಸುಮೈರ್ನೈವೇದ್ಯಂ ವಿನಿವೇದ್ಯ ಚ ।
ದದ್ಯಾದ್ವಿಪ್ರಾಯ ಸಂಕಲ್ಪ್ಯ ವಾಸೋಽಲಂಕಾರಭೂಷಣೈಃ ॥ ೬೨ ॥

ಮಂತ್ರೇಣಾನೇನ ರಾಜೇಂದ್ರ ತನ್ನಿಬೋಧ ಯಥೋದಿತಂ ।
ಕ್ಷೀರೋದಾರ್ಣವಸಂಭೂತ ತ್ರೈಲೋಕ್ಯಾಂಗಣದೀಪಕ ॥ ೬೩ ॥

ಉಮಾಪತೇಃ ಶಿರೋರತ್ನ ಶಿವಂ ಯಚ್ಛ ನಮೋನಮಃ ।
ದಾನೇನಾನೇನ ರಾಜೇಂದ್ರ ಭ್ರಾಜತೇ ಚಂದ್ರವದ್ದಿವಿ ॥ ೬೪ ॥

ಅಪ್ಸರೋಭಿಃ ಪರಿವೃತೋ ಯಾವದಾಭೂತಸಂಪ್ಲವಂ ॥ ೬೫ ॥

ದಾನಾನ್ಯಮೂನಿ ವಿಧಿವತ್ಪ್ರಯತಿ ಕ್ರಮೇಣ ।
ಯಚ್ಛಂತಿ ಯೇ ದ್ವಿಜವರಾಯ ವಿಶುದ್ಧಸತ್ವಾಃ ॥

---

೬೨. ಅದನ್ನು ಗಂಧ, ಹೂ ಇತ್ಯಾದಿಗಳಿಂದ ಅರ್ಚನೆಮಾಡಿ ನೈವೇದ್ಯವನ್ನು ಸಮರ್ಪಿಸಿ, ಸಂಕಲ್ಪಮಾಡಿ ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನನ್ನು ಕರೆದು ವಸ್ತ್ರ ಮತ್ತು ಭೂಷಣಾದಿಗಳಿಂದ ಸತ್ಕರಿಸಿ ಈ ಮುಂದೆ ಹೇಳತಕ್ಕ ಅರ್ಥವುಳ್ಳ ಮಂತ್ರಪೂರ್ವಕವಾಗಿ ದಾನಮಾಡಬೇಕು.

೬೩-೬೪. ಕ್ಷೀರಸಮುದ್ರದಲ್ಲಿ ಜನಿಸಿದವನೂ ಮೂರು ಲೋಕಗಳೆಂಬ ಅಂಗಳಕ್ಕೆ ದೀಪದಂತೆ ಇರುವವನೂ ಪಾರ್ವತೀಪತಿಯಾದ ಶಿವನಿಗೆ ಶಿರೋಭೂಷಣನೂ ಆದ ಚಂದ್ರನೇ; ನಿನಗೆ ನಮಸ್ಕಾರ. ನಮಗೆ ಮಂಗಳವನ್ನುಂಟುಮಾಡು. (ಇದು ಮಂತ್ರಾರ್ಥ.)

೬೫. ಎಲೈ ರಾಜನೇ! ಈ ದಾನಮಾಡೋಣದರಿಂದ ಸ್ವರ್ಗದಲ್ಲಿ ಅಪ್ಸರ ಸ್ತ್ರೀಯರಿಂದ ಪರಿವೃತನಾಗಿ ಕಲ್ಪಾಂತಪರ್ಯಂತ ಚಂದ್ರನಂತೆ ಪ್ರಕಾಶಿಸುತ್ತಾನೆ.

೬೬. ಶುದ್ಧಚಿತ್ತರಾಗಿ ಪಾಡ್ಯದ ಮೊದಲುಗೊಂಡು ಕ್ರಮತಪ್ಪದೆ ಆಯಾ ತಿಥಿಗಳಲ್ಲಿ ಉಕ್ತವಾದ ದಾನಗಳನ್ನು ಯಥಾವಿಧಿಯಾಗಿ ಶ್ರೇಷ್ಠ ದ್ವಿಜನಿಗೆ ದಾನಮಾಡುವ ಮಾನವರು ಬ್ರಹ್ಮ, ವಿಷ್ಣು, ಇವರ ಲೋಕದಲ್ಲಿ ಸುಖವಾಗಿ ವಿಹರಿಸಿ

**ತೇ ಬ್ರಹ್ಮವಿಷ್ಣುಭುವನೇಷು ಸುಖಂ ವಿಹೃತ್ಯ ।**
**ಯಾಂತ್ಯೇಕತಾಂ ಸಹ ಶಿವೇನ ನ ಸಂಶಯೋ ನೋ ॥ ೬೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ತಿಥಿದಾನವರ್ಣನಂ ನಾಮ ತ್ರಿನವತ್ಯುತ್ತರಶತತಮೋಽಧ್ಯಾಯಃ.**



---

ಅನಂತರ ಶಿವಸಾಯುಜ್ಯವನ್ನು ಹೊಂದುತ್ತಾರೆ ಈ ವಿಚಾರದಲ್ಲಿ ಸಂಶಯವಿಲ್ಲ ಎಂಬದಾಗಿ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ತಿಥಿ ದಾನವಿಧಿವರ್ಣನೆಯೆಂಬ ನೂರತ್ತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುರ್ನವತ್ಯುತ್ತರಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಆದಿವಾರಾಹದಾನಂ ತೇ ಕಥಯಾಮಿ ಯುಧಿಷ್ಠಿರ ।
ಧರಣ್ಯೈ ಯತ್ಪುರಾ ಪ್ರೋಕ್ತಂ ವರಾಹವಪುಷಾ ಮಯಾ ॥ ೧ ॥

ಪುಣ್ಯಂ ಪವಿತ್ರಮಾಯುಷ್ಯಂ ಸರ್ವದಾನೋತ್ತಮೋತ್ತಮಂ ।
ಮಹಾಪಾಪಾದಿದೋಷಘ್ನಂ ಪೂಜಿತಂ ಧರ್ಮಸತ್ತಮೈಃ ॥ ೨ ॥

ದೇಯಂ ಸಂಕ್ರಮಣೇ ಭಾನೋರ್ಗ್ರಹಣೇ ದ್ವಾದಶೀಷ್ವಥ ।
ಯಜ್ಞೋತ್ಸವವಿವಾಹೇಷು ದುಃಸ್ವಪ್ನಾದ್ಭುತದರ್ಶನೇ ॥ ೩ ॥

---

## ನೂರತೊಂಭತ್ತನಾಲ್ಕನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಈ ಹಿಂದೆ ನಾನು ವರಾಹಾವತಾರಮಾಡಿದಾಗ ಭೂಮಿದೇವಿಗೆ ಹೇಳಿದಂತಹ ಆದಿವಾರಾಹ ದಾನ ವಿಚಾರವನ್ನು ನಿನಗೆ ಹೇಳುತ್ತೇನೆ.

೨. ಈ ದಾನವು ಸಮಸ್ತ ದಾನಗಳಲ್ಲಿ ಅತ್ಯುತ್ತಮವೂ ಆಯುರ್ವೃದ್ಧಿಯನ್ನು ಉಂಟುಮಾಡತಕ್ಕದ್ದೂ ಮಹಾಪಾತಕಗಳೇ ಮೊದಲಾದ ಪಾಪಗಳನ್ನು ನಾಶಮಾಡತಕ್ಕದ್ದೂ ಪುಣ್ಯದಾಯಕವೂ ಆಗಿದೆ. ಇದನ್ನು ಸಕಲ ಧರ್ಮಜ್ಞರೂ ಆಚರಿಸುತ್ತಾರೆ.

೩. ಈ ಆದಿವರಾಹ ದಾನವನ್ನು ಸಂಕ್ರಮಣಕಾಲ, ಸೂರ್ಯಗ್ರಹಣ, ದ್ವಾದಶಿ, ಯಜ್ಞಕಾಲ, ವಿವಾಹಾದಿ ಸಂತೋಷಕಾಲ, ದುಃಸ್ವಪ್ನದರ್ಶನ, ದುಶ್ಶಕುನದರ್ಶನ ಇಂಥ ಕಾಲಗಳಲ್ಲಿ ಮಾಡಬೇಕು.

**ಯದಾ ಚ ಜಾಯತೇ ವಿತ್ತಂ ಚಿತ್ತಂ ಶ್ರದ್ಧಾಸಮನ್ವಿತಂ ।**
**ತದೇವ ದಾನಕಾಲಃ ಸ್ಯಾದಧ್ರುವಂ ಜೀವಿತಂ ಯತಃ　　॥ ४ ॥**

**ಕುರುಕ್ಷೇತ್ರಾದಿ ತೀರ್ಥೇಷು ಗಂಗಾದ್ಯಾಸು ನದೀಷು ಚ ।**
**ಪುರೇಷು ಚ ಪವಿತ್ರೇಷು ಅರಣ್ಯೇಷು ವನೇಷುಚ　　॥ ೫ ॥**

**ಗೋಷ್ಠೇ ದೇವಾಲಯೇ ವಾಪಿ ಮಠೇ ವಾ ಸ್ವಗೃಹಾಂಗಣೇ ।**
**ದೇಯಂ ಪುರಾಣವಿಧಿನಾ ಬ್ರಾಹ್ಮಣಾಯ ಕುಟುಂಬಿನೇ　　॥ ೬ ॥**

**ಕುಶೈರಾಸ್ತೀರ್ಯ ತಾಂ ಪಾರ್ಥ ಪ್ರಣವಾಕ್ಷರಮಂತ್ರಿತೈಃ ।**
**ಉಪರಿಷ್ಟಾತ್ತಿಲೈಸ್ತೇಷಾಂ ವರಾಹಂ ಪರಿಕಲ್ಪಯೇತ್　　॥ ೭ ॥**

**ದ್ರೋಣೈಶ್ಚತುರ್ಭಿಃ ಸಂಪೂರ್ಣಂ ತದರ್ಧೇನಾಥವಾ ಪುನಃ ।**
**ಆಢಕೇನಾಥ ಕುರ್ವೀತ ವಿತ್ತಶಾಠ್ಯಂ ನ ಕಾರಯೇತ್　　॥ ೮ ॥**

---

೪. ಮನುಷ್ಯನ ಜೀವನವು ನಶ್ವರವಾದುದರಿಂದ ಆತನ ಮನಸ್ಸಿನಲ್ಲಿ ಇದನ್ನು ಮಾಡಬೇಕೆಂಬ ಶ್ರದ್ಧೆಯು ಜನಿಸಿ ದ್ರವ್ಯಾನುಕೂಲವು ಒದಗಿದಾಗ ಸಂಕ್ರಮಣಾದಿಗಳನ್ನು ನಿರೀಕ್ಷಿಸದೆ ದಾನಮಾಡಬಹುದು.

೫–೬. ಕುರುಕ್ಷೇತ್ರವೇ ಮೊದಲಾದ ಪುಣ್ಯಕ್ಷೇತ್ರಗಳಲ್ಲಿಯೋ ಅಥವಾ ಗಂಗಾ ಮೊದಲಾದ ಪುಣ್ಯನದಿಗಳಲ್ಲಿಯೋ, ಪರಿಶುದ್ಧವಾದ ಪಟ್ಟಣಗಳು, ಕಾಡುಗಳು, ದನದ ಕೊಟ್ಟಿಗೆ, ದೇವಸ್ಥಾನ, ಮಠ, ತನ್ನ ಮನೆಯ ಅಂಗಳ, ಈ ಸ್ಥಳಗಳಲ್ಲಿ ಎಲ್ಲಿಯಾದರೂ ಪುರಾಣೋಕ್ತವಾದ ವಿಧಿಯಂತೆ ಪೂಜಿಸಿ, ಸಪತ್ನೀಕನಾದ ಬ್ರಾಹ್ಮಣನಿಗೆ ದಾನಮಾಡಬೇಕು.

೭. ಅಯ್ಯಾ ಯುಧಿಷ್ಠಿರ! ಪೂಜಾಕಾಲದಲ್ಲಿ ಪ್ರಣವಾಕ್ಷರ ಮಂತ್ರ ಪೂರ್ವಕವಾಗಿ ದರ್ಭೆಗಳನ್ನು ಹರಡಿ ಅದರ ಮೇಲೆ ಎಳ್ಳಿನಿಂದ ವರಾಹಮೂರ್ತಿಯನ್ನು ನಿರ್ಮಿಸಬೇಕು.

೮. ಆ ವರಾಹವನ್ನು ನಾಲ್ಕುದ್ರೋಣ ಪ್ರಮಾಣ ಎಳ್ಳಿನಿಂದ ಅಥವಾ ಅದರ ಅರ್ಧದಷ್ಟು ಎಂದರೆ ಎರಡು ದ್ರೋಣಪ್ರಮಾಣ ಎಳ್ಳಿನಿಂದ ನಿರ್ಮಿಸಬೇಕು. ಎಳ್ಳಿಗೆ ಅಭಾವವಾದರೆ ತೊಗರಿಕಾಳಿನಿಂದ ನಿರ್ಮಿಸಬಹುದು. ದ್ರವ್ಯ ಸಂಪತ್ತು ಸಮೃದ್ಧಿಯಾಗಿದ್ದರೂ ಕೃಪಣತನಮಾಡಬಾರದು.

**ಸುವರ್ಣೇನಸ್ಯಮುಖಂ ಕಾರ್ಯಂ ಭುಜೌ ಚಕ್ರಗದಾನ್ವಿತೌ ।**
**ರಾಜತೀಂ ಕಾರಯೇದ್ದಂಷ್ಟ್ರಾಂ ಪದ್ಮರಾಗವಿಭೂಷಿತಾಂ ॥ ೯ ॥**

**ಶಂಖಂ ಚ ಸ್ಥಾಪಯೇತ್ಪಾರ್ಶ್ವೇ ವನಮಾಲಾಂ ಹಿರಣ್ಮಯೀಂ ।**
**ಪುಷ್ಪೈರ್ವಾ ಕಾರಯೇದ್ವಿದ್ವಾನ್ ಪಾದೌ ರೂಪ್ಯಮಯೌ ತಥಾ ॥೧೦॥**

**ದಂಷ್ಟ್ರಾಗ್ರಲಗ್ನವಸುಧಾಂ ಸೌವರ್ಣೀಂ ಕಾರಯೇಚ್ಛುಭಾಂ ।**
**ಸರ್ವಧಾನ್ಯರಸೋಪೇತಾಂ ವಸ್ತ್ರಾಲಂಕೃತವಿಗ್ರಹಾಂ ॥ ೧೧ ॥**

**ಪ್ರಚ್ಛಾದ್ಯ ವಸ್ತ್ರೈರ್ದೇವೇಶಂ ವರಾಹಂ ಸರ್ವಕಾಮದಂ ।**
**ರೋಮರಾಜಿಂ ಕುಶೈಃ ಕೃತ್ವಾ ಗಂಧಪುಷ್ಪೈರಥಾರ್ಚಯೇತ್ ॥ ೧೨ ॥**

---

೯. ಆ ಪ್ರತಿಕೃತಿಗೆ ಸುವರ್ಣದಿಂದ ಮುಖ, ಚಕ್ರ ಮತ್ತು ಗದೆ ಸಮೇತವಾದ ಭುಜಗಳು, ಪದ್ಮರಾಗದ ಕೋರೆಹಲ್ಲು, ಇವುಗಳಿಂದ ಅಲಂಕೃತ ವಾಗಿರುವಂತೆ ನಿರ್ಮಿಸಬೇಕು.

೧೦. ಅದರ ಪಾರ್ಶ್ವದಲ್ಲಿ ಶಂಖವನ್ನು ಸ್ಥಾಪಿಸಬೇಕು. ಸುವರ್ಣದ ಪುಷ್ಪಗಳಿಂದಲೋ ಅಥವಾ ಸಾಮಾನ್ಯ ಪುಷ್ಪಗಳಿಂದಲೋ ಹಾರವನ್ನು ರಚಿಸ ಬೇಕು. ಕಾಲುಗಳನ್ನು ಬೆಳ್ಳಿಯಿಂದ ನಿರ್ಮಿಸಬೇಕು.

೧೧. ಆ ಕೋರೆಹಲ್ಲಿನ ತುದಿಯಲ್ಲಿ ಸುವರ್ಣದಿಂದ ನಿರ್ಮಿತವಾದ ಭೂಮಿಯನ್ನು ಧರಿಸಿರುವಂತೆ ಮಾಡಬೇಕು. ಆ ಭೂಮಿಯು ಸಕಲ ಧಾನ್ಯ ಮತ್ತು ರಸಗಳಿಂದ ಕೂಡಿದುದೂ ವಸ್ತ್ರದಿಂದ ಅಲಂಕೃತವಾದ ಅವಯವಗಳು ಳ್ಳದ್ದೂ ಆಗಿರಬೇಕು.

೧೨. ಈ ರೀತಿಯಾಗಿ ಸರ್ವಾಭೀಷ್ಟದಾಯಕನೂ ಮತ್ತು ದೇವತೆಗಳಿಗೆ ಅಧಿಪತಿಯೂ ಆದ ವರಾಹನ ಮೈಯ್ಯ ರೋಮಗಳನ್ನು ದರ್ಭೆಗಳಿಂದ ನಿರ್ಮಿಸ ಬೇಕು. ಮತ್ತು ವಸ್ತ್ರಗಳಿಂದ ಅದನ್ನು ಆಚ್ಛಾದನೆಮಾಡಿ ಗಂಧ, ಹೂ ಇತ್ಯಾದಿ ಗಳಿಂದ ಅರ್ಚನೆಮಾಡಬೇಕು.

**ನವಗ್ರಹಮುಖಃ ಕಾರ್ಯೋ ಹೋಮಶ್ಚಾತ್ರ ತಿಲೈಃ ಸ್ಮೃತಃ ।**
**ಏವಂ ಸಂಸ್ಥಾಪ್ಯ ವಿಧಿವತ್ ತತಃ ಸ್ತೋತ್ರಮುದೀರಯೇತ್ ॥ ೧೩ ॥**

**ವರಾಹೇಶ ಪ್ರದುಷ್ಟಾನಿ ಸರ್ವಪಾಪಫಲಾನಿ ಚ ।**
**ಮರ್ದ ಮರ್ದ ಮಹಾದಂಷ್ಟ್ರ ಭಾಸ್ವತ್ಕನಕಕುಂಡಲ ॥ ೧೪ ॥**

**ಶಂಖಚಕ್ರಾಸಿಹಸ್ತಾಯ ಹಿರಣ್ಯಾಕ್ಷಾಂತಕಾಯ ಚ ।**
**ದಂಷ್ಟ್ರೋದ್ಧೃತಧರಾಭೃತೇ ತ್ರಯೀಮೂರ್ತಿಮತೇ ನಮಃ ॥ ೧೫ ॥**

**ಇತ್ಯುಚ್ಚಾರ್ಯ ನಮಸ್ಕೃತ್ಯ ಪ್ರದಕ್ಷಿಣಮನುವ್ರಜೇತ್ ।**
**ತತಸ್ತಂ ಬ್ರಾಹ್ಮಣೇ ದದ್ಯಾದ್ವಸ್ತ್ರಾಲಂಕಾರಭೂಷಿತಂ ॥ ೧೬ ॥**

೧೩. ಈ ದಾನಕರ್ಮದ ಅಂಗವಾಗಿ ಎಳ್ಳಿನ ಹವಿಸ್ಸಿನಿಂದ ನವಗ್ರಹ ಹೋಮವನ್ನು ಮಾಡಬೇಕು. ಈ ರೀತಿ ಪ್ರತಿಮೆಯನ್ನು ಸ್ಥಾಪಿಸಿ ಅನಂತರ ಈ ಮುಂದೆ ಹೇಳುವ ಪ್ರಕಾರ ಸ್ತೋತ್ರಮಾಡಬೇಕು.

೧೪. ಚಿನ್ನದ ಕುಂಡಲದಿಂದ ವಿರಾಜಿತನೂ ಮತ್ತು ದೊಡ್ಡ ಕೋರೆಯುಳ್ಳವನೂ ಹಂದಿಗಳಿಗೆ ಅಧಿಪತಿಯೂ ಆದ ವರಾಹಮೂರ್ತಿಯೇ! ನನ್ನ ಸಕಲ ಪಾಪಗಳನ್ನೂ ನಾಶಮಾಡು.

೧೫. ಹಸ್ತಗಳಲ್ಲಿ ಶಂಖ, ಚಕ್ರ ಮತ್ತು ವಜ್ರಾಯುಧ ಇವುಗಳನ್ನು ಧರಿಸಿದವನೂ ಹಿರಣ್ಯಾಕ್ಷನಿಗೆ ಅಂತಕನೂ ಕೋರೆಹಲ್ಲಿನಿಂದ ಭೂದೇವಿಯನ್ನು ಎತ್ತಿ ಹಿಡಿದವನೂ ಬ್ರಹ್ಮ, ವಿಷ್ಣು, ಶಿವ ಎಂಬ ತ್ರಿಮೂರ್ತಿಸ್ವರೂಪನೂ ಆಗಿರುವ ನಿನಗೆ ನಮಸ್ಕಾರ.

೧೬. ಈ ಪ್ರಕಾರ ಸ್ತೋತ್ರಪೂರ್ವಕವಾಗಿ ಪ್ರದಕ್ಷಿಣೆ ನಮಸ್ಕಾರಮಾಡಿ ವಸ್ತ್ರ, ಆಭರಣ ಇತ್ಯಾದಿಗಳಿಂದ ಅಲಂಕೃತವಾದ ಆ ಮೂರ್ತಿಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

ಪರಿಗ್ರಹಸ್ತು ತಸ್ಯೋಕ್ತಃ ಪಾದಯೋಃ ಪರಮರ್ಷಿಭಿಃ ।
ಅನೇನ ವಿಧಿನಾ ದತ್ವಾ ಪ್ರಣಿಪತ್ಯ ಕ್ಷಮಾಪಯೇತ್ ॥ ೧೭ ॥

ಏವಂ ದತ್ವಾ ಮಹೀನಾಥ ವರಾಹಂ ಸರ್ವಕಾಮದಂ ।
ಯತ್ಫಲಂ ಸಮವಾಪ್ನೋತಿ ಪಾರ್ಥ ತತ್ಕೇನ ವರ್ಣ್ಯತೇ ॥ ೧೮ ॥

ಸರ್ವದಾನೇಷು ಯತ್ಪುಣ್ಯಂ ಸರ್ವಕ್ರತುಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ದತ್ವಾ ದೇವಂ ಜನಾರ್ದನಂ ॥ ೧೯ ॥

ಯಥಾ ಶಕ್ತ್ಯಾ ಸಮುದ್ಧೃತಾ ವರಾಹೇಣ ವಸುಂಧರಾ ।
ತಥಾ ಕುಲಂ ಸಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೨೦ ॥

ಬ್ರಾಹ್ಮಣಕ್ಷತ್ರಿಯವಿಶಾಂ ಸ್ತ್ರೀಣಾಂ ಶೂದ್ರಜನಸ್ಯ ಚ ।
ಏತತ್ಸಾಧಾರಣಂ ದಾನಂ ಶೈವವೈಷ್ಣವಯೋಗಿನಾಂ ॥ ೨೧ ॥

---

೧೭. ಈ ದಾನ ಪ್ರತಿಗ್ರಹಮಾಡುವಾತನು ಆ ಪ್ರತಿಮೆಯ ಪಾದಗಳನ್ನು ಮುಟ್ಟಿ ಸ್ವೀಕರಿಸಬೇಕೆಂದು ಪರಮ ಋಷಿಗಳು ಹೇಳಿರುತ್ತಾರೆ. ಈ ಪ್ರಕಾರ ದಾನಮಾಡಿ ಆ ಬ್ರಾಹ್ಮಣನಿಗೆ ನಮಸ್ಕರಿಸಿ ಕ್ಷಮಾಪಣೆಯನ್ನು ಬೇಡಬೇಕು.

೧೮. ಎಲೈ ಭೂಪತಿಯಾದ ಯುಧಿಷ್ಠಿರನೇ! ಸರ್ವಾಭೀಷ್ಟದಾಯಕನಾದ ಆದಿವರಾಹವನ್ನು ಈ ಪ್ರಕಾರ ದಾನಮಾಡಿದರೆ ಆತನು ಹೊಂದಬಹುದಾದ ಸಮಗ್ರ ಫಲವನ್ನು ವರ್ಣಿಸಲು ಯಾರಿಂದ ತಾನೆ ಸಾಧ್ಯವಾದೀತು?

೧೯. ಸಕಲ ದಾನಗಳನ್ನು ಮಾಡಿದುದರಿಂದ ಬರುವ ಪುಣ್ಯವನ್ನೂ ಸಕಲ ಯಜ್ಞಗಳನ್ನು ಆಚರಿಸುವುದರಿಂದ ಉಂಟಾಗುವಷ್ಟು ಫಲವನ್ನೂ ವರಾಹ ರೂಪಿಯಾದ ವಿಷ್ಣುವನ್ನು ದಾನಮಾಡುವುದರಿಂದ ಹೊಂದುತ್ತಾನೆ.

೨೦. ವರಾಹನು ಯಾವ ಪ್ರಕಾರ ತನ್ನ ಶಕ್ತಿಯಿಂದ ಭೂಮಿಯನ್ನು ಉದ್ಧರಿಸಿದನೋ ಅದರಂತೆಯೇ ದಾನಮಾಡಿದ ಮನುಜನು ತನ್ನ ಕುಲವನ್ನು ಉದ್ಧಾರಮಾಡಿ ವಿಷ್ಣುಲೋಕವನ್ನು ಪಡೆದು ಅಲ್ಲಿ ಪೂಜಿತನಾಗುತ್ತಾನೆ.

೨೧. ಈ ದಾನವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರೂ ಮತ್ತು ಆ ಎಲ್ಲಾ ಸ್ತ್ರೀಯರೂ ಶಿವಯೋಗಿಗಳೂ ಮತ್ತು ವೈಷ್ಣವ ಯೋಗಿಗಳೂ ಸಹ ಸಾಧಾರಣವಾಗಿ ಮಾಡತಕ್ಕದ್ದಾಗಿದೆ.

ವಿಪ್ರಾಯ ವೇದವಿದುಷೇ ನೃವರಾಹರೂಪಂ ।
ದತ್ವಾ ತಿಲಾಮಲಸುವರ್ಣಮಯಂ ಸವಸ್ತ್ರಂ ॥
ಉದ್ಧೃತ್ಯ ಪೂರ್ವಪುರುಷಾನ್ಸಕಲತ್ರಮಿತ್ರಃ ।
ಪ್ರಾಪ್ನೋತಿ ಸಿದ್ಧಭುವನಂ ಸುರಸಿದ್ಧಜುಷ್ಟಂ ॥ ೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ವರಾಹದಾನವಿಧಿವರ್ಣನಂ
ನಾಮ ಚತುರ್ನವತ್ಯುತ್ತರಶತತಮೋಽಧ್ಯಾಯಃ.



೨೨. ಶುದ್ಧವಾದ ಎಳ್ಳು ಮತ್ತು ಸುವರ್ಣ ಇವುಗಳಿಂದ ನಿರ್ಮಿತವಾಗಿ ವಸ್ತ್ರಸಮೇತವಾಗಿರುವ ವರಾಹರೂಪಿಯಾದ ದೇವನನ್ನು ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನಿಗೆ ದಾನಮಾಡಿದರೆ ಅದರಿಂದ ದಾತೃವಿನ ಪಿತೃಗಳೆಲ್ಲರೂ ಉದ್ಧಾರವಾಗುತ್ತಾರೆ. ಮತ್ತು ಆತನು ತನ್ನ ಹೆಂಡತಿ ಮಿತ್ರರ ಸಮೇತನಾಗಿ ದೇವತೆಗಳೂ ಸಿದ್ಧರೂ ಸೇವಿಸುವಂತಹ ಸಿದ್ಧಲೋಕ (ಸ್ವರ್ಗ) ವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ವರಾಹದಾನವಿಧಾನವರ್ಣನೆಯೆಂಬ
ನೂರತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚನವತ್ಯುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ದಾನಮಾಹಾತ್ಮ್ಯಮುತ್ತಮಂ ।
ಯದಕ್ಷಯಂ ಪರೇ ಲೋಕೇ ದೇವರ್ಷಿಗಣಪೂಜಿತಂ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ರುದ್ರೇಣ ಯತ್ಪುರಾಪ್ರೋಕ್ತಂ ನಾರದಾಯ ಮಹಾತ್ಮನೇ ।
ಮತ್ಸ್ಯೇನ ಮನವೇ ತದ್ವತ್ತಚ್ಛೃಣುಷ್ವ ಕುರೂದ್ವಹ ॥ ೨ ॥

---

## ನೂರತೊಂಭತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಶ್ರೀಕೃಷ್ಣನನ್ನು ಕುರಿತು ಹೇಳುತ್ತಾನೆ— ಸ್ವಾಮಿಾ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣಪರಮಾತ್ಮ! ಪರಲೋಕದಲ್ಲಿ ದೇವತೆಗಳಿಂದಲೂ ಮತ್ತು ಋಷಿಗಣಗಳಿಂದಲೂ ಸನ್ಮಾನಹೊಂದಲು ಅರ್ಹತೆ ಕೊಡುವುದೂ, ಅಕ್ಷಯ ಫಲಪ್ರದಾಯಕವೂ ಮತ್ತು ಉತ್ತಮವೂ ಆದ ದಾನವು ಯಾವುದೆಂಬುದನ್ನೂ, ಅದರ ಮಹಿಮೆಯನ್ನೂ ಸಹ ತಿಳಿದುಕೊಳ್ಳಬೇಕೆಂದು ಆಶೆಯಾಗುತ್ತದೆ ಎಂದನು.

೨. ಎಲೈ ಕುರುಕುಲೋತ್ತಮನೇ! ಈಶ್ವರನು ಮುನಿವರ್ಯನೂ ಮತ್ತು ಮಹಾತ್ಮನೂ ಆದ ನಾರದನಿಗೆ ಹಿಂದೆ ಮೇರುದಾನ ವಿಚಾರ ಹೇಳಿದ್ದನು. ಅದನ್ನೇ ಮತ್ಸ್ಯನು ಮನುವಿಗೆ ಹೇಳಿದ್ದನು. ಅದನ್ನೇ ನಾನು ಈಗ ನಿನಗೆ ಹೇಳುತ್ತೇನೆ ಕೇಳು.

**ಮೇರೋಃ ಪ್ರದಾನಂ ವಕ್ಷ್ಯಾಮಿ ದಶಧಾ ಪುನರೇವ ತೇ ।**
**ಯತ್ಪ್ರದಾತೋತ್ತರಾನ್ಲೋಕಾನ್ಪ್ರಾಪ್ನೋತಿ ಸುರಪೂಜಿತಾನ್ ॥ ೩ ॥**

**ಪುರಾಣೇಷು ಚ ವೇದೇಷು ಯಜ್ಞೇಷ್ವಧ್ಯಯನೇಷು ಚ ।**
**ನ ತತ್ಫಲಮಧೀತೇಷು ಕೃತೇಷ್ವಿಹ ಯದಶ್ನುತೇ ॥ ೪ ॥**

**ತಸ್ಮಾದ್ವಿಧಾನಂ ವಕ್ಷ್ಯಾಮಿ ಪರ್ವತಾನಾಮನುಕ್ರಮಾತ್ ।**
**ಪ್ರಥಮೋ ಧಾನ್ಯಶೈಲಃ ಸ್ಯಾದ್ದ್ವಿತೀಯೋ ಲವಣಾಚಲಃ ॥ ೫ ॥**

**ಗುಡಾಚಲಸ್ತೃತೀಯಸ್ತು ಚತುರ್ಥೋ ಹೇಮಪರ್ವತಃ ।**
**ಪಂಚಮಸ್ತಿಲಶೈಲಃ ಸ್ಯಾತ್ ಷಷ್ಠಃ ಕಾರ್ಪಾಸಪರ್ವತಃ ॥ ೬ ॥**

---

೩. ಮೇರುಪರ್ವತದ ದಾನವು ಹತ್ತು ಪ್ರಕಾರವಾಗಿ ಆಚರಿಸಬಹುದಾಗಿದೆ ಅದನ್ನು ಮುಂದೆ ಹೇಳುವೆನು. ಈ ದಾನಮಾಡುವುದರಿಂದ ದಾತೃವು ದೇವತೆಗಳಿಂದ ಪೂಜಿಸಲ್ಪಡುವ ಮಹಿಮೆಯುಳ್ಳವನಾಗಿ ಪರಲೋಕಸೌಖ್ಯವನ್ನು ಪಡೆಯುತ್ತಾನೆ.

೪. ಈ ದಾನದಿಂದ ಲಭಿಸುವ ಫಲವು ಪುರಾಣ ಶ್ರವಣದಿಂದಾಗಲಿ, ಅಥವಾ ವೇದಾಧ್ಯಯನದಿಂದಾಗಲಿ, ಅಥವಾ ವೇದೋಕ್ತ ಪ್ರಕಾರ ಯಜ್ಞಾದಿಗಳ ಅನುಷ್ಠಾನದಿಂದಾಗಲಿ ಲಭಿಸುವುದಿಲ್ಲ.

೫. ಈಗ ಈ ಮೇರುಪರ್ವತಗಳ ದಾನದ ವಿಧಿಯನ್ನು ಅನುಕ್ರಮವಾಗಿ ಹೇಳುವೆನು. ಒಂದನೆಯದು ಧಾನ್ಯಶೈಲದಾನ, ಎರಡನೆಯದು ಲವಣಾಚಲ, (ಉಪ್ಪಿನ ಪರ್ವತ).

೬. ಗುಡಾಚಲ(ಬೆಲ್ಲದಪರ್ವತ) ವು ಮೂರನೆಯದು, ಹೇಮ (ಸುವರ್ಣ) ಪರ್ವತ ನಾಲ್ಕನೆಯದು, ತಿಲಪರ್ವತ ಐದನೆಯದು, ಕಾರ್ಪಾಸ(ಹತ್ತಿ) ಪರ್ವತ ಆರನೆಯದು.

ಸಪ್ತಮೋ ಘೃತಶೈಲಶ್ಚ ರತ್ನಶೈಲಸ್ತಥಾಷ್ಟಮಃ ।
ರಾಜತೋ ನವಮಸ್ತದ್ವದ್ದಶಮಃ ಶರ್ಕರಾಚಲಃ ॥ ೭ ॥

ವಕ್ಷ್ಯೇ ವಿಧಾನಮೇತೇಷಾಂ ಯಥಾವದನುಪೂರ್ವಶಃ ।
ಅಯನೇ ವಿಷುವೇ ಪುಣ್ಯೇ ವ್ಯತೀಪಾತೇ ದಿನಕ್ಷಯೇ ॥ ೮ ॥

ಶುಕ್ಲಪಕ್ಷೇ ತೃತೀಯಾಯಾಂ ಉಪರಾಗೇ ಶಶಿಕ್ಷಯೇ ।
ವಿವಾಹೋತ್ಸವ ಯಜ್ಞೇ ವಾ ದ್ವಾದಶ್ಯಾಮಥ ವಾ ಪುನಃ ॥ ೯ ॥

ಶುಕ್ಲಾಯಾಂ ಪಂಚದಶ್ಯಾಂ ವಾ ಪುಣ್ಯರ್ಕ್ಷೇ ವಾ ಪ್ರಧಾನತಃ ।
ಧಾನ್ಯಶೈಲಾದಯೋ ದೇಯಾ ಯಥಾ ಶಾಸ್ತ್ರಂವಿಜಾನತಾ ॥ ೧೦ ॥

ತೀರ್ಥೇ ವಾಯತನೇ ವಾಽಪಿ ಗೋಷ್ಠೇ ವಾ ಸಂಗಮೇಽಪಿ ವಾ ।
ಮಂಡಪಂ ಕಾರಯೇದ್ಭಕ್ತ್ಯಾ ಚತುರಸ್ರಮುದಙ್ಮುಖಂ ॥ ೧೧ ॥

---

೭. ಘೃತ(ತುಪ್ಪ)ಶೈಲವು ಏಳನೆಯದು, ರತ್ನಶೈಲವು ಎಂಟನೆಯದು, ರಾಜತಶೈಲವು ಒಂಬತ್ತನೆಯದು, ಶರ್ಕರಾಚಲವು ಹತ್ತನೆಯದು, ಈ ರೀತಿ ಹತ್ತು ಬಗೆಯ ಪರ್ವತಗಳನ್ನು ದಾನಮಾಡತಕ್ಕದ್ದೆಂದು ತಿಳಿಯಬೇಕು.

೮. ಈ ಪರ್ವತಗಳನ್ನು ಹೇಳಿದ ಅನುಕ್ರಮದಲ್ಲಿಯೇ ಅದರ ದಾನ ವಿಧಾನವನ್ನೂ ಹೇಳುತ್ತೇನೆ. ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳು ವಿಷುವತ್ಪುಣ್ಯಕಾಲ, ವ್ಯತೀಪಾತವಿರುವದಿನ ಈ ದಿನಗಳ ಸಂಧ್ಯಾಕಾಲಗಳು ಪ್ರಶಸ್ತವಾದುವು.

೯. ಶುಕ್ಲಪಕ್ಷದ ತದಿಗೆ, ಚಂದ್ರಗ್ರಹಣದದಿನ, ವಿವಾಹಾದಿ ಉತ್ಸವಕಾಲ, ಯಜ್ಞಾದಿಗಳನ್ನು ನಡೆಸುವಕಾಲ, ಅಥವಾ ದ್ವಾದಶಿ ಈ ದಿನಗಳಲ್ಲಿಯೋ.

೧೦. ಶುಕ್ಲಪಕ್ಷದ ಪೂರ್ಣಿಮಾ ಅಥವಾ ಪುಣ್ಯನಕ್ಷತ್ರಯುಕ್ತವಾದದಿನ ಈ ಕಾಲಗಳಲ್ಲಿಯೋ ತಿಳಿವಳಿಕೆಯುಳ್ಳ ಮನುಜನು ಧಾನ್ಯಶೈಲವೇ ಮೊದಲಾದುವುಗಳನ್ನು ಶಾಸ್ತ್ರೋಕ್ತ ಪ್ರಕಾರವಾಗಿ ದಾನಮಾಡಬೇಕು.

೧೧. ಪುಣ್ಯತೀರ್ಥಗಳು, ದೇವಸ್ಥಾನ, ದನದಕೊಟ್ಟಿಗೆ, ಸಂಗಮಸ್ಥಳ ಮುಂತಾದ ಯಾವ ಸ್ಥಳದಲ್ಲಿಯಾದರೂ ಉತ್ತರಾಭಿಮುಖವಾಗಿರುವಂತೆ ಚತುರಸ್ರಾಕಾರವಾಗಿ ಮಂಡಪವನ್ನು ಭಕ್ತಿಯಿಂದ ನಿರ್ಮಿಸಬೇಕು.

ಪ್ರಾಗುದಕ್ಪ್ರವಣಂ ತತ್ರ ಪ್ರಾಙ್ಮುಖಂ ವಾ ವಿಧಾನತಃ ।
ಗೋಮಯೇನಾನುಲಿಪ್ತಾಯಾಂ ಭೂಮಾವಾಸ್ತೀರ್ಯ ವಾ ಕುಶಾನ್॥

ತನ್ಮಧ್ಯೇ ಪರ್ವತಂ ಕುರ್ಯಾದ್ವಿಷ್ಕಂಭಪರ್ವತಾನ್ವಿತಂ ।
ಧಾನ್ಯದ್ರೋಣಸಹಸ್ರೇಣ ಭವೇದ್ಗಿರಿರಿಹೋತ್ತಮಃ ॥ ೧೩ ॥

ಮಧ್ಯಮಃ ಪಂಚಶತಿಕಃ ಕನಿಷ್ಠಃ ಸ್ಯಾ ತ್ರಿಭಿಃ ಶತೈಃ ॥ ೧೪ ॥

ಮೇರುರ್ಮಹಾವ್ರೀಹಿಮಯಸ್ತು ಮಧ್ಯ ।
ಸುವರ್ಣವೃಕ್ಷತ್ರಯ ಸಂಯುತಃ ಸ್ಯಾತ್ ॥
ಸಂಪೂರ್ಣ ಮುಕ್ತಾಫಲ ವಜ್ರಯುಕ್ತೋ ।
ಯಾಮ್ಯೇ ತು ಗೋಮೇದಕ ಪುಷ್ಪರಾಗೈಃ ॥ ೧೫ ॥

---

೧೨. ಆ ಮಂಡಪದಲ್ಲಿ ಪೂರ್ವದಕಡೆಗೋ ಉತ್ತರದಕಡೆಗೋ ಇಳಿಜಾರಾಗಿರುವ ಸ್ಥಳದಲ್ಲಿ ಗೋಮಯದಿಂದ ಸಾರಿಸಿ ಶುದ್ಧಮಾಡಿದ ಭೂಮಿಯಲ್ಲಿ ಅಗ್ರವು ಪೂರ್ವಾಭಿಮುಖವಾಗಿರುವಂತೆ ದರ್ಭೆಯನ್ನು ಹರಡಬೇಕು.

೧೩. ಆ ಮಧ್ಯದಲ್ಲಿ ಒಂದು ಸಾವಿರದ್ರೋಣ ಪರಿಮಿತಿಯುಳ್ಳ ಧಾನ್ಯದಿಂದ ಸುತ್ತಲೂ ಉಪಪರ್ವತಯುಕ್ತವಾಗಿರುವಂತೆ ಒಂದು ದೊಡ್ಡ ಪರ್ವತವನ್ನು ಮಾಡಬೇಕು. ಈ ರೀತಿ ಮಾಡಿದರೆ ಅದು ಉತ್ತಮವಾದ ಪರ್ವತವೆನಿಸುವುದು.

೧೪. ಐನೂರು ದ್ರೋಣ ಪರಿಮಿತಿ ಧಾನ್ಯದಿಂದ ಮಾಡಿದರೆ ಕನಿಷ್ಠ ಪರ್ವತವೆಂದು ತಿಳಿಯಬೇಕು.

೧೫. ಸುತ್ತಲೂ ಸಮೃದ್ಧಿಯಾಗಿ ವ್ರೀಹಿಮಯವಾಗಿಯೂ ಅದರ ಮಧ್ಯದಲ್ಲಿ ಮೂರು ಚಿನ್ನದ ವೃಕ್ಷಗಳಿಂದ ಸಹಿತವಾಗಿಯೂ ಆ ವೃಕ್ಷವು ಪೂರ್ಣವಾಗಿ ಮುತ್ತು ವಜ್ರ ಇವುಗಳನ್ನು ಉಳ್ಳದ್ದಾಗಿಯೂ, ಅದರ ದಕ್ಷಿಣಭಾಗದದಲ್ಲಿ ಗೋಮೇದಕ ಪುಷ್ಯರಾಗ ಇವುಗಳನ್ನು ಉಳ್ಳದ್ದಾಗಿಯೂ ಇರುವ ಈ ವ್ರೀಹಿಯ ಪರ್ವತವೇ ಧಾನ್ಯದ ಮಹಾ ಮೇರುವೆನಿಸುವುದು.

ಯಃ ಸ್ಯಾಚ್ಚ ಗಾರುತ್ಮತನೀಲರತ್ನೈಃ ।
ಸೌಮ್ಯೇನ ವೈಡೂರ್ಯಸರೋಜರಾಗೈಃ ॥
ಶ್ರೀಖಂಡಖಂಡೈರಭಿತಃ ಪ್ರವಾಲ ।
ಲತಾನ್ವಿತಃ ಶುದ್ಧಶಿಲಾತಲಃ ಸ್ಯಾತ್ ॥ ೧೬ ॥

ಬ್ರಹ್ಮಾಥ ವಿಷ್ಣುರ್ಭಗವಾನ್ಪುರಾರಿಃ ।
ದಿವಾಕರೋಽಪ್ಯತ್ರ ಹಿರಣ್ಮಯಃ ಸ್ಯಾತ್ ॥
ತಥೈಕದೇಶೋದ್ಧತ ಕಂಧರಸ್ತು ।
ಘೃತೋದಕ ಪ್ರಸ್ರವಣಾಶ್ಚ ದಿಕ್ಷು ॥ ೧೭ ॥

ಶುಕ್ಲಾಂಬರೋಽನ್ಯಶ್ಚ ಸುರಾಚಲಃ ಸ್ಯಾತ್ ।
ಪೂರ್ವೇಣ ಕೃಷ್ಣಾನಿ ಚ ದಕ್ಷಿಣೇನ ॥
ವಾಸಾಂಸಿ ಪಶ್ಚಾದಥ ಕೇಸರಾಣಿ ।
ರಕ್ತಾನಿ ಚೈವೋತ್ತರತೋ ದಲಾನಿ ॥ ೧೮ ॥

---

೧೬. ಮತ್ತು ಅಲ್ಲಲ್ಲಿ ನೀಲವಾದ ಗರುಡಪಚ್ಚೆಯ ರತ್ನಗಳಿಂದಲೂ, ಮತ್ತು ಸೌಮ್ಯವಾದ ವೈಡೂರ್ಯ ರತ್ನಗಳಿಂದಲೂ, ಕೆಂಪುಬಣ್ಣದ ಪದ್ಮರಾಗರತ್ನಗಳಿಂದಲೂ ಸುತ್ತಲೂ ಶ್ರೀ ಗಂಧದ ಗಟ್ಟಿಗಳಿಂದಲೂ ಮುತ್ತಿನ ಲತೆಗಳಿಂದಲೂ ಕೂಡಿರುವಂತೆ ಮಾಡಿದ ಒಂದು ಬೆಳ್ಳಿಯ ಶಿಲೆಯು ಇರಬೇಕು.

೧೭. ಬ್ರಹ್ಮ, ವಿಷ್ಣು, ಇಂದ್ರ, ಮತ್ತು ಸೂರ್ಯ ಇವರ ಪ್ರತಿಮೆಯನ್ನು ಅವರು ಕಂಠವನ್ನು ಮೇಲಕ್ಕೆ ಎತ್ತಿಕೊಂಡಿರುವಂತೆ ಸುವರ್ಣದಿಂದ ನಿರ್ಮಿಸಬೇಕು. ಮತ್ತು ಎಲ್ಲ ದಿಕ್ಕುಗಳಲ್ಲಿ ಘೃತದಂತಿರುವ ನೀರು ಹರಿಯುತ್ತಿರಬೇಕು.

೧೮. ಇನ್ನೊಂದು ಸುರಾಚಲವನ್ನು ಪೂರ್ವಭಾಗದಲ್ಲಿ ಶುಕ್ಲಾಂಬರವುಳ್ಳದ್ದೂ ದಕ್ಷಿಣಭಾಗದಲ್ಲಿ ಕೃಷ್ಣಾಂಬರವುಳ್ಳದ್ದೂ ಆಗಿ ಪಶ್ಚಿಮದಲ್ಲಿ ಕೇಸರಗಳೂ ಉತ್ತರಭಾಗದಲ್ಲಿ ಕೆಂಪಾದ ದಲಗಳೂ ಇರುವಂತೆ ರಚಿಸಬೇಕು.

ರೌಪ್ಯಾ ಮಹೇಂದ್ರಪ್ರಮುಖಾಸ್ತಥಾಷ್ಟೌ ।
ಸಂಸ್ಥಾಪಯೇಲ್ಲೋಕಪತೀನ್ಕ್ರಮೇಣ ॥
ನಾನಾಫಲಾಳೀ ಚ ಸಮಂತತಃ ಸ್ಯಾ ।
ನ್ಮನೋರಮಾಮಾಲ್ಯವಿಲೇಪನಾದ್ಯಾ ॥ ೧೯ ॥

ವಿತಾನಕಂಚೋಪರಿ ಪಂಚವರ್ಣ ।
ಮಮ್ಲಾನಪುಷ್ಪಾಭರಣಂ ಸಿತಂ ವಾ ॥
ಇತ್ಥಂ ನಿವೇಶ್ಯಾಮರಶೈಲಮುಪ್ಯ ।
ನ್ಮನಾಸ್ತು ವಿಷ್ಕಂಭಗಣಾನ್ ಕ್ರಮೇಣ ॥ ೨೦ ॥

ತುರೀಯ ಭಾಗೇನ ಚತುರ್ದಿಶಂ ಚ ।
ಸಂಸ್ಥಾಪಯೇತ್ಪುಷ್ಪ ವಿಲೇಪನಾದ್ಯಾನ್ ॥
ಪೂರ್ವೇಣ ಮಂದರಮನೇಕಫಲೋಪಯುಕ್ತಂ ।
ಯತ್ರೋಲ್ಲಸತ್ಕನಕಭದ್ರಕದಂಬಚಿಹ್ನಂ ॥ ೨೧ ॥

---

೧೯. ಕ್ರಮವಾಗಿ ಮಹೇಂದ್ರನೇ ಮೊದಲಾದ ಎಂಟುಜನ ಲೋಕಪಾಲಕರ ಪ್ರತಿಮೆಯನ್ನು ಬೆಳ್ಳಿಯಿಂದ ನಿರ್ಮಿಸಿ ಅದರ ಎಂಟು ದಿಕ್ಕುಗಳಲ್ಲಿಯೂ ಇರಿಸಬೇಕು. ಸುತ್ತಲೂ ನಾನಾ ವಿಧಗಳಾದ ಫಲಗಳನ್ನೂ ಮತ್ತು ಮನೋಹರವಾದ ಹೂಮಾಲೆಗಳನ್ನೂ ಗಂಧ ಮೊದಲಾದ ವಿಲೇಪನವಸ್ತುಗಳನ್ನೂ ಇರಿಸಬೇಕು.

೨೦. ಆ ಮಂಡಪದ ಮೇಲ್ಭಾಗದಲ್ಲಿ ಐದುವರ್ಣಗಳುಳ್ಳ (ವಿತಾನಕ) ಚಪ್ಪರ ಮೇಲ್ಕಟ್ಟನ್ನು ಕಟ್ಟಿಸಿ ಬಾಡಿಲ್ಲದೆ ಬೆಳ್ಳಗೆ ಇರತಕ್ಕ ಹೂವಿನಿಂದ ಅಲಂಕರಿಸಬೇಕು. ಈ ಪ್ರಕಾರ ಮೇರುವನ್ನು ರಚಿಸಿದ ಮೇಲೆ ಅದರ ಸುತ್ತಿನಲ್ಲಿ ಕ್ರಮವಾಗಿ ವಿಷ್ಕಂಭಪರ್ವತಸಮೂಹಗಳನ್ನು ಅದರ ನಾಲ್ಕರಲ್ಲಿ ಒಂದರಷ್ಟು ಪ್ರಮಾಣವುಳ್ಳ ಹಾಗೆ ಶುದ್ಧವಾದ ಮನಸ್ಸಿನಿಂದ ನಿರ್ಮಿಸಬೇಕು.

೨೧. ಅದರ ನಾಲ್ಕು ದಿಕ್ಕುಗಳಲ್ಲಿಯೂ ಪುಷ್ಪಗಳನ್ನು ಗಂಧಾದಿವಿಲೇಪನ ವಸ್ತುಗಳನ್ನೂ ಇರಿಸಬೇಕು. ಪೂರ್ವಭಾಗದಲ್ಲಿ ಬಹು ಫಲಯುಕ್ತವಾಗಿಯೂ ಮತ್ತು ಮಂಗಳಕರವಾಗಿಯೂ ಇರುವ ಚಿನ್ನದ ಕದಂಬವೃಕ್ಷಗಳುಳ್ಳ ಮಂದರ ಪರ್ವತವನ್ನು ನಿರ್ಮಿಸಬೇಕು.

ಕಾಮೇನ ಕಾಂಚನಮಯೇನ ವಿರಾಜಮಾನ ।
ಮಾಕಾರಯೇತ್ಕುಸುಮವಸ್ತ್ರವಿಲೇಪನಾಢ್ಯಂ ॥
ಕ್ಷೀರಾರುಣೋದಸರಸಾಥ ತಥಾ ವನೇನ ।
ರೌಪ್ಯೇಣ ಶಕ್ತಿಘಟಿತೇನ ವಿರಾಜಮಾನಂ ॥ ೨೨ ॥

ಯಾಮ್ಯೇನ ಗಂಧಮದನೋऽತ್ರ ನಿವೇಶನೀಯೋ ।
ಗೋಧೂಮಸಂಚಯಮಯಃ ಕಲಧೌತಜೋ ವಾ ॥
ಹೈಮೇನ ಪಕ್ಷಿಪತಿನಾ ಧೃತಮಾನಸೇನ ।
ತೇನಾದ್ಯಮೇವ ಸಕಲಂ ಕಿಲಸಂಯುತಃ ಸ್ಯಾತ್ ॥ ೨೩ ॥

ಪಶ್ಚಾತ್ತಿಲಾಚಲಮನೇಕಸುಗಂಧಪುಷ್ಪ ।
ಸೌವರ್ಣಪಿಪ್ಪಲಹಿರಣ್ಮಯಹಂಸಯುಕ್ತಂ ॥
ಆಕಾರಯೇದ್ರಜತಪುಷ್ಪವನೇನ ತದ್ವ ।
ದ್ವಸ್ತ್ರಾನ್ವಿತಂ ದಧಿಶತೋದಸರಸ್ತಥಾಗ್ರೇ ॥ ೨೪ ॥

---

೨೨. ಮತ್ತು ಆ ಪರ್ವತದಲ್ಲಿ ಸುವರ್ಣದಿಂದ ನಿರ್ಮಿಸಲ್ಪಟ್ಟ ಕಾಮದೇವ ಪ್ರತಿಮೆಯನ್ನಿಡಬೇಕು. ಆ ಪ್ರತಿಮೆಯು ಪುಷ್ಪ, ವಸ್ತ್ರ, ಗಂಧಾದಿ ಲೇಪನ ದ್ರವ್ಯಗಳು, ಬೆಳ್ಳಿಯ ಶಕ್ತ್ಯಾಯುಧ ಇವುಗಳಿಂದ ಕೂಡಿಯೂ ಕ್ಷೀರವರ್ಣ ಮತ್ತು ಮತ್ತು ಅರುಣವರ್ಣವುಳ್ಳ ನೀರಿನ ಸರೋವರದಿಂದಲೂ ವನದಿಂದಲೂ ಕೂಡಿ ಪ್ರಕಾಶಿಸುತ್ತಿರಬೇಕು.

೨೩. ದಕ್ಷಿಭಾಗದಲ್ಲಿ ಗೋಧಿಯಿಂದ ಅಥವಾ ಚಿನ್ನದಿಂದ ಗಂಧಮಾದನ ಪರ್ವತವನ್ನು ನಿರ್ಮಿಸಬೇಕು. ಮತ್ತು ಆದರಲ್ಲಿ ಚಿನ್ನದಿಂದ ಪಕ್ಷಿರಾಜನಾದ ಹಂಸವನ್ನು ಮಾನಸಸರೋವರಯುಕ್ತವಾಗಿರುವಂತೆ ನಿರ್ಮಿಸಬೇಕು. ಈ ರೀತಿ ಮಾಡಿದಲ್ಲಿ ಆದರ ರಚನೆ ಸಕಲ ಸಮಗ್ರವಾದ ಹಾಗೆ ಆಗುವುದು.

೨೪. ಪಶ್ಚಿಮದಿಕ್ಕಿನಲ್ಲಿ ಎಳ್ಳಿನ ರಾಶಿಯಿಂದ ಪರ್ವತವನ್ನು ರಚಿಸಿ ಅದರ ಮೇಲೆ ಬೆಳ್ಳಿಯಿಂದ ಮಾಡಿದ ಒಂದು ಉದ್ಯಾನ ಪ್ರತಿಕೃತಿಯನ್ನು ಅದರಲ್ಲಿ ಅನೇಕ ವಿಧವಾದ ಸುವಾಸನಾ ಪುಷ್ಪಯುಕ್ತವಾದ ಚಿನ್ನದ ಅಶ್ವತ್ಥವೃಕ್ಷ ಮತ್ತು ಚಿನ್ನದ ಹಂಸ ಇವುಗಳಿಂದ ಕೂಡಿರುವಂತೆ ರಚಿಸಬೇಕು. ಆದನ್ನು ವಸ್ತ್ರದಿಂದ ಆಚ್ಛಾದಿಸಬೇಕು. ಮುಂಭಾಗದಲ್ಲಿ ಮೊಸರನ್ನು ಇರಿಸಿ ನೂರಾರು ಜಲಸರೋವರಗಳನ್ನು ಕಾಣಿಸಬೇಕು.

**ಸಂಸ್ಥಾಪ್ಯ ತಂ ವಿಪುಲಶೈಲಮಥೋತ್ತರೇಣ ।**
**ಶೈಲಂ ಸುಪಾರ್ಶ್ವಮಪಿ ಮಾಷಮಯಂ ಸುವಪ್ರಂ ॥**
**ಪುಷ್ಪೈಶ್ಚ ಹೇಮವಟಪಾದಪಶೇಷರತ್ನ ।**
**ಮಾಕಾರಯೇತ್ಕನಕಧೇನುವಿರಾಜಮಾನಂ ॥ ೨೫ ॥**

**ಮಾಕ್ಷೀಕಭದ್ರಕರಸಾವಚಯೇನ ತದ್ವ ।**
**ದ್ರೌಪ್ಯೇಣ ಭಾಸ್ವರರಸೈಶ್ಚ ಯುತಂ ವಿಧಾಯ ॥**
**ಹೋಮಶ್ಚತುರ್ಭಿರಥ ವೇದಪುರಾಣವಿದ್ಭಿಃ ।**
**ಹ್ಯೇತೈರನಿಂದ್ಯ ಚರಿತಾಕೃತಿಭಿರ್ದ್ವಿಜೇಂದ್ರೈಃ ॥ ೨೬ ॥**

**ಪೂರ್ವೇಣ ಹಸ್ತಮುಖಮತ್ರ ವಿಧಾಯ ಕುಂಡಂ ।**
**ಕಾರ್ಯಸ್ತಿಲೈರಥ ಘೃತೇನ ಸಮಿತ್ಕುಶೈಶ್ಚ ॥**

---

೨೫. ಈ ಪ್ರಕಾರವಿರುವ ಮನೋಹರವಾದ ಪರ್ವತವು ವಿಪುಲವೆಂಬ ಹೆಸರುಳ್ಳದ್ದು ಬಳಿಕ ಉತ್ತರಭಾಗದಲ್ಲಿ ಉದ್ದಿನ ರಾಶಿಯಿಂದ ಸುಪಾರ್ಶ್ವ ಪರ್ವತವನ್ನು ರಚಿಸಿ, ಸುವರ್ಣದ ಮನೋಹರವಾದ ವಟವೃಕ್ಷವು ಹೂವುಗಳಿಂದ ಯುಕ್ತವಾಗಿರುವಂತೆ ಪ್ರತಿಮೆ ಮಾಡಿಸಿ ಇರಿಸಿ ಅದರ ಒಳಿಯಲ್ಲಿ ಚೆನ್ನಾಗಿ ಪ್ರಕಾಶಿಸುವಂತೆ ಒಂದು ಸುವರ್ಣದ ಧೇನುವನ್ನು ನಿರ್ಮಿಸಬೇಕು.

೨೬. ಮತ್ತು ಆ ಪರ್ವತವು ಜೇನುತುಪ್ಪವೇ ಮೊದಲಾದ ಮಂಗಳ ದಾಯಕವಾದ ವಸ್ತುಗಳೊಡಗೂಡಿಯೂ, ಬೆಳ್ಳಗೆ ಪ್ರಕಾಶಿಸುವ ಕಾಂತಿಸಹಿತ ವಾದ ರಸಗಳಿಂದ ಕೂಡಿಯೂ ಇರಬೇಕು. ಈ ರೀತಿ ನಿರ್ಮಿಸಿ ಅನಂತರ ವೇದ ಮತ್ತು ಪುರಾಣಗಳನ್ನು ತಿಳಿದವರೂ ಮಹಾತೇಜಸ್ವಿಗಳೂ ಮನೋಹರ ವಾದ ಆಕಾರವುಳ್ಳವರೂ ಆಗಿರುವ ಶ್ರೇಷ್ಠರಾದ ನಾಲ್ವರು ಬ್ರಾಹ್ಮಣರಿಂದ ಹೋಮಕಾರ್ಯವನ್ನು ನಡೆಸಬೇಕು.

೨೭. ಒಂದುಹಸ್ತ ಚತುರಸ್ರವುಳ್ಳಹಾಗೆ ಪೂರ್ವಾಭಿಮುಖವಾಗಿ ಒಂದು ಕುಂಡವನ್ನು ರಚಿಸಿ ಅದರಲ್ಲಿ ಎಳ್ಳು, ತುಪ್ಪ, ಸಮಿತ್ತು, ದರ್ಭೆ ಈ ಹವಿರ್ದ್ರವ್ಯ ಗಳಿಂದ ಹೋಮವನ್ನು ಮಾಡಬೇಕು. ಮತ್ತು ಆ ದಿನ ಆಡಂಬರವಿಲ್ಲದೆ

ರಾತ್ರೌ ಚ ಜಾಗರಮನುದ್ಧತಗೀತತೂರ್ಯೈಃ ।
ರಾವಾಹನಂ ಚ ಕಥಯಾಮಿ ಶಿಲೋಚ್ಚಯಾನಾಂ ॥ ೨೭ ॥

ತ್ವಂ ಸರ್ವದೇವಗಣಧಾಮನಿಧೇ ಚ ವಿಘ್ನಂ ।
ಅಸ್ಮದ್ಗೃಹೇಷ್ವಮರಪರ್ವತ ನಾಶಯಾಶು ॥
ಕ್ಷೇಮಂ ವಿಧತ್ಸ್ವ ಕುರು ಶಾಂತಿಮನುತ್ತಮಾಂ ನಃ ।
ಸಂಪೂಜಿತಃ ಪರಮಭಕ್ತಿಮತಃ ಪ್ರದೇಹಿ ॥ ೨೮ ॥

ತ್ವಮೇವ ಭಗವಾನೀಶೋ ಬ್ರಹ್ಮಾವಿಷ್ಣುರ್ದಿವಾಕರಃ ।
ಮೂರ್ತಾಮೂರ್ತಪರಂ ಬೀಜಮತಃ ಪಾಹಿ ಸನಾತನ ॥ ೨೯ ॥

ಯಸ್ಮಾತ್ತ್ವಂ ಲೋಕಪಾಲಕಾನಾಂ ವಿಶ್ವಮೂರ್ತೇಶ್ಚ ಮಂದಿರಂ ।
ಕೇಶವಾರ್ಕವಸೂನಾಂ ಚ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ೩೦ ॥

---

ಸೌಮ್ಯವಾದ ಸಂಗೀತ, ನೃತ್ಯ, ವೇದಘೋಷ ಇತ್ಯಾದಿಗಳಿಂದ ಜಾಗರಣೆ ಮಾಡಬೇಕು. ಇನ್ನು ಆ ಪರ್ವತಗಳ ಪ್ರಾರ್ಥನಾವಿಧಾನವನ್ನು ಹೇಳುತ್ತೇನೆ.

೨೮. ಎಲೈ ದೇವತಾಸ್ವರೂಪಿಯಾದ ದೇವಪರ್ವತವೇ ! ನೀನು ಸಮಸ್ತ ದೇವತೆಗಳ ಸಮೂಹಗಳಿಗೂ ಆವಾಸವಾಗಿದ್ದೀಯೆ. ಇಂಥ ನಿನ್ನನ್ನು ಪೂಜಿಸುತ್ತೇನೆ. ನೀನು ನನ್ನ ಪೂಜೆಯಿಂದ ಸಂತುಷ್ಟಿಹೊಂದಿ ನಮ್ಮ ಮನೆಗಳಲ್ಲಿ ಒದಗುವ ವಿಘ್ನಗಳನ್ನು ಜಾಗ್ರತೆಯಾಗಿ ನಾಶಮಾಡಿ ನಮಗೆ ಕ್ಷೇಮವನ್ನುಂಟುಮಾಡು. ಸರ್ವೋತ್ತಮವಾದ ಶಾಂತಿಯನ್ನು ಕರುಣಿಸು. ನನಗೆ ಉತ್ತಮವಾದ ಭಕ್ತಿಯನ್ನು ಕೊಡು.

೨೯. ಎಲೈ ಸನಾತನವಾದ ಪರ್ವತವೇ! ಸಾಕ್ಷಾದ್ಭಗವಂತರಾದ ಈಶ್ವರ, ಬ್ರಹ್ಮ, ವಿಷ್ಣು, ಸೂರ್ಯ ಎಲ್ಲವೂ ನೀನೇ ಆಗಿರುತ್ತೀ. ಮತ್ತು ಸಕಲ ಮೂರ್ತವಸ್ತುಗಳು ಅಮೂರ್ತವಸ್ತುಗಳು ಎಲ್ಲಕ್ಕೂ ಬೀಜಭೂತವಾಗಿದ್ದೀಯೆ. ಆದುದರಿಂದ ನೀನು ನನ್ನನ್ನು ರಕ್ಷಣೆಮಾಡು.

೩೦. ನೀನು ಲೋಕಪಾಲಕರಿಗೂ ಮತ್ತು ಕೇಶವ, ಸೂರ್ಯ, ಅಷ್ಟವಸುಗಳು ಇವರಿಗೂ ಮತ್ತು ಪ್ರಪಂಚಸ್ವರೂಪಿಯಾದ ಪರಮಾತ್ಮನಿಗೂ ಸಹ ಆವಾಸ ಸ್ಥಾನವಾಗಿದ್ದೀಯೆ. ಆದುದರಿಂದ ನೀನು ನನಗೆ ಶಾಂತಿಯನ್ನು ಕರುಣಿಸು.

**ಯಸ್ಮಾದಶೂನ್ಯಮಮರೈರ್ಗಂಧರ್ವೈಶ್ಚ ಶಿರಸ್ತವ |**
**ತಸ್ಮಾನ್ಮಾಮುದ್ಧರಾಶೇಷದುಃಖಸಂಸಾರಸಾಗರಾತ್ || ೩೧ ||**

**ಏವಮಭ್ಯರ್ಚ್ಯ ತಂ ಮೇರುಂ ಮಂದರಂ ಚಾಪಿ ಪೂಜಯೇತ್ |**
**ಯಸ್ಮಾಚ್ಚೈತ್ರರಥೇನಾಥ ಭದ್ರಾಶ್ವವರ್ಷೇಣ ಚ || ೩೨ ||**

**ಶೋಭಸೇ ಮಂದರ ಕ್ಷಿಪ್ರಮತಸ್ತುಷ್ಟಿಕರೋ ಭವ |**
**ಯಸ್ಮಾಚ್ಚೂಡಾಮಣಿರ್ಜಂಬೂದ್ವೀಪೇ ತ್ವಂ ಗಂಧಮಾದನಃ || ೩೩ ||**

**ಗಂಧರ್ವೈರಪ್ಸರೋಭಿಶ್ಚ ಗೀಯಮಾನಂ ಯಶೋಽಸ್ತು ನೇ |**
**ಯಸ್ಮಾತ್ತ್ವಂ ಕೇತುಮಾಲೇನ ವೈಭ್ರಾಜೇನ ವನೇನ ಚ || ೩೪ ||**

---

೩೧. ನಿನ್ನ ಶಿಖರದಲ್ಲಿ ದೇವತೆಗಳೂ, ಗಂಧರ್ವರೂ ಸರ್ವದಾ ಇರುತ್ತಾರೆ. ಇಂಥಾ ದೇವಾತ್ಮನೆನಿಸಿ ಇವರೊಡಗೂಡಿದ ನೀನು ನನ್ನನ್ನು ಅಪಾರ ದುಃಖಯುಕ್ತವಾದ ಸಂಸಾರಸಾಗರದಿಂದ ಪಾರುಮಾಡಿ ಉದ್ಧಾರಮಾಡು.

೩೨. ಈ ಪ್ರಕಾರ ಈ ಮೇರುಪರ್ವತವನ್ನು ಅರ್ಚನೆಮಾಡಿ ಅನಂತರ ಇದೇ ಪ್ರಕಾರ ಮಂದರಪರ್ವತವನ್ನು ಪ್ರಾರ್ಥಿಸಬೇಕು. "ಎಲೈ ಮಂದರ ಪರ್ವತವೇ ! ನೀನು ಇಂದ್ರನ ಉದ್ಯಾನವಾದ ಚೈತ್ರರಥದಿಂದಲೂ ನವವರ್ಷಗಳಲ್ಲಿ ಒಂದೆನಿಸಿಸಿದ ಭದ್ರಾಶ್ವವರ್ಷದಿಂದಲೂ ಯುಕ್ತವಾಗಿದ್ದೀಯೆ.

೩೩. ಈ ಪ್ರಕಾರದಿಂದ ಶೋಭಿಸುತ್ತಿರುವ ನೀನು ನನಗೆ ತುಷ್ಟಿದಾಯಕನಾಗು" ಎಂದು ಪ್ರಾರ್ಥಿಸಿ ಬಳಿಕ ಗಂಧಮಾದನ ಪರ್ವತವನ್ನು ಪ್ರಾರ್ಥಿಸುವನಾಗಿ ಎಲೈ ಗಂಧಮಾದನವೇ ! ನೀನು ಈ ಜಂಬೂದ್ವೀಪಕ್ಕೆ ಚೂಡಾಮಣಿಯಂತೆ ಇರುತ್ತೀಯೆ.

೩೪. ನಾನು ಮಾಡಿದ ಆರಾಧನೆಯಿಂದ ನೀನು ಸುಪ್ರೀತನಾಗಿ ಗಂಧರ್ವರೂ ಅಪ್ಸರಸ್ತ್ರೀಯರೂ ಸಹ ನನ್ನ ಯಶಸ್ಸನ್ನು ಗಾನಮಾಡುವಂತೆ ವಿಖ್ಯಾತಿ ಮಾಡು.

ಹಿರಣ್ಮಯಮಯಪಾಷಾಣಸ್ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ।
ಉತ್ತರೈಃ ಕುರುಭಿರ್ಯಸ್ಮಾತ್ಸಾವಿತ್ರೇಣ ವನೇನ ಚ ॥ ೩೫ ॥

ಸುಪಾರ್ಶ್ವ ರಾಜಸೇ ನಿತ್ಯಮತಃ ಶ್ರೀರಕ್ಷಯಾಸ್ತು ಮೇ ।
ಏವಮಾಮಂತ್ರ್ಯ ತಾನ್ಸರ್ವಾನ್ಪ್ರಭಾತೇ ವಿಮಲೇ ಪುನಃ ॥ ೩೬ ॥

ಸ್ನಾತ್ವಾ ತು ಗುರವೇ ದದ್ಯಾನ್ಮಧ್ಯಮಂ ಪರ್ವತೋತ್ತಮಂ ।
ಶೇಷಾಂಶ್ಚ ಪಂಚ ತಾನ್‌ದದ್ಯಾದೃತ್ವಿಗ್ಭ್ಯಃ ಕ್ರಮಶೋ ನೃಪ ॥ ೩೭ ॥

ಗಾವೋ ದೇಯಾಶ್ಚತುಸ್ತ್ರಿಂಶದಥ ವಾ ದಶ ಭಾರತ ।
ಶಕ್ತಿತಃ ಸಪ್ತ ವಾಷ್ಟೌವಾ ಏವಂ ದದ್ಯಾದಶಕ್ತಿಮಾನ್ ॥ ೩೮ ॥

---

೩೫. ಎಲೈ ಸುವರ್ಣ ಭೂಯಿಷ್ಠವಾದ ಶಿಲೆಯುಳ್ಳ ಗಂಧಮಾದನ ಪರ್ವತವೇ! ನೀನು ನವವರ್ಷಗಳಲ್ಲಿ ಒಂದು ಎನಿಸಿದ ಕೇತು ಮಾಲದಿಂದಲೂ ವೈಭ್ರಾಜವೆಂಬ ವನದಿಂದಲೂ ರಾಜಿಸುತ್ತೀಯೆ. ಇಂತಹ ನೀನು ನನಗೆ ಶಾಂತಿಯನ್ನುಂಟುಮಾಡು.

೩೬. ಎಲೈ ಸುಪಾರ್ಶ್ವಪರ್ವತವೇ! ನೀನು ನವವರ್ಷಗಳಲ್ಲಿ ಒಂದಾದ ಉತ್ತರಕುರುವರ್ಷದಿಂದಲೂ ಸಾವಿತ್ರವೆಂಬ ವನದಿಂದಲೂ ಬೆಳಗುತ್ತಿರುವೆ. ಇಂತಹ ನಿನ್ನ ಆರಾಧನೆಯಿಂದ ನನಗೆ ನಿತ್ಯವೂ ಅಕ್ಷಯವೂ ಆದ ಸಂಪತ್ತು ಲಭಿಸಲಿ ಎಂಬ ಅರ್ಥದ ಮಂತ್ರಪೂರ್ವಕವಾಗಿ ಆ ಪರ್ವತಗಳನ್ನೆಲ್ಲಾ ಪ್ರಾರ್ಥಿಸಿ ನಮಸ್ಕರಿಸಬೇಕು.

೩೭. ಮಾರನೆಯದಿನ ಪ್ರಾತಃಕಾಲ ಸ್ನಾನಾದಿಗಳನ್ನು ಮಾಡಿ ಮಧ್ಯದಲ್ಲಿರತಕ್ಕ ಆ ಪರ್ವತವನ್ನು ಆಚಾರ್ಯನಿಗೆ ದಾನಮಾಡಬೇಕು. ಎಲೈ ರಾಜನೇ! ಇನ್ನುಳಿದುವುಗಳನ್ನು ಕ್ರಮವಾಗಿ ಋತ್ವಿಜರಿಗೆ ದಾನಮಾಡಬೇಕು.

೩೮ ಅಯ್ಯಾ ಭರತವಂಶೋತ್ಪನ್ನನಾದ ಯುಧಿಷ್ಠಿರ! ಈ ಸಂದರ್ಭದಲ್ಲಿ ಮುವ್ವತ್ತನಾಲ್ಕು ಗೋವುಗಳನ್ನು ದಾನಮಾಡಬೇಕು. ಇಲ್ಲದಿದ್ದರೆ ಹತ್ತನ್ನಾದರೂ ದಾನಮಾಡಬೇಕು. ಇಷ್ಟಕ್ಕೂ ಶಕ್ತಿ ಇಲ್ಲದವನು ತನ್ನ ಶಕ್ತ್ಯನುಸಾರ ಏಳು ಗೋವನ್ನೋ ಅಥವಾ ಎಂಟು ಗೋವನ್ನೋ ದಾನಮಾಡಬೇಕು.

ಏಕಾಪಿ ಗುರುವೇ ದೇಯಾ ಕಪಿಲಾ ಸುಪಯಸ್ವಿನೀ ||
ಪರ್ವತಾನಾಮಶೇಷಾಣಾಮೇಷ ಏವ ವಿಧಿಃ ಸ್ಮೃತಃ || ೩೯ ||

ಯ ಏವ ಪೂಜನೇ ಮಂತ್ರಾಃ ತ ಏವೋಪಸ್ಕರೇ ತಥಾ |
ಗ್ರಹಾಣಾಂ ಲೋಕಪಾಲಾನಾಂ ಬ್ರಹ್ಮಾದೀನಾಮಗ್ನೈಸ್ಸಹ || ೪೦ ||

ಸ್ವಮಂತ್ರೇಣೈವ ಸರ್ವೇಷು ಹೋಮಃ ಶೈಲೇಷು ಶಸ್ಯತೇ |
ಉಪವಾಸೀ ಭವೇನ್ನಿತ್ಯಮಶಕ್ತೌ ನಕ್ತಮಿಷ್ಯತೇ || ೪೧ ||

ವಿಧಾನಂ ಸರ್ವಶೈಲಾನಾಂ ಕ್ರಮಶಃ ಶೃಣು ಭಾರತ |
ದಾನಕಾಲೇಷು ಯೇ ಮಂತ್ರಾಃ ಪರ್ವತೇಷು ಚ ಯತ್ಫಲಂ || ೪೨ ||

---

೩೯. ಕನಿಷ್ಠಪಕ್ಷ ಚೆನ್ನಾಗಿ ಹಾಲುಕೊಡತಕ್ಕ ಮತ್ತು ಕಪಿಲವರ್ಣ ಉಳ್ಳ ಒಂದು ಗೋವನ್ನಾದರೂ ಆಚಾರ್ಯನಿಗೆ ದಾನಮಾಡಲೇಬೇಕು. ಸಕಲ ಪರ್ವತಗಳ ದಾನಕ್ಕೂ ಇದೇ ರೀತಿ ವಿಧಿಯಿದೆ.

೪೦. ಇವುಗಳ ಪೂಜೆಯಲ್ಲಿ ಹೇಳುವ ಮಂತ್ರಗಳೆಲ್ಲಾ ಏಕಪ್ರಕಾರ ವಾದುವು. ಪೂಜೆಯ ಉಪಸ್ಕರಗಳೂ ಹಾಗೆಯೇ ಇರಬೇಕು. ಮತ್ತು ಆಯಾಯಾ ಪರ್ವತಗಳೊಡನೆ ಬ್ರಹ್ಮನೇ ಮೊದಲಾದವರಿಗೂ ಲೋಕಪಾಲಕರಿಗೂ ಗ್ರಹಗಳಿಗೂ ಅದೇರೀತಿ ಪೂಜಾದಿಗಳು ನಡೆಯಬೇಕು.

೪೧. ಆ ಶೈಲಗಳಿಗೆ ಸಂಬಂಧಿಸಿದ ಹೋಮಗಳೂ ಕೂಡ ಆಯಾಯಾ ಮಂತ್ರಗಳಿಂದಲೇ ನಡೆಯಬೇಕೆಂದು ಉಕ್ತವಾಗಿದೆ. ಆ ದಿವಸ ಪೂರ್ತಿಯಾಗಿ ಉಪವಾಸವಿರಬೇಕು. ಆ ಪ್ರಕಾರ ಮಾಡಲು ಶಕ್ತಿ ಸಾಲದಿದ್ದರೆ ಸಾಯಂಕಾಲದ ವರೆಗಾದರೂ ಉಪವಾಸವಿರಬೇಕು.

೪೨. ಅಯ್ಯಾ ಯುಧಿಷ್ಠಿರ! ಕ್ರಮವಾಗಿ ಸಮಸ್ತ ಪರ್ವತಗಳ ಪೂಜಾ ವಿಧಾನವನ್ನೂ ಮತ್ತು ಪರ್ವತಗಳ ದಾನಕಾಲಗಳಲ್ಲಿ ಉಪಯೋಗಿಸಬೇಕಾದ ಮಂತ್ರಗಳನ್ನೂ ಮತ್ತು ಫಲಗಳನ್ನೂ ಹೇಳುವೆನು ಕೇಳು.

ಅನ್ನಂ ಬ್ರಹ್ಮ ಯತಃ ಪ್ರೋಕ್ತಂ ಅನ್ನೇ ಪ್ರಾಣಾಃ ಪ್ರತಿಷ್ಠಿತಾಃ ।
ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ಧತೇ ॥ ೪೩ ॥

ಅನ್ನಮೇವ ಯತೋ ಲಕ್ಷ್ಮೀಃ ಅನ್ನಮೇವ ಜನಾರ್ದನಃ ।
ಧಾನ್ಯಪರ್ವತರೂಪೇಣ ಪಾಹಿ ತಸ್ಮಾನ್ನಗೋತ್ತಮ ॥ ೪೪ ॥

ಅನೇನ ವಿಧಿನಾ ಯಸ್ತು ದದ್ಯಾದ್ಧಾನ್ಯಮಯಂ ಗಿರಿಂ ।
ಮನ್ವಂತರಶತಂ ಸಾಗ್ರಂ ದೇವಲೋಕೇ ಮಹೀಯತೇ ॥ ೪೫ ॥

ಅಪ್ಸರೋಗಣಗಂಧರ್ವೈರಾಕೀರ್ಣೇನ ವಿರಾಜತಾ ।
ವಿಮಾನೇನ ದಿವಃ ಪೃಷ್ಠೇ ಸ ಯಾತಿ ಋಷಿಸೇವಿತಃ ॥ ೪೬ ॥

ಪುಣ್ಯಕ್ಷಯೇ ರಾಜರಾಜ್ಯಮಾಪ್ನೋತೀಹ ನ ಸಂಶಯಃ ॥ ೪೭ ॥

---

೩೪. ಅನ್ನವೇ ಬ್ರಹ್ಮವೆಂದು ಉಕ್ತವಾಗಿದೆ. ಅನ್ನದಲ್ಲಿ ಪಂಚಪ್ರಾಣಗಳೂ ಪ್ರತಿಷ್ಠಿತವಾಗಿರುತ್ತವೆ. ಈ ಅನ್ನದಿಂದ ಪಂಚಭೂತಗಳು ಉತ್ಪತ್ತಿಯಾಗುತ್ತವೆ. ಈ ಅನ್ನದಿಂದ ಜಗತ್ತು ಅಭಿವೃದ್ಧಿಹೊಂದುತ್ತದೆ.

೪೪. ಎಲೈ ಧಾನ್ಯರೂಪ ಪರ್ವತೋತ್ತಮನೇ! ಅನ್ನವೇ ಲಕ್ಷ್ಮಿ, ಅನ್ನವೇ ನಾರಾಯಣ, ಆ ಅನ್ನಕ್ಕೆ ಮೂಲಕಾರಣವೆನಿಸಿದ ಧಾನ್ಯರೂಪಿಯಾದ ನೀನು ನನ್ನನ್ನು ರಕ್ಷಿಸು.

೪೫. ಈ ವಿಧಿಪ್ರಕಾರವಾಗಿ ಧಾನ್ಯಪರ್ವತವನ್ನು ದಾನಮಾಡಿದ ನರನು ನೂರು ಮನ್ವಂತರಗಳು ಪೂರ್ತಿಯಾಗಿ ದೇವಲೋಕದಲ್ಲಿ ಪೂಜಿತನಾಗುವ ಪುಣ್ಯವನ್ನು ಪಡೆಯುತ್ತಾನೆ.

೪೬. ಆತನು ಅಪ್ಸರಸರು ಮತ್ತು ಗಂಧರ್ವರು ಇವರಿಂದ ಕೂಡಿ ಪ್ರಕಾಶಿಸುವಂತಹ ವಿಮಾನಾರೂಢನಾಗಿ ಋಷಿಗಳಿಂದ ಸೇವಿಸಲ್ಪಡುತ್ತಾ ಸ್ವರ್ಗಕ್ಕೆ ಹೋಗುತ್ತಾನೆ.

೪೭. ಅಲ್ಲಿ ಪುಣ್ಯವು ಕ್ಷಯಿಸಿದನಂತರ ಈ ಭೂಲೋಕದಲ್ಲಿ ಜನಿಸಿ ಚಕ್ರವರ್ತಿಯ ಪದವಿಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ಧಾನ್ಯಾಚಲಂ ಕನಕವೃಕ್ಷವಿರಾಜಮಾನಂ ।
ವಿಷ್ಕಂಭಪರ್ವತಯುತಂ ಸುರಸಿದ್ಧಜುಷ್ಟಂ ॥
ಯಚ್ಛಂತಿ ಯೇ ಸುಮತಯಃ ಪ್ರಣಿಪತ್ಯ ವಿಪ್ರಾನ್ ।
ತೇ ಪ್ರಾಪ್ನುವಂತಿ ಪರಮೇಷ್ಠಿಪದಾಬ್ಜಯುಗ್ಮಂ　　॥ ೪೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ಧಾನ್ಯಪರ್ವತದಾನವಿಧಿವರ್ಣನಂ
ನಾಮ ಪಂಚನವತ್ಯುತ್ತರಶತತಮೋಽಧ್ಯಾಯಃ.



೪೮. ಸುವರ್ಣದ ವೃಕ್ಷಗಳಿಂದ ವಿರಾಜಿತವೂ, ವಿಷ್ಕಂಭ ಪರ್ವತದೊಡನೆ ಕೂಡಿರುವುದೂ, ದೇವತೆಗಳು ಸಿದ್ಧರು ಇವರುಗಳಿಗೆ ಆವಾಸಭೂಮಿಯೂ. ಎನಿಸಿದ ಪರ್ವತವನ್ನು ಧಾನ್ಯಮಯವಾಗಿ ರಚಿಸಿ ಯಾವ ಮನುಷ್ಯರು ಒಳ್ಳೆಯ ಮನಸ್ಸು ಉಳ್ಳವರಾಗಿ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರನ್ನು ಸತ್ಕರಿಸಿ ದಾನಮಾಡುವರೋ ಅಂತಹವರು ಬ್ರಹ್ಮಲೋಕದಲ್ಲಿ ಬ್ರಹ್ಮನ ಸಾನ್ನಿಧ್ಯಹೊಂದುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಧಾನ್ಯಪರ್ವತದಾನವಿಧಿವರ್ಣನೆ ಎಂಬ
ನೂರತೊಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಣ್ಣವತ್ಯುತ್ತರಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಅಥಾತಃ ಸಂಪ್ರವಕ್ಷ್ಯಾಮಿ ಲವಣಾಚಲಮುತ್ತಮಂ ।**
**ಯತ್ಪ್ರದಾನಾನ್ನರೋ ಲೋಕಮಾಪ್ನೋತಿ ಶಿವಸಂಯುತಂ ॥ ೧ ॥**

**ಉತ್ತಮಃ ಷೋಡಶದ್ರೋಣಃ ಕರ್ತವ್ಯೋ ಲವಣಾಚಲಃ ।**
**ಮಧ್ಯಮಃ ಸ್ಯಾತ್ತದರ್ಧೇನ ತದರ್ಧೇನಾಧಮಃ ಸ್ಮೃತಃ ॥ ೨ ॥**

---

### ನೂರತೊಂಭತ್ತಾರನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ದಾನಮಾಡಿದ ನರನು ಶಿವಲೋಕವನ್ನು ಹೊಂದುವಂತಹ ಮಹಿಮೆಯುಳ್ಳ ಲವಣಾಚಲದ ದಾನವು ಸರ್ವೋತ್ತಮವಾದುದು. ಇದನ್ನು ಹೇಳುವೆನು ಕೇಳು.

೨. ಹದಿನಾರು ದ್ರೋಣಪ್ರಮಾನವುಳ್ಳ ಉಪ್ಪಿನಿಂದ ನಿರ್ಮಿಸಿದರೆ ಅದು ಉತ್ತಮ ಲವಣಾಚಲವೆನಿಸುವುದು. ಅದರ ಅರ್ಧದಷ್ಟು ಎಂದರೆ ಎಂಟು ದ್ರೋಣಪ್ರಮಾಣ ಉಪ್ಪಿನಿಂದ ನಿರ್ಮಿಸಿದರೆ ಮಧ್ಯಮ ಲವಣಾಚಲವೆನಿಸುವುದು. ಅದರ ಅರ್ಧದಷ್ಟು ಎಂದರೆ ನಾಲ್ಕು ದ್ರೋಣಪ್ರಮಾಣ ಉಪ್ಪಿನಿಂದ ನಿರ್ಮಿಸಿದರೆ ಅಧಮ ಲವಣಾಚಲವೆನಿಸುವುದು.

ವಿತ್ತಹೀನೋ ಯಥಾಶಕ್ತ್ಯಾ ದ್ರೋಣಾದರ್ಧಂ ತು ಕಾರಯೇತ್ ।
ಚತುರ್ಥಾಂಶೇನ ವಿಷ್ಕಂಭಾನ್ ಪರ್ವತಾನ್ಕಾರಯೇತ್ಪೃಥಕ್ ॥ ೩ ॥

ವಿಧಾನಂ ಪೂರ್ವವತ್ಕುರ್ಯಾದ್ಬ್ರಹ್ಮಾದೀನಾಂ ಚ ಸರ್ವದಾ ।
ತದ್ವದ್ಧೇಮತರೂನ್ಸರ್ವಾನ್ ಲೋಕಪಾಲನಿವೇಶನಂ ॥ ೪ ॥

ಶಿರಾಂಸಿ ಕಾಮದೇವಾದೀನ್ ತದ್ವತ್ತತ್ರ ನಿವೇಶಯೇತ್ ।
ಕುರ್ಯಾಜ್ಜಾಗರಮತ್ರಾಪಿ ದಾನಮಂತ್ರಾನ್ನಿಬೋಧ ಮೇ ॥ ೫ ॥

ಸೌಭಾಗ್ಯರಸಸಂಭೂತೋ ಯತೋಽಯಂ ಲವಣೋ ರಸಃ ।
ದಾನಾತ್ಮಕತ್ವೇನ ಚ ಮಾಂ ಪಾಹಿ ಪಾಪಾನ್ನಗೋತ್ತಮ ॥ ೬ ॥

---

೩. ದ್ರವ್ಯಾನುಕೂಲವಿಲ್ಲದವನು ತನ್ನ ಶಕ್ತ್ಯನುಸಾರ ಅರ್ಧ ದ್ರೋಣ ಪ್ರಮಾಣದ ಉಪ್ಪಿನಿಂದಲೇ ಲವಣಾಚಲವನ್ನು ಮಾಡಬಹುದು. ಆಗ ಅದರ ನಾಲ್ಕನೇ ಒಂದಂಶದಿಂದ ಬೇರೆಬೇರೆಯಾಗಿ ಉಪಪರ್ವತಗಳನ್ನು ಸುತ್ತಲೂ ರಚಿಸಬೇಕು.

೪. ಬ್ರಹ್ಮಾದಿಗಳ ಪ್ರತಿಮೆ, ಮತ್ತು ಸುವರ್ಣ ವೃಕ್ಷಗಳು, ಲೋಕ ಪಾಲಕರು ಇವೆಲ್ಲವುಗಳ ರಚನಾವಿಧಾನವೂ ಹಿಂದೆ ಹೇಳಿದಂತೆಯೇ ಇರ ಬೇಕು.

೫. ಅದರಂತೆಯೇ ಶಿಖರಗಳನ್ನೂ ಕಾಮದೇವನೇ ಮೊದಲಾದವರನ್ನೂ ಸ್ಥಾಪಿಸಬೇಕು. ಈ ವ್ರತದಲ್ಲಿಯೂ ಕೂಡ ಅದರಂತೆಯೇ ಜಾಗರಣೆಯನ್ನು ಮಾಡಬೇಕು. ಇನ್ನು ದಾನಮಂತ್ರಗಳನ್ನು ಹೇಳುವೆನು ಕೇಳು.

೬. ಸೌಭಾಗ್ಯಕರವಾದ ರಸಗಳಿಂದ ಲವಣವು ಉತ್ಪತ್ತಿಯಾಗಿರುತ್ತದೆ. ಎಲೈ ಶ್ರೇಷ್ಠವಾದ ಲವಣಪರ್ವತವೇ! ನಿನ್ನನ್ನು ದಾನಮಾಡುವುದರಿಂದ ನನ್ನನ್ನು ಪಾಪಗಳಿಂದ ರಕ್ಷಣೆಮಾಡು.

ತಸ್ಮಾದನ್ನರಸಾಃ ಸರ್ವೇ ನೋತ್ಕೃಷ್ಟಾಃ ಲವಣಂ ವಿನಾ ।
ಪ್ರಿಯಂ ಚ ಶಿವಯೋರ್ನಿತ್ಯಂ ತಸ್ಮಾಚ್ಛಾಂತಿಪ್ರದೋ ಭವ ॥ ೭ ॥

ವಿಷ್ಣುದೇಹಸಮುದ್ಭೂತಂ ಯಸ್ಮಾದಾರೋಗ್ಯವರ್ಧನಂ ।
ಯಸ್ಮಾತ್ಪರ್ವತರೂಪೇಣ ಪಾಹಿ ಸಂಸಾರಸಾಗರಾತ್ ॥ ೮ ॥

ಅನೇನ ವಿಧಿನಾ ಯಸ್ತು ದದ್ಯಾಲ್ಲವಣಪರ್ವತಂ ।
ಉಮಾಲೋಕೇ ವಸೇತ್ಕಲ್ಪಂ ತತೋ ಯಾತಿ ಪರಾಂ ಗತಿಂ ॥ ೯ ॥

ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।
ಪುತ್ರಪೌತ್ರೈಃ ಪರಿವೃತೋ ಜೀವೇಚ್ಚ ಶರದಾಂ ಶತಂ ॥ ೧೦ ॥

---

೭. ಲವಣವು ಮೇಲೆ ಹೇಳಿದಂತೆ ಸೌಭಾಗ್ಯರಸಾತ್ಮಕವಾದುದರಿಂದ ಇದಿಲ್ಲದಿದ್ದರೆ ಯಾವ ಅನ್ನರಸಗಳೂ ಉತ್ಕೃಷ್ಟವಾಗುವುದಿಲ್ಲ. ಎಲೈ ಲವಣವೇ ! ನೀನು ಪಾರ್ವತೀ ಪರಮೇಶ್ವರರಿಗೆ ಪ್ರೀಯವಾಗಿದ್ದೀಯೆ. ಇಂತಹ ನೀನು ನನಗೆ ಶಾಂತಿದಾಯಕನಾಗು.

೮. ವಿಷ್ಣುವಿನ ದೇಹದಿಂದ ಉತ್ಪನ್ನವಾದುದಾಗಿ ಆರೋಗ್ಯವರ್ಧಕವಾಗಿರುವಂತಹ ಎಲೈ ಪರ್ವತರೂಪಿಯಾದ ಲವಣವೇ! ನನ್ನನ್ನು ಈ ಸಂಸಾರ ಸಾಗರದಿಂದ ಪಾರುಮಾಡು ಎಂದು ಹೇಳಬೇಕು.

೯. ಈ ವಿಧಿಗನುಸಾರವಾಗಿ ಯಾವನು ಲವಣ ಪರ್ವತವನ್ನು ದಾನ ಮಾಡುವನೋ ಆತನು ಉತ್ತಮಗತಿಯನ್ನು ಹೊಂದುವುದಲ್ಲದೆ ಒಂದು ಕಲ್ಪ ಪರ್ಯಂತ ಪಾರ್ವತಿದೇವಿಯ ಸಾನ್ನಿಧ್ಯದಲ್ಲಿ ವಾಸಮಾಡುವನು.

೧೦. ಅಲ್ಲಿ ವಾಸಿಸುವ ಪುಣ್ಯಫಲವು ಮುಗಿದನಂತರ ಈ ಭೂಲೋಕದಲ್ಲಿ ಧಾರ್ಮಿಕನಾದ ರಾಜನಾಗಿ ಜನಿಸುವನು. ಮತ್ತು ಮಕ್ಕಳು ಮೊಮ್ಮಕ್ಕಳುಗಳಿಂದ ಪರಿವೃತನಾಗಿ ಸಂತೋಷದಿಂದ ನೂರು ವರ್ಷಗಳ ಕಾಲ ಬದುಕುತ್ತಾನೆ.

ಕುರ್ವಂತಿ ಯೇ ಲವಣಪರ್ವತಸಂಪ್ರದಾನಂ ।
ಸಂಪ್ರಾಪ್ನುವಂತಿ ದಿವಿ ತೇ ಸುಮಹದ್ವಿಮಾನಂ ॥
ತತ್ರಾಪ್ಸರೋಗಣಸುರಾಸುರಸೇವ್ಯಮಾನಾಃ ।
ತಿಷ್ಠಂತಿ ಹೃಷ್ಟಮನಸೋ ದಿವಿ ವರ್ಧಮಾನಾಃ ॥ ೧೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ಲವಣಪರ್ವತದಾನವಿಧಿವರ್ಣನಂ ನಾಮ ಷಣ್ಣವತ್ಯುತ್ತರಶತತಮೋಽಧ್ಯಾಯಃ.



---

೧೧. ಇಹಲೋಕದಲ್ಲಿ ಲವಣಾಚಲವನ್ನು ದಾನಮಾಡುವ ಮಾನವರು ಮನೋಹರವಾಗಿಯೂ ವಿಶಾಲವಾಗಿಯೂ ಇರುವ ವಿಮಾನಾರೂಢರಾಗಿಸ್ವರ್ಗಕ್ಕೆ ತೆರಳುತ್ತಾರೆ. ಅಲ್ಲಿ ಅಪ್ಸರಸ್ತ್ರೀಯರು, ದೇವತೆಗಳು, ಅಸುರರು ಇವರಿಂದ ಸೇವಿಸಲ್ಪಡುತ್ತಾ ಹರ್ಷ ಚಿತ್ತರೂ ಸಂಭಾವನೆಗೆ ಅರ್ಹರೂ ಆಗಿ ಇರುತ್ತಾರೆ. ಎಂಬದಾಗಿ ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಲವಣಪರ್ವತ ದಾನವಿಧಿವರ್ಣನೆಯೆಂಬ ನೂರತ್ತೊಂಭತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತನವತ್ಯುತ್ತರಶತತಮೋऽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ಗುಡಪರ್ವತಮುತ್ತಮಂ ।
ಯತ್ಪ್ರದಾನಾನ್ನರಃ ಸ್ವರ್ಗಂ ಪ್ರಾಪ್ನೋತಿ ಸುರಪೂಜಿತಂ || ೧ ||

ಉತ್ತಮೋ ದಶಭಿರ್ಭಾರೈಃ ಮಧ್ಯಮೋ ಪಂಚಭಿಸ್ತಥಾ ।
ತ್ರಿಭಿರ್ಭಾರೈಃ ಕನಿಷ್ಠಃ ಸ್ಯಾತ್ತದರ್ಧೇನಾಲ್ಪಕೋ ಮತಃ || ೨ ||

---

## ನೂರತೊಂಭತ್ತೇಳನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಯಾವ ದಾನವನ್ನು ಮಾಡಿದರೆ ನರನು ಸ್ವರ್ಗದಲ್ಲಿ ದೇವತೆಗಳಿಂದ ಪೂಜಿಸಲ್ಪಡುವಂತಹ ಪದವಿಯನ್ನು ಪಡೆಯಬಹುದೋ ಅಂತಹ ಉತ್ತಮವಾದ ಗುಡಪರ್ವತ ದಾನವಿಧಿಯನ್ನು ಹೇಳುತ್ತೇನೆ.

೨. ನೂರು ಪಲಗಳಿಗೆ ಒಂದು ತುಲಾ ಎಂದೂ ಇಪ್ಪತ್ತು ತುಲಾಗಳಿಗೆ ಎಂದರೆ ಎರಡುಸಾವಿರ ಪಲಗಳಿಗೆ ಒಂದು ಭಾರವೆಂದೂ ನಿರ್ಣಯವು. ಈ ವಿಧಾನದಲ್ಲಿ ಹತ್ತು ಭಾರಪ್ರಮಾಣದ ಗುಡದಿಂದ ಪರ್ವತವನ್ನು ರಚಿಸಿದರೆ ಅದು ಉತ್ತಮ ಗುಡಪರ್ವತವೆಂದೂ ಐದು ಭಾರಪ್ರಮಾಣ ಗುಡದಿಂದ ರಚಿಸಿದರೆ ಮಧ್ಯಮ ಗುಡಪರ್ವತವೆಂದೂ ಮೂರು ಭಾರಪ್ರಮಾಣದಿಂದ ರಚಿಸಿದರೆ ಕನಿಷ್ಠಗುಡಪರ್ವತವೆಂತಲೂ ಅದರ ಅರ್ಧ ಎಂದರೆ ಒಂದೂವರೆ ಭಾರಪ್ರಮಾಣ ದಿಂದ ರಚಿಸಿದರೆ ಅಲ್ಪಗುಡಪರ್ವತವೆಂತಲೂ ವ್ಯವಹರಿಸುತ್ತಾರೆ.

ತದ್ವದಾಮಂತ್ರಣಂ ಪೂಜಾಂ ಹೇಮವೃಕ್ಷಸುರಾರ್ಚನಂ ।
ವಿಷ್ಕಂಭಪರ್ವತಾಂಸ್ತತ್ರ ಸರಾಂಸಿ ವನದೇವತಾಃ ॥ ೩ ॥

ಹೋಮಂ ಜಾಗರಣಂ ತದ್ವಲ್ಲೋಕಪಾಲಾಧಿವಾಸನಂ ।
ಧಾನ್ಯಪರ್ವತವತ್ಕುರ್ಯಾದಿಮಂ ಮಂತ್ರಮುದೀರಯೇತ್ ॥ ೪ ॥

ಯಥಾದೇವೇಷು ವಿಶ್ವಾತ್ಮಾ ಪ್ರವರೋಽಯಂ ಜನಾರ್ದನಃ ।
ಸಾಮವೇದಸ್ತು ವೇದಾನಾಂ ಮಹಾದೇವಸ್ತು ಯೋಗಿನಾಂ ॥ ೫ ॥

ಪ್ರಣವಃ ಸರ್ವಮಂತ್ರಾಣಾಂ ನಾರೀಣಾಂ ಪಾರ್ವತೀ ಯಥಾ ।
ತಥಾ ರಸಾನಾಂ ಪ್ರವರಃ ಸದಾ ಚೇಕ್ಷುರಸೋ ಮತಃ ॥ ೬ ॥

---

೩. ಈ ಹಿಂದೆ ಹೇಳಿದಂತೆಯೇ ಎಲ್ಲಾ ಗ್ರಹಗಳ ಆರಾಧನೆ, ಮತ್ತು ಪೂಜೆ, ಸುವರ್ಣದ ವೃಕ್ಷಗಳ ಸ್ಥಾಪನೆ, ದೇವತೆಗಳ ಸ್ಥಾಪನೆ, ಮತ್ತು ವಿಷ್ಕಂಭ ಪರ್ವತಗಳು, ಸರೋವರಗಳು, ವನ, ದೇವತೆಗಳು ಎಲ್ಲವೂ ಹಿಂದೆ ಧಾನ್ಯಪರ್ವತ ಪೂಜೆಯಲ್ಲಿ ಹೇಳಿದಂತೆಯೇ ಇದಕ್ಕೂ ಅನ್ವಯಿಸುತ್ತದೆ.

೪. ಹೋಮ, ಜಾಗರಣೆ, ಲೋಕಪಾಲಕರನ್ನು ಅಧಿವಾಸಮಾಡಿಸುವುದು ಇವುಗಳೆಲ್ಲವನ್ನೂ ಧಾನ್ಯಪರ್ವತ ದಾನವಿಧಿದಲ್ಲಿ ಹೇಳಿದಂತೆಯೇ ಇಲ್ಲಿಯೂ ಆಚರಿಸಬೇಕು. ಪ್ರಾರ್ಥನೆಮಾಡುವಾಗ ಮುಂದೆ ಹೇಳುವ ಮಂತ್ರವನ್ನು ಹೇಳಬೇಕು.

೫. ಎಲೈ ಗುಡಪರ್ವತವೇ ! ದೇವತೆಗಳಲ್ಲಿ ವಿಶ್ವರೂಪನೆನಿಸಿದ ಶ್ರೇಷ್ಠನಾದ ನಾರಾಯಣನೂ, ವೇದಗಳಲ್ಲಿ ಸಾಮವೇದವೂ, ಯೋಗಿಗಳಲ್ಲಿ ಮಹಾದೇವನೂ, ಹೇಗೆ ಶ್ರೇಷ್ಠರೋ ಹಾಗೆಯೇ ನೀನೂ ರಸಗಳಲ್ಲಿ ಶ್ರೇಷ್ಠನಾಗಿದ್ದೀಯೆ.

೬. ನಾರಿಯರಲ್ಲಿ ಪಾರ್ವತೀದೇವಿಯೂ ಸಮಸ್ತ ಮಂತ್ರಗಳಲ್ಲಿ ಪ್ರಣವವೂ ಹೇಗೆ ಸಾರಭೂತವಾದುದೋ ಹಾಗೆ ರಸಗಳಲ್ಲಿ ನೀನು ಶ್ರೇಷ್ಠವಾಗಿರುತ್ತೀಯೆ.

ಮಮ ತಸ್ಮಾತ್ಪರಾಂ ಲಕ್ಷ್ಮೀಂ ಪ್ರಯಚ್ಛ ಗುಡಪರ್ವತ ।
ಸುರಾಸುರಾಣಾಂ ಸರ್ವೇಷಾಂ ನಾಗಯಕ್ಷರ್ಕ್ಷಯಂತ್ರಿಣಾಂ ॥ ೭ ॥

ನಿವಾಸಶ್ಚಾಪಿ ಪಾರ್ವತ್ಯಾಃ ತಸ್ಮಾನ್ಮಾಂ ಪಾಹಿ ಸರ್ವದಾ ।
ಅನೇನ ವಿಧಿನಾ ಯಸ್ತು ದದ್ಯಾದ್ಗುಡಮಯಂ ಗಿರಿಂ ॥ ೮ ॥

ಸಂಪೂಜ್ಯಮಾನೋ ಗಂಧರ್ವೈಃ ಗೌರೀಲೋಕೇ ಮಹೀಯತೇ ।
ಪುನಃ ಕಲ್ಪಶತಾಂತೇ ತು ಸಪ್ತದ್ವೀಪಾಧಿಪೋ ಭವೇತ್ ॥ ೯ ॥

ಆಯುರಾರೋಗ್ಯಸಂಪನ್ನೋ ಶತ್ರುಭಿಶ್ಚಾಪರಾಜಿತಃ ।
ಆಸೀದ್ರಾಜ್ಞೀ ಮಹಾಭಾಗಾ ಸುಲಭಾ ನಾಮ ಸುವ್ರತಾ ॥ ೧೦ ॥

ಮರುತ್ತಸ್ಯ ಪ್ರಿಯಾ ಭಾರ್ಯಾ ರೂಪಯೌವನಶಾಲಿನೀ ।
ತಸ್ಯ ಭಾರ್ಯಾ ಶತಾನ್ಯಾಸನ್ ಸಪ್ತರಾಜ್ಞೋ ಮಹಾತ್ಮತಃ ॥ ೧೧ ॥

---

೭. ಈ ಪ್ರಕಾರ ಶ್ರೇಷ್ಠವಾಗಿರತಕ್ಕ ಎಲೈ ಗುಡಪರ್ವತವೇ! ನನಗೆ ಅಮಿತ ಸಂಪತ್ತನ್ನು ಕೊಡು. ನೀನು ದೇವತೆಗಳು ಮತ್ತು ಅಸುರರು, ನಾಗರು, ಯಕ್ಷರು, ರಕ್ಷರು, ಯಂತ್ರಿಗಳು ಇವರೆಲ್ಲರಿಗೂ ನಿಯಾಮಕನಾಗಿರು.

೮-೧೦. ಮತ್ತು ಗೌರಿದೇವಿಗೂ ಸಹ ನಿವಾಸಸ್ಥಾನವಾಗಿದ್ದೀಯೆ. ಈ ಕಾರಣದಿಂದ ನನ್ನನ್ನು ಯಾವಾಗಲೂ ಸಂರಕ್ಷಿಸು. ಈ ಪ್ರಕಾರ ಯಾವ ಮನುಜನು ಗುಡಪರ್ವತವನ್ನು ದಾನಮಾಡುತ್ತಾನೆಯೋ ಆತನು ಪಾರ್ವತಿ ದೇವಿಯ ಲೋಕವನ್ನು ಸೇರಿ ದೇವೀಸಾನ್ನಿಧ್ಯವನ್ನು ಪಡೆದು ಅಲ್ಲಿ ಗಂಧರ್ವರಿಂದ ಪೂಜಿಸಲ್ಪಡುತ್ತಾ ನೂರು ಕಲ್ಪಪರ್ಯಂತ ವಾಸವಾಗಿರುತ್ತಾನೆ. ಅನಂತರ ಭೂಮಂಡಲದಲ್ಲಿ ಜನಿಸಿ ಸಪ್ತದ್ವೀಪಗಳಿಗೂ ಅಧಿಪತಿಯಾಗುತ್ತಾನೆ. ಮತ್ತು ಆಯುಸ್ಸು, ಆರೋಗ್ಯ ಇವುಗಳಿಂದ ಕೂಡಿದವನೂ ತನ್ನ ಶತ್ರುತಗಳನ್ನು ಜಯಿಸ ತಕ್ಕವನೂ ಆಗುತ್ತಾನೆ.

೧೧. ಹಿಂದೆ ಮರುತ್ತೆಂಬ ರಾಜನಿಗೆ ಮಹಾಭಾಗ್ಯಶಾಲಿನಿಯೂ, ಪತಿವ್ರತೆಯೂ, ಒಳ್ಳೆಯ ರೂಪು, ಲಾವಣ್ಯ, ಯೌವನ ಇವುಗಳಿಂದ ಕೂಡಿದವಳೂ ಆದ ಸುಲಭಾ ಎಂಬ ಹೆಸರುಳ್ಳ ಒಬ್ಬ ರಾಣಿಯು ರಾಜನಿಗೆ ಬಹು ಪ್ರೀತಿ ಪಾತ್ರಳಾಗಿದ್ದಳು. ಮಹಾತ್ಮನಾದ ಆ ರಾಜನಿಗೆ ಇವಳಲ್ಲದೆ ಇನ್ನೂ ಏಳುನೂರು ಜನ ಪತ್ನಿಯರಿದ್ದರು.

ತಾ ದಾಸ್ಯ ಇವ ವಾಕ್ಯಾನಿ ಕುರ್ಯುಸ್ತಸ್ಯಾಃಸದೈವ ಹಿ ।
ಮುಖಾವಲೋಕನಕರೋ ರಾಜಾ ತಸ್ಯ ಚ ಸಾ ಪ್ರಿಯಾ　　॥ ೧೨ ॥

ಅಥ ಕಾಲೇನ ಮಹತಾ ದುರ್ವಾಸಾ ಋಷಿಸತ್ತಮಃ ।
ಆಜಗಾಮ ತದಭ್ಯಾಶಂ ಭ್ರಮಮಾಣೋ ಯದೃಚ್ಛಯಾ　　॥ ೧೩ ॥

ತಸ್ಯಾಥ ಸತ್ಕ್ರಿಯಾಂ ಕೃತ್ವಾ ದತ್ವಾ ಚಾರ್ಘ್ಯಂ ಯಥಾವಿಧಿ ।
ಪಪ್ರಚ್ಛ ಸುಲಭಾ ವಿಪ್ರಂ ದುರ್ವಾಸಸಮಕಲ್ಮಷಂ　　॥ ೧೪ ॥

॥ ಸುಲಭೋವಾಚ ॥

ಕೇನ ಪುಣ್ಯೇನ ಭಗವನ್ ಮಮ ರಾಜಾ ಪ್ರಿಯಂಕರಃ ।
ಮುಖಾವಲೋಕನಪರೋ ವಶೇ ತಿಷ್ಠತಿ ಸರ್ವದಾ　　॥ ೧೫ ॥

---

೧೨. ಆ ಏಳುನೂರು ಜನ ಭಾರ್ಯೆಯರೂ ಆ ರಾಣಿಯ ದಾಸಿಯರಂತೆ ವರ್ತಿಸುತ್ತಾ ಯಾವಾಗಲೂ ಅವಳ ಮಾತನ್ನು ನಡೆಯಿಸುತ್ತಿದ್ದರು. ಆ ರಾಜನೂ ಕೂಡ ಆ ರಾಣಿಯ ಮುಖಾವಲೋಕನ ಮಾತ್ರದಿಂದ ಆಕೆಗೆ ಪ್ರಿಯವನ್ನೇ ಮಾಡುತ್ತಿದ್ದನು.

೧೩. ಈ ರೀತಿ ಬಹುಕಾಲ ಕಳೆಯಲಾಗಿ ದೂರ್ವಾಸಮಹರ್ಷಿಗಳು ತಮ್ಮ ಮನಬಂದಂತೆ ಅಲ್ಲಲ್ಲಿ ಸಂಚರಿಸುತ್ತಾ ಅಕಸ್ಮಾತ್ತಾಗಿ ಅವರ ಬಳಿಗೆ ಆಗಮಿಸಿದರು.

೧೪. ಹಾಗೆ ಮನೆಗೆ ದಯಮಾಡಿರುವ ಮಹಾತ್ಮರನ್ನು ಆ ಸುಲಭಾ ರಾಣಿಯು ಯಥಾವಿಧಿಯಾಗಿ ಸತ್ಕರಿಸಿ ಅರ್ಘ್ಯಪಾದ್ಯಾಚಮನಗಳನ್ನು ಕೊಟ್ಟು ಅನಂತರ ಪರಿಶುದ್ಧಾತ್ಮರಾದ ಆ ದೂರ್ವಾಸರನ್ನು ಕುರಿತು ಈ ರೀತಿ ಪ್ರಶ್ನಿಸಿದಳು.

೧೫. ಸುಲಭಾರಾಣಿಯು ಪ್ರಶ್ನಿಸುತ್ತಾಳೆ—ಎಲೈ ಮಹಾನುಭಾವರೇ ! ರಾಜನು ಕೇವಲ ನನ್ನ ಮುಖಾವಲೋಕನದಿಂದಲೇ ಯಾವಾಗಲೂ ನನ್ನ ವಶನಾಗುತ್ತಾನಲ್ಲದೆ ನನಗೆ ಪ್ರಿಯಕರನೂ ಆಗಿರುತ್ತಾನೆ. ಇದು ನನ್ನ ಯಾವ ಪುಣ್ಯದ ಮಹಿಮೆ ?

**ಸಪತ್ನ್ಯಶ್ಚ ಮಮ ಬ್ರಹ್ಮನ್ ಸದಾ ಪ್ರಿಯಹಿತೇ ರತಾಃ ।**
**ಏತದಾಚಕ್ಷ್ವ ಭಗವನ್ ಪರಂ ಕೌತೂಹಲಂ ಮಮ ॥ ೧೬ ॥**

**॥ ದುರ್ವಾಸಾ ಉವಾಚ ॥**

**ಶೃಣುಷ್ವಾವಹಿತಾ ಸುಭ್ರೂರಾತ್ಮವೃತ್ತಂ ಪುರಾತನಂ ।**
**ಜಾನಾಮಿ ಸರ್ವಂ ಸುಭಗೇ ತವ ವೃತ್ತಮಶೇಷತಃ ॥ ೧೭ ॥**

**ತ್ವಮಾಸೀರ್ವೈಶ್ಯಮಹಿಷೀ ಗಿರಿವ್ರಜಪುರೇ ಪುರಾ ।**
**ಧಾರ್ಮಿಕಾ ಸತ್ಯಶೀಲಾ ಚ ಪತಿವ್ರತಪರಾಯಣಾ ॥ ೧೮ ॥**

**ತತ್ರ ಶ್ರುತಸ್ತ್ವಯಾ ವತ್ಸೇ ಬ್ರಾಹ್ಮಣಾನಾಂ ಸಮೀಪತಃ ।**
**ಪುರಾ ದಾನವಿಧಿಃ ಸರ್ವಃ ಸ್ಥಿತಯಾ ಪತಿಸನ್ನಿಧೌ ॥ ೧೯ ॥**

೧೬. ಎಲೈ ಬ್ರಾಹ್ಮಣಶ್ರೇಷ್ಠ! ನನಗೆ ಸಪತ್ನಿಯರಾಗಿದ್ದರೂ ಕೂಡ ಅವರೂ ಸಹ ಯಾವಾಗಲೂ ನನಗೆ ಪ್ರಿಯರಾಗಿಯೇ ಇದ್ದಾರೆ. ಇದು ನನಗೆ ಬಹಳ ಆಶ್ಚರ್ಯವಾಗಿದೆ. ಇದರ ಕಾರಣವೇನೆಂಬುದನ್ನು ನನಗೆ ಕೃಪೆಮಾಡಿ ಹೇಳಬೇಕು ಎಂದಳು.

೧೭. ದುರ್ವಾಸಮಹರ್ಷಿಗಳು ಹೇಳುತ್ತಾರೆ—ಎಲೌ ಸುಂದರಿ! ನಿನ್ನ ಪೂರ್ವಜನ್ಮದ ಸಕಲ ವೃತ್ತಾಂತವೂ ನನಗೆ ತಿಳಿದಿದೆ. ಒಂದೇ ಮನಸ್ಸಿನಿಂದ ಕೇಳು ಹೇಳುತ್ತೇನೆ.

೧೮. ನೀನು ಹಿಂದೆ "ಗಿರಿವ್ರಜ" ಎಂಬ ಹೆಸರುಳ್ಳ ಪಟ್ಟಣದಲ್ಲಿ ಒಬ್ಬ ವೈಶ್ಯನ ಪತ್ನಿಯಾಗಿದ್ದೆ. ಆಗ ನೀನು ಧಾರ್ಮಿಕಳೂ ಸತ್ಯಶೀಲೆಯೂ ಪತಿ ಪರಾಯಣೆಯಾದ ಪತಿವ್ರತೆಯೂ ಆಗಿ ಇದ್ದೆ.

೧೯. ಎಲೈ ವತ್ಸೆ! ಆಗ ನೀನು ನಿನ್ನ ಪತಿಸಮೇತಳಾಗಿ ಬ್ರಾಹ್ಮಣರಿಂದ ಸಕಲ ದಾನಗಳ ವಿಧಿಯನ್ನೂ ಅರಿತುಕೊಂಡಿದ್ದೆ.

**ವಿಶೇಷತಸ್ತತ್ರ ವಿಪ್ರೈಃ ಕಥಿತೋ ಗುಡಪರ್ವತಃ ।**
**ದತ್ತಶ್ಚಾಪಿ ತ್ವಯಾ ಪುತ್ರಿ ಸಂಭೃತ್ಯ ವಿಧಿವತ್ತದಾ ॥ ೨೦ ॥**

**ತಸ್ಯ ದಾನಸ್ಯ ಮಾಹಾತ್ಮ್ಯಾತ್ತ್ವಯಾ ಭುಕ್ತಂ ವರಾನನೇ ।**
**ರಾಜ್ಯಂ ಜನ್ಮಾನಿ ಚತ್ವಾರಿ ನಿಸ್ಸಪತ್ನಮನಾಕುಲಂ ॥ ೨೧ ॥**

**ಅನ್ಯಾನಿ ಸಪ್ತ ಜನ್ಮಾನಿ ತವ ರಾಜ್ಯಂ ಭವಿಷ್ಯತಿ ।**
**ಸೌಭಾಗ್ಯಮತುಲಂ ಚೈವ ರೂಪಮಾರೋಗ್ಯಮೇವ ಚ ॥ ೨೨ ॥**

**ಭೂತಂ ಚೈವಮವಶ್ಯಂ ಚ ಗುಡಪರ್ವತದಾನಜಂ ।**
**ಕಥಾ ತವ ವರಾರೋಹೇ ಯಾಸ್ಯೇ ತ್ವಂ ಭವ ಪುತ್ರಿಣೀ ॥ ೨೩ ॥**

**ತಸ್ಮಾದ್ದೇಯಮಿದಂ ದಾನಂ ಫಲಮುತ್ತಮಮಿಚ್ಛತಾ ।**
**ಗತಿಂ ಚ ಶಾಶ್ವತೀಂ ಲೇಭೇ ಸೌಭಾಗ್ಯಂ ರೂಪಮೇವ ಚ ॥ ೨೪ ॥**

---

೨೦. ಬ್ರಾಹ್ಮಣರು ಗುಡಪರ್ವತ ದಾನವಿಚಾರವನ್ನು ನಿನಗೆ ವಿಶೇಷವಾಗಿ ಪ್ರತಿಪಾದಿಸಿದರು. ಎಲೌ ಮಗಳೇ! ಆಗ ನೀನು ಎಲ್ಲವನ್ನೂ ಹೊಂದಿಸಿಕೊಂಡು ಯಥಾವಿಧಿಯಾಗಿ ಅದನ್ನು ದಾನಮಾಡಿದೆ.

೨೧. ಎಲೌ ಸುಂದರೀ! ನೀನು ಆಚರಿಸಿದ ಆ ದಾನದ ಮಹಿಮೆಯಿಂದ ಶತ್ರುಬಾಧೆಯೂ ಮತ್ತು ಈತಿಭಾಧೆಗಳ ತೊಂದರೆಯೂ ಇಲ್ಲದೆ ನಾಲ್ಕು ಜನ್ಮಗಳಲ್ಲಿ ರಾಜ್ಯವನ್ನು ಅನುಭವಿಸಿದೆ.

೨೨. ಇನ್ನು ಮುಂದೆ ಏಳುಜನ್ಮಗಳಲ್ಲೂ ನಿನಗೆ ರಾಜ್ಯಪ್ರಾಪ್ತಿಯಾಗುವುದು. ಮತ್ತು ನಿನ್ನ ಈ ಅತುಲವಾದ ಸೌಭಾಗ್ಯ, ಮನಮೋಹಕವಾದ ರೂಪ ಮತು ಆರೋಗ್ಯ ಇವೆಲ್ಲವೂ ಉಂಟಾಗುವುವು.

೨೩. ಇವು ಆ ಗುಡಪರ್ವತದ ದಾನಮಹಿಮೆಯಿಂದ ಲಭಿಸಿದವುಗಳೇ ಹೊರತು ಬೇರೆ ಅಲ್ಲ. ಎಲೌ ಮಂಗಳಾಂಗಿ! ಇದೇ ನಿನ್ನ ಪೂರ್ವಜನ್ಮ ವೃತ್ತಾಂತ. ಇನ್ನು ನಾನು ಹೊರಡುವೆನು ಎಂಬದಾಗಿ ಹೇಳಿದನು.

೨೪. ಆದುದರಿಂದ ಉತ್ತಮ ಫಲಕಾಂಕ್ಷಿಯಾದ ನರನು ಈ ದಾನವನ್ನು ಮಾಡಬೇಕು. ಇದರಿಂದ ಶಾಶ್ವತವಾದ ಸದ್ಗತಿಯನ್ನೂ ಸೌಭಾಗ್ಯ, ರೂಪ, ಮುಂತಾದುವುಗಳನ್ನೂ ಪಡೆಯುತ್ತಾನೆ.

**ದಾನಮೇತನ್ಪ್ರಶಂಸಂತಿ ಸ್ತ್ರೀಣಾಂ ರಾಜನ್ವಿಶೇಷತಃ ।**
**ಪೂರ್ವೋಕ್ತಂ ಚ ಫಲಂ ಪ್ರಾಪ್ಯ ಕೃತಕೃತ್ಯೋಽಭಿಜಾಯತೇ ॥ ೨೫ ॥**

**ಕೃಷ್ಣೇಷ್ಟ ಸುಂದರದರೀಸ್ರವಣಾಕುಲೇನ ।**
**ಗಂಧರ್ವಸಿದ್ಧವನಿತಾಶತಸೇವಿತೇನ ॥**
**ದತ್ತೇನ ಭಾರತ ವಿಧಾನವತಾ ಸದೈವ ।**
**ಗೌರೀ ಪ್ರಸಾದಮುಪಯಾತಿ ಗುಡಾಚಲೇನ ॥ ೨೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಗುಡಾಚಲದಾನವಿಧಿವರ್ಣನಂ ನಾಮ ಸಪ್ತನವತ್ಯುತ್ತರಶತತಮೋಽಧ್ಯಾಯಃ.**



---

೨೫. ಎಲೈ ರಾಜನೇ! ಈ ದಾನವನ್ನು ಪುರುಷರಿಗಿಂತಲೂ ಸ್ತ್ರೀಯರು ಅವಶ್ಯವಾಗಿ ಮಾಡತಕ್ಕದ್ದೆಂದು ವಿಶೇಷವಾಗಿ ಪ್ರಶಂಸೆಮಾಡುವರು. ಇದರಿಂದ ಹಿಂದೆ ಹೇಳಿದ ಸಕಲ ಫಲಗಳನ್ನೂ ಪಡೆದು ಕೃತಕೃತ್ಯರಾಗುತ್ತಾರೆ.

೨೬. ಎಲೈ ಭರತಕುಲಸಂಭೂತನೇ! ಶ್ರೀಕೃಷ್ಣನಿಗೆ ಇಷ್ಟರಾಗಿ ಸುಂದರವಾಗಿ ಇರುವ ಗುಹೆಗಳಲ್ಲಿ ಕ್ರೀಡಿಸಿ ಧನ್ಯತೆಪಡೆದ ನೂರಾರು ಗಂಧರ್ವಸ್ತ್ರೀಯರು ಸಿದ್ಧಸ್ತ್ರೀಯರು ಇವರಿಂದ ಸೇವೆಮಾಡಿಸಿಕೊಳ್ಳುವಂತಹ ಮಹಿಮಾಯುತವಾದ ಗುಡಾಚಲವನ್ನು ಯಥಾವಿಧಿಯಾಗಿ ದಾನಮಾಡಿದಾತನು ಯಾವಾಗಲೂ ಪಾರ್ವತಿಯ ಪರಮಾನುಗ್ರಹವನ್ನು ಪಡೆಯುತ್ತಾನೆ ಎಂಬದಾಗಿ ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಗುಡಪರ್ವತ ದಾನವಿಧಿವರ್ಣನೆಯೆಂಬ ನೂರತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟನವತ್ಯುತ್ತರಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಅಥ ಪಾಪಹರಂ ವಕ್ಷ್ಯೇ ಸುವರ್ಣಾಚಲಮುತ್ತಮಂ ।
ಯಸ್ಯ ಪ್ರಸಾದಾದ್ಭವನಂ ವೈರಿಂಚ್ಯಂ ಯಾತಿ ಮಾನವಃ ॥ ೧ ॥

ಉತ್ತಮಃ ಪಲಸಾಹಸ್ರೋ ಮಧ್ಯಮಃ ಪಂಚಭಿಃ ಶತೈಃ ।
ತದರ್ಧೇನಾವರಸ್ತದ್ವದಲ್ಪವಿತ್ತೋಽಪಿ ಶಕ್ತಿತಃ ॥ ೨ ॥

---

## ನೂರತೊಂಭತ್ತೆಂಟನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ದಾತೃವಿಗೆ ಬ್ರಹ್ಮಲೋಕವನ್ನುಂಟುಮಾಡತಕ್ಕುದೂ, ಸರ್ವಪಾಪನಿವಾರಕವೂ ಆದ ಉತ್ತಮವಾದ ಸುವರ್ಣಾಚಲದ ದಾನವಿಚಾರವನ್ನು ಹೇಳುತ್ತೇನೆ.

೨. ಒಂದುಸಾವಿರ ಪಲಪ್ರಮಾಣದ ಸುವರ್ಣದಿಂದ ಸುವರ್ಣಾಚಲವನ್ನು ನಿರ್ಮಿಸಿದರೆ ಉತ್ತಮ ಪ್ರಕಾರದ್ದೆಂದೂ, ಐದುನೂರು ಪಲಗಳಿಂದ ನಿರ್ಮಿಸಿದರೆ ಮಧ್ಯಮವೆಂದೂ, ಅದರ ಅರ್ಧದಷ್ಟರಿಂದ ಎಂದರೆ ಇನ್ನೂರೈವತ್ತು ಪಲಗಳಿಂದ ರಚಿಸಿದರೆ ಅದು ಅಧಮವೆಂತಲೂ ತಿಳಿಯಬೇಕು. ಸ್ವಲ್ಪವಿತ್ತವುಳ್ಳವನು ತನ್ನ ಶಕ್ತಿಯಿದ್ದರಷ್ಟರಲ್ಲೇ ಮಾಡಬೇಕು.

ದದ್ಯಾದೇಕಪಲಾದೂರ್ಧ್ವಂ ಯಥಾಶಕ್ತ್ಯಾ ವಿಚಕ್ಷಣಃ ।
ಧಾನ್ಯಪರ್ವತವತ್ಸರ್ವಂ ವಿದಧ್ಯಾನ್ನೃಪಸತ್ತಮ ॥ ೩ ॥

ವಿಷ್ಕಂಭಶೈಲಾಂಸ್ತದ್ವಚ್ಚ ಕೃತ್ವಾ ಮಂತ್ರಮುದೀರಯೇತ್ ।
ನಮಸ್ತೇ ಬ್ರಹ್ಮಬೀಜಾಯ ಬ್ರಹ್ಮಗರ್ಭಾಯ ವೈ ನಮಃ ॥ ೪ ॥

ಯಸ್ಮಾದನಂತಫಲದಸ್ತಸ್ಮಾತ್ಪಾಹಿ ಶಿಲೋಚ್ಚಯ ।
ಯಸ್ಮಾದಗ್ನೇರಪತ್ಯಂ ತ್ವಂ ಯಸ್ಮಾದುಲ್ಬ ಜಗತ್ಪತೇಃ ॥ ೫ ॥

ಹೇಮಪರ್ವತರೂಪೇಣ ತಸ್ಮಾತ್ಪಾಹಿ ನಗೋತ್ತಮ ।
ಅನೇನ ವಿಧಿನಾ ಯಸ್ತು ದದ್ಯಾತ್ಕನಕಪರ್ವತಂ ॥ ೬ ॥

ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ।
ತತ್ರ ವರ್ಷಶತಂ ತಿಷ್ಠೇತ್ತತೋ ಯಾತಿ ಪರಾಂ ಗತಿಂ ॥ ೭ ॥

---

೩. ಎಲೈ ರಾಜನೇ! ವಿಚಕ್ಷಣನಾದವನು ಒಂದು ಪಲಕ್ಕಿಂತಲೂ ಹೆಚ್ಚು ಇರುವಂತೆ ಮಾಡಬೇಕು. ಇದರ ಮಿಕ್ಕ ವಿಧಾನವೆಲ್ಲವೂ ಧಾನ್ಯ ಪರ್ವತ ದಾನದ ವಿಧಿಯಂತೆಯೇ ಎಂದು ತಿಳಿಯಬೇಕು.

೪. ಸುತ್ತಿನ ವಿಷ್ಕಂಭಪರ್ವತಗಳನ್ನೂ ಅದರಂತೆಯೇ ಮಾಡಬೇಕು. ಈ ಪ್ರಕಾರ ರಚಿಸಿದ ಮೇಲೆ ಈ ಮಂತ್ರವನ್ನು ಹೇಳಬೇಕು. ಎಲೈ ಪರ್ವತವೇ! ನೀನು ಬ್ರಹ್ಮನಿಗೂ ಸಹ ಬೀಜ (ಮೂಲ) ಭೂತವಾಗಿದ್ದಿಯೆ. ನಿನ್ನಲ್ಲಿ ಬ್ರಹ್ಮನು ಅಂತರ್ಭೂತನಾಗಿರುತ್ತಾನೆ. ಇಂತಹ ನಿನಗೆ ನಮಸ್ಕಾರ.

೫. ಎಲೈ ಸುವರ್ಣಪರ್ವತವೇ! ನೀನು ಅನಂತ ಫಲದಾಯಕವಾಗಿರುವೆ. ಮತ್ತು ಧನಂಜಯನಾದ ಅಗ್ನಿಗೆ ಪುತ್ರನೆನಿಸಿಕೊಂಡಿರುವೆ. (ಅಗ್ನೇರಪತ್ಯಂ ಪ್ರಥಮಂ ಸುವರ್ಣಮಿತಿ ಕಥ್ಯತೆ ಎಂದು ಶಾಸ್ತ್ರವಾಕ್ಯವು) ಜಗತ್ಪತಿ (ಬ್ರಹ್ಮ) ನಿಗೆ ಉಲ್ಬ (ಗರ್ಭಕೋಶ) ವಾಗಿರುವೆ.

೬–೭. ಎಲೈ ಉತ್ತಮವಾದ ಪರ್ವತವೇ!—ಚಿನ್ನದ ಪರ್ವತರೂಪದಿಂದ ನೀನು ನನ್ನನ್ನು ರಕ್ಷಿಸಮಾಡು. (ಎಂದು ಮಂತ್ರಾರ್ಥ) ಈ ವಿಧಿಗನುಸಾರ ವಾಗಿ ಚಿನ್ನದ ಪರ್ವತವನ್ನು ದಾನಮಾಡುವ ಮಾನವನು ಮಹೇಶ್ವರನು ವಾಸಿಸುವ ಉತ್ತಮವಾದ ಲೋಕವನ್ನು ಪಡೆದು ಅಲ್ಲಿ ನೂರು ವರ್ಷಗಳು ಇದ್ದು ಅನಂತರ ಶಾಶ್ವತವಾದ ಸದ್ಗತಿಯನ್ನು ಹೊಂದುತ್ತಾನೆ.

ಹೇಮಾಚಲಾತ್ಪರಂ ದಾನಂ ನ ಚಾನ್ಯದ್ವಿದ್ಯತೇ ಕ್ವಚಿತ್ || ೮ ||

ಹೈಮಂ ಮಹೀಂದ್ರಮಣಿಶೃಂಗಶತೈರುಪೇತಂ |
ಲೋಕಾಧಿಪಾಷ್ಟಕಯುತಂ ಸಹಿತಂ ಮುನೀಂದ್ರೈಃ ||
ಯಃ ಶಕ್ತಿಮಾನ್ವಿತರತೀಹ ಗಣೇಶಲೋಕೇ |
ಕಲ್ಪಂ ಕುಮಾರವದಸೌ ಕುರುಪುಂಗವಾಸ್ತೇ || ೯ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ಹೇಮಾಚಲದಾನವಿಧಿವರ್ಣನಂ
ನಾಮ ಅಷ್ಟನವತ್ಯುತ್ತರಶತತಮೋಽಧ್ಯಾಯಃ.



---

೮. ಈ ಸುವರ್ಣಾಚಲದ ದಾನಕ್ಕಿಂತ ಶ್ರೇಷ್ಠವಾದ ದಾನವು ಎಲ್ಲಿಯೂ ಬೇರೆ ಯಾವುದೂ ಇರುವುದಿಲ್ಲ.

೯. ಎಲೈ ಕುರುವಂಶಶ್ರೇಷ್ಠನಾದ ಮಹೀಪತಿಯೇ! ನೂರಾರು ಮಣಿಶೃಂಗಗಳಿಂದಲೂ, ಎಂಟುಜನ ಲೋಕಪಾಲಕರಿಂದಲೂ, ಮುನೀಂದ್ರರಿಂದಲೂ ಕೂಡಿದ ಚಿನ್ನದ ಪರ್ವತವನ್ನು ತಮ್ಮ ತಮ್ಮ ಶಕ್ತ್ಯನುಸಾರವಾದಷ್ಟು ಚಿನ್ನದಿಂದ ನಿರ್ಮಿಸಿ ದಾನಮಾಡಿದ ಮನುಷ್ಯರು ಪ್ರಮಥಗಳಿಗೆ ಒಡೆಯನಾದ ಈಶ್ವರನ ಕೈಲಾಸಲೋಕದಲ್ಲಿ ಒಂದುಕಲ್ಪಕಾಲ ಷಣ್ಮುಖನಂತೆ ವಾಸವಾಗಿರುತ್ತಾರೆ ಎಂಬದಾಗಿ ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ಚಿನ್ನದ ಪರ್ವತದ ದಾನವಿಧಿವರ್ಣನೆಯೆಂಬ
ನೂರತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕೋನದ್ವಿಶತತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||

**ಅತಃ ಪರಂ ಪ್ರವಕ್ಷ್ಯಾಮಿ ತಿಲಶೈಲಂ ವಿಧಾನತಃ ।**
**ಯತ್ಪ್ರದಾನಾನ್ನರೋ ಯಾತಿ ವಿಷ್ಣುಲೋಕಮನುತ್ತಮಂ || ೧ ||**

**ತಿಲಾಃ ಪವಿತ್ರಮತುಲಂ ಪವಿತ್ರಾಣಾಂ ಚ ಪಾವನಂ ।**
**ವಿಷ್ಣುದೇಹಸಮುದ್ಭೂತಾಃ ತಸ್ಮಾದುತ್ತಮತಾಂ ಗತಾಃ || ೨ ||**

**ಮಧುಕೈಟಭನಾಮಾನಾವಾಸ್ತಾಂ ದಿತಿಸುತೌ ಪುರಾ ।**
**ಮಧುನಾಽಸಹ ತತ್ರಾಭೂದ್ಯುದ್ಧಂ ವಿಷ್ಣೋರನಾರತಂ || ೩ ||**

---

### ನೂರತೊಂಭತ್ತೊಂಭತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಸರ್ವೋತ್ತಮವಾದ ವಿಷ್ಣುಲೋಕವನ್ನು ಪಡೆಯಬಹುದಾದ ತಿಲಪರ್ವತ ದಾನ ಕ್ರಮವನ್ನು ವಿಧಿವತ್ತಾಗಿ ಈಗ ಹೇಳುತ್ತೇನೆ.

೨. ಎಳ್ಳು ಬಹು ಪವಿತ್ರವಾದುದು. ಪವಿತ್ರವಾದ ವಸ್ತುಗಳೆಲ್ಲಕ್ಕಿಂತಲೂ ಪವಿತ್ರವಾದುದು. ಇದು ವಿಷ್ಣುವಿನ ದೇಹದಿಂದ ಉತ್ಪನ್ನವಾದುದು. ಆದುದರಿಂದಲೇ ಶ್ರೇಷ್ಠತೆಯನ್ನು ಪಡೆದಿದೆ.

೩. ಅದರ ಉತ್ಪತ್ತಿಕ್ರಮವನ್ನು ಹೇಳುವೆನು. ಪೂರ್ವಕಾಲದಲ್ಲಿ ದಿತಿದೇವಿಗೆ ಮಧು ಮತ್ತು ಕೈಟಭ ಎಂಬ ಇಬ್ಬರು ಸುತರು ಇದ್ದರು. ಒಂದುಸಲ ವಿಷ್ಣುವಿಗೂ ಮಧುವಿಗೂ ಅವಿಚ್ಛಿನ್ನವಾಗಿ ಯುದ್ಧವಾಯಿತು.

**ಸಹಸ್ರಂ ಕಿಲ ವರ್ಷಾಣಾಂ ನ ವ್ಯಜೀವತ ದಾನವಃ ।**
**ತತ್ರ ಸ್ವೇದೋ ಮಹಾನಾಸೀತ್ ಕ್ರುದ್ಧಸ್ಯಾಥ ಗದಾಭೃತಃ ॥ ೪ ॥**

**ಪತಿತಶ್ಚ ಧರಾಪೃಷ್ಠೇ ಕಣಶೋ ಲವಶಸ್ತಥಾ ।**
**ಸಮುತ್ತಸ್ಥುಸ್ತಿಲಾ ಮಾಷಾಃ ಕುಶಾಶ್ಚ ಕುರುನಂದನ ॥ ೫ ॥**

**ಹತಶ್ಚ ಹರಿಣಾ ಯುದ್ಧೇ ಸ ಮಧುರ್ಬಲಿನಾಂ ವರಃ ।**
**ಮೇದಸಾ ತಸ್ಯ ವಸುಧಾ ರಂಜಿತಾ ಸಕಲಾ ತದಾ ॥ ೬ ॥**

**ಮೇದಿನೀತಿ ತತಃ ಸಂಜ್ಞಾಮವಾಪಾಚಲಧಾರಿಣೀ ।**
**ಹತೇಽಥ ದೈತ್ಯಪ್ರವರೇ ದೇವಾಸ್ತೋಷಂ ಪರಂ ಯಯುಃ ॥ ೭ ॥**

**ಸ್ತುತಿಭಿಶ್ಚ ಪರಂ ಸ್ತುತ್ವಾ ಊಚುಸ್ತ್ರಿದಶಪುಂಗವಂ ।**
**॥ ದೇವಾ ಊಚುಃ ॥**
**ತ್ವಯಾ ಧೃತಂ ಜಗದ್ದೇವ ತ್ವಯಾ ಸೃಷ್ಟಂ ತಥೈವ ಚ ॥ ೮ ॥**

---

೪. ಹೀಗೆ ಒಂದುಸಾವಿರ ವರ್ಷಗಳು ಯುದ್ಧವಾದರೂ ಆ ರಾಕ್ಷಸನು ಸೋಲಲಿಲ್ಲ. ಆಗ ಗದಾಧರನಾದ ವಿಷ್ಣುವಿಗೆ ಬಹು ಕೋಪವುಂಟಾಯಿತು. ಇದರಿಂದ ಆತನ ದೇಹದಲ್ಲಿ ಬಹುವಾಗಿ ಬೆವರು ಉಂಟಾಯಿತು.

೫. ಅಯ್ಯಾ ಯುಧಿಷ್ಠಿರ! ಆ ಬೆವರು ಹನಿಹನಿಯಾಗಿ ಭೂಮಿಯಲ್ಲಿ ಬಿದ್ದಿತು. ಅದರಿಂದ ಎಳ್ಳು, ಉದ್ದು, ದರ್ಭೆ ಇವುಗಳು ಉಂಟಾದುವು.

೬. ಬಲಶಾಲಿಯಾದ ಮಧುವು ಆ ಯುದ್ಧದಲ್ಲಿ ವಿಷ್ಣುವಿನಿಂದ ಸಂಹೃತನಾದನು. ಆ ರಾಕ್ಷಸನ ಮೇದಸ್ಸಿನಿಂದ ಈ ಭೂಮಿಯು ಉತ್ಪನ್ನವಾಯಿತು.

೭. ಈ ಪ್ರಕಾರ ಭೂಮಿಗೆ ಮೇದಿನಿ ಎಂಬ ಹೆಸರುಂಟಾಯಿತು. ಆ ರಾಕ್ಷಸರಾಜನು ಸತ್ತುಹೋದುದರಿಂದ ದೇವತೆಗಳೆಲ್ಲರೂ ಬಹು ಸಂತೋಷಪಟ್ಟರು. ದೇವತೆಗಳಿಗೆ ಅಧಿಪತಿಯಾದ ವಿಷ್ಣುವನ್ನು ಬಹುವಾಗಿ ಸ್ತೋತ್ರ ಮಾಡಿದ್ದಲ್ಲದೆ ಈ ರೀತಿ ಹೇಳಿದರು.

೮. ದೇವತೆಗಳು ಹೇಳುತ್ತಾರೆ—ಎಲೈ ದೇವನೇ! ಈ ಜಗತ್ತು ನಿನ್ನಿಂದಲೇ ಸೃಷ್ಟಿಯಾಯಿತು. ಮತ್ತು ನಿನ್ನಿಂದಲೇ ಧರಿಸಲ್ಪಟ್ಟಿದೂ ಆಗಿದೆ.

ತ್ವಯೀಶ ಲೀಯತೇ ಸರ್ವಂ ತ್ವಯ್ಯೈವ ಮಧುಸೂದನ ।
ತಸ್ಮಾತ್ತ್ವದಂಗತೋ ಜಾತಾಸ್ತಿಲಾಸ್ಸಂತು ಜಗದ್ಧಿತಾಃ ॥ ೯ ॥

ಪಾಲಯಂತು ಚ ದೇವೇಶ ಹವ್ಯಕವ್ಯಾನಿ ಸರ್ವದಾ ।
ದೈವೇ ಪಿತ್ರ್ಯೇ ಚ ಸತತಂ ನಿಯೋಜ್ಯಾಸ್ತತ್ಪರೈರ್ನರೈಃ ॥ ೧೦ ॥

ನಹಿ ದೈತ್ಯಾಃ ಪಿಶಾಚಾ ವಾ ವಿಘ್ನಂ ಕುರ್ವಂತಿ ಭಾರತ ।
ತಿಲಾ ಯತ್ರೋಪಯುಜ್ಯಂತೇ ಏತಚ್ಛೀಘ್ರಂ ವಿಧೀಯತಾಂ ॥ ೧೧ ॥

ಶ್ರುತ್ವಾ ಸುರಾಣಾಂ ತದ್ವಾಕ್ಯಂ ವಿಷ್ಣುಸ್ತಾನಿದಮಬ್ರವೀತ್ ।
ತಿಲಾ ಭವಂತು ರಕ್ಷಾರ್ಥಂ ತ್ರಯಾಣಾಂ ಜಗತಾಮಪಿ ॥ ೧೨ ॥

---

೯. ಮಧುವನ್ನು ಸಂಹಾರಮಾಡಿದ ಪರಮಾತ್ಮಾ! ಈ ಜಗತ್ತು ನಿನ್ನಲ್ಲಿಯೇ ಲಯವೂ ಆಗುತ್ತದೆ. ಅದರಿಂದ ನಿನ್ನ ಅಂಗದಿಂದ ಜನಿಸಿದ ಈ ಎಳ್ಳಿನಿಂದ ಲೋಕಕ್ಕೆ ಹಿತವಾಗಲಿ.

೧೦. ಎಲೈ ದೇವೇಶನೇ—ಈ ಎಳ್ಳು ಸಕಲ ದೇವಕಾರ್ಯಗಳಲ್ಲೂ ಮತ್ತು ಪಿತೃಕಾರ್ಯಗಳಲ್ಲೂ ಸಹ ಉಪಯುಕ್ತವಾಗಲಿ. ದೇವಕಾರ್ಯ ಪಿತೃಕಾರ್ಯಗಳಲ್ಲಿ ಆಸಕ್ತರಾದ ಜನರು ತಮ್ಮ ತಮ್ಮ ಶಕ್ತ್ಯನುಸಾರ ಇದನ್ನು ನಿಯೋಜಿಸಿಕೊಳ್ಳಲಿ.

೧೧. ಅಯ್ಯಾ ಯುಧಿಷ್ಠಿರ! ದೇವತೆಗಳು ವಿಷ್ಣುವನ್ನು ಕುರಿತು—ಈ ಎಳ್ಳನ್ನು ಉಪಯೋಗಿಸಿ ನಡೆಯಿಸಿದ ಕರ್ಮಗಳಿಗೆ ರಾಕ್ಷಸರೇ ಆಗಲಿ ಪಿಶಾಚಿಗಳೇ ಆಗಲಿ ಯಾವ ವಿಘ್ನವನ್ನೂ ಮಾಡಕೂಡದು. ಆರೀತಿ ವಿಧಾಯಕ ಮಾಡು ಎಂದು ಹೇಳಿದರು.

೧೨. ಈ ಪ್ರಕಾರವಾಗಿ ದೇವತೆಗಳು ಹೇಳಿದ ಮಾತನ್ನು ಕೇಳಿ ವಿಷ್ಣುವು ದೇವತೆಗಳನ್ನು ಕುರಿತು " ಈ ಎಳ್ಳು ಮೂರು ಲೋಕಗಳನ್ನೂ ರಕ್ಷಿಸುವ ವಸ್ತುವಾಗಿ ಇರಲಿ " ಎಂಬದಾಗಿ ಹೇಳಿದನು.

**ಶುಕ್ಲಪಕ್ಷೇ ತು ದೇವಾನಾಂ ಸಂಪ್ರದದ್ಯಾತ್ತಿಲೋದಕಂ ।**
**ಕೃಷ್ಣಪಕ್ಷೇ ಪಿತೄಣಾಂ ಚ ಸ್ನಾತ್ವಾ ಶ್ರದ್ಧಾಸಮನ್ವಿತಃ ॥ ೧೩ ॥**

**ತಿಲೈಃ ಸಪ್ತಾಷ್ಟಭಿರ್ವಾಪಿ ಸಮರ್ಪಿತಜಲಾಂಜಲಿಃ ।**
**ತಸ್ಯ ದೇವಾಃ ಸಪಿತರಸ್ತೃಪ್ತಾ ಯಚ್ಛಂತಿ ಶೋಭನಂ ॥ ೧೪ ॥**

**ಶ್ವಕಾಕೋಪಹತಂ ಯಚ್ಚ ಪತಿತಾದಿಭಿರೇವ ಚ ।**
**ತಿಲೈರಭ್ಯುಕ್ಷಿತಂ ಸರ್ವಂ ಪವಿತ್ರಂ ಸ್ಯಾನ್ನ ಸಂಶಯಃ ॥ ೧೫ ॥**

**ಏತೈರ್ಭೂರ್ತೈಸ್ತಿಲೈರ್ಯಸ್ತು ಕೃತ್ವಾ ಪರ್ವತಮುತ್ತಮಂ ।**
**ಪ್ರದದ್ಯಾದ್ದ್ವಿಜಮುಖ್ಯಾಯ ದಾನಂ ತಸ್ಯಾಕ್ಷಯಂ ಭವೇತ್ ॥ ೧೬ ॥**

---

೧೩. ಶುಕ್ಲಪಕ್ಷದಲ್ಲಿ ಸ್ನಾನಮಾಡಿ ದೇವತೆಗಳಿಗೆ ತಿಲೋದಕವನ್ನು ಕೊಡಬೇಕು. ಕೃಷ್ಣಪಕ್ಷದಲ್ಲಿ ಸ್ನಾನಮಾಡಿ ಶ್ರದ್ಧೆಯಿಂದ ಪಿತೃಗಳಿಗೆ ತಿಲೋದಕವನ್ನು ಕೊಡಬೇಕು.

೧೪. ಒಂದುಸಲಕ್ಕೆ ಏಳು ಅಥವಾ ಎಂಟು ಎಳ್ಳು ಕಾಳುಗಳೊಡನೆ ದೇವತೆಗಳಿಗೂ ಪಿತೃಗಳಿಗೂ ಜಲಾಂಜಲಿಯನ್ನು ಅರ್ಪಿಸುವ ಮನುಷ್ಯನಿಗೆ ದೇವತೆಗಳೂ ಮತ್ತು ಪಿತೃಗಳೂ ಮಂಗಳವನ್ನು ಉಂಟುಮಾಡುತ್ತಾರೆ.

೧೫. ನಾಯಿ ಕಾಗೆ ಇತ್ಯಾದಿಗಳಿಂದ ಉಪಹತಿಹೊಂದಿದವರು ಮತ್ತು ಪತಿತರಾಗಿ ಮೃತಿಹೊಂದಿದವರು ಇವರೆಲ್ಲರೂ ಎಳ್ಳಿನಿಂದ ಪವಿತ್ರರಾಗುತ್ತಾರೆ. ಈ ವಿಚಾರದಲ್ಲಿ ಯಾವ ಸಂಶಯವೂ ಇಲ್ಲ.

೧೬. ಈ ಪ್ರಕಾರ ಮಹಿಮೆಯುಳ್ಳ ಎಳ್ಳಿನಿಂದ ಉತ್ತಮವಾದ ಪರ್ವತವನ್ನು ನಿರ್ಮಿಸಿ ಶ್ರೇಷ್ಠನಾದ ದ್ವಿಜನಿಗೆ ದಾನಮಾಡಿದರೆ ಆತನು ಮಾಡಿದ ದಾನವು ಅಕ್ಷಯವಾದ ಫಲವುಳ್ಳದ್ದಾಗುತ್ತದೆ.

ಉತ್ತಮೋ ದಶಭಿರ್ದ್ರೋಣೈರ್ಮಧ್ಯಮಃ ಪಂಚಭಿರ್ಮತಃ ।
ತ್ರಿಭಿಃ ಕನಿಷ್ಠೋ ರಾಜೇಂದ್ರ ತಿಲಶೈಲಃ ಪ್ರಕೀರ್ತಿತಃ ॥ ೧೭ ॥

ಪೂರ್ವವಚ್ಚಾಪರಂ ಸರ್ವಂ ವಿಷ್ಕಂಭಪರ್ವತಾದಿಕಂ ।
ದಾನಮೇಷಾಂ ಪ್ರವಕ್ಷ್ಯಾಮಿ ಯಥಾವನ್ನೃಪಸತ್ತಮ ॥ ೧೮ ॥

ಯಸ್ಮಾನ್ಮಧುವಧೇ ವಿಷ್ಣೋರ್ದೇಹಸ್ವೇದಸಮುದ್ಭವಾಃ ।
ತಿಲಾಃ ಕುಶಾಶ್ಚ ಮಾಷಾಶ್ಚ ತಸ್ಮಾಚ್ಛಂ ನೋ ಭವಂತ್ವಿಹ ॥ ೧೯ ॥

ಹವ್ಯೇ ಕವ್ಯೇ ಚ ಯಸ್ಮಾಚ್ಚ ತಿಲೈರೇವಾಭಿಮಂತ್ರಣಂ ।
ಭವಾದುದ್ಧರ ಶೈಲೇಂದ್ರ ತಿಲಾಚಲ ನಮೋಽಸ್ತು ತೇ ॥ ೨೦ ॥

---

೧೭. ಅಯ್ಯಾ ಯುಧಿಷ್ಠಿರ! ಹತ್ತು ದ್ರೋಣ ಪ್ರಮಾಣತಿಲದಿಂದ ಈ ತಿಲಶೈಲವನ್ನು ನಿರ್ಮಿಸಿದರೆ ಉತ್ತಮಪ್ರಕಾರವಾದುವೆಂದೂ, ಐದು ದ್ರೋಣ ಪ್ರಮಾಣತಿಲಗಳಿಂದ ನಿರ್ಮಿಸಿದರೆ ಮಧ್ಯಮವೆಂದೂ, ಮೂರು ದ್ರೋಣ ತಿಲ ದಿಂದ ರಚಿಸಿದರೆ ಕನಿಷ್ಠವೆಂತಲೂ ತಿಳಿಯಬೇಕು.

೧೮. ಎಲೈ ರಾಜನೇ! ಇದರ ಸುತ್ತಿನ ವಿಷ್ಕಂಭಪರ್ವತ ಮೊದಲಾದುವು ಗಳನ್ನೆಲ್ಲಾ ಪೂರ್ವೋಕ್ತಪ್ರಮಾಣದಂತೆಯೇ ಮಾಡಬೇಕು. ಈಗ ಯಥಾವಿಧಿ ಯಾಗಿ ಅವುಗಳ ದಾನಕ್ರಮವನ್ನು ಹೇಳುವೆನು.

೧೯. ಮಧುರಾಕ್ಷಸನ ವಧೆಯಲ್ಲಿ ವಿಷ್ಣುವಿನ ದೇಹದ ಬೆವರಿನಿಂದ ಜನಿ ಸಿದ ಎಳ್ಳು, ದರ್ಭೆ, ಉದ್ದು ಇವುಗಳು ಪವಿತ್ರವಸ್ತುಗಳಾಗಿವೆ. ಈ ಕಾರಣದಿಂದ ಇವುಗಳು ನನಗೆ ಮಂಗಳವನ್ನುಂಟುಮಾಡಲಿ.

೨೦. ಎಲೈ ತಿಲಾಚಲವೇ! ಸಮಸ್ತ ದೇವತಾಸಂಬಂಧಿ ಮತ್ತು ಪಿತೃ ಸಂಬಂಧಿ ಕಾರ್ಯಗಳಲ್ಲಿ ತಿಲದಿಂದಲೇ ಅಭಿಮಂತ್ರಣವಾಗುತ್ತದೆ. ಇಂತಹ ತಿಲಪರ್ವತೇಂದ್ರನಾದ ನೀನು ನನ್ನನ್ನು ಈ ಸಂಸಾರದಿಂದ ಉದ್ಧಾರಮಾಡು. ನಿನಗೆ ನಮಸ್ಕಾರ.

ಇತ್ಯಾಮಂತ್ರ್ಯ ಚ ಯೋ ದದ್ಯಾತ್ತಿಲಾಚಲಮನುತ್ತಮಂ ।
ಸ ವೈಷ್ಣವಂ ಪದಂ ಯಾತಿ ಪುನರಾವೃತ್ತಿದುರ್ಲಭಂ ॥ ೨೦ ॥

ದೀರ್ಘಾಯುಷ್ಟ್ವಮವಾಪ್ನೋತಿ ಇಹ ಲೋಕೇ ಪರತ್ರ ಚ ।
ಪಿತೃಭಿರ್ದೇವಗಂಧರ್ವೈಃ ಪೂಜ್ಯಮಾನೋ ದಿವಂ ವ್ರಜೇತ್ ॥ ೨೨ ॥

ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।
ನಾರೀ ವಾ ತಸ್ಯ ಪತ್ನೀ ಸ್ಯಾದ್ರೂಪಸೌಭಾಗ್ಯಸಂಯುತಾ ॥ ೨೩ ॥

ದಕ್ಷಾ ಕುಲೋದ್ಭವಾ ಚೈವ ಪುತ್ರಪೌತ್ರಸಮನ್ವಿತಾ ।
ವಿಧಾನಮಿದಮಾಕರ್ಣ್ಯ ವಿಧಿನಾ ಶ್ರದ್ಧಯಾನ್ವಿತಃ ॥ ೨೪ ॥

ಕಪಿಲಾದಾನಪುಣ್ಯಸ್ಯ ಸಮಂ ಫಲಮವಾಪ್ನುಯಾತ್ ॥ ೨೫ ॥

---

೨೦. ಈ ರೀತಿ ಆಹ್ವಾನಿಸಿ ಪ್ರಾರ್ಥಿಸಿ ಯಾವ ಮನುಷ್ಯನು ಅತ್ಯುತ್ತಮವಾದ ತಿಲಪರ್ವತವನ್ನು ದಾನಮಾಡುವನೋ ಆತನು ಪುನರಾವೃತ್ತಿರಹಿತವಾದ (ಶಾಶ್ವತವಾದ) ವಿಷ್ಣುಲೋಕವನ್ನು ಪಡೆಯುತ್ತಾನೆ.

೨೨. ಮತ್ತು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಹ ದೀರ್ಘಾಯುಸ್ಸನ್ನು ಪಡೆಯುತ್ತಾನೆ. ಮತ್ತು ಪಿತೃಗಳು, ದೇವತೆಗಳು, ಗಂಧರ್ವರು ಇವರಿಂದ ಪೂಜಿತನಾಗಿ ಸ್ವರ್ಗಕ್ಕೆ ಹೋಗುತ್ತಾನೆ.

೨೩–೨೫. ಅಲ್ಲಿ ತನ್ನ ಪುಣ್ಯ ಮುಗಿದನಂತರ ಈ ಲೋಕದಲ್ಲಿ ಜನ್ಮವೆತ್ತಿ ಧಾರ್ಮಿಕನಾದ ರಾಜನಾಗುತ್ತಾನೆ. ಈ ದಾನವನ್ನು ಸ್ತ್ರೀಯು ಮಾಡಿದರೆ ಆಕೆಯೂ ಸಹ ರೂಪ, ಲಾವಣ್ಯ, ಸೌಭಾಗ್ಯ ಇತ್ಯಾದಿಗಳಿಂದ ಕೂಡಿ ಮಹಾರಾಣಿಯಾಗುತ್ತಾಳೆ. ಮತ್ತು ಆ ಸ್ತ್ರೀಯು ಸಕಲ ಕಾರ್ಯದಕ್ಷಳೂ ಸತ್ಕುಲಪ್ರಸೂತಳೂ ಆಗಿ ಪುತ್ರರು, ಮೊಮ್ಮಕ್ಕಳು ಇವರಿಂದ ಕೂಡಿ ಸಂತೋಷಪಡುತ್ತಾಳೆ. ಯಾವ ಮನುಜನು ಈ ದಾನವಿಧಾನವನ್ನು ಶ್ರದ್ಧೆಯಿಂದ ಕೇಳುತ್ತಾನೆಯೋ ಆತನೂ ಸಹ ಕಪಿಲವರ್ಣವುಳ್ಳ ಗೋವನ್ನು ದಾನಮಾಡಿದಕ್ಕೆ ಸಮನಾದ ಫಲವನ್ನು ಪಡೆಯುತ್ತಾನೆ.

ದಾನಂ ತಿಲಾಚಲಸಮಂ ಯದಿ ಚಾನ್ಯದಸ್ತಿ ।
ತದ್ಬ್ರೂತ ಶಾಸ್ತ್ರ ನಿಚಯಂ ಪ್ರವಿಚಾರ್ಯ ಬುಧ್ಯಾ ॥
ಯೈರ್ವರ್ಜಿತಾ ಪಿತೃಕ್ರಿಯಾ ನ ಚ ಹೋಮಕರ್ಮ ।
ತೇಷಾಂ ಪ್ರದಾನಮಿಹ ಕಿಂನ ಕರೋತಿ ಶರ್ಮ ॥ ೨೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ತಿಲಾಚಲದಾನವಿಧಿವರ್ಣನಂ ನಾಮ ಏಕೋನದ್ವಿಶತತಮೋಽಧ್ಯಾಯಃ.



---

೨೬. ತಿಲಾಚಲದಾನಕ್ಕೆ ಸಮನಾದ ದಾನವು ಯಾವುದಾದರೂ ಬೇರೆ ಇರುವುದಾದರೆ ಬುದ್ಧಿಬಲದಿಂದ ಸಮಸ್ತ ಶಾಸ್ತ್ರಗಳನ್ನೂ ಚೆನ್ನಾಗಿ ವಿಮರ್ಶಿಸಿ ಹೇಳಿರಿ. ಎಷ್ಟು ಹುಡುಕಿದರೂ ಇದರ ಸಮಾನವಾದ್ದು ಬೇರೊಂದಿಲ್ಲ. ಸಾಮಾನ್ಯರು ಆಚರಿಸಿದರೇ ಅಷ್ಟು ಮಹಾಫಲವೆಂದು ಉಕ್ತವಾಗಿರುವಲ್ಲಿ ಪಿತೃಕ್ರಿಯೆಗಳನ್ನೂ ಮತ್ತು ಹೋಮಾದಿ ಕರ್ಮಗಳನ್ನೂ ಬಿಡದೆ ಆಚರಿಸಿದಂತಹ ಪುಣ್ಯಾತ್ಮರು ಈ ದಾನವನ್ನು ಮಾಡಿದರೆ ಅವರಿಗೆ ಸೌಖ್ಯವು ಲಭಿಸದೆ ಇದ್ದೀತೆ? ಎಂದು ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ತಿಲಾಚಲದಾನದವಿಧಿವರ್ಣನೆಯೆಂಬ ನೂರತೊಂಭತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಿಶತತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ಕಾರ್ಪಾಸಾಚಲಮುತ್ತಮಂ |
ಪರಮಂ ಸರ್ವದಾನಾನಾಂ ಪ್ರಿಯಂ ಸರ್ವದಿವೌಕಸಾಂ || ೧ ||

ದೇಶಕಾಲೌ ಸಮಾಸಾದ್ಯ ಧನಂ ಶ್ರದ್ಧಾಂ ಚ ಯತ್ನತಃ |
ದೇಯಮೇತನ್ಮಹಾದಾನಂ ಕುಲೋದ್ಧರಣಹೇತವೇ || ೨ ||

ಪೂರ್ವೋಕ್ತೇನ ವಿಧಾನೇನ ಕೃತ್ವಾ ಸರ್ವಮಶೇಷತಃ |
ಪರ್ವತಂ ಕಲ್ಪಯೇತ್ತತ್ರ ಕಾರ್ಪಾಸೇನ ವಿಧಾನತಃ || ೩ ||

---

### ಇನ್ನೂರನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಹೇಳುತ್ತಾನೆ—ಈಗ ಸಮಸ್ತ ದಾನಗಳೊಳಗೆ ಶ್ರೇಷ್ಠವೂ ಎಲ್ಲ ದೇವತೆಗಳಿಗೂ ಪ್ರಿಯವೂ ಉತ್ತಮವೂ ಆಗಿರುವ ಕಾರ್ಪಾಸಾಚಲದ ದಾನವನ್ನು ಹೇಳುತ್ತೇನೆ.

೨ ಇದಕ್ಕೆ ಉಕ್ತವಾಗಿರುವ ಯೋಗ್ಯವಾದ ಸ್ಥಳದಲ್ಲಿ ದಾನಕ್ಕೆ ಉಕ್ತವಾದ ಕಾಲದಲ್ಲಿ ತನ್ನ ಶಕ್ತ್ಯನುಸಾರ ಧನ ಇತ್ಯಾದಿ ಸಂಭಾರಗಳನ್ನು ಸಂಗ್ರಹಿಸಿಕೊಂಡು ಶ್ರದ್ಧಾಯುಕ್ತನಾಗಿ ಈ ಮಹಾದಾನವನ್ನು ಮಾಡಬೇಕು. ಇದರಿಂದ ವಂಶವು ಉದ್ಧಾರವಾಗುತ್ತದೆ.

೩. ಹಿಂದೆ ಹೇಳಿದ ಕ್ರಮದಂತೆಯೇ ಇದಕ್ಕೂ ಸಮಸ್ತ ಸಿದ್ಧತೆಗಳನ್ನು ಮಾಡಿ ಯಥಾವಿಧಿಯಾಗಿ ಹತ್ತಿಯಿಂದ ಒಂದು ಪರ್ವತವನ್ನು ನಿರ್ಮಿಸಬೇಕು.

**ವಿಂಶದ್ಭಾರಸ್ತು ಕರ್ತವ್ಯ ಉತ್ತಮಃ ಪರ್ವತೋ ಬುಧೈಃ ।**
**ದಶಭಿರ್ಮಧ್ಯಮಃ ಪ್ರೋಕ್ತೋ ಜಘನ್ಯಃ ಪಂಚಭಿರ್ಮತಃ ॥ ೪ ॥**

**ಭಾರೇಣಾಲ್ಪಧನೋ ದದ್ಯಾದ್ವಿತ್ತಶಾಠ್ಯವಿವರ್ಜಿತಃ ।**
**ಧಾನ್ಯಪರ್ವತವತ್ಸರ್ವಮಾಸಾದ್ಯ ನೃಪಪುಂಗವ ॥ ೫ ॥**

**ತದ್ವಜ್ಜಾಗರಣಂ ಕುರ್ಯಾತ್ತದ್ವಚ್ಚೈವಾಧಿವಾಸನಂ ।**
**ಪ್ರಭಾತಾಯಾಂ ತು ಶರ್ವಾರ್ಯಾಮಿಮಂ ಮಂತ್ರಮುದೀರಯೇತ್ ॥೬॥**

**ತ್ವಮೇವಾವರಣಂ ಯಸ್ಮಾಲ್ಲೋಕಾನಾಮಿಹ ಸರ್ವದಾ ।**
**ಕಾರ್ಪಾಸಾಚಲ ನಸ್ತಸ್ಮಾದಘೌಘಧ್ವಂಸನೋ ಭವ ॥ ೭ ॥**

---

೪. ಈ ಪರ್ವತವನ್ನು ಇಪ್ಪತ್ತು ಭಾರ ಪ್ರಮಾಣದ ಕಾರ್ಪಾಸದಿಂದ ನಿರ್ಮಿಸಿದರೆ ಅದು ಉತ್ತಮಪ್ರಕಾರ ವೆನಿಸುವುದು. ಹತ್ತುಭಾರ ಪ್ರಮಾಣದಿಂದ ರಚಿಸಿದರೆ ಮಧ್ಯಮವೆಂದೂ, ಐದುಭಾರ ಪ್ರಮಾಣದಿಂದ ರಚಿಸಿದರೆ ಅದು ಅಧಮ ವೆಂದೂ ತಿಳಿಯಬೇಕು.

೫. ಅಯ್ಯಾ ರಾಜವರ್ಯನೇ—ಸ್ವಲ್ಪವೇ ದ್ರವ್ಯಾನುಕೂಲಉಳ್ಳವ ನಾದರೆ ಒಂದುಭಾರ ಪ್ರಮಾಣದಿಂದ ರಚಿಸಬಹುದು. ದ್ರವ್ಯಾನುಕೂಲ ಇದ್ದರೂ ಕೃಪಣತೆಯಿಂದ ಆಚರಿಸಬಾರದು. ಮಿಕ್ಕ ಎಲ್ಲಾ ಸಂಭಾರಗಳನ್ನೂ ಧಾನ್ಯ ಪರ್ವತದಾನದಲ್ಲಿ ಹೇಳಿರುವಂತೆ ಸಂಗ್ರಹಿಸಿಕೊಳ್ಳಬೇಕು.

೬. ಆ ದಿನದಲ್ಲಿ ಆಚರಿಸಿದಂತೆಯೇ ಜಾಗರಣೆ ಮತ್ತು ಅಧಿವಾಸ ಎಲ್ಲವನ್ನೂ ಮಾಡಬೇಕು. ರಾತ್ರಿ ಕಳೆದು ಬೆಳಗಾದ ಮೇಲೆ ದಾನಮಾಡುವಾಗ ಈ ಮಂತ್ರವನ್ನು ಹೇಳಬೇಕು.

೭. ಎಲೈ ಕಾರ್ಪಾಸಾಚಲವೇ! ಯಾವಾಗಲೂ ಜನಗಳಿಗೆ ನೀನೇ ಆವರಣವಾಗಿರುತ್ತೀಯೆ. ಆದುದರಿಂದ ನಮ್ಮ ಪಾಪರಾಶಿಗಳ ಧ್ವಂಸಕ ನಾಗು.

**ಇತಿ ಕಾರ್ಪಾಸಶೈಲೇಂದ್ರಂ ಯೋ ದದ್ಯಾತ್ಪರ್ವಸನ್ನಿಧೌ ।**
**ರುದ್ರಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ॥ ೮ ॥**

**ರೂಪವಾನ್ಸುಭಗೋ ವಾಗ್ಮೀ ಶ್ರೀಮಾನತುಲವಿಕ್ರಮಃ ।**
**ಪಂಚಜನ್ಮಾನಿ ನಾರೀ ವಾ ಜಾಯತೇ ನಾತ್ರ ಸಂಶಯಃ ॥ ೯ ॥**

**ಕಾರ್ಪಾಸಪರ್ವತಮಯೋ ಜಗದೇಕಬಂಧು ।**
**ರ್ಯಸ್ಮಾನ್ನ ತೇನ ರಹಿತೋ ವರವಸ್ತ್ರಯೋಗಃ ॥**
**ತಸ್ಮಾದಘೌಘಶಮನಾಯ ಸುಖಾಯ ನಿತ್ಯಂ ।**
**ದೇಯೋ ನರೇಣ ನರನಾಥ ವಿಮತ್ಸರೇಣ ॥ ೧೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಕಾರ್ಪಾಸಾಚಲದಾನವಿಧಿವರ್ಣನಂ ನಾಮ ದ್ವಿಶತತಮೋಽಧ್ಯಾಯಃ.**

---

೮. ಪರ್ವಕಾಲದಲ್ಲಿ ಕಾರ್ಪಾಸಾಚಲವನ್ನು ಈ ಪ್ರಕಾರ ದಾನಮಾಡ ತಕ್ಕವನು ರುದ್ರಲೋಕವನ್ನು ಸೇರಿ ಅಲ್ಲಿ ಒಂದು ಕಲ್ಪಕಾಲ ವಾಸಮಾಡಿ ಅನಂತರ ಈ ಲೋಕದಲ್ಲಿ ಜನಿಸಿ ರಾಜನಾಗುತ್ತಾನೆ.

೯. ಸುರೂಪಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ವಾಗ್ಮಿಯೂ, ಕಾಂತಿ ವಂತನೂ, ಬಹು ಪರಾಕ್ರಮಿಯೂ ಆಗಿ ಮುಂದಿನ ಐದು ಜನ್ಮಗಳಲ್ಲಿಯೂ ಇದೇ ರೀತಿ ರಾಜನಾಗಿ ಜನಿಸುತ್ತಾನೆ. ನಾರಿಗೂ ಸಹ ಇದೇಫಲ ಲಭಿಸುವುದು ಇದ ರಲ್ಲಿ ಸಂಶಯವಿಲ್ಲ.

೧೦. ಕಾರ್ಪಾಸ ಪರ್ವತವು ಜಗತ್ತಿಗೆಲ್ಲಾ ಮುಖ್ಯವಾದ ಬಂಧುವೆನ್ನ ಬೇಕು. ಅದು ಇಲ್ಲದಿದ್ದರೆ ಜಗತ್ತಿನಲ್ಲಿ ಶ್ರೇಷ್ಠವಾದ ಬಟ್ಟೆಯ ಹೆಸರೇ ಇರುತ್ತಿರಲಿಲ್ಲ. ಆದುದರಿಂದ ಎಲೈ ಧರ್ಮರಾಜನೇ! ಪುಣ್ಯಾರ್ಜನಾಭಿಲಾಷೆ ಯುಳ್ಳ ನರನು ತನ್ನ ಸಕಲಪಾಪಗಳ ನಾಶಕ್ಕೂ ಮತ್ತು ಶಾಶ್ವತವಾದ ಸುಖಕ್ಕೂ ಸಹ ಈ ಕಾರ್ಪಾಸಾಚಲವನ್ನು ದಾನಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಕಾರ್ಪಾಸಾಚಲ(ಹತ್ತಿಯಪರ್ವತ)ದ ದಾನವಿಧಿವರ್ಣನೆ ಯೆಂಬ ಇನ್ನೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕಾಧಿಕದ್ವಿಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಘೃತಾಚಲಮನುತ್ತಮಂ ।
ತೇಜೋಽಮೃತಮಯಂ ದಿವ್ಯಂ ಮಹಾಪಾತಕನಾಶನಂ ॥ ೧ ॥

ಪಂಚಾಶದ್ಘೃತಕುಂಭಾನಾಮುತ್ತಮಃ ಸ್ಯಾದ್ಘೃತಾಚಲಃ ।
ಮಧ್ಯಮಸ್ತು ತದರ್ಧೇನ ತದರ್ಧೇನಾವರಃ ಸ್ಮೃತಃ ॥ ೨ ॥

---

### ಇನ್ನೂರೊಂದನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಈಗ ತೇಜೋಮಯವೂ ಅಮೃತರೂಪವೂ ದಿವ್ಯವೂ ಪಂಪಮಹಾಪಾತಕಗಳನ್ನು ನಾಶಮಾಡತಕ್ಕದೂ ಸರ್ವೋತ್ಕೃಷ್ಟವೂ ಆಗಿರುವ ಘೃತಪರ್ವತದ ದಾನಕ್ರಮವನ್ನು ಹೇಳುತ್ತೇನೆ.

೨. ಈ ಘೃತಾಚಲವನ್ನು ತುಪ್ಪದಿಂದ ತುಂಬಿದ ಐವತ್ತು ಕುಂಭದಿಂದ ರಚನೆ ಮಾಡಿದರೆ ಉತ್ತಮವಿಧಾನವೆನಿಸುತ್ತದೆ. ಅದರ ಅರ್ಧದಷ್ಟರಿಂದ ಮಾಡಿ ಮಧ್ಯಮ ಪ್ರಕಾರವೆಂದೂ, ಅದರಲ್ಲಿ ಅರ್ಧದಷ್ಟರಿಂದ ಮಾಡಿದರೆ ಅಧಮ ಪ್ರಕಾರವೆಂದೂ ತಿಳಿಯಬೇಕು.

**ಅಲ್ಪವಿತ್ತಸ್ತು ಕುರ್ವೀತ ಯಥಾ ಶಕ್ತ್ಯಾ ವಿಧಾನತಃ ।**
**ವಿಷ್ಕಂಭಪರ್ವತಾಂಸ್ತದ್ವಚ್ಚತುರ್ಭಾಗೇನ ಕಲ್ಪಯೇತ್ ॥ ೩ ॥**

**ಶಾಲೇಯತಂಡುಲಾನಾಂ ಚ ಕುಂಭಾಂಶ್ಚ ಪರಿವಿನ್ಯಸೇತ್ ।**
**ಕಾರಯೇತ್ಸಂಹತಾನುಚ್ಚಾನ್ಯಥಾ ಶೋಭಂ ವಿಧಾನತಃ ॥ ೪ ॥**

**ವೇಷ್ಟಯೇಚ್ಛುಕ್ಲವಾಸೋಭಿರಿಕ್ಷುಖಂಡಫಲಾದಿಕೈಃ ।**
**ಧಾನ್ಯಪರ್ವತವಚ್ಛೇಷಂ ವಿಧಾನಮಿಹ ಪಠ್ಯತೆ ॥ ೫ ॥**

**ಅಧಿವಾಸನಪೂರ್ವಂ ಚ ತದ್ವದ್ಧೋಮಂ ಸುರಾರ್ಚನಂ ।**
**ಪ್ರಭಾತಾಯಾಂ ತು ಶರ್ವರ್ಯಾಂ ಗುರವೇ ವಿನಿವೇದಯೇತ್ ॥ ೬ ॥**

**ವಿಷ್ಕಂಭಪರ್ವತಾಂಸ್ತದ್ವದೃತ್ವಿಗ್ಭ್ಯಃ ಶಾಂತಮಾನಸಃ ।**
**ಮಂತ್ರೇಣಾನೇನ ಕೌಂತೇಯ ತಚ್ಛೃಣುಷ್ವ ವದಾಮಿ ತೇ ॥ ೭ ॥**

---

೩. ಸ್ವಲ್ಪವೇ ದ್ರವ್ಯಾನುಕೂಲ ಉಳ್ಳವನು ತನ್ನ ಶಕ್ತ್ಯನುಸಾರವಾದಷ್ಟು ಘೃತಕುಂಭದಿಂದ ಈ ದಾನಮಾಡಬೇಕು. ವಿಷ್ಕಂಭಪರ್ವತಗಳನ್ನು ಹಿಂದಿನಂತೆಯೇ ಇದರ ನಾಲ್ಕನೆಯ ಒಂದುಭಾಗದಿಂದ ಕಲ್ಪಿಸಬೇಕು.

೪. ಅಲ್ಲಿ ಭತ್ತ ಮತ್ತು ಅಕ್ಕಿ ಇವುಗಳಿಂದ ಪೂರ್ಣವಾದ ಕುಂಭಗಳನ್ನು ಒಟ್ಟುಗೂಡಿಸಿ ನೋಡಲು ಬಹು ಅಂದವಾಗಿರುವಂತೆ ವಿಧಿವತ್ತಾಗಿ ಇಡಿಸಬೇಕು.

೫. ಆ ಕುಂಭಗಳಿಗೆ ಬಿಳಿಯ ಬಟ್ಟೆಯನ್ನು ಹೊದ್ದಿಸಬೇಕು. ಮತ್ತು ಕಬ್ಬಿನಚೂರು ಹಣ್ಣು ಇತ್ಯಾದಿಗಳನ್ನು ಇರಿಸಬೇಕು. ಇದರ ವಿಧಾನಗಳಲ್ಲಿ ಇನ್ನುಳಿದುವು ಧಾನ್ಯಪರ್ವತ ದಾನದಂತೆಯೇ ಎಂದು ಉಕ್ತವಾಗಿದೆ.

೬. ಅಧಿವಾಸಪೂರ್ವಕವಾಗಿ ದೇವತೆಗಳ ಅರ್ಚನೆ, ಹೋಮ, ಇವಷ್ಟೆಲ್ಲಾ ಧಾನ್ಯಪರ್ವತಾರಾಧನದಂತೆಯೇ ನಡೆಸಬೇಕು. ಆ ರಾತ್ರಿ ಕಳೆದು ಬೆಳಗಾದ ಮೇಲೆ ಆ ಪರ್ವತವನ್ನು ಆಚಾರ್ಯನಿಗೆ ಸಮರ್ಪಿಸಬೇಕು.

೭. ಅಯ್ಯಾ ಯುಧಿಷ್ಠಿರ! ಹಿಂದಿನಂತೆಯೇ ವಿಷ್ಕಂಭಪರ್ವತಗಳನ್ನು ಋತ್ವಿಜರಿಗೆ ಶಾಂತಮನಸ್ಸಿನಿಂದ ಈ ಮಂತ್ರಪುರಸ್ಸರವಾಗಿ ದಾನಮಾಡಬೇಕು. ಆ ಮಂತ್ರವನ್ನು ಹೇಳುತ್ತೇನೆ.

ಸಂಯೋಗಾದ್ಘೃತಮುತ್ಪನ್ನಂ ಯಸ್ಮಾದಮೃತತೇಜಸೇ ।
ತಸ್ಮಾದ್ಘೃತಾಚಲಶ್ಚಾಸ್ಮಾತ್ಪ್ರೀಯತಾಂ ಮಮ ಶಂಕರಃ ॥ ೮ ॥

ತಸ್ಮಾತ್ತೇಜೋಮಯಂ ಬ್ರಹ್ಮ ಘೃತೇ ನಿತ್ಯಂ ವ್ಯವಸ್ಥಿತಂ ।
ಘೃತಪರ್ವತರೂಪೇಣ ತಸ್ಮಾನ್ನಃ ಪಾಹಿ ಭೂಧರ ॥ ೯ ॥

ಅನೇನ ವಿಧಿನಾ ದದ್ಯಾದ್ಘೃತಾಚಲಮನುತ್ತಮಂ ।
ಮಹಾಪಾತಕಯುಕ್ತೋಽಪಿ ಲೋಕಮಾಯಾತಿ ಶಾಂಕರಂ ॥ ೧೦ ॥

ಹಂಸಸಾರಸಸಂಯುಕ್ತೇ ಕಿಂಕಿಣೀಜಾಲಮಾಲಿತೇ ।
ವಿಮಾನೇ ಅಪ್ಸರೋಭಿಶ್ಚ ಸಿದ್ಧವಿದ್ಯಾಧರೈರ್ವೃತಃ ॥ ೧೧ ॥

ವಿಹರೇತ್ಪಿತೃಭಿಃ ಸಾರ್ಧಂ ಯಾವದಾಭೂತಸಂಪ್ಲವಂ ॥ ೧೨ ॥

---

೮. ಅಮೃತ ತೇಜಸ್ಸು ಇವುಗಳ ಸಂಯೋಗದಿಂದ ಚಂದ್ರಸ್ವರೂಪೀ ಘೃತವು ಜನಿಸಿರುತ್ತದೆ ಆದರ ಸಮೂಹವೇ ಘೃತಾಚಲವೆನಿಸುತ್ತದೆ. ಇದನ್ನು ದಾನಮಾಡುವುದರಿಂದ ಶಂಕರನು ನನ್ನಲ್ಲಿ ಪ್ರೀತನಾಗಲಿ.

೯. ಈ ಘೃತದಲ್ಲಿ ಬ್ರಹ್ಮನು ತೇಜೋರೂಪನಾಗಿ ಯಾವಾಗಲೂ ಇರುತ್ತಾನೆಂದು ವ್ಯವಸ್ಥಿತವಾಗಿರುತ್ತದೆ. ಎಲೈ ಪರ್ವತವೇ! ಘೃತಪರ್ವತರೂಪಧಾರಿಯಾಗಿ ನಮ್ಮನ್ನು ಸಂರಕ್ಷಿಸು. (ಇದು ಮಂತ್ರಾರ್ಥ.)

೧೦. ಈ ಪ್ರಕಾರ ಯಾವ ಮನುಜನು ಸರ್ವೋತ್ತಮವಾದ ಈ ಘೃತಾಚಲವನ್ನು ದಾನಮಾಡುತ್ತಾನೆಯೋ ಆತನು ಮಹಾಪಾಪಿಯಾಗಿದ್ದರೂ ಅದರಿಂದ ಮುಕ್ತನಾಗಿ ಶಂಕರನ ಲೋಕವನ್ನು ಪಡೆಯುತ್ತಾನೆ.

೧೧-೧೨. ಹಂಸ ಮತ್ತು ಸಾರಸ ಪಕ್ಷಿಗಳಿಂದ ಕೂಡಿಯೂ ಕಿರುಗೆಜ್ಜೆಗಳನ್ನು ಮಾಲಾಕಾರವಾಗಿ ಜೋಡಿಸಿಯೂ ಇರುವ ವಿಮಾನಾರೂಢನಾಗಿ ಸ್ವರ್ಗವನ್ನು ಸೇರಿ ಅಪ್ಸರಸ್ತ್ರೀಯರು, ಸಿದ್ಧರು, ವಿದ್ಯಾಧರರು ಇವರಿಂದ ಆವೃತನಾಗಿ ಪ್ರಳಯಕಾಲ ಪರ್ಯಂತ ತಮ್ಮ ಪಿತೃಗಳೊಡನೆ ವಿಹರಿಸುತ್ತಾರೆ.

ಆಜ್ಯಾಚಲಂ ಪ್ರಚಲಕುಂಡಲಸುಂದರೀಭಿಃ ।
ಸಂಸೇವ್ಯಮಾನಮಿಹ ಯೋ ವಿತರಂತಿ ಮರ್ತ್ಯಾಃ ॥
ಸ್ವರ್ಗಂ ಸುರೇಂದ್ರಭವನಂ ಭವಸನ್ನಿಧಿಂ ವಾ ।
ಸ್ನೇಹಾನುಬಂಧಮಚಲಂ ಭವತೀತಿ ಸರ್ವಂ ॥ ೧೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ಘೃತಾಚಲದಾನವಿಧಿವರ್ಣನಂ ನಾಮ ಏಕಾಧಿಕದ್ವಿಶತತಮೋಽಧ್ಯಾಯಃ.

---

೧೩. ಯಾವ ಮನುಜರು ಮನೋಹರವಾದ ಆಜ್ಯಾಚಲವನ್ನು ದಾನ ಮಾಡುತ್ತಾರೆಯೋ ಅವರು ಸುಂದರಿಸ್ತ್ರೀಯರಿಂದ ಸೇವಿಸಲ್ಪಡುವಂತಹ ಕರ್ಣಾಭರಣಗಳುಳ್ಳ ಸ್ವರ್ಗ ಅಥವಾ ಇಂದ್ರನಗರವನ್ನೋ ಅಥವಾ ಶಾಶ್ವತವೂ ಸ್ನೇಹವುಳ್ಳದೂ ಆದ ಈಶ್ವರನ ಸಾನ್ನಿಧ್ಯವನ್ನೋ ಅಥವಾ ಎಲ್ಲವನ್ನೋ ಪಡೆಯುತ್ತಾರೆ ಎಂದು ಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದದಲ್ಲಿ ಘೃತಾಚಲ (ತುಪ್ಪದ ಪರ್ವತ) ದಾನವಿಧಿವರ್ಣನೆ ಎಂಬ ಇನ್ನೂರೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವ್ಯಧಿಕದ್ವಿಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ರತ್ನಾಚಲಮನುತ್ತಮಂ ।
ಯತ್ಪ್ರದಾನಾನ್ನರೋ ಯಾತಿ ಲೋಕಾನ್ಸಪ್ತರ್ಷಿಸೇವಿತಾನ್ ॥ ೧ ॥

ಮುಕ್ತಾಫಲಸಹಸ್ರೇಣ ಪರ್ವತಃ ಸ್ಯಾದನುತ್ತಮಃ ।
ಮಧ್ಯಮಃ ಪಂಚಶತಿಕಸ್ತ್ರಿಶತೇನಾವರಃ ಸ್ಮೃತಃ ॥ ೨ ॥

ಅಲ್ಪವಿತ್ತಸ್ತು ಕುರ್ವೀತ ಮುಕ್ತಾಫಲಶತೇನ ಚ ।
ಚತುರ್ಥಾಂಶೇನ ವಿಷ್ಕಂಭಪರ್ವತಾಃ ಸ್ಯುಃ ಸಮಂತತಃ ॥ ೩ ॥

---

## ಇನ್ನೂರೆರಡನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಸಪ್ತಋಷಿಗಳು ವಾಸಿಸುವಂತಹ ಲೋಕಪ್ರಾಪ್ತಿಯನ್ನುಂಟು ಮಾಡುವ ಅತ್ಯುತ್ತಮವಾದ ರತ್ನಾಚಲದಾನಕ್ರಮವನ್ನು ಹೇಳುವೆನು.

೨. ಒಂದುಸಾವಿರ ಶ್ರೇಷ್ಠವಾದ ಮುತ್ತುಗಳಿಂದ ಈ ಪರ್ವತವನ್ನು ರಚಿಸಿದರೆ ಅದನ್ನು ಸರ್ವೋತ್ತಮಪ್ರಕಾರವೆಂದೂ, ಐನೂರು ಮುಕ್ತಾಫಲಗಳಿಂದ ರಚಿಸಿದರೆ ಅದನ್ನು ಮಧ್ಯಮ ಪ್ರಕಾರವೆಂತಲೂ, ಮುನ್ನೂರರಿಂದ ನಿರ್ಮಿಸಿದರೆ ಅದನ್ನು ಅಧಮಪ್ರಕಾರವೆಂತಲೂ ತಿಳಿಯಬೇಕು.

೩. ಸ್ವಲ್ಪವೇ ದ್ರವ್ಯಾನುಕೂಲವುಳ್ಳವರು ನೂರು ಮುಕ್ತಾಫಲಗಳಿಂದಲೇ ರತ್ನಾಚಲವನ್ನು ಮಾಡಬಹುದು. ಹಿಂದೆ ಹೇಳಿದಂತೆ ನಾಲ್ಕನೆಯ ಒಂದು ಭಾಗದಷ್ಟರಲ್ಲಿ ವಿಷ್ಕಂಭಪರ್ವಗಳನ್ನು ಸುತ್ತಲೂ ನಿರ್ಮಿಸಬೇಕು.

ಪೂರ್ವೇಣ ವಜ್ರಗೋಮೇದೈಃ ದಕ್ಷಿಣೇನೇಂದ್ರನೀಲಕೈಃ ।
ಪುಷ್ಪರಾಗಯುತಃ ಕಾರ್ಯೋ ವಿದ್ವದ್ಭಿರ್ಗಂಧಮಾದನಃ ॥ ೪ ॥

ವೈಡೂರ್ಯವಿದ್ರುಮೈಃ ಪಶ್ಚಾತ್ಸಾವಿತ್ರೋ ವಿಪುಲಾಚಲಃ ।
ಪದ್ಮರಾಗಂ ಸಸೌವರ್ಣಮುತ್ತರೇಣಾಪಿ ವಿನ್ಯಸೇತ್ ॥ ೫ ॥

ಧಾನ್ಯಪರ್ವತವಚ್ಛೇಷಮತ್ರಾಪಿ ಪರಿಕಲ್ಪಯೇತ್ ।
ತದ್ವದಾವಾಹನಂ ಕೃತ್ವಾ ವೃಕ್ಷಾನ್ದೇವಾಂಶ್ಚ ಕಾಂಚನಾನ್ ॥ ೬ ॥

ಪೂಜಯೇತ್ಪುಷ್ಪನೈವೇದ್ಯೈಃ ಪ್ರಭಾತೇ ತು ವಿಸರ್ಜನಂ ।
ಪೂರ್ವವದ್ಗುರುಋತ್ವಿಗ್ಭ್ಯಮಿಮಾನ್ಮಂತ್ರಾನುದೀರಯೇತ್ ॥ ೭ ॥

---

೪. ಪೂರ್ವಭಾಗದಲ್ಲಿ ವಜ್ರ ಗೋಮೇಧ ಮತ್ತು ಪುಷ್ಪರಾಗಗಳಿಂದ ಕೂಡಿಯೂ ದಕ್ಷಿಣಭಾಗದಲ್ಲಿ ಇಂದ್ರನೀಲಮಣಿ ಮತ್ತು ಪುಷ್ಪರಾಗಗಳಿಂದ ಕೂಡಿಯೂ ಇರುವಂತೆ ಗಂಧಮಾದನಪರ್ವತವನ್ನು ನಿರ್ಮಾಣಮಾಡಬೇಕು.

೫. ಪಶ್ಚಿಮಭಾಗದಲ್ಲಿ ವೈಡೂರ್ಯ, ಹವಳ ಇವುಗಳಿಂದಲೂ ಉತ್ತರದಲ್ಲಿ ಪದ್ಮರಾಗಮಣಿ ಮತ್ತು ಸುವರ್ಣದಿಂದಲೂ ಕೂಡಿರುವಂತೆ (ಸವಿತೃಸಂಬಂಧವೂ ವಿಶಾಲವೂ ಆದ ವಿಪುಲ) ಪರ್ವತವನ್ನು ನಿರ್ಮಿಸಬೇಕು.

೬. ಅಲ್ಲಿ ರಚಿಸಿದಂತೆಯೇ ಸುವರ್ಣದ ವೃಕ್ಷಗಳನ್ನೂ ದೇವತೆಗಳನ್ನೂ ನಿರ್ಮಿಸಬೇಕು. ಇನ್ನು ಳಿದವುಗಳನ್ನೆಲ್ಲಾ ಧಾನ್ಯಪರ್ವತಾರಾಧನದಲ್ಲಿ ಸಿದ್ಧಪಡಿಸಿದಂತೆಯೇ ಮಾಡಿ ಬಳಿಕ ಆವಾಹನಾದಿ ಪೂಜೆಯನ್ನು ಮಾಡಬೇಕು.

೭. ನಾನಾವಿಧ ಪುಷ್ಪಗಳಿಂದ ಪೂಜಿಸಿ ನೈವೇದ್ಯವನ್ನು ಅರ್ಪಿಸಬೇಕು. ಮಾರನೆಯ ಬೆಳಿಗ್ಗೆ ಅದನ್ನು ವಿಸರ್ಜನೆಮಾಡಿ ಹಿಂದಿನಂತೆಯೇ ಆಚಾರ್ಯನಿಗೂ ಋತ್ವಿಜರಿಗೂ ದಾನಮಾಡಬೇಕು. ಆಗ ಈ (ಅರ್ಥವುಳ್ಳ) ಮಂತ್ರಗಳನ್ನು ಹೇಳಬೇಕು.

ಯಥಾ ದೇವಗಣಾಃ ಸರ್ವೇ ಸರ್ವರತ್ನೇಷ್ವವಸ್ಥಿತಾಃ ।
ತ್ವಂ ಚ ರತ್ನಮಯೋ ನಿತ್ಯಮತಃ ಪಾಹಿ ಮಹಾಚಲ ॥ ೮ ॥

ಯಸ್ಮಾದ್ರತ್ನಪ್ರದಾನೇನ ತುಷ್ಟಿಮೇತಿ ಜನಾರ್ದನಃ ।
ಪೂಜಾರತ್ನಪ್ರದಾನೇನ ತಸ್ಮಾನ್ನಃ ಪಾಹಿ ಸರ್ವದಾ ॥ ೯ ॥

ಅನೇನ ವಿಧಿನಾ ಯಸ್ತು ದದ್ಯಾದ್ರತ್ನಮಯಂ ಗಿರಿಂ ।
ಸ ಯಾತಿ ವೈಷ್ಣವಂ ಲೋಕಮಮರೇಶ್ವರಪೂಜಿತಂ ॥ ೧೦ ॥

ಯಾವತ್ಕಲ್ಪಶತಂ ಸಾಗ್ರಮುಷಿತ್ವೇಹ ನರಾಧಿಪ ।
ರೂಪಾರೋಗ್ಯಗುಣೋಪೇತಃ ಸಪ್ತದ್ವೀಪಾಧಿಪೋ ಭವೇತ್ ॥ ೧೧ ॥

---

೮. ಓ ಮಹಾಚಲವೇ! ಈ ಸಕಲ ರತ್ನಗಳಲ್ಲಿಯೂ ದೇವಗಣಗಳು ಸನ್ನಿಹಿತವಾಗಿರುವರು. ನೀನು ಸಾಕ್ಷಾತ್ ರತ್ನಮಯನಾಗಿರುತ್ತೀಯೆ. ಆದುದರಿಂದ ದೇವಗಣ ಸಮನ್ವಿತನಾದಂತಾಯಿತು ಆದುದರಿಂದ ನಮ್ಮನ್ನು ರಕ್ಷಣೆ ಮಾಡು.

೯. ಸಾಧಾರಣವಾಗಿ ಒಂದು ರತ್ನವನ್ನು ದಾನಮಾಡಿದರೆ ವಿಷ್ಣುವು ತುಷ್ಟನಾಗುತ್ತಾನೆ. ಅಂತಹದರಲ್ಲಿ ಪರ್ವತವನ್ನು ರಚಿಸಿ ಪೂಜೆಮಾಡಿ ಬಹು ರತ್ನವನ್ನು ದಾನಮಾಡುತ್ತೇನೆ. ಇದರಿಂದ ನೀನು ನನ್ನನ್ನು ಸರ್ವದಾ ರಕ್ಷಣೆಮಾಡು.

೧೦. ಈ ಪ್ರಕಾರ ರತ್ನಾಚಲವನ್ನು ದಾನಮಾಡಿದ ಮಾನವನು ದೇವತೆಗಳ ಒಡೆಯನಾದ ಇಂದ್ರನಿಂದ ಸನ್ಮಾನಿತನಾಗಿ ವಿಷ್ಣುಲೋಕವನ್ನು ಸೇರುತ್ತಾನೆ.

೧೧. ಅಯ್ಯಾ ಯುಧಿಷ್ಠಿರ! ಅಲ್ಲಿ ನೂರು ಕಲ್ಪಗಳು ಪೂರ್ತಿಯಾಗಿ ವಾಸಮಾಡಿ, ಅನಂತರ ಈ ಭೂಲೋಕದಲ್ಲಿ ಸುರೂಪಿಯೂ ಆರೋಗ್ಯವಂತನೂ ಸುಗುಣಗಳಿಂದ ಕೂಡಿದವನೂ ಆಗಿ ಜನಿಸಿ ಏಳು ದ್ವೀಪಗಳಿಗೂ ಅಧಿಪತಿಯಾದ ಚಕ್ರವರ್ತಿಯಾಗುತ್ತಾನೆ.

ಬ್ರಹ್ಮಹತ್ಯಾದಿಕಂ ಕಿಂಚಿದತ್ರ ಚಾಮುತ್ರ ವಾ ಕೃತಂ ।
ತತ್ಸರ್ವಂ ನಾಶಮಾಯಾತಿ ಗಿರಿರ್ವಜ್ರಹತೋ ಯಥಾ ॥ ೧೨ ॥

ಮುಕ್ತಾಮಯಂಕನಕವಿದ್ರುಮಭಕ್ತಿಚಿತ್ರಂ ।
ಚಂಚನ್ಮಹಾಮಣಿಮರೀಚಿಚಯೋಪಪನ್ನಂ ॥
ರತ್ನಾಚಲಂ ದ್ವಿಜವರಾಯ ನಿವೇದಯಿತ್ವಾ ।
ಭಾಸ್ವತ್ಪ್ರಭಾಮಭಿಭವೇತ್ಸುರಲೋಕಲೋಕೇ ॥ ೧೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ರತ್ನಾಚಲದಾನವಿಧಿವರ್ಣನಂ ನಾಮ ದ್ವ್ಯಧಿಕದ್ವಿಶತತಮೋಽಧ್ಯಾಯಃ.



---

೧೨. ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ ಈ ದಾನದಿಂದ ಈ ಜನ್ಮದ ಮತ್ತು ಮುಂದಿನ ಜನ್ಮಗಳಲ್ಲಿ ಸಂಭವಿಸುವ ಬ್ರಹ್ಮಹತ್ಯವೇ ಮೊದಲಾದ ಸಕಲ ಪಾಪಗಳೂ ನಾಶವಾಗುತ್ತವೆ.

೧೩. ಚಿನ್ನಮತ್ತು ಮಣಿಗಳಿಂದ ಅಲಂಕೃತವೂ, ಚಿತ್ರಿತವೂ, ಮತ್ತು ಉಜ್ವಲವೂ ಆದ ಮಹಾಮಣಿಗಳ ಕಾಂತಿಭರಿತವೂ ಮತ್ತು ಮುತ್ತಿನಿಂದ ನಿರ್ಮಿತವೂ ಆದ ರತ್ನಾಚಲವನ್ನು ಶ್ರೇಷ್ಠನಾದ ಬ್ರಾಹ್ಮಣನಿಗೆ ದಾನಮಾಡಿದ ಪುಣ್ಯಾತ್ಮನು ಸ್ವರ್ಗಲೋಕವನ್ನು ಪಡೆದು ಅಲ್ಲಿ ಸೂರ್ಯನನ್ನು ತಿರಸ್ಕರಿಸುವಷ್ಟು ತೇಜಸ್ವಿಯಾಗುತ್ತಾನೆ ಎಂದು ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ರತ್ನಾಚಲ ದಾನವಿಧಿವರ್ಣನೆಯೆಂಬ ಇನ್ನೂರೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರ್ಯಧಿಕದ್ವಿಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ರೌಪ್ಯಾಚಲಮನುತ್ತಮಂ ।
ಯತ್ಪ್ರಸಾದಾನ್ನರೋ ಯಾತಿ ಸೋಮಲೋಕಂ ನರೋತ್ತಮ ॥ ೧ ॥

ಸಹಸ್ರೇಣ ಪಲಾನಾಂ ತು ಉತ್ತಮೋ ರಜತಾಚಲಃ ।
ಪಂಚಭಿರ್ಮಧ್ಯಮಃ ಪ್ರೋಕ್ತಃ ತದರ್ಧೇನಾವರಃ ಸ್ಮೃತಃ ॥ ೨ ॥

ಅಶಕ್ತೋ ವಿಂಶತೇರೂರ್ಧ್ವಂ ಕಾರಯೇದ್ಭಕ್ತಿತಃ ಸದಾ ।
ವಿಷ್ಕಂಭಪರ್ವತಾಂಸ್ತದ್ವತ್ತುರೀಯಾಂಶೇನ ಕಲ್ಪಯೇತ್ ॥ ೩ ॥

---

## ಇನ್ನೂರಮೂರನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಮಾನವನಿಗೆ ಚಂದ್ರಲೋಕಪ್ರಾಪ್ತಿಯಾಗುವಂತಹ ಅತ್ಯುತ್ತಮವಾದ ರೌಪ್ಯಾಚಲ (ಬೆಳ್ಳಿಯ ಪರ್ವತ) ದಾನಕ್ರಮವನ್ನು ಹೇಳುತ್ತೇನೆ ಕೇಳು.

೨. ಈ ರಜತಾಚಲವನ್ನು ಒಂದುಸಾವಿರ ಪಲತೂಕ ಬೆಳ್ಳಿಯಿಂದ ನಿರ್ಮಿಸಿದರೆ ಉತ್ತಮವೆಂತಲೂ, ಐನೂರು ಪಲದಿಂದ ನಿರ್ಮಿಸಿದರೆ ಮಧ್ಯಮವೆಂತಲೂ, ಅದರ ಅರ್ಧದಷ್ಟರಿಂದ ಮಾಡಿದರೆ ಅಧಮವೆಂತಲೂ ತಿಳಿಯಬೇಕು.

೩. ಇಷ್ಟಕ್ಕೂ ಶಕ್ತಿಸಾಲದವನು ಬಹು ಭಕ್ತಿಯಿಂದ ಇಪ್ಪತ್ತಕ್ಕಿಂತ ಹೆಚ್ಚಿನ ಪಲತೂಕ ಬೆಳ್ಳಿಯಲ್ಲಿ ಮಾಡಿಸಬೇಕು. ವಿಷ್ಕಂಭಪರ್ವತಗಳನ್ನು ಅದರ ನಾಲ್ಕನೇ ಒಂದಂಶ ಪ್ರಮಾಣದಲ್ಲಿ ಕಲ್ಪಿಸಬೇಕು.

ಪೂರ್ವವದ್ರಾಜತಾನ್ ಕುರ್ಯಾನ್ಮಂದರಾದೀನ್ ವಿಧಾನತಃ ।
ಕಲಧೌತಮಯಾಂಸ್ತದ್ವಲ್ಲೋಕೇಶಾನ್ಕಾರಯೇನ್ನೃಪ ॥ ೪ ॥

ಬ್ರಹ್ಮವಿಷ್ಣುಶಿವಾದೀಂಶ್ಚ ನಿತಂಬೋऽತ್ರ ಹಿರಣ್ಮಯಃ ।
ರಾಜತಂ ಸ್ಯಾದ್ಯದನ್ಯೇಷಾಂ ಸರ್ವಂ ತದಿಹ ಕಾಂಚನಂ ॥ ೫ ॥

ಶೇಷಂ ಚ ಪೂರ್ವವತ್ಕೃತ್ವಾ ಹೋಮಜಾಗರಣಾದಿಕಂ ।
ದದ್ಯಾತ್ತದ್ವತ್ಪ್ರಭಾತೇ ತು ಗುರವೇ ರೌಪ್ಯಪರ್ವತಂ ॥ ೬ ॥

ವಿಷ್ಕಂಭಶೈಲಾನೃತ್ವಿಗ್ಭ್ಯಃ ಪೂಜಯೇಚ್ಚ ವಿಭೂಷಣೈಃ ।
ಇಮಂ ಮಂತ್ರಂ ಪಠನ್ದದ್ಯಾದ್ದರ್ಭಪಾಣಿರ್ವಿಮತ್ಸರಃ ॥ ೭ ॥

---

೪. ಎಲೈ ರಾಜನೇ! ಮಂದರ ಮೊದಲಾದ ಪರ್ವತಗಳನ್ನು ಹಿಂದಿನಂತೆಯೇ ಬೆಳ್ಳಿಯಿಂದ ನಿರ್ಮಿಸಬೇಕು. ಲೋಕಪಾಲಕರನ್ನು ಕೂಡ ಯಥಾವಿಧಿಯಾಗಿ ಬೆಳ್ಳಿ ಅಥವಾ ಚಿನ್ನದಿಂದ ಮಾಡಬೇಕು.

೫. ಬ್ರಹ್ಮ, ವಿಷ್ಣು, ಶಿವ ಇವರೇ ಮೊದಲಾದವರ ಪ್ರತಿಮೆಗಳ ನಿತಂಬ ಪ್ರದೇಶವು ಹಿರಣ್ಮಯವಾಗಿರುವಂತೆ ನಿರ್ಮಿಸಬೇಕು. ಇಲ್ಲಿ ಬೆಳ್ಳಿಯಿಂದ ಯಾವುವು ನಿರ್ಮಿಸಲ್ಪಡಬೇಕೆಂದು ಹೇಳಿವೆಯೋ ಅವು ವಿನಾ ಉಳಿದ ಸರ್ವವನ್ನೂ ಕಾಂಚನದಿಂದ ಮಾಡಿರಬೇಕು.

೬. ಹಿಂದಿನ ಅಚಲಗಳ ದಾನವಿಧಿಯಲ್ಲಿ ನೆರವೇರಿಸಿದಂತೆಯೇ ಹೋಮ, ಜಾಗರಣೆ ಎಲ್ಲವನ್ನೂ ಮಾಡಿ ಬೆಳ್ಳಿಯ ಪರ್ವತವನ್ನು ಸಾಯಂಕಾಲ ಆಚಾರ್ಯನಿಗೆ ದಾನಮಾಡಬೇಕು.

೭. ನಿರ್ಮತ್ಸರನಾಗಿ ಋತ್ವಿಜರನ್ನು ಭೂಷಣಾದಿಗಳಿಂದ ಅರ್ಚಿಸಿ ದರ್ಭಪಾಣಿಯಾಗಿ ಈ ಮಂತ್ರವನ್ನು ಪಠಿಸುತ್ತಾ ವಿಷ್ಕಂಭಪರ್ವತಗಳನ್ನು ದಾನ ಮಾಡಬೇಕು.

ಪಿತೄಣಾಂ ವಲ್ಲಭಂ ಯಸ್ಮಾಚ್ಚರ್ಮದಂ ಶಂಕರಸ್ಯ ಚ ।
ರಜತಂ ಪಾಹಿ ತಸ್ಮಾನ್ನೋ ಘೋರಾತ್ಸಂಸಾರಸಾಗರಾತ್ ॥ ೮ ॥

ಇತ್ಥಂ ನಿವೇಶ್ಯ ಯೋ ದದ್ಯಾದ್ರಜತಾಚಲಮುತ್ತಮಂ ।
ಗವಾಮಯುತದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೯ ॥

ಸೋಮಲೋಕೇ ಸಗಂಧರ್ವಕಿನ್ನರಾಪ್ಸರಸಾಂ ಗಣೈಃ ।
ಪೂಜ್ಯಮಾನೋ ವಸೇದ್ವಿದ್ವಾನ್ ಯಾವದಾಭೂತಸಂಪ್ಲವಂ ॥ ೧೦ ॥

ರಾಜೇಶ ರಾಜತಗಿರಿಂ ಕನಕೋಪಲಾಲೀ ।
ಚ್ಛನ್ನಂ ಪ್ರಸನ್ನಸಲಿಲೈಃಸಹಿತಂ ಸರೋಭಿಃ ॥

---

೮. ಈ ರಜತವು ಪಿತೃಗಳಿಗೆ ಪ್ರಿಯವಾದುದು ಮತ್ತು ಶಂಕರನಿಗೂ ಕೂಡ ಸೌಖ್ಯದಾಯಕವಾಗಿರುತ್ತದೆ. ಈ ಪ್ರಕಾರವಾಗಿ ಪ್ರಿಯವೆನಿಸಿದ ಎಲೈ ರಜತವೇ! ಈ ಘೋರವಾದ ಸಂಸಾರಸಮುದ್ರದಿಂದ ನಮ್ಮನ್ನು ಪಾರು ಮಾಡಿಸು.

೯. ಈ ಪ್ರಕಾರ ಬೆಳ್ಳಿಯಿಂದ ಪರ್ವತವನ್ನು ನಿರ್ಮಿಸಿ ದಾನಮಾಡಿದರೆ ಆತನಿಗೆ ಹತ್ತುಸಹಸ್ರ ಗೋದಾನಮಾಡಿದ ಫಲವು ಲಭಿಸುತ್ತದೆ.

೧೦. ಮತ್ತು ಇವರಿಂದ ಚಂದ್ರಲೋಕ ಪ್ರಾಪ್ತಿಯಾಗುತ್ತದೆ. ಅಲ್ಲಿ ಗಂಧರ್ವರು, ಕಿನ್ನರರು, ಅಪ್ಸರಸ್ತ್ರೀಯರು ಇವರಿಂದ ಪೂಜಿಸಲ್ಪಡುವನಾಗಿ ಕಲ್ಪಾಂತ ಪರ್ಯಂತ ವಾಸಮಾಡುತ್ತಾನೆ.

೧೧. ಎಲೈ ರಾಜಾಧಿರಾಜನಾದ ಧರ್ಮಜನೇ! ಪುಣ್ಯಶಾಲಿಗಳೂ ಸಾತ್ವಿಕರೂ ಆದ ಜನರು ಚಿನ್ನದ ಕಲ್ಲುಗಳ ಸಮೂಹದಿಂದ ವ್ಯಾಪೃತವಾಗಿಯೂ ನಿರ್ಮಲವಾದ ನೀರುಳ್ಳ ಸರೋವರಗಳಿಂದ ಕೂಡಿಯೂ ಇರುವ ರಜತಾಚಲವನ್ನು ಕ್ಲೇಶಪಟ್ಟುಕೊಳ್ಳದೆ ದಾನಮಾಡಿದರೆ ಅವರು ತಮ್ಮ ಸಕಲ ಪಾಪ

**ಯಚ್ಛಂತಿ ಯೇ ಸುಕೃತಿನೋ ವಿರಜೋ ವಿಶೋಕಂ ।**
**ಗಚ್ಛಂತಿ ತೇ ಗತಮಲಾ ನೃಪ ಸೋಮಲೋಕಂ　　॥ ೧೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ರೌಪ್ಯಾಚಲದಾನವಿಧಿವರ್ಣನಂ ನಾಮ ತ್ರ್ಯಧಿಕದ್ವಿಶತತಮೋಽಧ್ಯಾಯಃ.**



---

ಗಳನ್ನೂ ಹೋಗಲಾಡಿಸಿಕೊಂಡು ಚಂದ್ರಲೋಕವನ್ನು ಪಡೆಯುತ್ತಾರೆ ಎಂಬ ದಾಗಿ ಶ್ರೀಕೃಷ್ಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ರೌಪ್ಯಾಚಲದಾನವಿಧಿವರ್ಣನೆಯೆಂಬ ಇನ್ನೂರಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುರಧಿಕದ್ವಿಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಅಥಾತಃ ಸಂಪ್ರವಕ್ಷ್ಯಾಮಿ ಶರ್ಕರಾಚಲಮುತ್ತಮಂ ।**
**ಯಸ್ಯ ಪ್ರದಾನಾದ್ವಿಷ್ಣ್ವರ್ಕರುದ್ರಾಸ್ತೃಪ್ಯಂತಿ ಸರ್ವದಾ ॥ ೧ ॥**

**ಅಷ್ಟಭಿಃ ಶರ್ಕರಾಭಾರೈಃ ಉತ್ತಮಃ ಸ್ಯಾನ್ಮಹಾಚಲಃ ।**
**ಚತುರ್ಭಿರ್ಮಧ್ಯಮಃ ಪ್ರೋಕ್ತೋ ಭಾರಾಭ್ಯಾಮಧಮಃ ಸ್ಮೃತಃ ॥೨॥**

---

### ಇನ್ನೂರನಾಲ್ಕನೆಯ ಅಧ್ಯಾಯ

೧. ಶ್ರೀಕೃಷ್ಣನು ಧರ್ಮರಾಜನಿಗೆ ಹೇಳುತ್ತಾನೆ—ಈಗ ವಿಷ್ಣು, ಸೂರ್ಯ, ಈಶ್ವರ ಇವರು ಸಂತೃಪ್ತರಾಗುವಂತಹ ಉತ್ತಮವಾದ ಶರ್ಕರಾಚಲ ದಾನಕ್ರಮವನ್ನು ಹೇಳುತ್ತೇನೆ.

೨. ಎಂಟುಭಾರ ಪ್ರಮಾಣವುಳ್ಳ ಹಾಗೆ ಸಕ್ಕರೆಯಿಂದ ಒಂದು ಪರ್ವತವನ್ನು ರಚಿಸಬೇಕು. ಇದು ಉತ್ತಮಪ್ರಕಾರವೆನಿಸುತ್ತದೆ. ಇದಕ್ಕೆ ಮಹಾಚಲವೆಂದು ಹೆಸರು. ನಾಲ್ಕು ಭಾರಗಳಿಂದ ರಚಿಸಿದರೆ ಮಧ್ಯಮವೆಂತಲೂ ಎರಡು ಭಾರಗಳಿಂದ ರಚಿಸಿದರೆ ಅಧಮವೆಂತಲೂ ತಿಳಿಯಬೇಕು.

**ಭಾರೇಣೈವಾರ್ಧಭಾರೇಣ ಕುರ್ಯಾದ್ಯಶ್ಚಾಲ್ಪವಿತ್ತವಾನ್ ।**
**ವಿಷ್ಕಂಭಪರ್ವತಾನ್ಕುರ್ಯಾತ್ತುರೀಯಾಂಶೇನ ಮಾನವಃ ॥ ೩ ॥**

**ಧಾನ್ಯಪರ್ವತವತ್ಸರ್ವಮಾಸಾದ್ಯ ರಸಸಂಯುತಂ ।**
**ಮೇರೋರುಪರಿತಸ್ತದ್ವತ್ಸ್ಥಾಪ್ಯ ಹೈಮತರುತ್ರಯಂ ॥ ೪ ॥**

**ಮಂದಾರಃ ಪಾರಿಜಾತಶ್ಚ ತೃತೀಯಃ ಕಲ್ಪಪಾದಪಃ ।**
**ಏತದ್ವೃಕ್ಷತ್ರಯಂ ಮೂರ್ಧ್ನಿ ಸರ್ವೇಷ್ವಪಿ ನಿಧಾಪಯೇತ್ ॥ ೫ ॥**

**ಹರಿಚಂದನಸಂತಾನೌ ಪೂರ್ವಪಶ್ಚಿಮಭಾಗಯೋಃ ।**
**ನಿವೇಶ್ಯೌ ಸರ್ವಶೈಲೇಷು ವಿಶೇಷಾಚ್ಛರ್ಕರಾಚಲೇ ॥ ೬ ॥**

**ಮಂದರೇ ಕಾಮದೇವಂ ತು ಕದಂಬಸ್ಯ ತಲೇ ನ್ಯಸೇತ್ ।**
**ಜಂಬೂವೃಕ್ಷತಲೇ ಕಾರ್ಯೋ ಗರುತ್ಮಾನ್ಗಂಧಮಾದನೇ ॥ ೭ ॥**

---

೩. ಅಷ್ಟಕ್ಕೆ ಶಕ್ತಿಸಾಲದ ನರನು ಒಂದುಭಾರ ಅಥವಾ ಅರ್ಧಭಾರ ಪ್ರಮಾಣ ಸಕ್ಕರೆಯಿಂದಲೇ ಮಾಡಿಸಬಹುದು. ಅದರ ನಾಲ್ಕನೇ ಒಂದು ಅಂಶದಲ್ಲಿ ವಿಷ್ಕಂಭಪರ್ವತಗಳನ್ನು ಮಾಡಬೇಕು.

೪. ಧಾನ್ಯಪರ್ವತ ದಾನದಲ್ಲಿ ರಚಿಸಿರುವಂತೆಯೇ ಷಡ್ರಸಸಹಿತ ಸಕಲ ಸಂಭಾರಗಳನ್ನು ಸಂಗ್ರಹಿಸಿಕೊಳ್ಳಬೇಕು. ಅದರಂತೆಯೇ ಮೇರುವಿನ ಮೇಲ್ಭಾಗದಲ್ಲಿ ಚಿನ್ನದ ಮೂರು ವೃಕ್ಷಪ್ರತಿಮೆಗಳನ್ನು ಇರಿಸಬೇಕು.

೫. ಸಕಲ ಅಚಲಗಳ ದಾನಗಳಲ್ಲಿಯೂ ಮೇರುಪರ್ವತದ ಶಿರಸ್ಸಿನಲ್ಲಿ ಮಂದಾರ, ಪಾರಿಜಾತ, ಕಲ್ಪವೃಕ್ಷ ಈ ಮೂರು ಪ್ರತಿಮೆಗಳನ್ನು ಇರಿಸಬೇಕು.

೬. ಸಕಲ ಪರ್ವತಗಳಲ್ಲಿ ತತ್ರಾಪಿ ವಿಶೇಷವಾಗಿ ಶರ್ಕರಾಚಲ ರಚನೆಯಲ್ಲಿ ಪೂರ್ವಭಾಗದಲ್ಲಿ ಹರಿಚಂದನ ವೃಕ್ಷವನ್ನೂ, ಪಶ್ಚಿಮಭಾಗದಲ್ಲಿ ಸಂತಾನ ವೃಕ್ಷವನ್ನೂ ಇರಿಸಬೇಕು.

೭. ಮಂದರಪರ್ವತಾಗ್ರದಲ್ಲಿ ಕದಂಬವೃಕ್ಷದ ಕೆಳಭಾಗದಲ್ಲಿ ಕಾಮದೇವನನ್ನು ರಚಿಸಬೇಕು. ಗಂಧಮಾದನ ಪರ್ವತಾಗ್ರದಲ್ಲಿ ನೇರಳೇವೃಕ್ಷದ ಕೆಳಗೆ ಗರುಡನು ಇರುವಂತೆ ನಿರ್ಮಿಸಬೇಕು.

ಪ್ರಾಙ್ಮುಖೋ ಹೇಮಮೂರ್ತಿಶ್ಚ ಹಂಸಃ ಸ್ಯಾದ್ವಿಪುಲಾಚಲೇ ।
ಹೈಮೀ ಶ್ರೇಯೋಽರ್ಥಿಭಿಃ ಕಾರ್ಯಾ ಸುರಭಿರ್ದಕ್ಷಿಣಾಮುಖೀ ॥೮॥

ಧಾನ್ಯಪರ್ವತವತ್ಸರ್ವಮಾವಾಹನಮುಖಾದಿಕಂ ।
ಕೃತ್ವಾಥ ಗುರವೇ ದದ್ಯಾನ್ಮಧ್ಯಮಂ ಪರ್ವತೋತ್ತಮಂ ॥ ೯ ॥

ಋತ್ವಿಗ್ಭ್ಯಶ್ಚತುಶ್ಶೈಲಾನಿಮಾನ್ಮಂತ್ರಾನುದೀರಯೇತ್ ।
ಸೌಭಾಗ್ಯಾಮೃತಸಾರೋಽಯಂ ಪರಮಃ ಶರ್ಕರಾಯುತಃ ॥ ೧೦ ॥

ಯಸ್ಮಾದಾನಂದಕಾರೀ ತ್ವಂ ಭವ ಶೈಲೇಂದ್ರ ಸರ್ವದಾ ।
ಅಮೃತಂ ಪಿಬತಾಂ ಯೇ ತು ನಿಷ್ಪೇತುರ್ಭುವಿ ಶೀಕರಾಃ ॥ ೧೧ ॥

---

೮. ಆ ವಿಶಾಲವಾದ ವಿಪುಲಾಚಲದಲ್ಲಿ ಪೂರ್ವಾಭಿಮುಖವಾಗಿರುವಂತೆ ಸುವರ್ಣದಿಂದ ಒಂದು ಹಂಸವನ್ನೂ, ದಕ್ಷಿಣಾಭಿಮುಖವಾಗಿರುವಂತೆ ಸುವರ್ಣದಿಂದ ಒಂದು ಹಸುವನ್ನೂ, ಶ್ರೇಯೋಭಿಲಾಷಿಗಳಾದವರು ನಿರ್ಮಿಸಬೇಕು.

೯. ಇಲ್ಲಿಯೂ ಸಕಲ ಗ್ರಹಗಳ ಆವಾಹನೆ, ಹೋಮ ಇತ್ಯಾದಿಗಳನ್ನು ಧಾನ್ಯಪರ್ವತಾರಾಧನದಂತೆಯೇ ನೆರವೇರಿಸಿ ಮಧ್ಯದಲ್ಲಿರುವ ಉತ್ತಮವಾದ ಆ ಪರ್ವತವನ್ನು ಆಚಾರ್ಯನಿಗೆ ದಾನಮಾಡಬೇಕು.

೧೦. ಇನ್ನುಳಿದ ನಾಲ್ಕು ಪರ್ವತಗಳನ್ನೂ ಋತ್ವಿಜರಿಗೆ ದಾನಮಾಡಬೇಕು. ಆಗ ಈ ಮಂತ್ರಗಳನ್ನು ಹೇಳಬೇಕು. ಸಕ್ಕರೆಯಿಂದ ಕೂಡಿದ ಈ ಪರ್ವತವು ಸಮಸ್ತ ಸೌಭಾಗ್ಯಗಳೆಂಬ ಅಮೃತದ ಸಾರಭೂತವೂ ಉತ್ತಮವೂ ಆಗಿದೆ.

೧೧. ಎಲೈ ಶೈಲೇಂದ್ರವೇ ! ಭೂಮಿಯಲ್ಲಿ ತೊಟ್ಟಿಕ್ಕಿದ್ದ ನಿನ್ನ ದ್ರವಕಣಗಳನ್ನು ಅಮೃತವನ್ನಾಗಿ ಭಾವಿಸಿ ಪಾನಮಾಡತಕ್ಕವರಿಗೆ ಸರ್ವದಾ ಆನಂದವನ್ನು ಉಂಟುಮಾಡುವವನಾಗು.

**ದೇವಾನಾಂ ತತ್ಸಮುತ್ಥೋಽಸಿ ಪಾಹಿ ನಃ ಶರ್ಕರಾಚಲ ।**
**ಮನೋಭವಧನುರ್ಮಧ್ಯಾದುದ್ಭೂತಾ ಶರ್ಕರಾ ಯತಃ ॥ ೧೨ ॥**

**ತನ್ಮಯೋಽಸಿ ಮಹಾಶೈಲ ಪಾಹಿ ಸಂಸಾರಸಾಗರಾತ್ ।**
**ಯೋ ದದ್ಯಾಚ್ಛರ್ಕರಾಶೈಲಮನೇನ ವಿಧಿನಾ ನರಃ ॥ ೧೩ ॥**

**ಸರ್ವಪಾಪವಿನಿರ್ಮುಕ್ತಃ ಸ ಯಾತಿ ಶಿವಮಂದಿರಂ ।**
**ಚಂದ್ರಾದಿಸಾರ್ಕಸಂಕಾಶ ಮಧಿರುಹ್ಯಾನುಜೀವಿಭಿಃ ॥ ೧೪ ॥**

**ಸಹೈವ ಯಾನಮಾತಿಷ್ಠೇತ್ಸ ತು ವಿಷ್ಣುಪದೇ ದಿವಿ ।**
**ತತಃ ಕಲ್ಪಶತಾಂತೇಽಪಿ ಸಪ್ತದ್ವೀಪಾಧಿಪೋ ಭವೇತ್ ॥ ೧೫ ॥**

---

೧೨. ಎಲೈ ಶರ್ಕರಾಚಲವೇ! ನಿನ್ನ ಅಂಗವಾದ ಸಕ್ಕರೆಯು ಮನ್ಮಥನ ಧನುಸ್ಸಾದ ಇಕ್ಷುದಂಡದ ಮಧ್ಯಭಾಗದಿಂದ ದೇವತೆಗಳಿಗೋಸ್ಕರ ಉತ್ಪತ್ತಿಯಾಗಿರುತ್ತದೆ. ಇಂತಹ ನೀನು ನಮ್ಮನ್ನು ರಕ್ಷಿಸು.

೧೩. ಎಲೈ ಮಹಾಶೈಲವೇ! ಸಕ್ಕರೆಯ ರೂಪವಾಗಿರುವ ನೀನು ನಮ್ಮನ್ನು ಸಂಸಾರಸಾಗರದಿಂದ ರಕ್ಷಿಸು. (ಇದು ಮಂತ್ರಾರ್ಥ) ಈ ವಿಧಿಯಂತೆ ಮಾನವನು ಶರ್ಕರಾಚಲವನ್ನು ದಾನಮಾಡಬೇಕು.

೧೪. ಹೀಗೆ ದಾನಮಾಡಿದಾತನು ಸಕಲ ಪಾತಕಗಳಿಂದಲೂ ಬಿಡಲ್ಪಟ್ಟವನಾಗಿ ಚಂದ್ರ ಮತ್ತು ಸೂರ್ಯರ ತೇಜಸ್ಸಿನಂತೆ ಪ್ರಕಾಶವುಳ್ಳವನಾಗಿ ತನ್ನ ಅನುಯಾಯಿಗಳೊಡನೆ ವಿಮಾನಾರೂಢನಾಗಿ ಈಶ್ವರನ ಲೋಕವನ್ನು ಪಡೆಯುತ್ತಾನೆ.

೧೫. ವಿಷ್ಣುಪದವೆಂಬ ನಾಮಾಂಕಿತವಾದ ಅಂತರಿಕ್ಷದ ಲೋಕವಾದ ಸ್ವರ್ಗದಲ್ಲಿ ನೂರು ಕಲ್ಪಗಳು ವಾಸವಾಗಿದ್ದು ಅನಂತರ ಏಳು ದ್ವೀಪಗಳಿಗೂ ಅಧಿಪತಿಯಾಗುತ್ತಾನೆ.

ಆಯುರಾರೋಗ್ಯಸಂಪನ್ನೋ ಯಾವಜ್ಜನ್ಮಾಯುತತ್ರಯಂ ।
ಭೋಜನಂ ಶಕ್ತಿತೋ ದದ್ಯಾತ್ಸರ್ವಶೈಲೇಷ್ವಮತ್ಸರಃ ॥ ೧೬ ॥

ಪರ್ವತೋಪಸ್ಕರಂ ಸರ್ವಂ ಪ್ರಾಪಯೇದ್ಬ್ರಾಹ್ಮಣಾಲಯಂ ।
ಆಸೀತ್ಪುರಾ ಬ್ರಹ್ಮಕಲ್ಪೇ ಧರ್ಮಮೂರ್ತಿರ್ನರಾಧಿಪಃ ॥ ೧೭ ॥

ಸುಹೃಚ್ಛಕ್ರಸ್ಯ ನಿಹತಾ ಯೇನ ದೈತ್ಯಾಃ ಸಹಸ್ರಶಃ ।
ಸೋಮಸೂರ್ಯಾದಯೋ ಯಸ್ಯ ತೇಜಸಾ ವಿಗತಪ್ರಭಾಃ ॥ ೧೮ ॥

ಭವಂತಿ ಶತಶೋ ಯೇನ ರಾಜಾನೋಽಪಿ ಪರಾಜಿತಾಃ।
ಯಥೇಚ್ಛಾರೂಪಧಾರೀ ಚ ಮನುಷ್ಯೋಽಪ್ಯಪವಾರಿತಃ ॥ ೧೯ ॥

ತಸ್ಯ ಭಾನುಮತೀ ನಾಮ ಭಾರ್ಯಾ ತ್ರೈಲೋಕ್ಯಸುಂದರೀ ।
ಲಕ್ಷ್ಮೀರಿವ ಚ ರೂಪೇಣ ನಿರ್ಜಿತಾಮರಸುಂದರೀ ॥ ೨೦ ॥

---

೧೬. ಮುಂದಿನ ಮೂವತ್ತು ಸಾವಿರ ಜನ್ಮಗಳಲ್ಲಿಯೂ ಆಯುಸ್ಸು, ಆರೋಗ್ಯ ಇವುಗಳಿಂದ ಕೂಡಿದವನಾಗಿ ಜನಿಸುತ್ತಾನೆ. ಅಯ್ಯಾ ರಾಜನೆ! ಈಗ ಹೇಳಿದ ಪರ್ವತದಾನದಲ್ಲಿಯೂ ತನ್ನ ಶಕ್ತ್ಯನುಸಾರ ಅನ್ನದಾನವನ್ನು ಮಾಡಬೇಕು.

೧೭. ಪರ್ವತವನ್ನು ಮತ್ತು ಅದರ ಉಪಕರಣಗಳನ್ನೂ ತಾನೇ ಆ ಬ್ರಾಹ್ಮಣನ ಮನೆಗೆ ತೆಗೆದುಕೊಂಡು ಹೋಗಿ ಕೊಡಬೇಕು.

೧೮. ಹಿಂದೆ ಬ್ರಹ್ಮಕಲ್ಪದಲ್ಲಿ ಧರ್ಮಮೂರ್ತಿ ಎಂಬ ಹೆಸರುಳ್ಳ ರಾಜ ನಿದ್ದನು. ಈತನು ದೇವೇಂದ್ರನಿಗೆ ಸ್ನೇಹಿತನೆನಿಸಿದ್ದನು. ಈತನು ಸಾವಿರಾರು ಮಂದಿ ದೈತ್ಯರನ್ನು ಧ್ವಂಸಮಾಡಿದ್ದನು. ಮತ್ತು ಈತನು ತೇಜಸ್ಸಿನಲ್ಲಿ ಚಂದ್ರ ಸೂರ್ಯಾದಿಗಳನ್ನು ಮೀರಿಸುವಷ್ಟು ಕಾಂತಿಯುಳ್ಳವನಾಗಿದ್ದನು.

೧೯. ಈತನು ಪರರಾಜರನ್ನು ನೂರಾರುಸಲ ಪರಾಜಿತರನ್ನಾಗಿ ಮಾಡಿದನು. ಮತ್ತು ತಾನು ಕೇವಲ ಮನುಷ್ಯನಾಗಿದ್ದರೂ ಕೂಡ ತನ್ನ ಮನಬಂದಂತೆ ರೂಪವನ್ನು ಧರಿಸಲು ಸಾಮರ್ಥ್ಯವುಳ್ಳವನಾಗಿದ್ದನು.

೨೦. ಆ ರಾಜನಿಗೆ ತ್ರಿಲೋಕಗಳಲ್ಲಿರುವ ಸ್ತ್ರೀಯರಲ್ಲೆಲ್ಲಾ ಸುಂದರಿಯೂ, ತನ್ನ ರೂಪದಿಂದ ಲಕ್ಷ್ಮಿಯನ್ನೂ, ದೇವತಾಸ್ತ್ರೀಯರನ್ನೂ ಸಹ ತಿರಸ್ಕರಿಸುವಷ್ಟು ಸೌಂದರ್ಯವುಳ್ಳವಳೂ ಆದ ಭಾನುಮತಿ ಎಂಬ ಭಾರ್ಯೆಯಿದ್ದಳು.

ರಾಜ್ಞಸ್ತಸ್ಯಾಗ್ರಮಹಿಷೀ ಪ್ರಾಣೇಭ್ಯೋಽಪಿ ಗರೀಯಸೀ ।
ದಶನಾರೀಸಹಸ್ರಾಣಾಂ ಮಧ್ಯೇ ಶ್ರೀರಿವ ರಾಜತೇ ॥ ೨೦ ॥

ನೃಪಕೋಟಿಸಹಸ್ರೇಣ ನ ಕದಾಚಿತ್ಪ್ರಮುಚ್ಯತೇ ।
ಸ ಕದಾಚಿತ್ಸ್ಥಾನಗತಂ ಪಪ್ರಚ್ಛ ಸ್ವಂ ಪುರೋಹಿತಂ ॥ ೨೨ ॥

ವಿಸ್ಮಯಾವಿಷ್ಟಹೃದಯೋ ವಸಿಷ್ಠಮೃಷಿಸತ್ತಮಂ ।
ಭಗವನ್ಕೇನ ಧರ್ಮೇಣ ಮಮ ಲಕ್ಷ್ಮೀರನುತ್ತಮಾ ॥ ೨೩ ॥

ಕಸ್ಮಾಚ್ಚ ವಿಪುಲಂ ತೇಜೋ ಮಚ್ಛರೀರೇ ಸದೋತ್ತಮಂ ॥ ೨೪ ॥

॥ ವಶಿಷ್ಠ ಉವಾಚ ॥

ಪುರಾ ಲೀಲಾವತೀ ನಾಮ ವೇಶ್ಯಾ ಶಿವಪರಾಯಣಾ ।
ತಯಾ ದತ್ತಶ್ಚತುರ್ದಶ್ಯಾಂ ಗುರವೇ ಲವಣಾಚಲಃ ॥ ೨೫ ॥

---

೨೧. ಈಕೆಯು ಆ ರಾಜನಿಗೆ ಪಟ್ಟಮಹಿಷಿಯೂ, ಆತನ ಪ್ರಾಣಕ್ಕಿಂತ ಹೆಚ್ಚಿನವಳೂ ಆಗಿದ್ದಳು. ಮತ್ತು ಹತ್ತುಸಾವಿರ ನಾರಿಯರ ಮಧ್ಯದಲ್ಲಿದ್ದರೂ ಸಾಕ್ಷಾತ್‌ಲಕ್ಷ್ಮಿಯಂತೆ ಪ್ರಕಾಶಿಸುತ್ತಿದ್ದಳು.

೨೨. ಒಂದುಸಾವಿರಕೋಟಿ ರಾಜರುಗಳು ನೋಡಿದರೂ ಯಾರೂ ಎಂದೂ ಕೂಡ ಈಕೆಯನ್ನು ಹೀಯಾಳಿಸಲಾಗುತ್ತಿರಲಿಲ್ಲ. ಹೀಗಿರುವಲ್ಲಿ ಒಂದಾನೊಂದು ದಿನ ರಾಜಪುರೋಹಿತರು ಆಸ್ಥಾನಕ್ಕೆ ದಯಮಾಡಿಸಿದರು.

೨೩–೨೪. ತನ್ನ ಕುಲಪುರೋಹಿತನಾದ ವಸಿಷ್ಠಋಷಿಯನ್ನು ಕುರಿತು "ಸ್ವಾಮಿ ಪೂಜ್ಯರೇ! ನನಗೆ ಅತ್ಯುತ್ತಮವಾದ ಈ ಸಂಪತ್ತೂ ನನ್ನ ಈ ಶರೀರದಲ್ಲಿ ಅತ್ಯುತ್ತಮವಾದ ಅಪಾರವಾದ ತೇಜಸ್ಸೂ ಕೂಡ ಇದೆಯಷ್ಟೆ. ಇದು ಯಾವ ಧರ್ಮದಿಂದ ಉಂಟಾಗಿದೆ? ಎಂಬದಾಗಿ ಪ್ರಶ್ನಿಸಿದನು.

೨೫. ವಸಿಷ್ಠನು ಹೇಳುತ್ತಾನೆ--ಹಿಂದೆ ಶಿವಪೂಜಾಸಕ್ತಳಾದ ಲೀಲಾವತಿಯೆಂಬ ವೇಶ್ಯೆಯು ಇದ್ದಳು ಅವಳು ಚತುರ್ದಶಿಯ ದಿವಸ ತನ್ನ ಗುರುವಿಗೆ ಲವಣಾಚಲವನ್ನು ಪೂಜಿಸಿ.

ಹೇಮವೃಕ್ಷಾನಮರೈಃ ಸಾರ್ಧಂ ಯಥಾವದ್ವಿಧಿಪೂರ್ವಕಃ |
ಶೂದ್ರಃ ಸುವರ್ಣಕಾರಸ್ತು ನಾಮ್ನಾ ಶೌಂಡೋಭವತ್ತದಾ ॥ ೨೬ ॥

ಭೃತ್ಯೋ ಲೀಲಾವತೀಗೇಹೇ ತೇನ ಹೈಮಾ ವಿನಿರ್ಮಿತಾಃ |
ತರವೋಽಮರಮುಖ್ಯಾಶ್ಚ ಶ್ರದ್ಧಾಯುಕ್ತೇನ ಪಾರ್ಥಿವ ॥ ೨೭ ॥

ಅತಿರೂಪೇಣ ಸಂಪನ್ನಾನ್ ಘಟಯಿತ್ವಾ ತತೋ ಹೃದಿ |
ಧರ್ಮಕಾರ್ಯಮತಿಂ ಜ್ಞಾತ್ವಾ ನಾಗೃಹೀತ ಕಥಂಚನ ॥ ೨೮ ॥

ಉಜ್ಜ್ವಾಲಿತಾಸ್ತು ತತ್ಪತ್ನ್ಯಾ ಸೌವರ್ಣಾಮರಪಾದಪಾಃ |
ಲೀಲಾವತೀ ಗೃಹೇ ಪಾರ್ಶ್ವೇ ಪರಿಚರ್ಯಾ ಚ ಪಾರ್ಥಿವ ॥ ೨೯ ॥

---

೨೬. ಚಿನ್ನದಿಂದ ಮಾಡಿದ ವೃಕ್ಷ ಮತ್ತು ಅದಕ್ಕೆ ಉಕ್ತವಾದ ದೇವತೆಗಳು ಇವುಗಳೊಡನೆ ಯಥಾವಿಧಿಯಾಗಿ ಗುರುವಿಗೆ ದಾನಮಾಡಿದಳು. ಆಗ ಶೌಂಡನೆಂಬ ಹೆಸರುಳ್ಳ ಸುವರ್ಣಕಾರನು ಅವಳ ಮನೆಯಲ್ಲಿ ಭೃತ್ಯನಾಗಿದ್ದನು.

೨೭. ಎಲೈ ರಾಜನೇ! ಆಗ ಲೀಲಾವತಿಯ ಗೃಹದಲ್ಲಿ ಭೃತ್ಯನಾಗಿದ್ದ ಆತನು ಬಹು ಶ್ರದ್ಧೆಯಿಂದ ಸುವರ್ಣದ ವೃಕ್ಷಗಳು ಮತ್ತು ಅಲ್ಲಿನ ನಿವಾಸಿಗಳಾದ ದೇವತೆಗಳು ಇವೆಲ್ಲವನ್ನೂ ಸಹ ನಿರ್ಮಾಣಮಾಡಿಕೊಟ್ಟನು.

೨೮. ಈ ಪ್ರಕಾರ ಬಹು ಸುಂದರವಾದ ಸುವರ್ಣವೃಕ್ಷ, ದೇವತಾಪ್ರತಿಮೆ ಇತ್ಯಾದಿಗಳನ್ನು ನಿರ್ಮಿಸಿ ಕೊಟ್ಟ ಅನಂತರ ಈತನು ಧರ್ಮಕಾರ್ಯಗಳಲ್ಲಿಯೇ ಬುದ್ಧಿಯುಳ್ಳವನೆಂದು ತಿಳಿದು ಆ ಲೀಲಾವತಿಯು ಈತನನ್ನು ತನ್ನ ಮನೆಯಿಂದ ಹೋಗಗೊಡಲಿಲ್ಲ.

೨೯. ಎಲೈ ರಾಜನೇ! ಆತನಿಂದ ನಿರ್ಮಿತವಾದ ಸ್ವರ್ಣಮಯ ದೇವವೃಕ್ಷಗಳು ಆ ಮನೆಯಲ್ಲಿಯೂ ಮತ್ತು ಮನೆಯ ಪಾರ್ಶ್ವಗಳಲ್ಲಿಯೂ ದೇದೀಪ್ಯಮಾನಗಳಾಗಿದ್ದುವು. ಆತನ ಪತ್ನಿಯೂ ಲೀಲಾವತಿಯನ್ನು ಸೇವಿಸುತ್ತಿದ್ದಳು.

**ಕೃತಂ ತಾಭ್ಯಾಂ ಪ್ರಹರ್ಷೇಣ ದ್ವಿಜಶುಶ್ರೂಷಣಾದಿಕಂ ।**
**ಸಾ ತು ಲೀಲಾವತೀ ವೇಶ್ಯಾ ಕಾಲೇನ ಮಹತಾ ನೃಪ ॥ ೩೦ ॥**

**ಸರ್ವಪಾಪವಿನಿರ್ಮುಕ್ತಾ ಜಗಾಮ ಶಿವಮಂದಿರಂ ।**
**ಯೋಽಸೌ ಸುವರ್ಣಕಾರಶ್ಚ ದರಿದ್ರೋಽಪ್ಯತಿ ಸತ್ವವಾನ್ ॥ ೩೧ ॥**

**ನ ಮೂಲ್ಯಮಾದಾದ್ವೇಶ್ಯಾತಃ ಸಭವಾನಿಹ ಸಾಂಪ್ರತಂ ।**
**ಸಪ್ತದ್ವೀಪಪತಿರ್ಜಾತಃ ಸೂರ್ಯಾಯುತಸಮಪ್ರಭಃ ॥ ೩೨ ॥**

**ಯಯಾ ಸುವರ್ಣರಚಿತಾಸ್ತರವೋ ಹೇಮದೇವತಾಃ ।**
**ಸಮ್ಯಗುಜ್ವಲಿತಾಃ ಪತ್ನೀ ಸೇಯಂ ಭಾನುಮತೀ ತವ ॥ ೩೩ ॥**

---

೩೦. ಎಲೈ ರಾಜನೇ! ಈ ಪ್ರಕಾರ ಆ ಇಬ್ಬರೂ ಸಹ ಬಹು ಹರ್ಷದಿಂದ ಬ್ರಾಹ್ಮಣರ ಸೇವೆಯೇ ಮೊದಲಾದ ಪುಣ್ಯಕಾರ್ಯಗಳನ್ನು ಮಾಡತೊಡಗಿದರು. ಹೀಗೆ ಎಷ್ಟೋ ಕಾಲವು ಕಳೆಯಿತು.

೩೧. ಕಾಲಕ್ರಮದಲ್ಲಿ ವೇಶ್ಯೆಯಾದ ಲೀಲಾವತಿಯು ತನ್ನ ಸಮಸ್ತ ಪಾಪಗಳಿಂದಲೂ ಬಿಡಲ್ಪಟ್ಟವಳಾಗಿ ಶಿವಲೋಕವನ್ನು ಪಡೆದಳು. ಇದರಂತೆಯೇ ಹುಟ್ಟು ದರಿದ್ರನಾಗಿದ್ದ ಆ ಸುವರ್ಣಕಾರನೂ ಕೂಡ ಬಹು ಸ್ಥಿತಿವಂತನಾದನು.

೩೨. ಆತನು ತನ್ನ ಕೆಲಸದ ವೇತನಕ್ಕಾಗಿ ಯಾವ ಮೌಲ್ಯವನ್ನೂ ಆ ವೇಶ್ಯೆಯಿಂದ ಪಡೆಯಲಿಲ್ಲ. ಈ ಕಾರಣದಿಂದ ಆಗ ಸುವರ್ಣಕಾರನಾಗಿದ್ದವನು ಈಗ ಹತ್ತುಸಾವಿರ ಸೂರ್ಯರಿಗೆ ಸಾಟಿಯಾದ ತೇಜೋವಂತನಾಗಿ ಜನಿಸಿ ರಾಜನಾಗಿ ಶೋಭಿಸುತ್ತಾನೆ.

೩೩. ಆ ಪ್ರಕಾರ ಆ ಚಿನ್ನದ ವೃಕ್ಷಗಳು ಮತ್ತು ಸುವರ್ಣದ ದೇವತಾ ಪ್ರತಿಮೆಗಳು ಇವುಗಳನ್ನು ಪ್ರಕಾಶಮಯವಾದುವುಗಳನ್ನಾಗಿ ಮಾಡಿಸಿದ ಆ ವೇಶ್ಯೆಯೇ ಈಗ ನಿನ್ನ ಪತ್ನಿಯಾದ ಭಾನುಮತಿಯಾಗಿರುತ್ತಾಳೆ.

ಉಜ್ಜ್ವಾಲನಾದುಜ್ಜ್ವಲರೂಪಮಸ್ಯಾಃ ।
ಸುಜಾತಮಸ್ಮಿನ್ಭುವನಾಧಿಪತ್ಯಂ ॥
ಯಸ್ಮಾತ್ಕೃತಂ ತತ್ಪರಿಕರ್ಮ ರಾತ್ರಾ ।
ವನುದ್ಧತಾಭ್ಯಾಂ ಲವಣಾಚಲಸ್ಯ ॥ ೩೪ ॥

ತಸ್ಮಾಚ್ಚ ಲೋಕೇಷ್ವಪರಾಜಿತಸ್ತ್ವ ।
ಮಾರೋಗ್ಯಸೌಭಾಗ್ಯಯುತಾ ಚ ಲಕ್ಷ್ಮೀಃ ॥
ತಸ್ಮಾತ್ತ್ವಮಪ್ಯತ್ರ ವಿಧಾನಪೂರ್ವಂ ।
ಧಾನ್ಯಾಚಲಾದೀನ್ ದಶಧಾ ಕುರುಷ್ವ ॥ ೩೫ ॥

ತಥೇತಿ ಸಂಪೂಜ್ಯ ಚ ಧರ್ಮಮೂರ್ತಿಂ ।
ವಚೋ ವಶಿಷ್ಠಸ್ಯ ದದೌ ಸ ಸರ್ವಾನ್ ॥
ಧಾನ್ಯಾಚಲಾದೀನ್ಕ್ರಮಶಃ ಪುರಾರೇಃ ।
ಲೋಕಂ ಜಗಾಮಾಮರಪೂಜ್ಯಮಾನಃ ॥ ೩೬ ॥

---

೩೪. ಆ ಪ್ರಕಾರ ಅವುಗಳನ್ನು ಉಜ್ವಲಿಸುವಂತೆ ಮಾಡಿದುದರಿಂದ ಈಕೆಗೆ ಈ ಮನೋಹರವಾದ ರೂಪು ಉಂಟಾಗಿರುತ್ತದೆ. ಮತ್ತು ಉದ್ವೇಗಗೊಳ್ಳದೆ ಆ ರಾತ್ರಿಯಲ್ಲಿ ನೀವಿಬ್ಬರೂ ಲವಣಾಚಲದ ಸೇವೆಯನ್ನು ಮಾಡಿದುದರಿಂದ ಇಲ್ಲಿ ರಾಜ್ಯಪದವಿಯೂ ಸಹ ದೊರಕಿತು.

೩೫. ಅಲ್ಲದೆ ಈ ಲೋಕದಲ್ಲಿ ನೀನು ಯಾರಿಂದಲೂ ಪರಾಜಿತನೂ ಆಗಿಲ್ಲ. ಆರೋಗ್ಯ, ಸೌಭಾಗ್ಯ ಇತ್ಯಾದಿಗಳಿಂದ ಕೂಡಿದ ಸಂಪತ್ತೂ ಕಾಂತಿಯೂ ನಿಮಗೆ ಉಂಟಾಗಿರುತ್ತದೆ. ಆದುದರಿಂದ ಈ ಜನ್ಮದಲ್ಲೂ ಯಥಾವಿಧಿಯಾಗಿ ಧಾನ್ಯಾಚಲ ಮೊದಲಾದ ಹತ್ತು ಅಚಲಗಳ ದಾನಗಳನ್ನು ಮಾಡು ಎಂದು ಹೇಳಿದನು.

೩೬. ತಥಾಸ್ತು ಎಂದು ಹೇಳಿ ಆ ಧರ್ಮಮೂರ್ತಿಯನ್ನು ಪೂಜಿಸಿ ವಸಿಷ್ಠನು ಹೇಳಿದ ಮಾತನ್ನು ಅನುಸರಿಸಿ ಆತನು ಧಾನ್ಯಾಚಲವೇ ಮೊಲಾದುವುಗಳನ್ನೆಲ್ಲ ಕ್ರಮವಾಗಿ ದಾನಮಾಡಿ ದೇವತೆಗಳಿಂದ ಪೂಜಿತನಾಗಿ ಇಂದ್ರಲೋಕವನ್ನು ಪಡೆದನು.

ಯಶ್ಚಾಧನಃ ಪಶ್ಯತಿ ದೀಯಮಾನಂ ।
ಮೇರೋಃ ಪ್ರದಾನಮಿಹ ಧರ್ಮಪರೋ ಮನುಷ್ಯಃ ॥
ಶೃಣೋತಿ ಭಕ್ತ್ಯಾ ಪರಯಾಽಪ್ರಮಾದೀ ।
ವಿಕಲ್ಮಷಃ ಸೋಽಪಿ ದಿವಂ ಪ್ರಯಾತಿ ॥ ೩೭ ॥

ದುಃಸ್ವಪ್ನಂ ಪ್ರಶಮಮುಪೈತಿ ಪಶ್ಯಮಾನೇ ।
ಶೈಲೇಂದ್ರೇ ಭವಭಯಭೇದನೇ ನರಾಣಾಂ ॥
ಯಃ ಕುರ್ಯಾತ್ಕಿಮು ನೃಪಪುಂಗವೇಽಪ ಸಮ್ಯ ।
ಕ್ಛಾಂತಾತ್ಮಾ ಹರಿಹರಪುರಮೇತಿ ಜಂತುಃ ॥ ೩೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ಶರ್ಕರಾಚಲದಾನವಿಧಿವರ್ಣನಂ ನಾಮ ಚತುರಧಿಕದ್ವಿಶತತಮೋಽಧ್ಯಾಯಃ.



೩೭. ಯಾವ ಮನುಜನು ತಾನು ದರಿದ್ರನಾದರೂ ಕೂಡ ಧರ್ಮಾಭಿಮಾನಿಯಾಗಿ ಇತರರು ಈ ಮೇರುದಾನ ಮಾಡುತ್ತಿರುವುದನ್ನು ನೋಡುತ್ತಾನೆಯೋ ಅಥವಾ ಶ್ರೇಷ್ಠವಾದ ಭಕ್ತಿಯಿಂದ ಈ ಕಲ್ಪವನ್ನು ಶ್ರವಣಮಾಡುವನೋ ಆತನು ಪಾಪಗಳಿಂದ ವಿಮುಕ್ತನೂ ಪ್ರಮಾದರಹಿತನೂ ಆಗಿ ಸ್ವರ್ಗವನ್ನು ಪಡೆಯುತ್ತಾನೆ.

೩೮. ಎಲೈ ರಾಜವರ್ಯನೇ! ಜನರು ಈ ಸಂಸಾರದ ಭಯನಿವಾರಕವಾದ ಹತ್ತು ಅಚಲಗಳ ದಾನದ ಮಾಹಾತ್ಮ್ಯವನ್ನು ಪಠಿಸಿದ ಮಾತ್ರಕ್ಕೆ ದುಃಸ್ವಪ್ನವು ನಾಶವಾಗುತ್ತದೆ. ಹೀಗಿರುವಲ್ಲಿ ಆಚರಿಸಿದಂಥವನು ಶಾಂತಿ, ಸುಖವನ್ನೂ ವಿಷ್ಣುಲೋಕ ಶಿವಲೋಕವನ್ನು ಪಡೆಯುತ್ತಾನೆಂದು ಬೇರೆಯಾಗಿ ಹೇಳಬೇಕೆ?

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಶರ್ಕರಾಚಲದಾನವಿಧಿವರ್ಣನೆಯೆಂಬ ಇನ್ನೂರನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಾಧಿಕದ್ವಿಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಪ್ರತಿಪತ್ಕ್ರಮಯೋಗೇನ ತಿಥೀನಾಂ ವಿಸ್ತರಃ ಶ್ರುತಃ ।
ಸರಹಸ್ಯಃ ಸಮಂತ್ರಶ್ಚ ಪ್ರಾರಂಭೋದ್ಯಾಪನೈಃ ಸಹ ॥ ೧ ॥

ನವಗ್ರಹಮುಖಾತ್ಸರ್ವಂ ಹೋಮಕರ್ಮಾವಧಾರಿತಂ ।
ಸ್ನಾನಕ್ರಮಶ್ಚ ವಿದಿತೋ ವಿಜ್ಞಾತಾಶ್ಚೋತ್ಸವಾ ಮಯಾ ॥ ೨ ॥

---

### ಇನ್ನೂರಐದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಕೃಷ್ಣಪರಮಾತ್ಮನೇ! ಕ್ರಮವಾಗಿ ಪಾಡ್ಯಮಿಯಿಂದ ಮೊದಲುಗೊಂಡು ಆಯಾಯಾ ತಿಥಿಗಳಲ್ಲಿ ಆಚರಿಸಬೇಕಾದ ವ್ರತಗಳನ್ನೂ ರಹಸ್ಯ ಮಂತ್ರ, ವ್ರತಾರಂಭಮಾಡಬೇಕಾದ ಕಾಲ, ಅವುಗಳ ಉದ್ಯಾಪನಮಾಡುವ ಸಮಯ ಇವುಗಳೆಲ್ಲವನ್ನೂ ವಿಸ್ತಾರವಾಗಿ ನೀನು ಹೇಳಿದ್ದನ್ನು ಕೇಳಿದೆನು.

೨ ನವಗ್ರಹ ಹೋಮವಿಧಾನವನ್ನು ನಿನ್ನಿಂದ ಶ್ರವಣಮಾಡಿದುದರಿಂದ ಎಲ್ಲಾ ಹೋಮಕರ್ಮವಿಧಾನವೂ ಅದರಂತೆಯೇ ಎಂದು ಅರಿತುಕೊಂಡಂತಾಯಿತು. ಮತ್ತು ವ್ರತಾಂಗವಾದ ಸ್ನಾನಕ್ರಮವನ್ನೂ ತಿಳಿದುಕೊಂಡೆನು. ವಿಶೇಷವಾದ ಉತ್ಸವಗಳನ್ನೂ ಕೂಡ ತಿಳಿದುಕೊಂಡೆನು.

ಧಾನಧರ್ಮಾಸ್ತ್ವಶೇಷೇಣ ಶ್ರುತಃ ಸರ್ವಾರ್ಥದರ್ಶಿತಃ ।
ತಡಾಗೋತ್ಸರ್ಜನವಿಧಿರ್ವಿದಿತಃ ಪಾದಪೋತ್ಸವಃ ॥ ೩ ॥

ಏವಂ ಗತಂ ಮಮ ಮನೋ ಮುಹ್ಯತೇ ಮಧುಸೂದನ ।
ವ್ರತಂ ಕಥಯತಾ ಕೃಷ್ಣ ತಾಸ್ತಾಃ ಸಂಶ್ರಿತ್ಯ ದೇವತಾಃ ॥ ೪ ॥

ದೇವಾನಾಂ ದೇವಕೀಪುತ್ರ ನಾನಾತ್ವಂ ಸಂಪ್ರದರ್ಶಿತಂ ।
ತಿಥಿಕ್ರಮಾನ್ಕಥಯತಾ ಪೂಜಾಮಂತ್ರೋಧಿವಾಸನಂ ॥ ೫ ॥

ವ್ಯಾಸಾದ್ಯೈರ್ಮುನಿಭಿಃ ಸರ್ವೈರ್ಧ್ಯಾನಯೋಗಪರಾಯಣೈಃ ।
ಏಕ ಏವಾತ್ರ ನಿರ್ದಿಷ್ಟೋ ದೇವಃ ಸರ್ವಗತೋಽವ್ಯಯಃ ॥ ೬ ॥

---

೩. ಸರ್ವಹಿತಸಾಧಕವಾದ ದಾನಧರ್ಮಗಳನ್ನು ಪೂರ್ಣವಾಗಿ ಶ್ರವಣ ಮಾಡಿದೆನು. ಮತ್ತು ತಟಾಕಾದಿ ನಿರ್ಮಾಣರೂಪವಾದ "ಪೂರ್ತ" ಎಂಬ ಕ್ರಮವನ್ನೂ ವೃಷೋತ್ಸರ್ಜನವಿಧಿಯನ್ನೂ ಮತ್ತು ಪಾದಪೋತ್ಸವ (ವನ ಮಹೋತ್ಸವ) ವಿಧಾನವನ್ನೂ ಸಹ ತಿಳಿದುಕೊಂಡೆನ್ನು.

೪. ಅಯ್ಯಾ ಮಧುಸೂದನನಾದ ಶ್ರೀಕೃಷ್ಣನೇ! ಆಯಾ ದೇವತೆಗಳನ್ನು ಉದ್ದೇಶಿಸಿ ಮಾಡಬೇಕಾದ ವ್ರತಗಳನ್ನೆಲ್ಲಾ ನಿರೂಪಿಸಿದ ನಿನ್ನ ಮಾತನ್ನು ಕೇಳುವುದರಲ್ಲಿ ಏಕಾಗ್ರಚಿತ್ತದಿಂದ ಸರ್ವವನ್ನೂ ಗ್ರಹಿಸಿದ ನನ್ನ ಮನಸ್ಸಿಗೆ ಒಂದು ಸಂಶಯವುಂಟಾಗಿದೆ.

೫. ಅಯ್ಯಾ ದೇವಕೀಪುತ್ರನೇ! ತಿಥಿಕ್ರಮವನ್ನು ಅನುಸರಿಸಿ ಪೂಜೆಯ ಮಂತ್ರ, ದೇವತಾಪ್ರತಿಮೆಯ ಅಧಿವಾಸ ವಿಚಾರ, ಮತ್ತು ಅದರ ವಿಧಾನಗಳನ್ನು ನೀನು ಉಪದೇಶಿಸುವಾಗ ದೇವತೆಗಳ ಅನೇಕತ್ವವನ್ನು ಸ್ಪಷ್ಟಪಡಿಸಿರುತ್ತೀ.

೬. ಆದರೆ ಧ್ಯಾನೈಕನಿರತರಾದ ವ್ಯಾಸಾದಿಮಹರ್ಷಿಗಳು ಎಲ್ಲರೂ, ಸರ್ವ ವ್ಯಾಪಕನೂ ನಾಶರಹಿತನೂ ಸ್ವಯಂಪ್ರಕಾಶಸ್ವರೂಪನೂ ಆದ ದೇವನು ಒಬ್ಬನೇ ಎಂಬದಾಗಿ ಹೇಳಿರುತ್ತಾರೆ.

ವರ್ಣಾಶ್ರಮಾಚಾರಧರ್ಮಾಃ ಕಸ್ಮಾನ್ನಾತ್ರ ಪ್ರದರ್ಶಿತಾಃ ।
ಏತೇ ಮಹರ್ಷಯಸ್ತುಷ್ಟಾಃ ಶ್ರೋತುಕಾಮಾ ಭವದ್ವಚಃ ॥ ೭ ॥

॥ ಶ್ರೀ ಕೃಷ್ಣ ಉವಾಚ ॥

ವ್ರತದಾನೈಕದೇಶೋಽಯಂ ಕಥಿತಸ್ತವ ಪಾರ್ಥಿವ ।
ವಿಶೇಷತಶ್ಚ ಶಕ್ನೋತಿ ವಕ್ತುಂ ಯದಿ ಸರಸ್ವತೀ ॥ ೮ ॥

ಸರ್ವಸ್ತರತಿ ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತಿ ।
ವರ್ಣಾಶ್ರಮಾಣಾಂ ಸಾಮಾನ್ಯ ಇತಿ ಧರ್ಮಃ ಪ್ರಕೀರ್ತಿತಃ ॥ ೯ ॥

ಕಥಿತೋಽಯಂ ವ್ರತಸ್ತ್ವೇಹೋ ದೇವಾನುದ್ದಿಶ್ಯ ಯೋ ಮಯಾ ।
ಪರಮಾರ್ಥಃ ಯ ಏವೋಕ್ತೋ ದೇವಸ್ತಮುಪಧಾರಯ ॥ ೧೦ ॥

---

೭. ವರ್ಣಧರ್ಮ, ಆಶ್ರಮಧರ್ಮ, ಆಚಾರಧರ್ಮ ಇವುಗಳನ್ನು ಈ ಸಂದರ್ಭದಲ್ಲಿ ನೀನು ಏತಕ್ಕೋ ಉಪದೇಶಮಾಡಲಿಲ್ಲ. ಈ ಮಹರ್ಷಿಗಳು ನಿನ್ನ ವಚನವನ್ನು ಸಂತೋಷದಿಂದ ಶ್ರವಣಮಾಡಬೇಕೆಂದು ಕಾದಿದ್ದಾರೆ. ಆದುದರಿಂದ ಈ ವಿಷಯವನ್ನು ಹೇಳು ಎಂದನು.

೮. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಧರ್ಮರಾಜನೇ! ಕೇಳು. ವ್ರತ ಮತ್ತು ದಾನ ಇವುಗಳಲ್ಲಿ ಏಕದೇಶವನ್ನು ಮಾತ್ರ ನಾನು ನಿನಗೆ ಹೇಳಿರುತ್ತೇನೆ. ಅವುಗಳನ್ನೆಲ್ಲಾ ಸಮಗ್ರವಾಗಿ ಹೇಳಿ ಮುಗಿಸುವುದಕ್ಕೆ ಸರಸ್ವತಿಯೊಬ್ಬಳೇ ಸಮರ್ಥಳು.

೯. ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೂ ಬ್ರಹ್ಮಚರ್ಯ ಮೊದಲಾದ ನಾಲ್ಕು ಆಶ್ರಮಿಗಳಿಗೂ ಸಾಮಾನ್ಯವಾಗಿ ಅನುಷ್ಠೇಯವಾದ ಸಾಮಾನ್ಯ ಧರ್ಮವನ್ನು ಹಿಂದೆ ನಾನು ನಿನಗೆ ಹೇಳಿದ್ದೆನು. ಅವುಗಳನ್ನು ಆಚರಿಸುವ ಎಲ್ಲ ವರ್ಣದವರೂ ಮತ್ತು ಆಶ್ರಮಿಗಳೂ ತಮಗೆ ಪ್ರಾಪ್ತವಾದ ಕಷ್ಟಗಳನ್ನು ಅದರಿಂದ ಹೋಗಲಾಡಿಸಿಕೊಳ್ಳುತ್ತಾರೆ. ಹೀಗೆ ಎಲ್ಲರೂ ಅವುಗಳಿಂದ ಕಲ್ಯಾಣವನ್ನು ಪಡೆಯುತ್ತಾರೆ.

೧೦. ನಾನು ನಿನಗೆ ವ್ರತಗಳನ್ನು ಉಪದೇಶಮಾಡುವಾಗ ಅದಕ್ಕಾಗಿ ದೇವತೋದ್ದೇಶ್ಯಕವಾದ ಊಹೆಯಿಂದ ದೇವರು ಅನೇಕವಾಗಿರುವದಾಗಿ ಹೇಳಿರುತ್ತೇನೆ. ಯಾವನು ದೇವರೆಂದು ಪರಮಾರ್ಥತಃ ಹೇಳಲ್ಪಟ್ಟಿರುತ್ತಾನೋ ಅಂತಹ ದೇವನ ವಿಚಾರವನ್ನು ಹೇಳುತ್ತೇನೆ ಶ್ರವಣಮಾಡು.

**ಯೋ ಬ್ರಹ್ಮಾ ಸ ಹರಿಃ ಪ್ರೋಕ್ತೋ ಯೋ ಹರಿಃ ಸ ಮಹೇಶ್ವರಃ ।**
**ಮಹೇಶ್ವರಃ ಸ್ಮೃತಃ ಸೂರ್ಯಃ ಸೂರ್ಯಃ ಪಾವಕ ಉಚ್ಯತೇ ॥೧೧॥**

**ಪಾವಕಃ ಕಾರ್ತಿಕೇಯೋಽಸೌ ಕಾರ್ತಿಕೇಯೋ ವಿನಾಯಕಃ ।**
**ಗೌರೀ ಲಕ್ಷ್ಮೀಶ್ಚ ಸಾವಿತ್ರೀ ಶಕ್ತಿಭೇದಾಃ ಪ್ರಕೀರ್ತಿತಾಃ ॥ ೧೨ ॥**

**ದೇವಂ ದೇವೀಂ ಸಮುದ್ದಿಶ್ಯ ಯಃ ಕರೋತಿ ವ್ರತಂ ನರಃ ।**
**ನ ಭೇದಸ್ತತ್ರ ಮಂತವ್ಯಃ ಶಿವಶಕ್ತಿಮಯಂ ಜಗತ್ ॥ ೧೩ ॥**

**ಬಹುಪ್ರಕಾರಾ ವಸುಧಾ ಭೇದಾಃ ಸಾಗ್ನ್ಯನಿಲಾಂಭಸಾಂ ।**
**ಪರಮಾರ್ಥತಶ್ಚಿಂತ್ಯಮಾನೋ ನ ಭೇದಃ ಪ್ರತಿಭಾಸತೇ ॥ ೧೪ ॥**

---

೧೧. ಚತುರ್ಮುಖಬ್ರಹ್ಮನೆಂದು ಯಾವನನ್ನು ಹೇಳುವೆವೋ ಅವನೇ ಶ್ರೀ ಮಹಾವಿಷ್ಣುವೆನಿಸಿಕೊಳ್ಳುತ್ತಾನೆ. ಯಾವನು ಶ್ರೀ ಮಹಾವಿಷ್ಣುವೋ ಅವನೇ ಶ್ರೀ ಪರಮೇಶ್ವರನು. ಯಾವನನ್ನು ಪರಮೇಶ್ವರನೆನ್ನುವೆವೋ ಅವನೇ ಆದಿತ್ಯನೆಂದು ವ್ಯವಹೃತನಾಗಿದ್ದಾನೆ. ಆ ಆದಿತ್ಯನೇ ಅಗ್ನಿಯೆಂದು ಹೇಳಲ್ಪಡುತ್ತಾನೆ.

೧೨. ಈ ಅಗ್ನಿಯೇ ಕುಮಾರಸ್ವಾಮಿ (ಷಣ್ಮುಖನು ಆ ಕುಮಾರಸ್ವಾಮಿಯೇ ವಿನಾಯಕನೆಂದು ಹೇಳಲ್ಪಡುತ್ತಾನೆ. ಗೌರಿ, ಲಕ್ಷ್ಮೀ, ಸಾವಿತ್ರಿ ಇವರು ಶಕ್ತಿದೇವತೆಗಳು. ಇವರಿಗೂ ಪರಸ್ಪರ ಭೇದವಿಲ್ಲ ಎಂದು ಹೇಳಲ್ಪಟ್ಟಿದೆ.

೧೩. ಯಾವ ಮನುಷ್ಯನು ಮಹಾದೇವನನ್ನು ಅಥವಾ ಮಹಾದೇವಿಯನ್ನು ಉದ್ದೇಶಿಸಿ ಯಾವ ವ್ರತವನ್ನು ಆಚರಿಸಲಿ ಅದರಲ್ಲಿ ಶಿವಶಕ್ತಿಗಳಿಗೆ ಭೇದವೆಣಿಸಬಾರದು. ಏತಕ್ಕೆಂದರೆ ಪ್ರಪಂಚವು ಶಿವ ಮತ್ತು ಶಕ್ತಿ ಇವರಿಂದ ಉದ್ಭವಿಸಿದ್ದರಿಂದ ಶಿವಶಕ್ತಿಮಯವೆನಿಸಿದೆ.

೧೪. ಅಗ್ನಿ, ಗಾಳಿ, ನೀರು ಇವುಗಳಿಂದ ಕೂಡಿ ಭೂಮಿಯು ಬಹುವಿಧವೆನಿಸುವುದು. ಆದರೆ ಪರಮಾರ್ಥತಃ ಭೂಮಿಯ ತತ್ವವನ್ನು ಯೋಚಿಸಿದರೆ (ಅದು ಒಂದೇ ತತ್ವದಿಂದ ಹುಟ್ಟಿದುದರಿಂದ ಕಾರ್ಯಕ್ಕೆ ಕಾರಣವೇ ತತ್ವವಾದುದರಿಂದ) ಅದರಲ್ಲಿ ಯಾವ ಭೇದವೂ ಕಾಣಿಸುವುದಿಲ್ಲ.

**ಕಂಚಿದ್ದೇವಂ ಸಮಾಶ್ರಿತ್ಯ ಕರೋತಿ ಕಿಮಪಿ ವ್ರತಂ ।**
**ತ್ರಯೀಧರ್ಮಾನುಗಂ ಪಾರ್ಥ ಏಕಂ ತತ್ರಾಪಿ ಕಾರಣಂ ॥ ೧೫ ॥**

**ಯತ್ತ್ವೈವ ತೇ ಮಯಾ ಖ್ಯಾತೋವ್ರತದಾನ ವಿಧಿಃ ಪರಃ ।**
**ಸಫಲಃ ಸ ತು ವಿಜ್ಞೇಯಃ ಸದಾಚಾರವತಾಂ ಸತಾಂ ॥ ೧೬ ॥**

**ಆಚಾರಹೀನಂ ನ ಪುನಂತಿ ವೇದಾ ।**
**ಯದಪ್ಯಧೀತಾಃ ಸಹ ಷಡ್ಭಿರಂಗೈಃ ॥**
**ಛಂದಾಂಸ್ಯೇನಂ ಮೃತ್ಯುಕಾಲೇ ತ್ಯಜಂತಿ ।**
**ನೀಡಂ ಶಕುಂತಾ ಇವ ಜಾತಪಕ್ಷಾಃ ॥ ೧೭ ॥**

---

೧೫. ಅಯ್ಯಾ ಕುಂತೀಪುತ್ರನೇ! ವೇದವಿಹಿತ ಧರ್ಮಕ್ಕನುಸಾರವಾದ ಯಾವ ಒಂದು ವ್ರತವನ್ನು, ಯಾವ ಒಂದು ದೇವತೆಯನ್ನು ಉದ್ದೇಶಿಸಿ ಮಾಡಿದರೂ ಸಾಕು. ಆ ಒಂದು ವ್ರತವೇ ಸಫಲವಾಗುವುದಕ್ಕೆ ಕಾರಣಾಂತರವಿದೆ. ಅವನ್ನು ಹೇಳುತ್ತೇನೆ.

೧೬. ಈ ಮೊದಲು ನಾನು ನಿನಗೆ ಯಾವ ಅತ್ಯುತ್ತಮವಾದ ವ್ರತ ದಾನ ಇವುಗಳ ವಿಧಾನವನ್ನು ಹೇಳಿರುವೆನೋ ಅದು ಸದಾಚಾರವುಳ್ಳ ಸಜ್ಜನರು ಅನುಷ್ಠಾನಮಾಡುವುದರಿಂದ ಪೂರ್ಣ ಫಲಕಾರಿಯಾಗುತ್ತದೆ ಎಂದು ತಿಳಿಯಬೇಕು. (ಆಚಾರಹೀನರು ವ್ರತಮಾಡಿದರೂ ಯಥೋಕ್ತ ಫಲವಾಗುವುದಿಲ್ಲ).

೧೭. ಷಡಂಗಗಳು ಸಹಿತವಾಗಿ ವೇದಾಧ್ಯಯನಮಾಡಿ ವೇದೋಕ್ತವಾದ ಕರ್ಮಾನುಷ್ಠಾನಮಾಡಿದರೂ ಆ ಅನುಷ್ಠಾತೃವು ಸದಾಚಾರ ವಿಹೀನನಾದರೆ ಆ ಕರ್ಮಗಳು ಅವನ ಪಾಪನಾಶಮಾಡಿ ಅವನನ್ನು ಪಾವನನನ್ನಾಗಿ ಮಾಡಲಾರವು. ರೆಕ್ಕೆಬಲಿತ ಪಕ್ಷಿಗಳು ಗೂಡನ್ನು ಬಿಟ್ಟುಹೋಗುವಂತೆ ವೇದೋಕ್ತ ಕರ್ಮಗಳು ಫಲೋನ್ಮುಖವಾಗಬೇಕಾದ ಮೃತ್ಯುಕಾಲದಲ್ಲಿ ಆಚಾರಹೀನನಾದ ಈ ಅನುಷ್ಠಾತೃವನ್ನು ತ್ಯಜಿಸುವುವು (ಪರಲೋಕದಲ್ಲಿ ಉತ್ತಮ ಫಲಗಳನ್ನು ಕೊಡುವುದಿಲ್ಲ).

**ಕಪಾಲಸ್ಥಂ ಯಥಾ ತೋಯಂ ಶ್ವಹೃತೌ ವಾ ಯಥಾ ಪಯಃ ।**
**ದುಷ್ಟಂ ಸ್ಯಾತ್ ಸ್ಥಾನದೋಷೇಣ ವೃತ್ತಹೀನೇ ತಥಾ ಶುಭಂ ॥೧೮॥**

**ವೃತ್ತಂ ಯತ್ನೇನ ಸಂರಕ್ಷೇತ್ ವಿತ್ತಮೇತಿ ಪ್ರಯಾತಿ ಚ ।**
**ಅಹೀನೋ ವಿತ್ತತೋ ಹೀನೋ ವೃತ್ತತಸ್ತು ಹತೋ ಹತಃ ॥ ೧೯ ॥**

**ಆಚಾರ ಏವ ಧರ್ಮಸ್ಯ ಮೂಲಂ ರಾಜನ್ ಕುಲಸ್ಯ ಚ ।**
**ಆಚಾರಾದ್ಧಿ ಚ್ಯುತೋ ಜಂತುರ್ನ ಕುಲೀನೋ ನ ಧಾರ್ಮಿಕ ॥೨೦॥**

**ಕಿಂ ಕುಲೇನೋಪದಿಷ್ಟೇನ ವಿಪುಲೇನ ದುರಾತ್ಮನಾಂ ।**
**ಕ್ರಿಮಯಃ ಕಿಂ ನ ಜಾಯಂತೇ ಕುಸುಮೇಷು ಸುಗಂಧಿಷು ॥ ೨೧ ॥**

---

೧೮. ನರಕಪಾಲದ ಪಾತ್ರೆಯಲ್ಲಿರುವ ನೀರು, ನಾಯಿಯ ಕೆಚ್ಚಲಲ್ಲಿರುವ ಹಾಲು ಇವು ಸ್ಥಾನದೋಷದಿಂದ ಹೇಗೆ ದುಷ್ಟವೆನಿಸಿ ಸ್ವೀಕಾರಾರ್ಹವಾಗುವುದಿಲ್ಲವೋ ಹಾಗೆ ಆಚಾರವಿಹೀನನಾದ ಪುರುಷನು ಮಾಡಿದ ಸತ್ಕರ್ಮಗಳೂ ಸ್ಥಾನದೋಷದಿಂದ ದುಷ್ಕರ್ಮಗಳೇ ಆಗುವುವು.

೧೯. ಆದುದರಿಂದ ಪ್ರಯತ್ನ ಪೂರ್ವಕವಾಗಿ ಆಚಾರವನ್ನೂ ಶೀಲವನ್ನೂ ಸಂರಕ್ಷಿಸಿಕೊಳ್ಳಬೇಕು. ಆ ವಿಷಯದಲ್ಲಿ ಧನವ್ಯಯವಾಗುವುದೆಂದು ಯೋಚನೆ ಮಾಡಬಾರದು. ಧನವು ಹೇಗೋ ಬರುತ್ತದೆ, ಹೇಗೋ ಕೈಬಿಟ್ಟು ಹೋಗುತ್ತದೆ, ಧನಿಕನಾಗಿದ್ದೂ ಸದಾಚಾರವಿಹೀನನಾದರೆ ಅತಿಶಯವಾಗಿ ಕೆಡುತ್ತಾನೆ.

೨೦. ಅಯ್ಯಾ ರಾಜನೆ ಕೇಳು ! ಈ ರೀತಿಯಾಗಿ ಆಚಾರವು ಧರ್ಮಕ್ಕೂ ಕುಲಪವಿತ್ರತೆಗೂ ಮೂಲವು. ಆಚಾರವಿಹೀನನಾದ ಮಾನವನು ಕುಲೀನನೂ ಅಲ್ಲ ಧಾರ್ಮಿಕನೂ ಅಲ್ಲ.

೨೧. ತಾವು ದುರಾಚಾರಗಳಲ್ಲಿ ನಿರತರಾಗಿದ್ದುಕೊಂಡು ತಮ್ಮ ವಂಶದ ಗೌರವವನ್ನು ಪ್ರಶಂಸೆಮಾಡಿಕೊಂಡ ಮಾತ್ರಕ್ಕೆ ಬರುವ ಭಾಗ್ಯವೇನು? ಸುವಾಸನಾಯುಕ್ತವೂ ಸುಂದರವೂ ಆದ ಪುಷ್ಪದಲ್ಲಿ ಕ್ರಿಮಿಗಳು ಉತ್ಪನ್ನವಾದಂತೆ ಆ ಸದ್ವಂಶದಲ್ಲಿ ಈ ದುರಾಚಾರನು ಜನಿಸಿದ್ದೊಂದೇ ಫಲವಾಯಿತು.

ಹೀನಜಾತಿಪ್ರಸೂತೋಽಪಿ ಶೌಚಾಚಾರಸಮನ್ವಿತಃ ।
ಸರ್ವಧರ್ಮಾರ್ಥಕುಶಲಃ ಸಕುಲೀನಃ ಸತಾಂ ವರಃ ॥ ೨೨ ॥

ನ ಕುಲಂ ಕುಲಮಿತ್ಯಾಹುರಾಚಾರಃ ಕುಲಮುಚ್ಯತೇ ।
ಆಚಾರಕುಶಲೋ ರಾಜನ್ನಿಹಚಾಮುತ್ರ ನಂದತೇ ॥ ೨೩ ॥

॥ ಯುಧಿಷ್ಠಿರ ಉವಾಚ ॥

ಸದಾಚಾರಮಹಂ ಕೃಷ್ಣ ಶ್ರೋತುಮಿಚ್ಛಾಮಿ ಶಾಶ್ವತಂ ।
ಸರ್ವಧರ್ಮಮಯಃ ಕೋಽತ್ರ ಸದಾಚಾರಃ ಪ್ರಕೀರ್ತಿತಃ ॥ ೨೪ ॥

॥ ಶ್ರೀಕೃಷ್ಣ ಉವಾಚ ॥

ಆಚಾರಪ್ರಭವೋ ಧರ್ಮಃ ಸಂತಶ್ಚಾಚಾರಲಕ್ಷಣಾಃ ।
ಸಾಧೂನಾಂ ಚ ಯಥಾ ವೃತ್ತಂ ಸ ಸದಾಚಾರ ಉಚ್ಯತೇ ॥ ೨೫ ॥

---

೨೨. ಹೀನಜಾತಿಯಲ್ಲಿ ಹುಟ್ಟಿದವನಾದರೂ ಶೌಚಾಚಾರ ಸಮನ್ವಿತನಾಗಿ ಸಂಪೂರ್ಣ ಸ್ವಧರ್ಮಾನುಷ್ಠಾನ, ಅರ್ಥಾರ್ಜನೆ, ಇವುಗಳಲ್ಲಿ ನಿರತನಾಗಿ ಬುದ್ಧಿಶಾಲಿಯಾಗಿದ್ದರೆ ಅವನೇ ಕುಲೀನನೆನಿಸುವನು, ಮತ್ತು ಅವನೇ ಸಜ್ಜನರಲ್ಲಿ ಉತ್ತಮನು.

೨೩. ಅಯ್ಯಾ ರಾಜನೆ! ಕೇಳು; ಪ್ರಾಜ್ಞರಾದವರು ಜನ್ಮಕುಲವನ್ನು ಕುಲವೆಂದು ಹೇಳುವುದಿಲ್ಲ. ಆಚಾರವನ್ನೇ ಕುಲವೆಂದು ಹೇಳುತ್ತಾರೆ. ಸದಾಚಾರ ನಿರತನಾದ ಮನುಷ್ಯನು ಇಹ ಪರ ಎಂಬ ಎರಡು ಲೋಕಗಳಲ್ಲಿಯೂ ಸಂತೋಷಹೊಂದುವನು ಎಂದನು.

೨೪. ಯುಧಿಷ್ಠಿರನು ಹೇಳುತ್ತಾನೆ—ಓ ಕೃಷ್ಣ! ಶಾಶ್ವತಫಲಪ್ರದಾಯಕವಾದ ಆ ಸದಾಚಾರವನ್ನು ತಿಳಿದುಕೊಳ್ಳಬೇಕೆಂದು ಬಹು ಕುತೂಹಲವುಳ್ಳವನಾಗಿದ್ದೇನೆ. ಸರ್ವಧರ್ಮ ಸ್ವರೂಪವಾದ ಆ ಸದಾಚಾರಗಳು ಯಾವುವು ಎಂಬುದನ್ನು ಕೃಪೆಮಾಡಿ ಹೇಳು ಎಂದನು.

೨೫. ಶ್ರೀ ಕೃಷ್ಣನು ಹೇಳುತ್ತಾನೆ! ಸದಾಚಾರದಿಂದ ಧರ್ಮವು ಹುಟ್ಟುವುದು. ಸಜ್ಜನರು ಸದಾಚಾರವನ್ನೇ ಮುಖ್ಯಲಕ್ಷಣವನ್ನಾಗಿ ಉಳ್ಳವರು. ಸಾಧುಗಳು ಯಾವ ಪ್ರಕಾರಗಳಿಂದ ನಡೆದುಕೊಳ್ಳುವರೋ ಆ ನಡತೆಯನ್ನೇ ಸದಾಚಾರವೆಂದು ವ್ಯವಹರಿಸುವರು.

ತಸ್ಮಾತ್ಕುರ್ಯಾದಿಹಾಚಾರಂ ಯ ಇಚ್ಛೇದ್ಗತಿಮಾತ್ಮನಃ ।
ಅಪಿ ಪಾಪಶರೀರಸ್ಯ ಆಚಾರೋ ಹಂತ್ಯಲಕ್ಷಣಂ ॥ ೨೬ ॥

ಅದೃಷ್ಟಮಶ್ರುತಂ ವೇದಂ ಪುರುಷಂ ಧರ್ಮಚಾರಿಣಂ ।
ಸ್ವಾನಿ ಕರ್ಮಾಣಿ ಕುರ್ವಾಣಂ ತಂ ಜನಂ ಕುರುತೇ ಪ್ರಿಯಂ ॥ ೨೭ ॥

ಯೇ ನಾಸ್ತಿಕಾ ನ್ನೈಷ್ಕಿಕಾಶ್ಚ ಗುರುಶಾಸ್ತ್ರಾತಿಲಂಘಿನಃ ।
ಅಧರ್ಮಜ್ಞಾ ದುರಾಚಾರಾಸ್ತೇ ಭವಂತಿ ಗತಾಯುಷಃ ॥ ೨೮ ॥

ಸರ್ವಲಕ್ಷಣಹೀನೋಽಪಿ ಯಃ ಸದಾಚಾರವಾನ್ನರಃ ।
ಶ್ರದ್ಧಧಾನೋಽನಸೂಯಶ್ಚ ಸರ್ವಾನ್ಕಾಮಾನವಾಪ್ನುಯಾತ್ ॥ ೨೯ ॥

---

೨೬. ಆದುದರಿಂದ ಸಂಸಾರವಂದಿಗನು ಯಾವನೇ ಆಗಲಿ ತನಗೆ ಸದ್ಗತಿಯನ್ನು ಅಪೇಕ್ಷಿಸುವುದಾದರೆ ಅವನು ಸದಾಚಾರಸಂಪನ್ನನಾಗಿರಬೇಕು. ಪುರಾಕೃತವಾದ ಪಾಪವಶದಿಂದ ಶರೀರದಲ್ಲಿ ಪ್ರಾಪ್ತವಾಗಿರುವ ಅವಲಕ್ಷಣವನ್ನು ಈ ಸದಾಚಾರವು (ನಾಶಮಾಡಿ) ಹೋಗಲಾಡಿಸುತ್ತದೆ.

೨೭. ಶಾಸ್ತ್ರಾವಲೋಕನ ಶಾಸ್ತ್ರ, ಪುರಾಣಾದಿಗಳ ಶ್ರವಣ, ಇವುಗಳನ್ನು ಮಾಡದೆ ಇದ್ದರೂ ಸ್ವಧರ್ಮವನ್ನು ಕ್ರಮವಾಗಿ ಅನುವರ್ತಿಸಿ ಅನುಷ್ಠಾನ ಮಾಡುತ್ತಿರುವ ಪುರುಷನಿಗೆ ಈ ಸದಾಚಾರವು ಒಳ್ಳೆಯದನ್ನೇ ಉಂಟುಮಾಡುತ್ತದೆ.

೨೮. ಯಾರು ವೇದದೂಷಕರೂ, ನಾಸ್ತಿಕರೂ ನಿಷ್ಠೆಯಿಲ್ಲದವರೂ ಆಗಿ, ಗುರೂಪದಿಷ್ಟವಾದ ಶಾಸ್ತ್ರೋಕ್ತ ಕರ್ಮವನ್ನು ಅತಿಕ್ರಮಿಸುವರೋ, ಮತ್ತು ಧರ್ಮ ಪರಿಜ್ಞಾನವಿಲ್ಲದೆ ದುಷ್ಕೃತ್ಯಗಳನ್ನು ನಡೆಸುವರೋ ಅವರು ಕ್ಷೀಣಾಯುಷ್ಕರಾಗುತ್ತಾರೆ.

೨೯. ಶುಭಲಕ್ಷಣ ವಿಹೀನನಾದರೂ ಯಾವ ಮನುಷ್ಯನು ಸದಾಚಾರಿಯಾಗಿದ್ದು ಗುರುವಿನಿಂದ ಉಪದಿಷ್ಟವಾದ ಶಾಸ್ತ್ರಾರ್ಥದಲ್ಲಿ ಶ್ರದ್ಧೆಯುಳ್ಳವನೂ, ದೇವಬ್ರಾಹ್ಮಣರಲ್ಲಿ ಅಸೂಯಾರಹಿತನೂ ಆಗಿರುವನೋ ಅವನು ತನಗೆ ಅಭಿಲಷಿತವಾದ ಸಮಸ್ತ ಫಲಗಳನ್ನೂ ಪಡೆಯುತ್ತಾನೆ. ಆದುದರಿಂದ ಸದಾಚಾರಗಳನ್ನು ಸ್ವಲ್ಪ ತಿಳಿಸುತ್ತೇನೆ.

ಬ್ರಾಹ್ಮೇ ಮುಹೂರ್ತೇ ಬುದ್ಧ್ಯೇತ ಧರ್ಮಾರ್ಥಾವನುಚಿಂತಯೇತ್।
ಬ್ರಾಹ್ಮಣಾನಲಗೋಸೂರ್ಯಾನ್ನ ಮೇಹೇತ ಕದಾಚನ ॥ ೩೦ ॥

ಉದಙ್ಮುಖೋ ದಿವಾರಾತ್ರಾವುತ್ಸರ್ಗಂ ದಕ್ಷಿಣಾಮುಖಃ ।
ಉತ್ಥಾಯಾಚಮ್ಯ ತಿಷ್ಠೇತ ಪೂರ್ವಾಂ ಸಂಧ್ಯಾಂ ಸಮಾಹಿತಃ ॥೩೧॥

ಏವಮೇವೋತ್ತರಾಂ ಸಂಧ್ಯಾಂ ಸಮುಪಾಸೀತ ವಾಗ್ಯತಃ ।
ನೇಕ್ಷೇತಾದಿತ್ಯಮುದ್ಯಂತಂ ನಾಸ್ತಂ ಯಾಂತಂ ಕದಾಚನ ॥ ೩೨ ॥

ಋಷಯೋ ದೀರ್ಘತಪಸಾ ದೀರ್ಘಮಾಯುರವಾಪ್ನುಯುಃ ।
ಉಪಾಸತೇ ಯೇನ ಪೂರ್ವಾಂ ದ್ವಿಜಾಃ ಸಂಧ್ಯಾಂ ನ ಪಶ್ಚಿಮಾಂ ॥೩೩॥

---

೩೦. ಪ್ರತಿಯೊಬ್ಬ ಮಾನವನೂ ಬ್ರಾಹ್ಮಮುಹೂರ್ತದಲ್ಲಿ (ಉಷಃಕಾಲದಲ್ಲಿ) ನಿದ್ದೆಯಿಂದ ಎಚ್ಚೆತ್ತು ಹಾಸಿಗೆಯನ್ನು ಬಿಟ್ಟು ಏಳಬೇಕು. ಎದ್ದೊಡನೆಯೇ ಆದಿನ ತಾನು ಮಾಡಬೇಕಾದ ಧರ್ಮ ಮತ್ತು ಸಂಪಾದಿಸಬೇಕಾದ ಅರ್ಥ ಈ ಎರಡು ಪುರುಷಾರ್ಥಗಳನ್ನೂ ಉದ್ದೇಶಿಸಿ ವಿಚಾರಮಾಡಬೇಕು. ಮತ್ತು ಬ್ರಾಹ್ಮಣರು, ಅಗ್ನಿ, ಗೋವು, ಸೂರ್ಯ ಇವರನ್ನು ಯಾವಾಗಲೂ ನಿಂದಿಸಬಾರದು

೩೧. ಹಗಲು ಹೊತ್ತಿನಲ್ಲಿ ಉತ್ತರಾಭಿಮುಖವಾಗಿ ಕುಳಿತು ಮಲವಿಸರ್ಜನ ಮಾಡಬೇಕು. ಆ ಮೇಲೆ ಶೌಚಾಚಮನಮಾಡಿ ಸ್ನಾನಾದಿಗಳಿಂದ ಶುದ್ಧನಾಗಿ ಚಿತ್ತೈಕಾಗ್ರತೆಯಿಂದ ಪ್ರಾತಸ್ಸಂಧ್ಯೋಪಾಸನೆಯನ್ನು ಮಾಡಬೇಕು.

೩೨. ಹೀಗೆಯೇ ಸಾಯಂಸಂಧ್ಯಾವಂದನೆಯನ್ನು ಮೌನದಿಂದ ಆಚರಿಸಬೇಕು. ಸೂರ್ಯೋದಯವಾಗುತ್ತಿರುವ ವೇಳೆಯಲ್ಲಿ ಸೂರ್ಯನನ್ನು ಯಾವಾಗಲೂ ನೋಡಬಾರದು. ಹಾಗೆಯೇ ಅಸ್ತಮಿಸುತ್ತಿರುವಾಗಲೂ ಸೂರ್ಯನನ್ನು ವೀಕ್ಷಿಸಬಾರದು.

೩೩. ಪ್ರಾಚೀನರಾದ ಆರ್ಯ ಮಹರ್ಷಿಗಳು ದೀರ್ಘಕಾಲ ತಪೋನುಷ್ಠಾನಮಾಡಿ ದೀರ್ಘಾಯುಸ್ಸನ್ನು ಪಡೆದರು. ಬ್ರಾಹ್ಮಣಾದಿ ಮೂರು ವರ್ಣಗಳಲ್ಲಿ ಜನಿಸಿ ಸಂಸ್ಕಾರ ಹೊಂದಿ ಪ್ರಾತಃಸಂಧ್ಯಾ ಮತ್ತು ಸಾಯಂಸಂಧ್ಯಾ ಇವುಗಳಲ್ಲಿ ಸಂಧ್ಯೋಪಾಸನೆಯನ್ನು ಅವಶ್ಯವಾಗಿ ಆಚರಿಸಬೇಕು.

**ಸರ್ವಾಂಸ್ತಾನ್ ಧಾರ್ಮಿಕೋ ರಾಜಾ ಶೂದ್ರಕರ್ಮಣಿ ಯೋಜಯೇತ್।**
**ಅಬಾಧಾಸು ಯಥಾಕಾಮಂ ಕುರ್ಯಾನ್ಮೂತ್ರಪುರೀಷಯೋಃ ॥೩೪॥**

**ಶಿರಸಾ ಪ್ರಾವೃತೇನೈವ ಸಮಾಸ್ತೀರ್ಯ ತೃಣೈರ್ಮಹೀಂ ।**
**ಗ್ರಾಮಾವಸಥತೀರ್ಥಾನಾಂ ಕ್ಷೇತ್ರಾಣಾಂ ಚೈವ ವರ್ತ್ಮನಿ ॥ ೩೫ ॥**

**ನ ಮೂತ್ರಮುಥಿತಿಷ್ಠೇತ ನ ಕೃಷ್ಟೇ ನ ಚ ಗೋವ್ರಜೇ ।**
**ಅಂತರ್ಜಲಾದಾವಸಥಾದ್ವಲ್ಮೀಕಾನ್ಮೂಷಕಸ್ಥಲಾತ್ ॥ ೩೬ ॥**

**ಕೃತಶೌಚಾವಶಿಷ್ಟಾಚ ವರ್ಜಯೇತ್ಪಂಚ ವೈ ಮೃದಃ ।**
**ದೇವಾರ್ಚನಾದಿ ಕಾರ್ಯಾಣಿ ತಥಾ ಗುರ್ವಭಿವಾದನಂ ॥ ೩೭ ॥**

---

೩೪. ಈ ಪ್ರಕಾರ ಸಂಧ್ಯೋಪಾಸನೆಯನ್ನು ಯಾರು ಮಾಡುವುದಿಲ್ಲವೋ ಅವರೆಲ್ಲರನ್ನೂ ಧರ್ಮತತ್ಪರನಾದ ಅರಸನು ಶೂದ್ರಕರ್ಮದಲ್ಲಿ ನಿಯೋಗಿಸಬೇಕು. ಮೂತ್ರೋತ್ಸರ್ಜನೆ ಮಲವಿಸರ್ಜನೆ ಇವನ್ನು ಯಾರಿಗೂ ತೊಂದರೆಯಾಗದಿರುವ ಸ್ಥಳದಲ್ಲಿ ಸ್ವೇಚ್ಛಾನುಸಾರ ಮಾಡಬಹುದು.

೩೫–೩೬. ಮಲ ಮೂತ್ರ ಇವನ್ನು ವಿಸರ್ಜಿಸುವಾಗ ತನ್ನ ಶಿರಸ್ಸನ್ನು ಬಟ್ಟೆಯಿಂದ ಹೊದ್ದಿಸಿಕೊಳ್ಳಬೇಕು. ಆ ನೆಲದ ಮೇಲೆ ಹುಲ್ಲನ್ನು ಹಾಸಿರಬೇಕು. ಊರಿಗೆ ತಿರುಗಾಡುವದಾರಿ, ಮನೆಗೆ ತಿರುಗುವದಾರಿ, ತೀರ್ಥಕ್ಷೇತ್ರಗಳಿಗೆ ಸಂಚರಿಸುವದಾರಿ ಇವುಗಳಲ್ಲೂ, ಉಳುಮೆಮಾಡಿದ ಹೊಲದಲ್ಲಿಯೂ, ಗೋವುಗಳು ಮೇಯುವ ಹುಲ್ಲುಗಾವಲುಗಳಲ್ಲಿಯೂ, ಮಲವಿಸರ್ಜನೆ ಮೂತ್ರವಿಸರ್ಜನೆಗಳನ್ನು ಮಾಡಬಾರದು. ನೀರಿನೊಳಗೂ ಮಾಡಬಾರದು.

೩೭. ನೀರಿನಮಧ್ಯೆ, ಮನೆಯ ಆವರಣ, ಹುತ್ತ, ಇಲಿಯಬಿಲ, ಪೂರ್ವದಿನದಲ್ಲಿ ಶೌಚಾರ್ಥವಾದ ಮೃತ್ತಿಗೆ ತೆಗೆದುಕೊಂಡಸ್ಥಳ ಈ ಐದು ಸ್ಥಳಗಳಿಂದ ಶೌಚಾರ್ಥವಾಗಿ ಮೃತ್ತಿಕೆಯನ್ನು ತೆಗೆದುಕೊಳ್ಳಬಾರದು.

ಕುರ್ವೀತ ಸಮ್ಯಗಾಚಮ್ಯ ತದ್ವದನ್ನಭುಜಿ ಕ್ರಿಯಾಂ ।
ಅಫೇನಶಬ್ದಗಂಧಾಭಿರದ್ಭಿರಚ್ಛಾಭಿರಾದರಾತ್ ॥ ೩೮ ॥

ಆಚಾಮೇತ್ಪ್ರಯತಃ ಸಮ್ಯಕ್ಪ್ರಾಙ್ಮುಖೋದಙ್ಮುಖೋಽಪಿ ವಾ ।
ತ್ರಿವರ್ಗಸಾಧನಂ ಯಚ್ಚ ಸದಾ ಕಾರ್ಯಂ ವಿಪಶ್ಚಿತಾ ॥ ೩೯ ॥

ತತ್ಸಾನ್ನಿಧ್ಯೇ ಗೃಹಸ್ಥಸ್ಯ ಸಿದ್ಧಿರತ್ರ ಪರತ್ರ ಚ ।
ಪಾದೇನ ಕಾರ್ಯಂ ಪಾರತ್ರ್ಯಂ ಪಾದಂ ಕುರ್ಯಾಚ್ಚ ಸಂಚಯೆ ॥೪೦॥

ಅರ್ಧೇನಾಹಾರ ಚರಣನಿತ್ಯನೈಮಿತ್ತಿಕಾಂತಕಂ ।
ಅರ್ಥಸ್ಯೋಪಾರ್ಜನೇ ಯತ್ನಃ ಸದಾ ಕಾರ್ಯೋ ವಿಪಶ್ಚಿತೈಃ ॥೪೧॥

---

೩೮. ಈ ಐದು ಸ್ಥಾನದ ಮೃತ್ತಿಕೆಗಳೂ ಶೌಚಕ್ಕೆ ವರ್ಜ್ಯಗಳೆಂದು ಹೇಳಿದೆ ನಿತ್ಯಕರ್ಮಗಳು,ದೇವಪೂಜೆ ಗುರುವಂದನೆ ಭೋಜನ ಇವುಗಳನ್ನು ಮಾಡುವವನು ಮೊದಲು ಶುದ್ಧಾಚಮನವನ್ನು ಮಾಡಿ ಆಮೇಲೆ ಆ ಕರ್ಮಗಳನ್ನು ಮಾಡಬೇಕು.

೩೯. ನೊರೆ, ಶಬ್ದ, ದುರ್ವಾಸನೆ ಇವುಗಳಿಂದ ಕೂಡಿಲ್ಲದೆ ಶುದ್ಧವೂ, ಸ್ವಚ್ಛವೂ ಆಗಿರುವ ನೀರಿನಿಂದ ಆದರ ಪೂರ್ವಕವಾಗಿ ಶಾಸ್ತ್ರೋಕ್ತ ರೀತಿಯಲ್ಲಿ ಆಚಮನಮಾಡಬೇಕು. ಆಚಮನ ಕಾಲದಲ್ಲಿ ಪೂರ್ವಾಭಿಮುಖವಾಗಿಯೋ ಉತ್ತರಾಭಿಮುಖವಾಗಿಯೋ ಕುಳಿತೇ ಆಚಮನ ಮಾಡಬೇಕು. ದಕ್ಷಿಣಕ್ಕಾಗಲಿ ಪಶ್ಚಿಮಕ್ಕಾಗಲಿ ಅಭಿಮುಖವಾಗಿ ಕುಳಿತು ಆಚಮನ ಮಾಡಬಾರದು ಪ್ರಾಜ್ಞನಾದವನು ಯಾವಾಗಲೂ ಮಾಡತಕ್ಕ ಕೆಲಸಗಳು ಧರ್ಮ, ಅರ್ಥ, ಕಾಮ ಎಂಬ ತ್ರಿವರ್ಗಕ್ಕೆ ಸಾಧನವಾಗಿಯೇ ಇರಬೇಕು.

೪೦. ಗೃಹಸ್ಥನಿಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳ ಸಾನ್ನಿಧ್ಯವಿದ್ದರೆ ಇಹ ಪರಲೋಕಗಳಲ್ಲಿ ಸುಖವುಂಟಾಗುವುದು. ತಾನು ಸಂಪಾದಿಸಿದ ಧನದಲ್ಲಿ ಕಾಲುಭಾಗ ವ್ರವ್ಯದಿಂದ ಪರಲೋಕ ಸಾಧನವಾದ ಶುಭ ಕರ್ಮಮಾಡಬೇಕು. ಇನ್ನು ಕಾಲುಭಾಗ ಹಣವನ್ನು ಆಪದ್ಧನವಾಗಿ ಕೂಡಿಡಬೇಕು.

೪೧. ಹೀಗೆ ಮಾಡಿದ ಮೇಲೆ ಇನ್ನು ಉಳಿದ ಅರ್ಧಭಾಗ ಹಣದಲ್ಲಿ ನಿತ್ಯ ನೈಮಿತ್ತಿಕಾದಿಕರ್ಮಗಳನ್ನು ಆಚರಿಸುತ್ತಾ ತನ್ನ ಭೋಜನಾದಿ ಉಪಭೋಗಗಳನ್ನು ಮಾಡಿಕೊಳ್ಳಬೇಕು. ಪ್ರಾಜ್ಞನಾದವನು ಯಾವಾಗಲೂ ಅರ್ಥೋಪಾರ್ಜನೆಯ ಪ್ರಯತ್ನ ಮಾಡುತ್ತಿರಬೇಕು.

ತತ್ಸಂಸಿದ್ಧೌ ಹಿ ಸಿಧ್ಯಂತಿ ಧರ್ಮಕಾಮಾದಯೋ ನೃಪ ।
ಕೇಶಪ್ರಸಾಧನಾದರ್ಶದರ್ಶನಂ ದಂತಧಾವನಂ ॥ ೪೨ ॥

ಪೂರ್ವಾಹ್ಣ ಏವ ಕಾರ್ಯಾಣಿ ದೇವತಾನಾಂ ಚ ಪೂಜನಂ ।
ದೂರಾದಾವಸಥಾನ್ಮೂತ್ರಂ ದೂರಾತ್ಪಾದಾವಸೇಚನಂ ॥ ೪೩ ॥

ಉಚ್ಛಿಷ್ಟೋತ್ಸರ್ಜನಂ ದೂರಾತ್ಸದಾ ಕಾರ್ಯಂ ಹಿತೈಷಿಣಾ ।
ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ಚ ಯೋ ನರಃ ॥ ೪೪ ॥

ನಿತ್ಯೋಚ್ಛಿಷ್ಟಃ ಸಂಕರಕೃನ್ನೇಹಾಯುರ್ವಿಂದತೇ ಮಹತ್ ।
ನಗ್ನಾಂ ಪರಸ್ತ್ರಿಯಂ ನ್ನೇಕ್ಷೇನ್ನ ಪಶ್ಯೇದಾತ್ಮನಃ ಶಕೃತ್ ॥ ೪೫ ॥

---

೪೨. ಅಯ್ಯಾ ರಾಜನೇ ಕೇಳು! ದ್ರವ್ಯವೊಂದನ್ನು ಸಂಪಾದಿಸಿದರೆ ಧರ್ಮಕಾಮಾದಿ ಎಲ್ಲ ಪುರುಷಾರ್ಥಗಳೂ ಆ ದ್ರವ್ಯದ ಮೂಲಕವಾಗಿ ಸಿದ್ಧಿಸುತ್ತವೆ. ತಲೆಬಾಚಿಕೊಂಡು ಅಲಂಕರಿಸಿಕೊಳ್ಳುವುದು, ಕನ್ನಡಿ ನೋಡುವುದು, ಹಲ್ಲುಉಜ್ಜಿಕೊಳ್ಳುವುದು ದೇವತಾರ್ಚನೆ ಇಷ್ಟು ಕಾರ್ಯಗಳನ್ನು ಪೂರ್ವಾಹ್ನದಲ್ಲಿಯೇ ಮಾಡಬೇಕು.

೪೩. ತನಗೆ ಹಿತವಾಗಬೇಕೆಂದು ಅಪೇಕ್ಷಿಸುವವನು ಮೂತ್ರೋತ್ಸರ್ಜನ, ಪಾದಪ್ರಕ್ಷಾಳನ, ಉಚ್ಛಿಷ್ಟೋತ್ಸರ್ಜನ(ಎಂಜಲುಎಲೆ ಬಿಸಾಡುವುದು) ಇವಿಷ್ಟನ್ನೂ ಮನೆಯಿಂದ ಹೊರಗೆ ದೂರದಲ್ಲಿ ಮಾಡಬೇಕು.

೪೪–೪೫. ನಿಷ್ಕಾರಣವಾಗಿ ಮಣ್ಣು ಹೆಂಟೆಯನ್ನು ಮರ್ದಿಸುವವನು, ಹುಲ್ಲನ್ನು ಚಿಗುಟಿ ಕತ್ತರಿಸುವವನು, ತನ್ನ ಉಗುರುಗಳನ್ನು ಕಡಿಯುತ್ತಿರುವವನು, ಯಾವಾಗಲೂ ಎಂಜಲು ತಿನ್ನುವುದು ಮುಂತಾದುವುಗಳಿಂದ ಅಶುಚಿಯಾಗಿರುವವನು, ಜಾತಿಸಾಂಕರ್ಯ ಮಾಡುವವನು ಇವರುಗಳು ಈ ಲೋಕದಲ್ಲಿ ದೀರ್ಘಾಯುಸ್ಸನು ಹೊಂದುವುದಿಲ್ಲ. ವಸ್ತ್ರಧರಿಸದೆ ಬರುವ ಪರಸ್ತ್ರೀಯನ್ನು ನೋಡಬಾರದು. ಹಾಗೆಯೇ ತಾನು ಮಲವಿಸರ್ಜನೆ ಮಾಡಿದಾಗ ಆ ಮಲವನ್ನೂ ನೋಡಬಾರದು.

ಉದಕ್ಯಾದರ್ಶನಸ್ಪರ್ಶಂ ಕುರ್ಯಾತ್ಸಂಭಾಷಣಂ ನ ಚ ।
ನಾಪ್ಸು ಮೂತ್ರಂ ಪುರೀಷಂ ವಾ ಮೈಥುನಂ ವಾ ಸಮಾಚರೇತ್ ॥೪೬॥

ನಾಧಿತಿಷ್ಠೇಚ್ಛಕೃನ್ಮೂತ್ರೇ ಕೇಶಭಸ್ಮಕಪಾಲಿಕಾಃ ।
ತುಷಾಂಗಾರಾಸ್ಥಿಶೀರ್ಣಾನಿ ರಜ್ಜುವಸ್ತ್ರಾದಿಕಾನಿ ಚ ॥ ೪೭ ॥

ಧಾರಿಣೋ ನ ನಮೇದ್ವಿದ್ವಾನ್ ನಾಸನಂ ಚಾಪಿ ದಾಪಯೇತ್ ।
ಬ್ರಾಹ್ಮಣಾಸ್ಪ್ರಣಮೇದ್ವಿದ್ವಾನಾಸನಂ ಚಾಪಿ ದಾಪಯೇತ್ ॥ ೪೮ ॥

ಕೃತಾಂಜಲಿರುಪಾಸೀತ ಗಚ್ಛಂತಂ ಪೃಷ್ಠತೋನ್ವಿಯಾತ್ ।
ನ ಚಾಸೀತಾಸನೇ ಭಿನ್ನೇ ಭಿನ್ನಂ ಕಾಂಸ್ಯಂ ಚ ವರ್ಜಯೇತ್ ॥ ೪೯ ॥

---

೪೬. ರಜಸ್ವಲೆಯಾದ ಹೆಂಗಸನ್ನು ನೋಡುವುದು, ಮುಟ್ಟುವುದು, ಮಾತಾಡಿಸುವುದು ಇವೆಲ್ಲಾ ನಿಷೇಧವೆಂದು ಪ್ರಾಜ್ಞರಾದವರು ಭಾವಿಸುವರು. ನೀರಿನಲ್ಲಿ ಮೂತ್ರ ವಿಸರ್ಜನೆ, ಮಲವಿಸರ್ಜನೆ, ಮೈಥುನ ಇವನ್ನು ಮಾಡ ಬಾರದು.

೪೭-೪೮. ಮಲಮೂತ್ರಗಳನ್ನು ತುಳಿದು ನಿಂತುಕೊಳ್ಳಬಾರದು. ಇತರರು ಕೈಯಲ್ಲಿ ಕೇಶ, ಭಸ್ಮ, ಮಡಕೆಯಚೂರು, ಹೊಟ್ಟು, ಬೆಂಕಿಕೆಂಡ, ಅಸ್ಥಿ, ಶಿಥಿಲವಾದಹಗ್ಗ, ಬಟ್ಟೆ ಮೊದಲಾದುವನ್ನು ಹಿಡಿದಿರುವಾಗ ಪ್ರಾಜ್ಞನು ಅವರಿಗೆ ನಮಸ್ಕಾರ ಮಾಡಬಾರದು. ಆಗ ಅವರಿಗೆ ಉಪವೇಶನಾರ್ಥವಾದ ಆಸನವನ್ನು ಕೊಡಬಾರದು. ವಿದ್ವಾಂಸನಾದವನು ಬ್ರಾಹ್ಮಣೋತ್ತಮರು ಬಂದಾಗ ನಮಸ್ಕರಿಸಿ ಅವರಿಗೆ ಕೂತುಕೊಳ್ಳಲು ಆಸನವನ್ನು ಕೊಡಬೇಕು.

೪೯. ಬ್ರಾಹ್ಮಣನು ಮನೆಗೆಬಂದಾಗ ಅಂಜಲಿಬದ್ಧನಾಗಿ ಅವನ ಸೇವೆ ಮಾಡಬೇಕು. ಅವನು ತನ್ನ ಮನೆಯಿಂದ ಹೊರಡುವಾಗ ಸ್ವಲ್ಪ ದೂರದವರಗೆ ಅವನನ್ನು ಹಿಂಬಾಲಿಸಿ ಹೋಗಬೇಕು. ಯಾವಾಗಲೂ ಪೀಠದಲ್ಲಿ ಕುಳಿತು ಕೊಳ್ಳುವಾಗ ಧೃಢವಾಗಿದೆಯೇ ಎಂಬುದನ್ನು ನೋಡಿ ಕುಳಿತುಕೊಳ್ಳಬೇಕು. ಒಡೆದುಹೊದ (ಮುರಿದುಹೋದ) ಪೀಠದಲ್ಲಿ ಕುಳಿತುಕೊಳ್ಳಬಾರದು. ಒಡೆದು ಹೋದ ಕಂಚಿನ ಪಾತ್ರೆಯನ್ನು ಉಪಯೋಗಿಸಬಾರದು.

**ನಾಮುಕ್ತಕೇಶೈರ್ಭೋಕ್ತವ್ಯಂ ನ ನಗ್ನಃ ಸ್ನಾನಮಾಚರೇತ್ ।**
**ಸ್ವಪ್ತವ್ಯಂ ನೈವ ನಗ್ನೇನ ನ ಚೋಚ್ಛಿಷ್ಟಸ್ತು ಸಂವಿಶೇತ್ ॥ ೩೦ ॥**

**ಉಚ್ಛಿಷ್ಟೋ ನ ಸ್ಪೃಶೇಚ್ಛೀರ್ಷಂ ಸರ್ವೇ ಪ್ರಾಣಾಸ್ತದಾಶ್ರಯಾಃ ।**
**ಕೇಶಗ್ರಹಾನ್ಪ್ರಹಾರಾಂಶ್ಚ ಶಿರಸ್ಯೇತಾನಿ ವರ್ಜಯೇತ್ ॥ ೩೧ ॥**

**ನಾನ್ಯತ್ರ ಪುತ್ರಶಿಷ್ಯಾಭ್ಯಾಂ ಶಿಷಯಾ ತಾಡನಂ ಸ್ಮೃತಂ ।**
**ನ ಪಾಣಿಭ್ಯಾಂ ಸಂಹತಾಭ್ಯಾಂ ಕಂಡೂಯೇದಾತ್ಮನಃ ಶಿರಃ ॥ ೩೨ ॥**

**ನ ಚಾಭೀಕ್ಷ್ಣಂ ಶಿರಃಸ್ನಾನಂ ಕಾರ್ಯಂ ನಿಷ್ಕಾರಣಂ ನರೈಃ ।**
**ಅಪ್ರಶಸ್ತಂ ನಿಶಿ ಸ್ನಾನಂ ರಾಹೋರನ್ಯತ್ರ ದರ್ಶನಾತ್ ॥ ೩೩ ॥**

---

೩೦. ಶಿಖೆಯನ್ನು ಕಟ್ಟಿಕೊಳ್ಳದೆ ಬಿಚ್ಚಿಕೊಂಡು ಭೋಜನಮಾಡಬಾರದು. ಮೈಮೇಲೆ ಬಟ್ಟೆಯಿಲ್ಲದೆ ಬತ್ತಲೆಯಾಗಿ ಸ್ನಾನಮಾಡಬಾರದು. ಹಾಗೆಯೇ ಬತ್ತಲೆಯಾಗಿ ನಿದ್ದೆಮಾಡಬಾರದು. ಎಂಜಲಾದರೆ ಅದನ್ನು ತೊಳೆಯದೆ ಅಶುಚಿಯಾಗಿರುವ ಸ್ಥಿತಿಯಲ್ಲಿ ಮಲಗಬಾರದು.

೩೧. ಎಂಜಲು ಕೈಯಿಂದ ಉತ್ತಮಾಂಗವೆನಿಸಿದ ಶಿರಸ್ಸನ್ನು ಮುಟ್ಟಬಾರದು. ಎಲ್ಲಾ ಪ್ರಾಣಗಳೂ ಶಿರಸ್ಸನ್ನು ಆಶ್ರಯಿಸಿರುತ್ತವೆ. ಆದುದರಿಂದ ಯಾವಾಗಲೂ ಕೇಶಗ್ರಹಣ ಮಾಡಬಾರದು. ಮತ್ತು ಶಿರಸ್ಸಿನ ಮೇಲೆ ಪ್ರಹರಿಸಬಾರದು.

೩೨. ಪುತ್ರ, ಶಿಷ್ಯ ಇವರನ್ನು ಬಿಟ್ಟು ಇತರರನ್ನು ಸಣಬಿನಿಂದ ಹೊಸೆದ ಚಾವಟಿಯಿಂದ ಹೊಡೆಯಬಾರದು ಎರಡು ಕೈಗಳಲ್ಲೂ ಒಟ್ಟಿಗೆ ತಲೆಯನ್ನು ಕೆರೆಯಬಾರದು. (ಎಲ್ಲಾ ಬೆರಳುಗಳಿಂದಲೂ ತಲೆಯನ್ನು ಕೆರೆಯಬಾರದು.)

೩೩. ಮಾನವರು ಕಾರಣವಿಲ್ಲದೆ ಹೆಚ್ಚಾಗಿ ಶಿರಃಸ್ನಾನವನ್ನು ಮಾಡಬಾರದು. ಚಂದ್ರಗ್ರಹಣ ದರ್ಶನಕಾಲವನ್ನು ಬಿಟ್ಟು ಇತರ ಕಾಲದಲ್ಲಿ ರಾತ್ರಿಯ ವೇಳೆಯಲ್ಲಿ ಸ್ನಾನಮಾಡುವುದು ಅಷ್ಟು ಪ್ರಶಸ್ತವಲ್ಲ.

ನ ಭುಕ್ತ್ವೋತ್ತರಕಾಲಂ ಚ ನ ಗಂಭೀರ ಜಲಾಶಯೇ ।
ಶಿರಸ್ನಾನಂ ತು ತೈಲೇನ ನಾಂಗಂ ಕಂಚಿದುಪಸ್ಪೃಶೇತ್ ॥ ೫೪ ॥

ತಿಲಪಿಷ್ಟಂ ಚ ನಾಶ್ನೀಯಾತ್ತಥಾಸ್ಯಾಯುರ್ನ ಹೀಯತೇ ।
ದುಷ್ಕೃತಂ ನ ಗುರೋರ್ಬ್ರೂಯಾತ್ಕ್ರುದ್ಧಂ ಚೈನಂ ಪ್ರಸಾದಯೇತ್॥

ಪರೀವಾದಂ ನ ಶೃಣುಯಾದನ್ಯೇಷಾಮಪಿ ಜಲ್ಪತಾಂ ।
ಸದಾನುಪಹತಸ್ತಿಷ್ಠೇತ್ಪ್ರಶಸ್ತಾಶ್ಚ ತಥೌಷಧೀಃ ॥ ೫೬ ॥

ಗಾರುಡಾನಿ ಚ ರತ್ನಾನಿ ಬಿಭೃಯಾತ್ಪ್ರಯತೋ ನರಃ
ಸುಸ್ನಿಗ್ಧಾಮಲಕೇಶಶ್ಚ ಸುಗಂಧಿಶ್ಚಾರುವೇಷಧೃಕ್ ॥ ೫೭ ॥

---

೫೪. ಊಟವಾದ ಮೇಲೆ ಸ್ನಾನಮಾಡಬಾರದು ಮತ್ತು ಆಳವಾದ ನೀರುಳ್ಳ ಜಲಾಶಯದಲ್ಲಿ ಸ್ನಾನಮಾಡಬಾರದು. ಶಿರಃಸ್ನಾನ ಮಾಡಬೇಕಾದಾಗ ತೈಲವನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ಇತರ ಅಂಗಗಳನ್ನು ಸ್ಪರ್ಶ ಮಾಡಬಾರದು.

೫೫. ಯಾವಾಗಲೂ ತಿಲಪಿಷ್ಟ (ಎಳ್ಳಿನ ಚಿಗುಳಿಯನು) ವನ್ನು ತಿನ್ನಲೇಬಾರದು. ಆರೀತಿ ನಡೆಯುವವನಿಗೆ ಆಯುಸ್ಸು ಕ್ಷೀಣವಾಗುವುದಿಲ್ಲ. ಒಂದು ವೇಳೆ ಅಕಸ್ಮಾತ್ ಗುರುವು ಅಕಾರ್ಯವನ್ನು ಆಚರಿಸಿದ್ದರೂ ಅದನ್ನು ಪ್ರಕಟಗೊಳಿಸಬಾರದು. ಗುರುವಿಗೆ ಆಗ್ರಹಬಂದ ಕಾಲದಲ್ಲಿ ಆ ಗುರುವನ್ನು ಸಮಾಧಾನಪಡಿಸಬೇಕು.

೫೬. ಇತರರು ತನ್ನ ಇದಿರಿಗೆ ಗುರುನಿಂದೆಯನ್ನು ಮಾಡುತ್ತಿದ್ದರೆ ತಾನು ಅದನ್ನು ಕೇಳುತ್ತಿರಬಾರದು. ಯಾವಾಗಲೂ ಹಿಂಸಕವಸ್ತುರಹಿತ ನಾಗಿರಬೇಕು. ಮತ್ತು ಪ್ರಶಸ್ತವಾದ ಔಷಧದ್ರವ್ಯಗಳನ್ನು ಧರಿಸಬೇಕು.

೫೭. ಯಾವಾಗಲೂ ಶುಚಿಯಾಗಿರುತ್ತಾ ಗರುಡಮಣಿ ಮುಂತಾದ್ದನ್ನು ಧರಿಸಬೇಕು. ಮತ್ತು ನುಣುಪಾಗಿಯೂ ನಿರ್ಮಲವಾಗಿಯೂ ಇರುವಂತೆ ತಲೆಯ ಕೂದಲನ್ನು ನೇರ್ಪಡಿಸಿಕೊಳ್ಳಬೇಕು. ಸುವಾಸನಾ ದ್ರವ್ಯಲೇಪನದಿಂದ ಸುಗಂಧ ಶರೀರವುಳ್ಳವನಾಗಿ ಮನೋಹರವಾದ ಉಡುಪನ್ನು ಧರಿಸಿಕೊಂಡಿರಬೇಕು.

ಸಿತಾಃ ಸುಮನಸೋ ಹೃದ್ಯಾ ಬಿಭೃಯಾಚ್ಚ ನರಸ್ಸದಾ ।
ಕಿಂಚಿತ್ಪರಸ್ವಂ ನ ಹರೇನ್ನಾಲ್ಪಮಪ್ಯಪ್ರಿಯಂ ವದೇತ್ ॥ ೫೮ ॥

ಪ್ರಿಯಂ ಚ ನಾನೃತಂ ಬ್ರೂಯಾನ್ನಾನ್ಯದೋಷಾನುದೀರಯೇತ್ ।
ನಾನ್ಯಾಶ್ರಿತಂ ತಥಾ ವೈರಂ ರೋಚಯೇತ್ಪುರುಷೇಶ್ವರಃ ॥ ೫೯ ॥

ನ ದುಷ್ಟಯಾನಮಾರೋಹೇತ್ಕೂಲಚ್ಛಾಯಾಂ ನ ಸಂಶ್ರಯೇತ್ ।
ವಿದ್ವಿಷ್ಟಪತಿತೋನ್ಮತ್ತಬಹುವೈರಾದಿಸಂಕರೈಃ ॥ ೬೦ ॥

ಬಂಧಕೀ ಬಂಧಕೀಭರ್ತೃಕ್ಷುದ್ರಾನೃತಕಥೈಃ ಸಹ ।
ತಥಾತಿವ್ಯಯಶೀಲೈಶ್ಚ ಪರೀವಾದರತೈಃ ಶಠೈಃ ॥ ೬೧ ॥

---

೫೮. ಪುರುಷನು ಯಾವಾಗಲೂ ಮನೋಹರವಾಗಿಯೂ ಬೆಳ್ಳಗೂ ಇರುವ ಪುಷ್ಪಗಳನ್ನು ಧರಿಸಬೇಕು. ಪರರ ದ್ರವಕ್ಕೆ ಸ್ವಲ್ಪವೂ ಆಶೆಪಡಬಾರದ. ಮತ್ತು ಲೇಶವನ್ನೂ ಅಪಹರಿಸಬಾರದು. ಮತ್ತು ಅಪ್ರಿಯವಚನಗಳನ್ನು ಸ್ವಲ್ಪವೂ ಆಡಬಾರದು.

೫೯. ಪ್ರಿಯವಾದ ವಿಚಾರವಾಗಿದ್ದರೂ ಅದು ಸುಳ್ಳಾಗಿದ್ದರೆ ಅಂತಹದನ್ನು ಹೇಳಬಾರದು ಪರರ ದೋಷಗಳನ್ನು ಉದ್ಘಾಟಿಸಬಾರದು. ಜನಾಧಿಪನಾಗಿರುವೆನೆಂಬ ಶೇಂಕಾರದಿಂದ ಯಾರ ಸಂಗಡಲೂ ವೈರವನ್ನು ಬಯಸಬಾರದು.

೬೦–೬೧. ದುಷ್ಟವಾದ ಯಾನವನ್ನು ಹತ್ತಬಾರದು. ನದಿ ಮೊದಲಾದುವುಗಳ ದಡವಲ್ಲಿರುವ ನೆಳಲನ್ನು ಆಶ್ರಯಿಸಿ ಕುಳ್ಳಿರಬಾರದು. ಅಯ್ಯಾ ರಾಜನೇ ಕೇಳು! ವಿಶೇಷತಃ ನಮಗೆ ಕೆಡುಕುಮಾಡುವ ಪ್ರಾಣಿಗಳು, ಪತಿತನಾದವನು, ಹುಚ್ಚ, ಮಹಾದ್ವೇಷಿ ಜಾತಿಸಂಕರಮಾಡುವವನು, ವ್ಯಭಿಚಾರಿಣಿ, ವ್ಯಭಿಚಾರಿಣಿಯಪತಿ, ನೀಚಮನುಷ್ಯ, ಸುಳ್ಳುಗಾರ, ಮತ್ತು ಮಿತಿಮೀರಿ ದುಂದುವೆಚ್ಚಮಾಡುವವನು, ಪರರನ್ನು ಸರ್ವದಾ ದೂಷಿಸುವ ಸ್ವಭಾವದವನು, ಮಹಾಧಾರ್ಷ್ಟಿಕವುಳ್ಳವನು ಇಂತಹವರ ಸಂಗಡ ತಿಳಿದವನು ಸ್ನೇಹಬೆಳಸಬಾರದು.

ಬುಧೋ ಮೈತ್ರೀಂ ನ ಕುರ್ವೀತ ನೈಕಃ ಪಂಥಾನಮಾಶ್ರಯೇತ್ ।
ನಾವಗಾಹೇಜ್ಜಲೌಘಸ್ಯ ವೇಗಮುಗ್ರೇ ನರೇಶ್ವರ ॥ ೬೨ ॥

ಪ್ರದೀಪ್ತಂ ವೇಶ್ಮ ನ ವಿಶೇನ್ನಾರೋಹೇಚ್ಛಿಖರಂ ತರೋಃ ।
ನ ಹುಂಕುರ್ಯಾಚ್ಛವಂ ಚೈವ ಶವಗಂಧೋ ಹಿ ಸೋಮಜಃ ॥ ೬೩ ॥

ನ ಕುರ್ಯಾದ್ದಂತಸಂಘರ್ಷಂ ನ ಕುರ್ಯಾಚ್ಚಲನಾಸಿಕಾಂ।
ನಾಸಂಸ್ಪೃಷ್ಟಮುಖೋ ಬ್ರೂಯಾಚ್ಛ್ವಾಸಕಾಸೌ ಚ ವರ್ಜಯೇತ್ ॥

ನೋಚ್ಚೈರ್ಹಸೇತ್ಸಶಬ್ದಂ ಚ ನ ಮುಂಚೇತ್ಪವನಂ ಬುಧಃ ।
ನಖಾನ್ನ ವಾದಯೇಚ್ಛಿಂದ್ಯಾನ್ನ ನಖೈಶ್ಚ ಮಹೀಂ ಲಿಖೇತ್ ॥ ೬೫ ॥

---

೬೨. ಪ್ರಯಾಣ ಮಾಡಬೇಕಾಗಿಬಂದರೆ ಒಂಟಿಯಾಗಿ ದಾರಿಪ್ರಯಾಣ ಮಾಡಬಾರದು. ಮತ್ತು ನೀರಿನಲ್ಲಿ ಇಳಿದು ಪ್ರವಾಹಕ್ಕೆ ಇದಿರಾಗಿ ಹೋಗ ಬಾರದು.

೬೩. ಬೆಂಕಿಹತ್ತಿಕೊಂಡು ಸುಟ್ಟುಹೋಗುತ್ತಿರುವ ಮನೆಗೆ ಪ್ರವೇಶಿಸ ಬಾರದು. ಮರಹತ್ತಬೇಕಾದರೆ ಅತಿ ತುದಿಗೊಂಬೆಗೆ ಹತ್ತಬಾರದು. ಶವವನ್ನು ನೋಡಿ ಹುಂಕರಿಸಬಾರದು. ಏತಕ್ಕೆಂದರೆ ಶವಗಂಧವು ಚಂದ್ರನಿಂದ ಹುಟ್ಟಿ ದುದು.

೬೪ ಹಲ್ಲುಕಡಿಯಬಾರದು. ಮತ್ತು ಮೂಗನ್ನು ಕುಣಿಸಬಾರದು. ಬಾಯಿಗೆ ಕೈಯನ್ನು ಅಡ್ಡವಾಗಿ ಹಿಡಿದುಕೊಳ್ಳದೆ ಮಾತಾಡಬಾರದು ಅತಿ ಯಾಗಿ ಶ್ವಾಸಬಿಡುವುದು, ಕೆಮ್ಮುವುದು, ಇವನ್ನು ಸಾಧ್ಯವಾದಮಟ್ಟಿಗೆ ಬಿಡ ಬೇಕು.

೬೫. ಶಬ್ದಮಾಡಿಕೊಂಡು ಗಟ್ಟಿಯಾಗಿ (ಗಹಗಹಿಸಿ) ನಗಬಾರದು. ಪ್ರಾಜ್ಞನು ಶರೀರದಿಂದ ಪ್ರಾಣವಾಯು ಅತಿಯಾಗಿ ಹೊರಕ್ಕೆ ಹೋಗುವಂತೆ ಬಿಡಬಾರದು. ತನ್ನ ಉಗುರುಗಳನ್ನು ತಾನೇ ಕತ್ತರಿಸಬಾರದು. ಉಗುರು ಗಳಿಂದ ಭೂಮಿಯನ್ನು ಕೆರೆಯಬಾರದು.

ನಶ್ಮಶ್ರು ಭಕ್ಷಯೇಚ್ಚೈವ ನ ಲೋಷ್ಟಾನಿ ಚ ಮರ್ದಯೇತ್ ।
ಪಾದೇನ ನಾಕ್ರಮೇತ್ಪಾದಂ ನ ಪೂಜ್ಯಾಭಿಮುಖಂ ನಯೇತ್ ॥೬೬॥

ನೋಚ್ಚಾಸನೇ ಸಮಾಸೀತ ಗುರೋರಗ್ರೇ ಕದಾಚನ ।
ತಸ್ಮಾತ್ಸದಾಚಾರಪರೋ ಭವೇತ್ಕಾಮಚರೋ ನ ಹಿ ॥ ೬೭ ॥

ಲೋಕದ್ವಯೇ ಶುಭಂ ಪ್ರೇಪ್ಸುಃ ಪ್ರೇತ್ಯ ಸ್ವರ್ಗೇ ಮಹೀಯತೇ ।
ಚತುಷ್ಪಥಂ ಚೈತ್ಯತರುಂ ಶ್ಮಶಾನೋಪವನಾನಿ ಚ ॥ ೬೮ ॥

ದುಷ್ಟಸ್ತ್ರೀಸನ್ನಿಕರ್ಷಂ ಚ ವರ್ಜಯೇನ್ನಿಶಿ ಸರ್ವದಾ ।
ಗ್ರೀಷ್ಮವರ್ಷಾಸು ಚ ಚ್ಛತ್ರೀ ಮೌನೀ ರಾತ್ರೌ ವನೇಷು ಚ ॥ ೬೯ ॥

---

೬೬. ತನ್ನ ಮೀಸೆಯಕೂದಲು, ಗಡ್ಡದಕೂದಲು ಇವನ್ನು ಕಚ್ಚುತ್ತಿರಬಾರದು. ಮಣ್ಣುಹೆಂಟೆಗಳನ್ನು ಪುಡಿಮಾಡಬಾರದು. ಕಾಲಿನಿಂದ ತುಪ್ಪಳಿಸಿ ಹಾರಬಾರದು. ಪೂಜ್ಯರಿಗೆ ಅಭಿಮುಖವಾಗಿ ಕಾಲನ್ನು ನೀಡಬಾರದು.

೬೭. ಗುರುವಿನ ಸಮ್ಮುಖದಲ್ಲಿ ಎಂದೂ ಉಚ್ಚವಾದ ಪೀಠದಲ್ಲಿ ಕುಳ್ಳಿರಬಾರದು. ಈ ಪ್ರಕಾರ ಎಲ್ಲ ಮನುಷ್ಯರೂ ಸದಾಚಾರ ಪರರಾಗಿ ಇರಬೇಕು. ಸ್ವೇಚ್ಛಾಚಾರ ಪರರಾಗಿ ಇರಬಾರದು.

೬೮–೬೯. ಇಹಪರಗಳೆರಡರಲ್ಲೂ ತನಗೆ ಒಳ್ಳೆಯದಾಗಬೇಕೆಂಬ ಅಭಿಲಾಷೆಯುಳ್ಳವನು ಹೀಗೆ ಸದಾಚಾರ ಸಂಪನ್ನನಾಗಿರಬೇಕು. ಸದಾಚಾರವಂತನಾಗಿದ್ದವನು ಮೃತನಾದರೆ ಸ್ವರ್ಗದಲ್ಲಿ ಸಹ ಪೂಜಿತನಾಗುತ್ತಾನೆ ಈ ಲೋಕದಲ್ಲಿ ಅವನಿಗೆ ಗೌರವವೂ ಸುಖವೂ ಬೇಕಾದಷ್ಟು ಇರುವುದು. ನಾಲ್ಕುರಸ್ತೆ ಕೂಡಿವ ಚೌಕದಲ್ಲಿ (ಅಶ್ವತ್ಥ) ಚೈತ್ಯವೃಕ್ಷದ ಅಧೋಭಾಗದಲ್ಲಿ, ಸ್ಮಶಾನದಲ್ಲಿ, ಉದ್ಯಾನವನದಲ್ಲಿ,ದುಷ್ಟಸ್ತ್ರೀಯ ಸಾಮೀಪ್ಯದಲ್ಲಿ ತಳುಗುವುದನ್ನು ರಾತ್ರಿಯವೇಳೆ ಯಾವಾಗಲೂ ತ್ಯಜಿಸಬೇಕು. ಬಿಸಿಲುಕಾಲ ಮಳೆಗಾಲಗಳಲ್ಲಿ ಛತ್ರಿಯನ್ನು ಹಿಡಿದುಕೊಂಡು ಸಂಚಾರಮಾಡಬೇಕು. ರಾತ್ರಿಯವೇಳೆ ಕಾಡಿನಲ್ಲಿರಬೇಕಾಗಿ ಬಂದರೆ ಮೌನವಾಗಿರಬೇಕು.

ಕೇಶಾಸ್ಥಿಕಂಟಕಾಮೇಧ್ಯಬಲಿಭಸ್ಮತುಷಾಂಸ್ತಥಾ ।
ಸ್ನಾನಾರ್ದ್ರಾಂ ಧರಣೀಂ ಚೈವ ದೂರತಃ ಪರಿವರ್ಜಯೇತ್ ॥ ೭೦ ॥

ಪಂಥಾ ದೇಯೋ ಬ್ರಾಹ್ಮಣೇಭ್ಯೋ ರಾಜಭ್ಯಃ ಸ್ತ್ರೀಭ್ಯ ಏವ ಚ ।
ವಿದ್ಯಾಧಿಕಸ್ಯ ಗುರ್ವಿಣ್ಯಾ ಭಾರಾರ್ತಸ್ಯ ಮಹೀಯಸಃ ॥ ೭೧ ॥

ಮೂಕಾಂಧಬಧಿರಾಣಾಂ ಚ ಮತ್ತಸ್ಯೋನ್ಮತ್ತಕಸ್ಯ ಚ ।
ಉಪಾನದ್ವಸ್ತ್ರಮಾಲ್ಯಂ ಚ ಧೃತಮನ್ಯೈರ್ನ ಧಾರಯೇತ್ ॥ ೭೨ ॥

ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ ।
ಯಾದೃಶಂ ಪುರುಷಸ್ಯೇಹ ಪರದಾರೋಪಸೇವನಂ ॥ ೭೩ ॥

ನ ಚೇರ್ಷ್ಯಾ ಸ್ತ್ರೀಷು ಕರ್ತವ್ಯಾ ದಾರಾ ರಕ್ಷ್ಯಾಃ ಪ್ರಯತ್ನತಃ ।
ಅನಾಯುಷ್ಯಾ ಭವೇದೀರ್ಷ್ಯಾ ತಸ್ಮಾತ್ತಾಂ ಪರಿವರ್ಜಯೇತ್ ॥೭೪॥

---

೭೦. ಕೂದಲು, ಎಲುಬು, ಮುಳ್ಳು, ಅಮೇಧ್ಯ, ಭೂತಬಲಿ, ಭಸ್ಮ, ಹೊಟ್ಟು ಇವು ಇರುವ ಜಾಗ, ಮತ್ತು ಸ್ನಾನಮಾಡಿದ ನೀರಿನಿಂದ ಒದ್ದೆಯಾದ ಸ್ಥಳ ಇವನ್ನು ದೂರದಲ್ಲಿ ಬಿಡಬೇಕು.

೭೧. ಬ್ರಾಹ್ಮಣರು, ರಾಜರು, ಸ್ತ್ರೀಯರು, ವಿದ್ವಾಂಸರು, ಗರ್ಭಿಣಿ, ಹೊರೆ ಹೊತ್ತುಕೊಂಡು ಬಳಲಿರುವರು, ಪೂಜ್ಯರು ಇವರು ಕಾಲುದಾರಿಯಲ್ಲಿ ಎದುರಾಗಿ ಬರುತ್ತಿರುವಾಗ ನಾವು ಅವರಿಗೆ ದಾರಿಯನ್ನು ಬಿಟ್ಟುಕೊಡಬೇಕು.

೭೨. ಮೂಗ, ಕುರುಡ, ಕಿವುಡ, ಮದ್ಯಪಾನಮಾಡಿ ಮದವೇರಿದವನು, ಹುಚ್ಚ ಇವರುಗಳಿಗೂ ಸಹ ದಾರಿಯನ್ನು ಬಿಟ್ಟುಕೊಡಬೇಕು. ಇತರರು ಧರಿಸಿದ ಜೋಡು, ಬಟ್ಟೆ, ಪುಷ್ಪ ಇವುಗಳನ್ನು ತಾನು ಧರಿಸಬಾರದು.

೭೩. ಲೋಕದಲ್ಲಿ ಮಾನವನಿಗೆ ಪರಸ್ತ್ರೀಸಂಗದಿಂದ ಉಂಟಾಗುವಷ್ಟು ಆಯುಃಕ್ಷೀಣತೆಯು ಮತ್ತೆ ಯಾವುದರಿಂದಲೂ ಆಗುವುದಿಲ್ಲ. ಪರಸ್ತ್ರೀಸಂಗವು ಅಂಥಾ ಘೋರವಿಪತ್ಕರವು.

೭೪. ಯಾವಾಗಲೂ ಸ್ತ್ರೀಯರ ವಿಷಯದಲ್ಲಿ ಈರ್ಷ್ಯೆಯನ್ನು ತೋರಿಸಬಾರದು. ತಮ್ಮ ಹೆಂಡಿರನ್ನು ಪ್ರಯತ್ನಪಟ್ಟು ಚೆನ್ನಾಗಿ ಕಾಪಾಡಿಕೊಳ್ಳಬೇಕು. ಈರ್ಷ್ಯೆಯು ಆಯುರ್ಹಾನಿಕರವಾದುದರಿಂದ ಅದನ್ನು ಬಿಡಬೇಕು.

**ಮೂರ್ಖೋನ್ಮತ್ತವ್ಯಸನಿನೋ ವಿರೂಪಾನ್ಮಾನಿನಸ್ತಥಾ ।**
**ಹೀನಾಂಗಾನಧಿಕಾಂಗಾಂಶ್ಚ ವಿದ್ಯಾಹೀನಾಂಶ್ಚ ನಾಕ್ಷಿಪೇತ್ ॥ ೭೫ ॥**

**ಪಾನೀಯಸ್ಯ ಕ್ರಿಯಾ-ನಕ್ತಂ ತಥೈವ ದಧಿಸಕ್ತವಃ ।**
**ವರ್ಜನೀಯಾ ಮಹಾರಾಜ ನಿಶೀಥೇ ಭೋಜನಕ್ರಿಯಾಃ ॥ ೭೬ ॥**

**ನೋರ್ಧ್ವಜಾನುಶ್ಚಿರಂ ತಿಷ್ಠೇನ್ನ ರಹಸ್ಯ ಪರೋಭವೇತ್ ।**
**ತದ್ವನ್ನೋಪವಿಶೇತ್ಪ್ರಾಜ್ಞಃ ಪಾದೇನಾಕ್ರಮ್ಯ ವಾಸನಂ ॥ ೭೭ ॥**

**ನ ಚಾತಿರಕ್ತವಾಸಾಃ ಸ್ಯಾಚ್ಚಿತ್ರಾಸಿತಧರೋಽಪಿ ವಾ ।**
**ನ ಚ ಕುರ್ಯಾದ್ವಿಪರ್ಯಾಸಂ ವಾಸಸೋ ನ ವಿಭೂಷಣೇ ॥ ೭೮ ॥**

೭೫. ಮೂರ್ಖ, ಹುಚ್ಚ, ಯಾವುದರಲ್ಲಿಯಾಗಲಿ ಅತಿ ಚಪಲಸ್ವಭಾವವುಳ್ಳವರು, ಕುರೂಪಿ, ಗರ್ವಿಷ್ಟ, ಅಂಗಹೀನರು, ಅಧಿಕಾಂಗವುಳ್ಳವರು ವಿದ್ಯಾಹೀನರು ಇಂಥವರನ್ನು ನಿಂದಿಸಬಾರದು.

೭೬. ಅಯ್ಯಾ ಮಹಾರಾಜನೇ! ಕೇಳು ನಕ್ತಭೋಜನದಲ್ಲಿ ಪಾನೀಯಗಳು ದಧಿಖಂಡ, ಇವುಗಳನ್ನು ಪಯೋಗಿಸಬಾರದು. ಅರ್ಧರಾತ್ರಿಯಂತಹ ಹೊತ್ತುಮಿಸಾರಿದ ವೇಳೆಯಲ್ಲಿ ಭೋಜನ ಮಾಡಬಾರದು.

೭೭. ಮೊಣಕಾಲನ್ನು ಮೇಲಕ್ಕೆತ್ತಿಕೊಂಡು ಬಹುಕಾಲ ನಿಲ್ಲಬಾರದು. ಯಾವಾಗಲೂ ರಹಸ್ಯಪರನಾಗಿಯೇ ಇರಬಾರದು. ಮತ್ತು ಕಾಲಿನಿಂದ ಪೀಠವನ್ನು ತುಳಿದು ಅದರ ಮೇಲೆ ಕುಳಿತುಕೊಳ್ಳಬಾರದು.

೭೮. ಬಹಳ ಕೆಂಪಗಿರುವ ವಸ್ತ್ರವನ್ನು ಧರಿಸಬಾರದು. ಮತ್ತು ನಾನಾ ವರ್ಣದ ವಸ್ತ್ರವನ್ನಾಗಲಿ ಅಚ್ಚಕಪ್ಪು ಬಟ್ಟೆಯನ್ನಾಗಲಿ ಧರಿಸಬಾರದು. ಯಾವಾಗಲೂ ತಾನು ಸಾಮಾನ್ಯವಾಗಿ ಧರಿಸುತ್ತಿದ್ದ ವಸ್ತ್ರಾಲಂಕಾರಗಳನ್ನು ಬಿಟ್ಟು ಬೇರೆ ವಸ್ತ್ರಾಲಂಕಾರಗಳಿಗೆ ಬದಲಾಯಿಸಬಾರದು.

ಸ್ತ್ರೀಂ ಕೃಶಾಂ ನಾವಜಾನೀಯಾದ್ದೀರ್ಘಮಾಯುರ್ಜಿಜೀವಿಷುಃ ।
ಬ್ರಾಹ್ಮಣಂ ಕ್ಷತ್ರಿಯಂ ಸರ್ಪಂ ಸರ್ವೇಹ್ಯಾಶೀವಿಷೋಪಮಾಃ ॥೭೯॥

ಹನ್ಯಾದಾಶೀವಿಷಃ ಕ್ರುದ್ಧೋ ಯಾವತ್ಸ್ಪೃಶತಿ ದಂಷ್ಟ್ರಯಾ ।
ಕ್ಷತ್ರಿಯೋಽಪಿ ದಹೇತ್ಕ್ರುದ್ಧೋ ಯಾವತ್ಪಶ್ಯತಿ ತೇಜಸಾ ॥ ೮೦ ॥

ಬ್ರಾಹ್ಮಣಃ ಸಕುಲಂ ಹನ್ಯಾದ್ಧ್ಯಾನೇನಾವೇಕ್ಷಿತೇನ ಚ ।
ನಾತಿಕಲ್ಯಂ ನಾತಿಸಾಯಂ ನ ಚ ಮಧ್ಯಂದಿನೇ ತಥಾ ॥ ೮೧ ॥

ನಾಜ್ಞಾತೈಃ ಸಹ ಗಂತವ್ಯಂ ನೈಕೇನ ಬಹುಭಿಃ ಸಹ ।
ನಾರುಂತುದಃ ಸ್ಯಾನ್ನ ಪರೋಕ್ಷವಾದೀ ನ ಸಹೀ ನತಃ ॥ ೮೨ ॥

---

೭೯. ಬಹುಕಾಲ ಬಾಳಬೇಕೆಂಬ ಅಪೇಕ್ಷೆಯುಳ್ಳವನು ಮೊದಲೇ ಕೃಶಳಾದ ಸ್ತ್ರೀಯನ್ನು ಅವಮಾನಪಡಿಸಬಾರದು. ಹಾಗೆಯೇ ಯಾವ ಬ್ರಾಹ್ಮಣರನ್ನಾಗಲಿ ಕ್ಷತ್ರಿಯರನ್ನಾಗಲಿ ಅಪಮಾನಪಡಿಸಬಾರದು. ಏಕೆಂದರೆ ಅವರು ಸರ್ಪದಂಥವರು. ಬಹುಕಾಲ ಸಾಧಿಸಿಕೊಂಡಿದ್ದು ತಕ್ಕ ಪ್ರತೀಕಾರಮಾಡದೆ ಎಂದಿಗೂ ಬಿಡುವುದಿಲ್ಲ.

೮೦. ರೇಗಿದ ಸರ್ಪವು ಹಲ್ಲಿನಿಂದ ಕಡಿದು ಮನುಷ್ಯನನ್ನು ಕೊಲ್ಲುವುದು. ಹಾಗೆ ಕ್ಷತ್ರಿಯನು ಕೋಪಗೊಂಡರೆ ಮಾನವನನ್ನು ತನ್ನ ಕ್ಷಾತ್ರತೇಜಸ್ಸಿನಿಂದ ದರ್ಶನಮಾತ್ರದಿಂದಲೇ ಸುಟ್ಟುಬಿಡುತ್ತಾನೆ.

೮೧. ಕ್ರುದ್ಧನಾದ ಬ್ರಾಹ್ಮಣನು ಧ್ಯಾನಮಹಿಮೆಯಿಂದಲೂ, ಕ್ರೂರವಾಗಿ ದೃಷ್ಟಿಬೀರುವುದರಿಂದಲೂ ಮಾನವನ ಕುಲವನ್ನೇ ಕ್ಷಯಮಾಡಿಬಿಡುವುದಕ್ಕೆ ಸಮರ್ಥನಾಗುವನು. ಆದ್ದರಿಂದ ಅವರಿಗೆ ಅವಮಾನಪಡಿಸಬಾರದು.

೮೨. ಪರಿಚಿತರಲ್ಲದ ಬಹು ಜನರ ಜತೆಯಲ್ಲಿ ತಾನೊಬ್ಬನು ಸೇರಿಕೊಂಡು ಅತಿ ಬೆಳಗಿನಜಾವದಲ್ಲಿಯೂ ಅತಿ ಸಂಜೆಯಾದ ಮೇಲೆಯೂ ಹಾಗೆಯೇ ಮಟಮಟ ಮಧ್ಯಾಹ್ನಕಾಲದಲ್ಲೂ ಪ್ರಯಾಣಮಾಡಬಾರದು. ಇತರರಿಗೆ ಮರ್ಮಭೇದವಾಗುವಂತೆ ಮಾತಾಡಬಾರದು. ಇತರರ ವಿಷಯವನ್ನು ಪರೋಕ್ಷದಲ್ಲಿ ಹೇಳಬಾರದು. ಪರೋಕ್ಷವಾದವನ್ನು ಕೇಳಿ ಕುಗ್ಗಲೂಬಾರದು.

**ರೋಹತೇ ಚಾಗ್ನಿನಾ ದಗ್ಧಂ ವನಂ ಪರುಶುನಾ ಹತಂ ।**
**ವಚೋ ದುರುಕ್ತಬೀಭತ್ಸಂ ನ ಸಂರೋಹತಿ ಚಾಶತಂ ॥ ೮೩ ॥**

**ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಂ ।**
**ದ್ವೇಷದಂಭಾದಿಮಾನಾಂ ಶ್ಚ ಕ್ಲೈಬ್ಯಂ ಪರಿವರ್ಜಯೇತ್ ॥ ೮೪ ॥**

**ನ ಬ್ರಾಹ್ಮಣಂ ಪರಿವದೇನ್ನ ನಕ್ಷತ್ರಾಣಿ ದರ್ಶಯೇತ್ ।**
**ತಿಥಿಂ ಪಕ್ಷಸ್ಯ ನ ಬ್ರೂಯಾದ್ಯಯಾಸ್ಯಾಯುರ್ನ ರಿಷ್ಯತೇ ॥ ೮೫ ॥**

**ತೇಜೋ ನಿಷ್ಠೀವ್ಯ ವಾಸಶ್ಚ ಪರಿಧಾಯಾಚಮೇದ್ಬುಧಃ ।**
**ಜಿತಾಮಿತ್ರೋ ನೃಪೋ ಯಶ್ಚ ಬಲವಾನ್ಕರ್ಮತತ್ಪರಃ ॥ ೮೬ ॥**

---

೮೩. ಬೆಂಕಿಯಿಂದ ದಹಿಸಿಹೋದ ಕಾಡು ಪುನಃ ಬೆಳೆಯುತ್ತದೆ. ಕೊಡಲಿಯಿಂದ ಕಡಿದ ಮರವು ತಿರುಗಿ ಚಿಗುರುತ್ತದೆ. ಆದರೆ ಮನಸ್ಸಿಗೆ ಅಸಹ್ಯವನ್ನುಂಟುಮಾಡುವ ದುರ್ವಚನವು ಕಿವಿಗೆ ಬಿದ್ದಿತೆಂದರೆ ನೂರುವರ್ಷ ನಿರೀಕ್ಷಿಸಿದರೂ ಪುನಃ ಪೂರ್ವದಂತೆ ಮನಶ್ಶುದ್ಧಿ ಅಂಕುರಿಸುವುದೇ ಇಲ್ಲ.

೮೪. ದೇವರಿಲ್ಲ, ಪರಲೋಕವಿಲ್ಲ ಎಂಬ ನಾಸ್ತಿಕವಾದ, ವೇದನಿಂದೆ, ದೇವನಿಂದೆ, ದ್ವೇಷ, ದಂಭ, ಗರ್ವ, ನಪುಂಸಕತ್ವ (ಹೇಡಿತನ), ಅಧೈರ್ಯ ಇವುಗಳನ್ನೆಲ್ಲಾ ಬಿಡಬೇಕು.

೮೫. ಬ್ರಾಹ್ಮಣರನ್ನು ನಿಂದಿಸಬಾರದು. ನಕ್ಷತ್ರಗಳನ್ನು ನಿರ್ದೇಶಿಸಿ ತೋರಿಸಬಾರದು. ಪಕ್ಷದ ತಿಥಿಗಳನ್ನು ಹೇಳಬಾರದು. ಈ ನಿಯಮವನ್ನು ಪರಿಪಾಲಿಸುವುದರಿಂದ ಅವನ ಆಯುಸ್ಸು ಎಂದಿಗೂ ಕ್ಷೀಣವಾಗುವುದಿಲ್ಲ.

೮೬. ಪ್ರಾಜ್ಞನಾದವನು ,ರೇತಸ್ಸನ್ನು ವಿಸರ್ಜಿಸಿದನಂತರದಲ್ಲೂ ವಸ್ತ್ರಧಾರಣ ಮಾಡಿದ ಮೇಲೂ ಶುದ್ಧಾಚಮನಮಾಡಬೇಕು. ಶತ್ರುಗಳನ್ನು ಗೆದ್ದು ಬಲಶಾಲಿಯಾಗಿ ಕಾರ್ಯತತ್ಪರನಾಗಿರುವಂತಹ ರಾಜನ ಆಳ್ವಿಕೆಗೆ ಒಳಪಟ್ಟ ದೇಶದಲ್ಲೇ ಪ್ರಾಜ್ಞನು ವಾಸಿಸುವನು.

ತತ್ರ ನಿತ್ಯಂ ವಸೇತ್ಪ್ರಾಜ್ಞಃ ಕೃತಕೃತ್ಯೇ ಪತೌ ಸುಖಂ ।
ಪೌರಾಃ ಸುಸಂಹತಾ ಯತ್ರ ಸತತನ್ಯಾಯವರ್ತಿನಃ ॥ ೮೭ ॥

ಯತ್ರಸ್ತ್ರಿಯೋಽಮತ್ಸರಿಣ್ಯಸ್ತತ್ರ ವಾಸಃ ಸುಖೋದಯಃ ।
ಯಸ್ಮಿನ್ ಕೃಷೀವಲಾ ರಾಷ್ಟ್ರೇ ಪ್ರಾಯಶೋ ನಾತಿಭಾಷಿಣಃ ॥೮೮॥

ಯತ್ರೌಷಧಾನ್ಯಶೇಷಾಣಿ ವಸೇತ್ತತ್ರ ವಿಚಕ್ಷಣಃ ।
ತತ್ರ ರಾಜನ್ನವಸ್ತವ್ಯಂ ಯತ್ರೈತತತ್ರಿತಯಂ ಸದಾ ॥ ೮೯ ॥

ಜಿಗೀಷುಃ ಪೂರ್ವವೈರಂ ಚ ಜನಶ್ಚ ವಿರತೋತ್ಸವಃ ।
ತತ್ರ ರಾಜನ್ನ ವಸ್ತವ್ಯಂ ಯತ್ರ ನಾಸ್ತಿ ಚತುಷ್ಟಯಂ ॥ ೯೦ ॥

---

೮೭. ದೇಶಾಧಿಪತಿಯಾದ ರಾಜನು ಕೃತಕೃತ್ಯನಾಗಿದ್ದರೆ ಆ ದೇಶದ ಪ್ರಜೆಗಳಿಗೆ ಸುಖ ಲಭಿಸುತ್ತದೆ. ಯಾವ ದೇಶದಲ್ಲಿ ಪ್ರಜೆಗಳು ಐಕಮತ್ಯದಿಂದ ಇರುವರೋ ಮತ್ತು ಅವರು ಯಾವಾಗಲೂ ನ್ಯಾಯಮಾರ್ಗಾವಲಂಬಿಗಳಾಗಿರುವರೋ ಅಂಥ ಕಡೆಯಲ್ಲಿಯೂ.

೮೮. ಯಾವ ದೇಶದಲ್ಲಿ ಸ್ತ್ರೀಯರು ಮಾತ್ಸರ್ಯವುಳ್ಳವರಲ್ಲವೋ ಅಂಥ ಕಡೆಯಲ್ಲಿಯೂ ವಾಸಮಾಡಿದರೆ ಅವರಿಗೆ ಸುಖವು ಲಭಿಸುವುದು.

೮೯. ಯಾವ ಪ್ರಾಂತದಲ್ಲಿ ಪ್ರಾಯಶಃ ರೈತರು ಹೆಚ್ಚು ಮಾತನಾಡುವ ಸ್ವಭಾವದವರಲ್ಲವೋ ಮತ್ತು ಯಾವ ರಾಷ್ಟ್ರದಲ್ಲಿ ಎಲ್ಲ ಔಷಧದ್ರವ್ಯಗಳೂ ಸಿಕ್ಕುತ್ತವೆಯೋ ಅಂತಹ ರಾಜ್ಯದಲ್ಲಿ ಬುದ್ಧಿಶಾಲಿಯಾದವನು ವಾಸಮಾಡುತ್ತಾನೆ.

೯೦. ಅಯ್ಯಾ ರಾಜನೇ! ಕೇಳು ರಾಜ್ಯಾಧಿಪನು ಪರರಾಜ್ಯವನ್ನು ಗೆಲ್ಲಲು ಉತ್ಸುಕನಾಗಿರುವುದು. ಈ ರಾಜನ ಮೇಲೆ ಇತರರಿಗೆ ಪೂರ್ವವೈರವಿರುವುದು. ದೇಶದ ಪ್ರಜೆಗಳು ಹರ್ಷಜನಕವಾದ ಉತ್ಸವರಹಿತರಾಗಿರುವುದು. ಈ ಮೂರೂ ಯಾವನ ರಾಜ್ಯದಲ್ಲಿ ಸದಾ ಇರುವುದೋ ಅಂತಹ ರಾಜ್ಯದಲ್ಲಿ ವಾಸಮಾಡಬಾರದು.

**ಋಣಪ್ರದಾತಾ ವೈದ್ಯಶ್ಚ ಶ್ರೋತ್ರಿಯಃ ಸಜಲಾ ನದೀ ।**
**ಅವಲೋಕ್ಯೋ ನ ಚಾದರ್ಶೋ ಮಲಿನೋ ಬುದ್ಧಿಮತ್ತರೈಃ ॥ ೯೧ ॥**

**ನ ಚ ರಾತ್ರೌ ಮಹಾರಾಜ ದೀರ್ಘರಾಜ್ಯಮಭೀಪ್ಸತಾ ।**
**ಹೇಮಕಾರಗೃಹೇ ಚಾನ್ನಮಶ್ನೀಯಾನ್ನ ಚ ವಿಶ್ವಸೇತ್ ॥ ೯೨ ॥**

**ನ ಚ ಮಿತ್ರಂ ಪ್ರಕುರ್ವೀತ ಹೇಮಕಾರಂ ಕದಾಚನ ।**
**ಭಿನ್ನಭಾಂಡಂ ಚ ಖಟ್ವಾಂ ಚ ಕುಕ್ಕುರಂ ಕುಕ್ಕುಟಂ ತಥಾ ॥ ೯೩ ॥**

**ಅಪ್ರಶಸ್ತಾನಿ ಚತ್ವಾರಿ ಯೇ ಚ ವೃಕ್ಷಾಃ ಸಕಂಟಕಾಃ ।**
**ಭಿನ್ನಭಾಂಡೇ ಬಲಿಃ ಪ್ರಾಯಃ ಖಟ್ವಾಯಾಂ ಚೇಹ ನಿಶ್ಚಯಃ ॥೯೪॥**

---

೯೧. ಸಾಲಕೊಡತಕ್ಕವನು, ವೈದ್ಯ, ಶ್ರೋತ್ರಿಯ ಬ್ರಾಹ್ಮಣ, ಧೃವಜಲಯುಕ್ತವಾದ ನದಿ, ಈ ನಾಲ್ಕೂ ಯಾವ ರಾಜ್ಯದಲ್ಲಿ ಇರುವುದಿಲ್ಲವೋ ಅಲ್ಲಿ ಬುದ್ಧಿಶಾಲಿಗಳು ವಾಸಮಾಡಬಾರದು. ಮತ್ತು ಮಲಿನವಾದ ಕನ್ನಡಿಯನ್ನು ನೋಡಬಾರದು.

೯೨. ಅಯ್ಯಾ ಮಹಾರಾಜನೆ! ಬಹುಕಾಲ ತನಗೆ ರಾಜ್ಯವು ಸ್ಥಿರವಾಗಿರಬೇಕೆಂಬ ಅಪೇಕ್ಷೆಯುಳ್ಳವನು ರಾತ್ರಿಯವೇಳೆ ಕನ್ನಡಿಯನ್ನು ನೋಡಬಾರದು. ಚಿನ್ನದ ಕೆಲಸಮಾಡುವವನ ಮನೆಯಲ್ಲಿ ಭೋಜನಮಾಡಬಾರದು. ಮತ್ತು ಅವನಲ್ಲಿ ವಿಶ್ವಾಸ ಸ್ನೇಹಾದಿಗಳನ್ನು ಮಾಡಬಾರದು.

೯೩. ಯಾವಾಗಲೂ ಚಿನ್ನದ ಕೆಲಸಗಾರನನ್ನು ಸ್ನೇಹಿತನನ್ನಾಗಿ ಮಾಡಿಕೊಳ್ಳಬಾರದು. ಒಡೆದ ಮಡಕೆ, ಮುರಿದ ಮಂಚ, ನಾಯಿ, ಕೋಳಿ ಈ ನಾಲ್ಕನ್ನೂ ಇಟ್ಟುಕೊಳ್ಳುವುದು ಪ್ರಶಸ್ತವಲ್ಲ.

೯೪. ಹೀಗೆಯೇ ಮುಳ್ಳುಗಳಿಂದ ಕೂಡಿದ ವೃಕ್ಷಗಳೂ ಸಹ ರೋಪಣಕ್ಕೆ ಪ್ರಶಸ್ತವಲ್ಲ. ಒಡೆದ ಮಡಕೆಯಲ್ಲಿ ಪ್ರಾಯಶಃ ಭೂತಬಲಿಯನ್ನು ಅರ್ಪಿಸಿ ಬಿಸುಡುತ್ತಾರೆ. ಮುರುಕು ಮಂಚವೂ ಹಾಗೆಯೇ ತ್ಯಾಜ್ಯವಾದ್ದು.

ನಾಶ್ನಂತಿ ಪಿತರಸ್ತಸ್ಯ ಯತ್ರ ಕುಕ್ಕುರಕುಕ್ಕುಟೌ ।
ವೃಕ್ಷಮೂಲೇ ಪಿಶಾಚಾನಾಂ ಸರ್ವೇಷಾಮೇವಃ ಸಂಸ್ಥಿತಿಃ ॥೯೫॥

ಅತಸ್ತೇಷಾಂ ತಲೇ ಭುಂಜನ್ನಶ್ನುತೇ ಪೂಯಶೋಣಿತಂ ।
ಅಸಂಸ್ಕೃತಾನ್ನಭುಙ್ಮೂತ್ರಂ ಬಾಲಾತಿಪ್ರಭವಂ ಸ್ವಯಂ ॥ ೯೬ ॥

ಸುವಾಸಿನೀಂ ಗುರ್ವಿಣೀಂ ಚ ವೃದ್ಧಾಂ ಬಾಲಾತುರಾಂಸ್ತಥಾ ।
ಭೋಜಯೇತ್ಸಂಸ್ಕೃತಾನ್ನೇನ ಪ್ರಥಮಂ ಚರಮಂ ಗೃಹೀ ॥ ೯೭ ॥

ಅಘಂ ಸ ಕೇವಲಂ ಭುಂಕ್ತೇ ಬದ್ಧಗೋವಾಹನಾದಿಕಂ ।
ಯೋ ಭುಂಕ್ತೇ ಚ ಬಹಿರ್ದೃಷ್ಟ ಪ್ರೇಕ್ಷತಾಮುಪ್ರದಾಯ ಚ ॥೯೮॥

---

೯೫. ಯಾವನ ಗೃಹದಲ್ಲಿ ನಾಯಿ ಕೋಳಿ ಇವು ವಾಸವಾಗಿರುವುವೋ ಅವನ ಮನೆಯಲ್ಲಿ ಪಿತೃಗಳು ಅವನು ಪ್ರದಾನಮಾಡಿದ ಪಿಂಡವನ್ನು ಸ್ವೀಕರಿಸುವುದಿಲ್ಲ. ಸಾಮಾನ್ಯವಾಗಿ ಪಿಶಾಚಗಳು ವೃಕ್ಷಮೂಲದಲ್ಲಿ ವಾಸವಾಗಿರುತ್ತವೆ.

೯೬. ಆದುದರಿಂದ ವೃಕ್ಷಗಳ ಬುಡದಲ್ಲಿ ಕುಳಿತು ಭೋಜನಮಾಡುವವನು ದುರ್ಗಂಧವುಳ್ಳರಕ್ತವನ್ನು ಪಾನಮಾಡಿದ ಹಾಗೆಯೇ ಸರಿ. ವೈಶ್ವದೇವ, ದೇವರಿಗೆ ನಿವೇದನ ಇತ್ಯಾದಿಗಳಿಂದ ಪವಿತ್ರವಾಗದೆ ಇರುವ ಅನ್ನವನ್ನು ಭುಂಜಿಸುವುದು ಹುಡುಗರ ಮೂತ್ರವನ್ನು ಪಾನಮಾಡಿದ್ದಕ್ಕೆ ಸಮಾನವಾಗುವುದು.

೯೭. ಗೃಹಸ್ಥನಾದವನು ಸುವಾಸಿನಿಯರು, ಗರ್ಭಿಣಿಯರು, ಮುದುಕಿಯರು, ಹುಡುಗರು, ರೋಗಿಗಳು ಇವರಿಗೆ ಸಂಸ್ಕೃತವಾದ ಅನ್ನದಿಂದ ಮೊದಲು ಭೋಜನಮಾಡಿಸಬೇಕು. ಕೊನೆಯಲ್ಲಿ ತಾನು ಭೋಜನಮಾಡಬೇಕು.

೯೮. ಯಾವನು ಹಸು, ಕುದುರೆ ಮೊದಲಾದ ವಾಹನ ಪ್ರಾಣಿಗಳಿಗೆ ಆಹಾರ ಹಾಕದೆ ಸುಮ್ಮನೆ ಕಟ್ಟಿಹಾಕಿ ತಾನು ಮಾತ್ರ ಭುಂಜಿಸುವನೋ, ಮತ್ತು "ನಮ್ಮನ್ನು ಕರೆದಾರು" ಎಂದು ಹೊರಗೆ ನಿರೀಕ್ಷಿಸುತ್ತಿರುವ ಹಿರಿಯರಾದ ಬ್ರಾಹ್ಮಣಾದಿಗಳಿಗೆ ಬಡಿಸದೆ ತಾನೇ ಭುಂಜಿಸುವನೋ ಅಂತಹ ಗೃಹಸ್ಥನು ಕೇವಲ ಪಾಪವನ್ನು ಭುಂಜಿಸಿದಂತೆ (ಪಾಪವನ್ನೇ ಹೊಂದುವನು.)

ವೈಶ್ವದೇವಂ ತತಃ ಕುರ್ಯಾದ್ಯಾವದಾಹುತಯಃ ಕ್ರಮಾತ್ ।
ಪ್ರಥಮಾಂ ಬ್ರಹ್ಮಣೇ ದದ್ಯಾತ್ಪ್ರಜಾನಾಂ ಪತಯೇ ತತಃ　　॥ ೯೯ ॥

ತೃತೀಯಾಂ ಚೈವ ಗುಹ್ಯೇಭ್ಯಃ ಕಶ್ಯಪಾಯ ತಥಾ ಪರಾಂ ।
ತತಶ್ಚಾನುಮತೇ ದದ್ಯಾದ್ದತ್ವಾ ಗೃಹಬಲಿಂ ತತಃ　　॥ ೧೦೦ ॥

ಪೂರ್ವಾಖ್ಯಾತಂ ಮಯಾ ಯತ್ತೇ ನಿತ್ಯಕರ್ಮಕ್ರಿಯಾವಿಧೌ ।
ದದ್ಯಾದಥ ಧರಿತ್ರೀಣಾಂ ದದ್ಯಾತ್ತು ಮಣಿಕತ್ರಯಂ　　॥ ೧೦೧ ॥

ಪ್ರಾಚ್ಯಾದಿಕ್ರಮಯೋಗೇನ ಇಂದ್ರಾದೀನಾಂ ಬಲಿಂ ಕ್ಷಿಪೇತ್ ।
ಬ್ರಹ್ಮಣೇ ಚಾಂತರಿಕ್ಷಾಯ ಸೂರ್ಯಾಯ ಚ ಯಥಾಕ್ರಮಂ॥೧೦೨॥

---

೯೯. ಕ್ರಮವಾಗಿ ದೇವತೆಗಳಿಗೆ ಆಹುತಿಕೊಡುವ ಮೂಲಕ ಗೃಹಸ್ಥನು ವೈಶ್ವದೇವಕರ್ಮವನ್ನು ಮಾಡಬೇಕು. ಆ ವೈಶ್ವದೇವಕರ್ಮದಲ್ಲಿ ಪ್ರಥಮಾಹುತಿಯನ್ನು ಬ್ರಹ್ಮನಿಗೂ ಅನಂತರದ ಆಹುತಿಯನ್ನು ಪ್ರಜಾಪತಿಗೂ ಕೊಡಬೇಕು.

೧೦೦. ಗುಹ್ಯಕರಿಗೆ ಮೂರನೆಯ ಆಹುತಿಯನ್ನೂ ಕಶ್ಯಪನಿಗೆ ನಾಲ್ಕನೆಯ ಆಹುತಿಯನ್ನೂ ಅನುಮತಿದೇವತೆಗೆ ಅನಂತರದ ಆಹುತಿಯನ್ನೂ ಕೊಟ್ಟು ಆ ಬಳಿಕ ಗೃಹಬಲಿಯನ್ನು ಕೊಡಬೇಕು.

೧೦೧. ನಿತ್ಯಕರ್ಮವಿಧಾನವನ್ನು ಹೇಳುವಾಗ ಮೊದಲು ನಾನು ಏನನ್ನು ಹೇಳಿದ್ದೆನೋ ಹಾಗೆಯೇ ವೈಶ್ವದೇವಕರ್ಮದಲ್ಲಿಯೂ ಧರಿತ್ರಿ (ಲೋಕ) ಗಳನ್ನು ಉದ್ದೇಶಿಸಿ ಮೂರು ಮಡಕೆಯನ್ನು ಬಲಿಪ್ರದಾನಾರ್ಥವಾಗಿ ಕೊಡಬೇಕು.

೧೦೨. ಪೂರ್ವದಿಕ್ಕಿನಿಂದ ಆರಂಭಿಸಿ ಕ್ರಮವಾಗಿ ಇಂದ್ರಾದಿ ದಿಕ್ಪಾಲಕರಿಗೂ ಬಲಿಯನ್ನು ಕೊಡಬೇಕು. ಹಾಗೆಯೇ ಬ್ರಹ್ಮನಿಗೂ ಅಂತರಿಕ್ಷದೇವತೆಗೂ ಆದಿತ್ಯನಿಗೂ ಕ್ರಮವಾಗಿ ಬಲಿಯನ್ನು ಸಮರ್ಪಿಸಬೇಕು.

ವಿಶ್ವೇಭ್ಯಶ್ಚೈವ ದೇವೇಭ್ಯೋ ವಿಶ್ವಭೂತೇಭ್ಯ ಏವ ಚ ।
ಕೃತ್ವಾಪಸವ್ಯಂ ವಾಯವ್ಯಂ ಯಕ್ಷ್ಮೈತತ್ತೇ ನಿವೇದಯೇತ್ ॥೧೦೩॥

ತತಶ್ಚಾಗ್ರಂ ಸಮುದ್ಧೃತ್ಯ ಹಂತಕಾರೋಪಕಲ್ಪಿತಂ ।
ಯಥಾವಿಧಿ ಯಥಾನ್ಯಾಯಂ ಬ್ರಾಹ್ಮಣಾಯೋಪ ಪಾದಯೇತ್ ॥

ದತ್ವಾ ವಿಧಿಭ್ಯೋ ದೇವೇಭ್ಯೋ ಗುರುಭ್ಯಃ ಸುಶ್ರುತಾಯ ಚ ।
ಪುಣ್ಯಾಗಂಧಾಂಬರಧರೋ ಮಾಲ್ಯಧಾರೀ ನರೇಶ್ವರ ॥ ೧೦೫ ॥

ನೈಕವಸ್ತ್ರಧರೋಽಕ್ಲಿನ್ನಾ ದ್ರ್ರಪಾದೋ ಮಹೀಪತೇ ।
ವಿಶುದ್ಧವದನಃ ಪ್ರೀತೋ ಭುಂಜೀತ ನ ವಿದಿಙ್ಮುಖಃ ॥ ೧೦೬ ॥

---

೧೦೩. ಹೀಗೆಯೇ ವಿಶ್ವೇದೇವತೆಗಳಿಗೂ ವಿಶ್ವಭೂತಗಳಿಗೂ ಬಲಿಪ್ರದಾನ ಮಾಡಿದ ಮೇಲೆ ವಾಯು ಯಕ್ಷ ಇವರಿಬ್ಬರಿಗೂ ಬಲಿಸಮರ್ಪಣೆ ಮಾಡಬೇಕು. ಅವರಿಗೆ ಬಲಿ ಕೊಡುವಾಗ ಯಜ್ಞೋಪವೀತವನ್ನು ಎಡಕ್ಕೆ ಹಾಕಿಕೊಳ್ಳಬೇಕು. ಆಗ "ಓ ಯಕ್ಷನೇ! ಈ ಬಲಿಯು ನಿನಗೆ ಪ್ರೀತಿಯಾಗಲಿ" ಎಂದು ಹೇಳಿ ನಿವೇದನಮಾಡಬೇಕು.

೧೦೪. ಬಳಿಕ ಬಲಿಪ್ರದಾನಮಾಡಿದ ಅನ್ನದ ಮೇಲ್ಭಾಗದ ಸ್ವಲ್ಪವನ್ನು ತೆಗೆದುಕೊಂಡು ಹಂತ ಎಂದು ಹೇಳಿ ಇಟ್ಟು ಅನಂತರ ಶಾಸ್ತ್ರೋಕ್ತ ವಿಧಿಯಂತೆ ನ್ಯಾಯಾನುಸಾರವಾಗಿ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು.

೧೦೫. ಅಯ್ಯಾ ರಾಜನೇ! ವಿಧಿಪ್ರಕಾರವಾಗಿ ದೇವರಿಗೆ ನಿವೇದನಮಾಡಿ ಹಿಂದೆ ಸೂಚಿಸಿರುವಂತೆ ವೈಶ್ವದೇವಕರ್ಮದಲ್ಲಿ ಉಕ್ತರಾದ ದೇವತೆಗಳಿಗೆ ಆಹುತಿ ಕೊಟ್ಟು ಅನಂತರ ಗುರುಗಳು, ಶಾಸ್ತ್ರವೇತ್ತರಾದ ಶ್ರೋತ್ರಿಯ ಬ್ರಾಹ್ಮಣರು ಇವರಿಗೆ ಅನ್ನದಾನಮಾಡಿ ಬಳಿಕ ತಾನೂ ಶ್ರೇಷ್ಠವಾದ ವಸ್ತ್ರ, ಸುಗಂಧಾದಿಗಳನ್ನು ಧರಿಸಿ ಮನೋಹರವಾದ ಮಾಲ್ಯವನ್ನು ಧಾರಣಮಾಡಿಕೊಂಡು ನಿಯಮದಿಂದ ಭೋಜನಮಾಡಬೇಕು.

೧೦೬. ಅಯ್ಯಾ ಭೂಪತಿಯೇ! ಕೇಳು, ತಿಳಿದವನು ಏಕವಸ್ತ್ರವನ್ನು ಧರಿಸಿ ಭೋಜನಮಾಡಬಾರದು. ಪಾದಪ್ರಕ್ಷಾಳನಮಾಡಿಕೊಂಡು ಕಾಲು ಒದ್ದೆಯಾಗಿರುವಾಗ ಒರಸಿಕೊಳ್ಳದೆ ಭೋಜನಕ್ಕೆ ಕೂತುಕೊಳ್ಳಬಾರದು. ಪ್ರಸನ್ನಮುಖನಾಗಿ ಸಂತೋಷದಿಂದ ಭೋಜನಮಾಡಬೇಕು. ಈಶಾನ್ಯ, ಆಗ್ನೇಯ ಮುಂತಾದ ಮೂಲೆದಿಕ್ಕಿಗೆ ಅಭಿಮುಖವಾಗಿ ಕುಳಿತು ಭೋಜನಮಾಡಬಾರದು.

**ಪ್ರಾಙ್ಮುಖೋದಙ್ಮುಖೋ ವಾಪಿ ನ ಚೈವಾನ್ಯಮನಾ ನರಃ ।**
**ಕುತ್ಸಿತೇನ ಹತಂ ಚೈವ ಜುಗುಪ್ಸಾವದಸಂಸ್ಕೃತಂ ॥ ೧೦೭ ॥**

**ದತ್ವಾ ತು ಭುಂಕ್ತೇ ಶಿಷ್ಟೇಭ್ಯಃ ಕ್ಷುಧಿತೇಭ್ಯಸ್ತಥಾ ಗೃಹೀ ।**
**ಪ್ರಶಸ್ತಶುದ್ಧಪಾತ್ರೇಷು ಭುಂಜೀತಾಕುಪಿತೋ ನೃಪ ॥ ೧೦೮ ॥**

**ನಾಸಂದೀಸಂಸ್ಥಿತೇ ಪಾತ್ರೇ ನಾದೇಶೇ ಚ ನರೇಶ್ವರ ।**
**ನಾಕಾಲೇ ನಾತಿಸಂಕೀರ್ಣೇ ದತ್ವಾಗ್ರಂ ಚ ನರೋ ಮಹೀ ॥ ೧೦೯ ॥**

---

೧೦೭. ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕುಳಿತು ಭೋಜನಮಾಡಬೇಕು. ಭೋಜನಕಾಲದಲ್ಲಿ ಮಾನವನು ಅನ್ಯಮನಸ್ಕನಾಗಿರಬಾರದು. ಕುತ್ಸಿತವಾದ ಪದಾರ್ಥ, ಕೆಟ್ಟುಹೋದ ಪಾಕ, ಜುಗುಪ್ಸೆಯನ್ನುಂಟುಮಾಡುವ ಪದಾರ್ಥ, ಇವುಗಳನ್ನೂ, ವೈಶ್ವದೇವಾದಿಗಳಿಂದ ಸಂಸ್ಕೃತವಾಗದೆ ಇರುವ ಪಾಕವನ್ನೂ ಭೋಜನಮಾಡಬಾರದು.

೧೦೮. ಅಯ್ಯಾ ರಾಜನೇ! ಕೇಳು, ಗೃಹಸ್ಥನು ಕೋಪಾದಿಗಳಿಲ್ಲದೆ ಶಾಂತಚಿತ್ತನಾಗಿ ಶಿಷ್ಟರಿಗೂ ಹಸಿದವರಿಗೂ ಮೊದಲು ಭೋಜನಕ್ಕೆ ಬಡಿಸಿ, ಆ ಮೇಲೆ ಪ್ರಶಸ್ತವೂ ಶುದ್ಧವೂ ಆಗಿರುವ ಪಾತ್ರೆಯ (ಪತ್ರದ) ಲ್ಲಿ ತಾನೂ ಶಾಂತಚಿತ್ತದಿಂದ ಭೋಜನಮಾಡಬೇಕು.

೧೦೯. ಕಾಲ್ಮಣೆ ಮುಂತಾದ ಎತ್ತರವಾದ ಪೀಠದ ಮೇಲೆ ಪಾತ್ರೆಯನ್ನಿಟ್ಟುಕೊಂಡಾಗಲಿ, ಅಪರಿಶುದ್ಧವಾದ ಸ್ಥಳದಲ್ಲಿ ಪಾತ್ರೆಯನ್ನಿಟ್ಟುಕೊಂಡಾಗಲಿ ಭೋಜನಮಾಡಬಾರದು. ಹೊತ್ತುಮೀರಿ ಅವೇಳೆಯಲ್ಲಿ ಭೋಜನಮಾಡಬಾರದು. ಮತ್ತು ಬಹು ಜನಸಂಕೀರ್ಣವಾಗಿರುವ ಸ್ಥಳದಲ್ಲಿಯೂ ಭುಂಜಿಸಬಾರದು. ಸಮೀಪದಲ್ಲಿರುವ ಇತರರಿಗೂ ಊಟಕ್ಕೆ ಹಾಕಿ ಆಮೇಲೆ ತಾನೂ ಹರ್ಷದಿಂದ ಭೋಜನಮಾಡಬೇಕು.

**ಅಶ್ನೀಯಾತ್ತನ್ಮಯೋ ಭೂತ್ವಾ ಪೂರ್ವಂ ತು ಮಧುರಂ ರಸಂ ।**
**ಲವಣೋಗ್ರೌ ತತಃ ಪಶ್ಚಾತ್ಕಟು ತೀಕ್ಷ್ಣಾದಿಕಂ ತತಃ ॥ ೧೧೦ ॥**

**ಮಾರ್ದವಂ ಪುರುಷೋಽಶ್ನೀಯಾನ್ಮಧ್ಯೇ ಚ ಕಠಿನಾಶನಂ ।**
**ಅಂತೇ ಪುನರ್ದ್ರವಾಶೀ ಚ ನರೋ ರೋಗೇಣ ಮುಚ್ಯತೇ ॥ ೧೧೧ ॥**

**ದಿವಾ ಧಾನಾಸು ವಸತಿ ರಾತ್ರೌ ಚ ಧಧಿಸಕ್ತುಷು ।**
**ಅಲಕ್ಷ್ಮೀಃ ಕೋವಿದಾರೇಷು ಸರ್ವದೈವ ಕೃತಾಲಯಾ ॥ ೧೧೨ ॥**

**ಅನಿಂದ್ಯಂ ಭಕ್ಷಯೇನ್ನಿತ್ಯಂ ವಾಗ್ಯತೋಽನ್ನಮಕುತ್ಸಯನ್ ।**
**ಭುಂಜನ್ ಸಮ್ಯಗ್ಯಥಾಚಮ್ಯ ಪ್ರಾಙ್ಮುಖೋದಙ್ಮುಖೋಽಪಿ ವಾ ॥**

---

೧೧೦. ಭೋಜನಕಾಲದಲ್ಲಿ ಏಕಾಗ್ರಚಿತ್ತದಿಂದ ತನ್ಮಯನಾಗಿರಬೇಕು. ಭೋಜನಕ್ಕೆ ಕುಳಿತುಕೊಂಡಾಗ ಪ್ರಾರಂಭದಲ್ಲಿ ಮಧುರವಾದ ಪದಾರ್ಥವನ್ನೇ ಸೇವಿಸಬೇಕು. ಅನಂತರ ಲವಣ, ಆಮ್ಲ, ಕ್ಷಾರ ಮುಂತಾದ ತೀಕ್ಷ್ಣ ರಸ ಪದಾರ್ಥಗಳನ್ನು ತಿನ್ನಬೇಕು.

೧೧೧. ಭೋಜನದ ಪ್ರಾರಂಭದಲ್ಲಿ ಮೃದುವೂ ದ್ರವಸಮೇತವೂ ಆದ ಪದಾರ್ಥವನ್ನೂ, ಭೋಜನದ ಮಧ್ಯದಲ್ಲಿ ಕಠಿಣವಾದ ಪದಾರ್ಥಗಳನ್ನೂ, ಕೊನೆಯಲ್ಲಿ ಪುನಃ ದ್ರವವಸ್ತುವನ್ನೂ ಭುಂಜಿಸುವ ಮನುಷ್ಯನು ರೋಗದಿಂದ ಮುಕ್ತನಾಗುತ್ತಾನೆ.

೧೧೨. ಅಲಕ್ಷ್ಮಿಯು ಹಗಲುಹೊತ್ತು ಹುರಿದ ಹಿಟ್ಟಿನಲ್ಲಿ ವಾಸವಾಗಿರುತ್ತಾಳೆ. ರಾತ್ರಿಯಲ್ಲಿ ದಧಿಖಂಡ (ಸತ್ತು) ದಲ್ಲಿ ವಾಸವಾಗಿರುತ್ತಾಳೆ. ಕೋವಿದಾರ ಪುಷ್ಪದಲ್ಲಿ ಯಾವಾಗಲೂ ವಾಸವಾಗಿರುತ್ತಾಳೆ. ಆದುದರಿಂದ ಆ ವಸ್ತುಗಳನ್ನು ಆಯಾ ವೇಳೆಗಳಲ್ಲಿ ಭುಂಜಿಸಬಾರದು. ಅಥವಾ ಧರಿಸಬಾರದು. ಕೋವಿದಾರ ಪುಷ್ಪವು ಸರ್ವದಾ ತ್ಯಾಜ್ಯ.

೧೧೩. ಭೋಜಮಾಡುವವನು ಪೂರ್ವಾಭಿಮುಖವಾಗಿಯೋ ಉತ್ತರಾಭಿಮುಖವಾಗಿಯೋ ಕುಳಿತು ಮೊದಲು ಆಚಮನಮಾಡಿ ಆ ದಿಕ್ಕಿಗಭಿಮುಖವಾಗಿಯೇ ಕುಳಿತು ಮೌನದಿಂದ ಭೋಜನಮಾಡಬೇಕು. ಅನ್ನವನ್ನು ಎಂದೂ ನಿಂದಿಸಬಾರದು. ಅನಿಂದಿತವಾದ ಅನ್ನವನ್ನು ನಿತ್ಯವೂ ತಿನ್ನಬೇಕು. "ಅನ್ನಂ ನ ನಿಂದ್ಯಾತ್" ಎಂದು ತೈತ್ತಿರೀಯ ಶ್ರುತಿ ಇದೆ.

ಯಥಾವತ್ಪುನರಾಚಾಮೇತ್ಪಾಣೀ ಪ್ರಕ್ಷಾಲ್ಯ ಯತ್ನತಃ ।
ಅಭೀಷ್ಟದೇವತಾನಾಂ ಚ ಕುರ್ವೀತ ಸ್ಮರಣಂ ನರಃ ॥ ೧೧೪ ॥

ಪ್ರಾಣಾಪಾನಸಮಾನಾನಾಮುದಾನವ್ಯಾನಯೋಸ್ತಥಾ ।
ಅನ್ನಂ ಪುಷ್ಟಿಕರಂ ಚಾಸ್ತು ಮಮಾದ್ಯಾವ್ಯಾಹತಂ ಸುಖಂ ॥ ೧೧೫ ॥

ಅಗಸ್ತಿರಗ್ನಿರ್ವಡವಾಲನಶ್ಚ ।
ಭುಕ್ತಂ ಮಮಾನ್ನಂ ಜರಯತ್ವಶೇಷಂ ॥
ಸುಖಂ ಚ ಮೇ ತತ್ಪರಿಣಾಮಸಂಭವಂ
ಯಚ್ಛತ್ವರೋಗಂ ಖಲು ವಾಸುದೇವಃ ॥ ೧೧೬ ॥

ಇತ್ಯುಚ್ಚಾರ್ಯ ಸ್ವಹಸ್ತೇನ ಪರಿಮಾರ್ಜ್ಯಂ ತಥೋದರಂ ।
ಅನಾಯಾಸಪ್ರದಾಯೀನಿ ಕುರ್ಯಾತ್ಕರ್ಮಾಣ್ಯತಂದ್ರಿತಃ ॥ ೧೧೭ ॥

---

೧೧೪. ಭೋಜನವಾದ ಮೇಲೆ ಕೈಯಿನ ಎಂಜಲು ಜಿಡ್ಡು ಎಲ್ಲಾ ಚೊಕ್ಕಟವಾಗಿ ಹೋಗುವವರೆಗೆ ಪ್ರಯತ್ನದಿಂದ ಕೈತೊಳೆದುಕೊಂಡು ವಿಧ್ಯುಕ್ತ ರೀತಿಯಿಂದ ಪುನಃ ಆಚಮನಮಾಡಬೇಕು. ಬಳಿಕ ಇಷ್ಟದೇವತೆಯ ನಾಮ ಸ್ಮರಣಮಾಡಬೇಕು.

೧೧೫–೧೧೭. ಭೋಜನವಾದಮೇಲೆ ಈ ಪ್ರಾರ್ಥನಾಮಂತ್ರವನ್ನು ಪಠನ ಮಾಡಿ ಹಾಗೆಯೇ ತನ್ನ ಹೊಟ್ಟೆಯನ್ನು ಕೈಯಿಂದ ಸವರಿಕೊಂಡು ಬಳಿಕ ನಿದ್ರಾವಶನಾಗದೆ ಆಯಾಸಜನಕವಲ್ಲದ ಕೆಲಸಗಳನ್ನು ಮಾಡಬೇಕು. (1) ನಾನು ತಿಂದ ಅನ್ನವು ಪ್ರಾಣ ಅಪಾನ ಸಮಾನ ಉದಾನ ವ್ಯಾನಗಳೆಂಬ ಐದು ವಾಯುಗಳಿಗೆ ಪುಷ್ಟಿಕರವಾಗಲಿ. ಮತ್ತು ಈ ದಿನ ನನಗೆ ಈ ಅನ್ನ ಭೋಜನದಿಂದ ಅಪ್ರತಿಹತವಾದ ಸುಖ ಲಭಿಸಲಿ. (2) ಅಗಸ್ತ್ಯ, ಅಗ್ನಿ, ಬಡಬಾನಲ ಇವರು ನಾನು ತಿಂದ ಸಕಲ ಅನ್ನವನ್ನು ಪೂರ್ತಿಯಾಗಿ ಜೀರ್ಣಮಾಡಲಿ. ಆ ಅನ್ನ ಪರಿಣಾಮದಿಂದ ಲಭಿಸಬೇಕಾದ ಸುಖವನ್ನೂ ಮತ್ತು ಆರೋಗ್ಯವನ್ನೂ ಶ್ರೀಹರಿಯು ನನಗೆ ಕರುಣಿಸಲಿ. (ಇದು ಮಂತ್ರಾರ್ಥ.)

**ಸಂಧ್ಯಾಯಾಂ ಪಥಿಕಃ ಕಶ್ಚಿತ್ಸಮಾಗಚ್ಛತಿ ಭಾರತ ।**
**ಪಾದಶೌಚಾಸನೈಃ ಪ್ರಹ್ವಃ ಸ್ವಾಗತೋಕ್ತ್ಯಾ ಚ ಪೂಜಯೇತ್ ॥೧೧೮॥**

**ತತಶ್ಚಾನ್ನಪ್ರದಾನೇನ ಶಯನೇನ ಚ ಪಾರ್ಥಿವ ।**
**ದಿವಾತಿಥೌ ಚ ವಿಮುಖೋ ಯದೇಕಂ ಪಾತಕಂ ಭವೇತ್ ॥೧೧೯॥**

**ತದೇವಾಷ್ಟಗುಣಂ ಪುಸಾಂ ಸೂರ್ಯೋ ಹಂಸಮುಖೇ ಗತೇ ।**
**ಗಚ್ಛೇಚ್ಛಯ್ಯಾಮಸ್ಫುಟಿತಾಮಪಿ ದಾರುಮಯೀಂ ನೃಪ ॥ ೧೨೦ ॥**

**ನಾವಿಶಾಲಾಂ ನ ವಾ ಭಗ್ನಾಂ ನಾಸಮಾಂ ಮಲಿನಾಂ ನ ಚ ।**
**ನ ಚ ಜಂತುಮಯೀಂ ಶಯ್ಯಾಂ ಸಮಾತಿಷ್ಠೇದನಾಪದಿ ॥ ೧೨೧ ॥**

---

೧೧೮. ಅಯ್ಯಾ ಭರತವಂಶಜನೇ! ಯಾವನಾದರೂ ದಾರಿಪ್ರಯಾಣ ಮಾಡುವ ಪಥಿಕನು ಸಾಯಂಕಾಲದವೇಳೆ ಮನೆಗೆ ಬಂದರೆ ಕಾಲುತೊಳೆದು ಕೊಳ್ಳಲು ನೀರುಕೊಟ್ಟು ಆಸನವನ್ನಿತ್ತು ಸ್ವಾಗತವಚನಪೂರ್ವಕವಾಗಿ ನಮ್ರತೆ ಯಿಂದ ಅವನನ್ನು ಸತ್ಕರಿಸಬೇಕು.

೧೧೯-೧೨೦. ಅಯ್ಯಾ ರಾಜನೇ! ಕೇಳು, ಅನಂತರ ಭೋಜನಮಾಡಿಸಿ ಮಲಗುವುದಕ್ಕೆ ಹಾಸಿಗೆಯನ್ನೂ ಕೊಡಬೇಕು. ಮಧ್ಯಾಹ್ನದ ವೇಳೆಗೆ ಬಂದ ಅತಿಥಿಯು ಆಹಾರಾದಿಗಳಿಂದ ಸತ್ಕೃತನಾಗದೆ ಮನೆಯಿಂದ ವಿಮುಖನಾಗಿ ಹೋದರೆ ಬರುವ ಪಾಪಕ್ಕಿಂತ, ಸೂರ್ಯಾಸ್ತವಾದ ಮೇಲೆ ಬಂದ ಅತಿಥಿಯು ಸತ್ಕೃತನಾಗದೆ ವಿಮುಖನಾಗಿ ಮನೆಯಿಂದ ಹೊರಬಿದ್ದರೆ ಅದರ ಎಂಟರಷ್ಟು ಹೆಚ್ಚಾದ ಪಾಪ ಸಂಘಟನೆಯಾಗುವುದು. ರಾತ್ರಿ ಮಲಗಬೇಕಾದರೆ ಮುರಿದು ಹೋಗದೆ ದೃಢವಾಗಿರುವ ಮರದ ಮಂಚದ ಮೇಲೆ ಮಲಗಬೇಕು.

೧೨೧. ಏನೂ ತೊಂದರೆಯಿಲ್ಲದೆ ಇರುವಾಗ ವಿಶಾಲವಿಲ್ಲದೆ ಕಿಷ್ಕಿಂಧ ವಾಗಿಯೂ, ಹಳ್ಳತಿಟ್ಟಾಗಿ ಹರಿದುಹೋಗಿಯೂ, ತನಗೆ ಸಾಕಷ್ಟು ಉದ್ದ ಸಾಲ ದೆಯೂ, ಮಲಿನವಾಗಿಯೂ, ತಿಗಣೆ ಮುಂತಾದ ಜಂತುಗಳುಳ್ಳದ್ದಾಗಿಯೂ ಇರುವ ಹಾಸಿಗೆಯಲ್ಲಿ ಮಲಗಬಾರದು.

ಪ್ರಾಚ್ಯಾಂ ದಿಶಿ ಶಿರಃ ಶಸ್ತಂ ಯಾಮ್ಯಾಯಾಮಪಿ ಭೂಪತೇ ।
ಸದೈವ ಸ್ವಪತಾಂ ಪುಸಾಂ ವಿಪರೀತಂ ತು ರೋಗದಂ ॥ ೧೨೨ ॥

ಋತಾವುಪಗಮಃ ಶಸ್ತಃ ಸ್ವಪತ್ನ್ಯಾಂ ಹ್ಯವನೀಪತೇ ।
ಪುಣ್ಯಕ್ಷೇರ್ ಚ ಶುಭೇ ಕಾಲೇ ಪುತ್ರಾ ಯುಗ್ಮಾಸು ರಾತ್ರಿಷು ॥೧೨೩॥

ನ ಚಾಸ್ನಾತಾಂ ಸ್ತ್ರಿಯಂ ಗಚ್ಛೇದ್ಗರ್ಭಿಣೀಂ ನ ರಜಸ್ವಲಾಂ ।
ನಾನಿಷ್ಟಾಂ ವೈ ನ ಕುಪಿತಾಂ ನಾಶಸ್ತಾಂ ನ ಚ ರೋಗಿಣೀಂ ॥೧೨೪॥

ನಾದಾಕ್ಷಿಣಾಂ ನಾನ್ಯಕಾಮಾಂ ನಾಕಾಮಾಂ ನಾನ್ಯಯೋಷಿತಂ ।
ಸುಕ್ಷಾಮಾಮತ್ಯಭುಕ್ತಾಂ ಚ ಸ್ವಯಂ ಚೈಭಿರ್ಗುಣೈರ್ಯುತಃ॥೧೨೫॥

---

೧೨೨. ಅಯ್ಯಾ ರಾಜನೇ ! ಕೇಳು, ಪೂರ್ವದಿಕ್ಕಿಗೆ ತಲೆಮಾಡಿಕೊಂಡು ಮಲಗುವುದು ಪ್ರಶಸ್ತವಾದುದು. ದಕ್ಷಿಣದಿಕ್ಕಿಗೆ ತಲೆಮಾಡಿ ಮಲಗುವುದೂ ಹಾಗೆಯೇ ಒಳ್ಳೆಯದು. ಯಾವಾಗಲೂ ಮಲಗುವುದಕ್ಕೆ ಈ ನಿಯಮವನ್ನನು ಸರಿಸಬೇಕು. ಇದಕ್ಕೆ ವಿರೋಧವಾದ ದಿಕ್ಕಿಗೆ ತಲೆಯಿಟ್ಟು ಮಲಗುವುದು ರೋಗದಾಯಕವಾದುದು.

೧೨೩. ಅಯ್ಯಾ ಭೂಪತಿಯೇ ! ಋತುಸ್ನಾನವಾದ ಮೇಲೆ ಶುಭನಕ್ಷತ್ರ ಶುಭಲಗ್ನ ಇವುಗಳಲ್ಲಿ ಸ್ವಸ್ತ್ರೀಸಂಗಮವು ಪ್ರಶಸ್ತವಾದುದು. ಆದರಲ್ಲಿಯೂ ಋತುದಿನದಿಂದ ಸಮದಿನಗಳಲ್ಲಿ ಎಂದರೆ ೬, ೮ ಇಂಥ ದಿನಗಳಲ್ಲಿ ರಾತ್ರಿಯಲ್ಲಿ ಗರ್ಭಾದಾನಮಾಡಿದರೆ ಗಂಡುಮಕ್ಕಳು ಹುಟ್ಟುತ್ತಾರೆ.

೧೨೪. ಸ್ನಾನಮಾಡದೆ ಇರುವವಳು, ಗರ್ಭಿಣಿಯಾದವಳು, ರಜಸ್ವಲೆಯಾಗಿರುವವಳು, ಸಂಗಮಾಭಿಲಾಷೆಯಿಲ್ಲದವಳು, ಕೋಪಾವಿಷ್ಟಳಾದವಳು, ರೋಗಪೀಡಿತೆ ಇಂತಹ ಸ್ತ್ರೀಸಂಗವನ್ನು ಪುರುಷನು ಮಾಡಬಾರದು.

೧೨೫. ತನ್ನೊಡನೆ ರತಿಕ್ರೀಡೆಗೆ ಅಸಮರ್ಥಳು, ಅನ್ಯಮನಸ್ಕಳು, ಕಾಮೋದ್ರೇಕವಿಲ್ಲದವಳು, ಪರಸ್ತ್ರೀ, ಬಹು ಕೃಶವಾಗಿರುವವಳು, ಅತಿಯಾಗಿ ಭೋಜನಮಾಡಿದವಳು, ಭೋಜನವನ್ನೇ ಮಾಡದೆ ಇರುವವಳು ಇಂತಹ ಸ್ತ್ರೀಯಲ್ಲಿಯೂ ಸಂಗಮಮಾಡಬಾರದು. ಸ್ತ್ರೀಯ ವಿಷಯದಲ್ಲಿ ಹೇಳಿದ ಈ ದೋಷಗಳು ತನಗೂ ಇಲ್ಲದೆ ಗುಣಯುಕ್ತನಾಗಿದ್ದರೆ ಪುರುಷನು ಆಗ ಸ್ತ್ರೀಸಂಗ ಮಾಡಬೇಕು.

**ಸ್ನಾತಃ ಸುಗಂಧಧೃಗ್ಧೃಷ್ಟೋ ನ ಶ್ರಾಂತಃ ಕ್ಷುಧಿತೋಽಪಿ ವಾ ।**
**ಸಕಾಮಃ ಸಾನುರಾಗಶ್ಚ ವ್ಯವಾಯಂ ಪುರುಷೋ ವ್ರಜೇತ್ ॥೧೨೬॥**

**ಚತುರ್ದಶ್ಯಾಂ ತಥಾಷ್ಟಮ್ಯಾಂ ಪಂಚದಶ್ಯಾಂ ಚ ಪರ್ವಸು ।**
**ತೈಲಾಭ್ಯಂಗಂ ತಥಾ ಭೋಗಾನ್ ಯೋಷಿತಶ್ಚ ವಿವರ್ಜಯೇತ್॥೧೨೭॥**

**ಶೇಷಾಹೇ ತ್ವಪಿ ಶೇಷಾಂಶ್ಚ ವಶ್ಯಾತ್ಮಾ ಯೋ ನಿರಸ್ಯತಿ ।**
**ತಸ್ಯ ಧರ್ಮಾರ್ಥಕಾಮಾನಾಂ ಹಾನಿರ್ನಾಲ್ಪಾಪಿ ಜಾಯತೇ ॥೧೨೮॥**

**ಕ್ಷುರಕರ್ಮಣಿ ಚಾಂತೇ ಚ ಸ್ತ್ರೀಸಂಭೋಗೇ ಚ ಭಾರತ ।**
**ಸ್ನಾಯೀತ ಚೈಲವಾನ್ ಪ್ರಾತಃ ಕಟಭೂಮಿಮುಪೇತ್ಯ ಚ ॥ ೧೨೯ ॥**

**ಗುರೋಃ ಪತಿವ್ರತಾನಾಂ ಚ ತಥಾ ಯಜ್ಞತಪಸ್ವಿನಾಂ ।**
**ಪರಿವಾದಂ ನ ಕುರ್ವೀತ ಪರಿಹಾಸೇಽಪಿ ಭಾರತ ॥ ೧೩೦ ॥**

---

೧೨೬. ಸ್ನಾನಮಾಡಿ ಸುಗಂಧಧಾರಣೆಮಾಡಿ ಧಾಷ್ಟ್ಯವುಳ್ಳವನಾಗಿದ್ದಾಗ ಮತ್ತು ಶ್ರಾಂತನಾಗದೆ ಹಸಿವು ಪೀಡಿಸದೆ ಇರುವಾಗ, ಸಕಾಮನಾಗಿ ಸ್ತ್ರೀಯಲ್ಲಿ ಅನುರಾಗವುಳ್ಳವನಾಗಿ ಸ್ತ್ರೀಸಂಗಮಾಡಬೇಕು.

೧೨೭. ಚತುರ್ದಶಿ, ಅಷ್ಟಮಿ, ಪೂರ್ಣಿಮೆ, ಪರ್ವಕಾಲ ಈ ದಿನಗಳಲ್ಲಿ ತೈಲಾಭ್ಯಂಗ, ಭೋಗ, ಸ್ತ್ರೀಸಂಗ ಇಷ್ಟನ್ನೂ ವರ್ಜ್ಯಮಾಡಬೇಕು.

೧೨೮. ಚತುರ್ದಶಿ ಮುಂತಾದ ದಿನಗಳಲ್ಲದೆ ಉಳಿದ ದಿನಗಳಲ್ಲಿಯೂ ತೈಲಾಭ್ಯಂಗಾದಿಗಳಲ್ಲದೆ ಉಳಿದ ಇತರ ಭೋಗವಸ್ತುಗಳನ್ನು ಜಿತೇಂದ್ರಿಯನಾದ ಪುರುಷನು ತ್ಯಾಗಮಾಡಿದರೆ ಅಂಥವನಿಗೆ ಧರ್ಮ ಅರ್ಥ ಕಾಮುಗಳೆಂಬ ತ್ರಿವರ್ಗಗಳಲ್ಲಿ ಸ್ವಲ್ಪವೂ ಹಾನಿಸಂಭವಿಸುವುದಿಲ್ಲ.

೧೨೯. ಅಯ್ಯಾ ಭರತವಂಶಜನೇ! ಕ್ಷೌರಕರ್ಮ ಮಾಡಿಸಿಕೊಂಡಾಗಲೂ, ಜ್ಞಾತಿಗಳು ಮೊದಲಾದವರ ಮರಣವಾದಾಗಲೂ, ಸ್ತ್ರೀಸಂಭೋಗಾನಂತರದಲ್ಲೂ ಪ್ರಾತಃಕಾಲದಲ್ಲಿ ಪರ್ವತದ ತಪ್ಪಲಪ್ರದೇಶಕ್ಕೆ ಹೋಗಿ ಸಚೈಲ ಸ್ನಾನಮಾಡಬೇಕು.

೧೩೦. ಅಯ್ಯಾ ಭರತಕುಲೋತ್ಪನ್ನನೇ! ಗುರು, ಪತಿವ್ರತಾಸ್ತ್ರೀ, ಯಜ್ಞದೀಕ್ಷಿತ, ತಪಸ್ವಿ ಇವರನ್ನು ಪರಿಹಾಸಕ್ಕಾಗಿ ಸಹ ನಿಂದನಮಾಡಬಾರದು.

**ಯುಗಪಜ್ಜ್ವಲಮಗ್ನಿಂ ಚ ಬಿಭೃಯಾನ್ನವಿಚಕ್ಷಣಃ ।**
**ಗುರುಂ ದೇವಾನ್ಪ್ರತಿ ತಥಾ ನ ಚ ಪಾದೌ ಪ್ರಸಾರಯೇತ್ ॥೧೩೧॥**

**ನಾಚಕ್ಷೀತ ಧಯಂತೀಂ ಗಾಂ ಜಲಂ ನಾಂಜಲಿನಾ ಪಿಬೇತ್ ।**
**ವಾತಾತಪೌ ನ ಸೇವೇತ ಅನುತಾಪಂ ಚ ವರ್ಜಯೇತ್ ॥ ೧೩೨ ॥**

**ದಾಸಂ ಶಪೇನ್ನ ವೈ ಕ್ರುದ್ಧಃ ಸರ್ವಬಂಧೂನಮತ್ಸರೀ ।**
**ಭೀತಾಶ್ವಾಸನಕೃತ್ಸಾಧುಃ ಸ್ವರ್ಗಸ್ತಸ್ಯಾವ್ಯಯಂ ಫಲಂ ॥ ೧೩೩ ॥**

**ನೋರ್ಧ್ವಂ ತು ಪತ್ತನದ್ವಾರಂ ನಿರೀಕ್ಷ್ಯ ಪರ್ಯಟೇನ್ನರಃ ।**
**ಯುಗಮಾತ್ರಂ ಮಹೀಪೃಷ್ಠೇ ನರೋ ಗಚ್ಛೇದ್ವಿಲೋಕಯನ್ ॥೧೩೪॥**

---

೧೩೧. ಪ್ರಾಜ್ಞನಾದವನು ಪರಸ್ಪರ ವಿರುದ್ಧವಾದ ಎರಡು ವಸ್ತುಗಳನ್ನು ಎಂದರೆ ನೀರು ಬೆಂಕಿ ಇವುಗಳನ್ನು ಏಕಕಾಲದಲ್ಲಿ ಹಿಡಿದುಕೊಂಡಿರಬಾರದು. (ಈಗಲೂ ತಿಳಿದವರು ಎಣ್ಣೆ ಶೀಗೆಕಾಯಿ ಎರಡನ್ನೂ ಏಕಕಾಲದಲ್ಲಿ ವ್ಯಾಪಾರ ಮಾಡಿ ಮನೆಗೆ ತರುವುದಿಲ್ಲ.) ಗುರುಗಳು, ದೇವತಾಪ್ರತಿಕೃತಿಗಳು ಇರುವ ಕಡೆಗೆ ಇದಿರಾಗಿ ಕಾಲುಗಳನ್ನು ಚಾಚಬಾರದು.

೧೩೨. ಪರರ ಮನೆಯ ಹಸುವು ಆ ಮನೆಯವರ ಪರೋಕ್ಷದಲ್ಲಿ ತನ್ನ ಕರುವಿಗೆ ಹಾಲನ್ನು ಉಣ್ಣಿಸುತ್ತಿದ್ದರೆ ಆ ವಿಷಯವನ್ನು ತಿಳಿಸುವುದಕ್ಕೆ ಹೋಗಬಾರದು. ಬಾಯಾರಿದಾಗ ಕೈಬೊಗಸೆಯಿಂದ ನೀರನ್ನು ಕುಡಿಯಬಾರದು. ಗಾಳಿ, ಬಿಸಿಲು, ಇವುಗಳನ್ನು ಒಟ್ಟಿಗೆ ಸೇವಿಸಬಾರದು. ಪರರಿಗೆ ಅನುತಾಪ ಹುಟ್ಟಿಸುವ ಕೃತ್ಯವನ್ನು ತ್ಯಜಿಸಿಬಿಡಬೇಕು.

೧೩೩. ಕೋಪಬಂದಾಗ ಭೃತ್ಯನನ್ನು ಶಪಿಸಬಾರದು. ತನ್ನ ಬಂಧುಗಳೆಲ್ಲರಲ್ಲೂ ಮಾತ್ಸರ್ಯ ತೋರಿಸಬಾರದು. ಭಯಗ್ರಸ್ತರಾದವರನ್ನು ಸಮಾಧಾನಪಡಿಸಬೇಕು. ಸಾಧುಸ್ವಭಾವವುಳ್ಳವನಾಗಿರಬೇಕು. ಹೀಗಿದ್ದರೆ ಅಂಥವನಿಗೆ ಸ್ವರ್ಗಲಾಭವಾಗಿ ಅಕ್ಷಯವಾದ ಫಲವು ಅಲ್ಲಿ ಲಭಿಸುವುದು.

೧೩೪. ಮಾನವನು ಕತ್ತನ್ನು ಎತ್ತಿ ನಗರದ ಬಾಗಿಲನ್ನು ನೋಡುತ್ತಾ (ದಾರಿಮೇಲೆ ದೃಷ್ಟಿಯಿಡದೆ) ಪ್ರವೇಶಿಸಬಾರದು. ದಾರಿಯಲ್ಲಿ ನಡೆಯುತ್ತಿರುವಾಗ ಮುಂದುಗಡೆ ಒಂದು ಯುಗ (ಒಂದುಮೊಳ) ಪ್ರದೇಶದವರೆಗೆ ದೃಷ್ಟಿಪ್ರಸಾರ ಮಾಡುತ್ತಾ ಹೋಗಬೇಕು.

ವೃಥಾ ಮಾಂಸಂ ನ ಖಾದೇತ ಪೃಷ್ಠಮಾಂಸಂ ತಥೈವ ಚ ।
ಆಕ್ರೋಶಂ ಚ ವಿವಾದಂ ಚ ಪೈಶುನ್ಯಂ ಚ ವಿವರ್ಜಯೇತ್ ॥೧೩೫॥

ಸಂಯಾವಂ ಕೃಶರಂ ಮಾಂಸಂ ಶಷ್ಕುಲೀ ಪಾಯಸಂ ತಥಾ ।
ಆತ್ಮಾರ್ಥೇ ನ ಪ್ರಕರ್ತವ್ಯಂ ದೇವತಾನಾಂ ಪ್ರಕಲ್ಪಯೇತ್ ॥೧೩೬॥

ಅಜಾಶ್ಚ ನಾವಕರ್ಷೇತ ತಾ ಬಹಿರ್ಧಾರಯಂತಿ ಚ ।
ರಕ್ತಮಾಲ್ಯಂ ನ ಧಾರ್ಯಂ ಸ್ಯಾಚ್ಛುಕ್ಲಂ ಧಾರ್ಯಂ ತು ಪಂಡಿತೈಃ ॥

ವರ್ಜಯಿತ್ವಾತ್ರ ಕಮಲಂ ತಥಾ ಕುವಲಯಂ ವಿಭೋ ।
ರಕ್ತಂ ಶಿರಸಿ ಧಾರ್ಯಂ ಚ ತಥಾ ಪಾನೇಯಮಿತ್ಯಪಿ ॥ ೧೩೮ ॥

ಕಾಂಚನೀಯಾಪಿ ಯಾ ಮಾಲಾ ಸಾ ನದುಷ್ಯತಿ ಕರ್ಹಿಚಿತ್ ।
ಅನ್ಯದೇವ ಭವೇದ್ವಾಸಃ ಶಯನೀಯೇ ನರೋತ್ತಮ ॥ ೧೩೯ ॥

---

೧೩೫. ನಿಮಿತ್ತವಿಲ್ಲದೆ ವ್ಯರ್ಥವಾಗಿ ಮಾಂಸಭಕ್ಷಣೆ ಮಾಡಬಾರದು. ಮತ್ತು ಪ್ರಾಣಿಯ ಪೃಷ್ಠಮಾಂಸವನ್ನು ತಿನ್ನಬಾರದು. ಇತರರ ಮೇಲೆ ಆಕ್ರೋಶ, ಜಗಳ, ಚಾಡಿಹೇಳುವುದು ಇಷ್ಟನ್ನೂ ತ್ಯಜಿಸಬೇಕು.

೧೩೬. ಸಜ್ಜಿಗೆ, ಚಿಗುಳಿ, ಮಾಂಸ, ಚಕ್ಕುಲಿ, ಪಾಸಯ ಇಷ್ಟನ್ನೂ ಕೇವಲ ತನ್ನ ಉಪಭೋಗಕ್ಕೋಸ್ಕರವಾಗಿ ತಯಾರಿಸಬಾರದು. ದೇವರ ನಿವೇದನಾರ್ಥವಾಗಿ ಮಾಡಬೇಕು.

೧೩೭. ಆಡುಗಳನ್ನು ಎಳೆಯಬಾರದು. ಮತ್ತು ಅವುಗಳನ್ನು ಮನೆಯ ಹೊರಗೇ ಕಟ್ಟಬೇಕು. ತಿಳಿದವರು ಕೆಂಪಾದ ಪುಷ್ಪಮಾಲಿಕೆಯನ್ನು ಧರಿಸಬಾರದು. ಬಿಳಿಯ ಪುಷ್ಪಹಾರವನ್ನೇ ಧರಿಸಬೇಕು.

೧೩೮. ಅಯ್ಯಾ ರಾಜನೇ ! ಕಮಲ ಮತ್ತು ನೈದಿಲೆ ಈ ಎರಡು ಕೆಂಪು ಪುಷ್ಪಗಳನ್ನು ಬಿಟ್ಟು ಇತರ ಕೆಂಪು ಪುಷ್ಪಗಳನ್ನು ತಲೆಯಲ್ಲಿ ಧರಿಸಬಾರದು. ಇವೆರಡೂ ರಕ್ತಪುಷ್ಪವಾದರೂ ಶಿರಸ್ಸಿನಲ್ಲಿ ಧಾರಣಮಾಡಬಹುದು.

೧೩೯. ಅಯ್ಯಾ ನರೋತ್ತಮನೇ ! ಭಂಗಾರದಿಂದ ಮಾಡಿದ ಸರಗಳು ಯಾವ ಕಾಲದಲ್ಲೂ ದುಷ್ಟವೆನಿಸುವುದಿಲ್ಲ. ಮಲಗುವ ಹಾಸಿಗೆಗೇ ಪ್ರತ್ಯೇಕವಾದ ಬಟ್ಟೆಯನ್ನು ಉಪಯೋಗಿಸಬೇಕು.

**ಅನ್ಯದರ್ಚಾಸು ದೇವಾನಾಮನ್ಯದ್ಧಾರ್ಯಂ ಸಭಾಸು ಚ |**
**ಪಿಪ್ಪಲಂ ಚ ವಟಂ ಚೈವ ಶೀರ್ಣಶ್ಲೇಷ್ಮಾಂತಕಂ ತಥಾ || ೧೪೦ ||**

**ಉದುಂಬರಂ ನ ಖಾದೇತ ಭವ್ಯಾರ್ಥೀ ಪುರುಷೋತ್ತಮ |**
**ಪತಿತೈಶ್ಚ ಕಥಾಂತೇ ಚ ಚ್ಛೇದನಂ ಚ ವಿವರ್ಜಯೇತ್ || ೧೪೧ ||**

**ಪತಿತಃ ಸ್ಯಾನ್ನರೋ ರಾಜನ್ ಪತಿತೈಸ್ತು ಸಹಾಚರನ್ |**
**ವೃದ್ಧೋ ಜ್ಞಾತಿಸ್ತಥಾಮಿತ್ರಂ ದರಿದ್ರೋ ಯೋ ಭವೇದಿಹ ||೧೪೨||**

**ಗೃಹೇ ಸಂಸ್ಥಾಪನೀಯಾಸ್ತೇ ಗೃಹವೃದ್ಧಿಮಭೀಪ್ಸತಾ |**
**ಗೃಹೇ ಪಾರಾವತಾ ಧನ್ಯಾಃ ಶುಕಾಶ್ಚ ಸಹಸಾರಿಕಾಃ || ೧೪೩ ||**

---

೧೪೦. ದೇವತಾರ್ಚನೆಮಾಡುವಾಗ ಧರಿಸುವುದಕ್ಕೇ ಬೇರೆ ಬಟ್ಟೆಯನ್ನು ಉಪಯೋಗಿಸಬೇಕು. ಸಭಾಪ್ರವೇಶಮಾಡುವಾಗ ಧರಿಸುವುದಕ್ಕಾಗಿ ಬೇರೆ ಬಟ್ಟೆಯಿರಬೇಕು. ಅಯ್ಯಾ ರಾಜನೇ! ಶುಭಾಕಾಂಕ್ಷಿಯಾದ ಮಾನವನು ಅಶ್ವತ್ಥಫಲ, ವಟವೃಕ್ಷಫಲ, ಒಡೆದುಹೋದ ಚಳ್ಳೆಯಹಣ್ಣು, ಅತ್ತಿಯಹಣ್ಣು ಇವುಗಳನ್ನು ತಿನ್ನಬಾರದು.

೧೪೧. ಪತಿತರ ಸಹವಾಸ, ಅವರೊಡನೆ ಸಂಭಾಷಣೆ ಇತರರು ಮಾತಾಡುತ್ತಿರುವಾಗ ಅವರ ಮಾತಿಗೆ ಅಡ್ಡಿಯಾಗಿ ಮಾತಾಡುವುದು. ಈ ಅಭ್ಯಾಸಗಳನ್ನು ಬಿಡಬೇಕು.

೧೪೨. ಅಯ್ಯಾ ರಾಜನೇ! ಪಾಪಕೃತ್ಯವನ್ನಾಚರಿಸಿ ಪತಿತರಾದವರ ಜತೆ ಸೇರಿ ಊಟಮಾಡುವವನೂ, ಪಾಕಾದಿಗಳನ್ನು ಮಾಡುವವನೂ ಸಹ ಪತಿತನಾಗುತ್ತಾನೆ.

೧೪೩. ತನ್ನ ಮನೆಯು ಅಭಿವೃದ್ಧಿಯಾಗಿ ನೆಲೆಯಾಗಿರಬೇಕೆಂದಿರುವವನು ಮುದುಕನಾದ ಜ್ಞಾತಿ, ದರಿದ್ರನಾದ ಸ್ನೇಹಿತ ಇವರನ್ನು ಮನೆಯಲ್ಲಿಟ್ಟುಕೊಂಡು ರಕ್ಷಿಸಬೇಕು.

ಭವಂತ್ಯೇತೇ ತಥಾಪಾಪಾಸ್ತಥಾ ವೈ ತಿಲಪಾಯಿಕಾಃ ।
ಅಜೋಕ್ಷಾ ಚಂದನಂ ವೀಣಾ ಆದರ್ಶೋ ಮಧುಸರ್ಪಿಷೀ ॥೧೪೪॥

ಜಲಾಗ್ನೀ ಚೈವ ಬಿಭೃಯಾದ್ಗೃಹೇ ನಿತ್ಯಮಿತಿ ಸ್ಥಿತಿಃ ।
ಧನುರ್ವೇದೇ ಚ ಸತತಂ ಯತ್ನಃ ಕಾರ್ಯೋ ನರಾಧಿಪ ॥ ೧೪೫ ॥

ಹಸ್ತಿಪೃಷ್ಠೇಽಶ್ವಪೃಷ್ಠೇ ಚ ರಥ ಚರ್ಯಾಸು ಚೈವ ಹಿ ।
ಯತ್ನವಾಂಶ್ಚೈವ ರಾಜೇಂದ್ರ ನಯವಾನ್ಸುಖಮೇಧತೇ ॥ ೧೪೬ ॥

ಪ್ರಜಾಪಾಲನಯುಕ್ತಶ್ಚ ನ ಕ್ಷಾಂತಿಂ ಲಭತೇ ನೃಪ ।
ಯಜ್ಞಶಾಸ್ತ್ರಂ ಚ ವಿಜ್ಞೇಯಂ ಶಬ್ದಶಾಸ್ತ್ರಂ ಚ ಭಾರತ ॥ ೧೪೭ ॥

---

೧೪೪. ಮನೆಯಲ್ಲಿ ಪಾರಿವಾಳವಿದ್ದರೆ ಕೃತಕೃತ್ಯತೆ (ಸೌಂದರ್ಯ) ಇರುತ್ತದೆ. ಶುಕ, ಸಾರಿಕೆ (ಹೆಣ್ಣುಗಿಳಿ) ಎಣ್ಣೆಕುಡಿಯುವ ಅಕ್ಕಳೆ ಇವುಗಳು ಗೃಹದಲ್ಲಿ ಇರಬಾರದು.

೧೪೫. ಆಡು, ಎತ್ತು, ಚಂದನ, ವೀಣೆ, ಕನ್ನಡಿ, ಜೇನುತುಪ್ಪ, ತುಪ್ಪ, ನೀರು, ಬೆಂಕಿ ಇವುಗಳನ್ನು ಮನೆಯಲ್ಲಿ ಯಾವಾಗಲೂ ಇಟ್ಟಿರಬೇಕು. ಅಯ್ಯಾ ರಾಜನೇ ! ಧನುರ್ವೇದದಲ್ಲಿ ಯಾವಾಗಲೂ ಪ್ರಯತ್ನಮಾಡಬೇಕು.

೧೪೬. ಅಯ್ಯಾ ರಾಜೇಂದ್ರ ! ರಾಜರು ಆನೆಯ ಮೇಲೆ ಏರಿಹೋಗುವ ಅಭ್ಯಾಸ, ಕುದುರೆ ಸವಾರಿ, ರಥ ನಡೆಯಿಸುವುದು ಇವುಗಳಲ್ಲಿ ವಿಶೇಷ ಪರಿಶ್ರಮ ಹೊಂದಬೇಕು. ಈ ಪ್ರಕಾರ ನೀತಿಮಾರ್ಗದಲ್ಲಿ ನಡೆಯುವವನು ಸುಖಹೊಂದುವನು. ಆದುದರಿಂದ ನೀನೂ ನೀತಿಪರಿಪಾಲನೆಯನ್ನು ಅವಶ್ಯವಾಗಿ ಮಾಡು.

೧೪೭. ಅಯ್ಯಾ ರಾಜನೇ ! ಪ್ರಜಾಸಂರಕ್ಷಣೋದ್ಯುಕ್ತನಾದ ರಾಜನಿಗೆ ಸಾಮಾನ್ಯವಾಗಿ ಕ್ಷಮೆಯು ಇರುವುದಿಲ್ಲ. ಇದನ್ನು ಬಿಡಬಾರದು. ವಿಪ್ರೋತ್ತಮನು ಯಾಗಪ್ರತಿಪಾದನಮಾಡುವ ಕರ್ಮಕಾಂಡ ಮತ್ತು ಪೂರ್ವಮೀಮಾಂಸ ಇವನ್ನೂ ಮತ್ತು ವ್ಯಾಕರಣಶಾಸ್ತ್ರವನ್ನೂ ಅಧ್ಯಯನಮಾಡಿರಬೇಕು.

**ಗಾಂಧರ್ವಶಾಸ್ತ್ರಂ ವಿಜ್ಞೇಯಂ ಕಲಾ ಜ್ಞೇಯಾಶ್ಚ ಭಾರತ ।**
**ಪುರಾಣಮಿತಿಹಾಸಂ ಚ ತಥಾಖ್ಯಾನಾನಿ ಯಾನಿ ಚ ॥ ೧೪೮ ॥**

**ಏಷ ತೇ ಲಕ್ಷಣೋದ್ದೇಶ ಆಚಾರಸ್ಯ ಪ್ರಕೀರ್ತಿತಃ ।**
**ಶೇಷಾಶ್ಚ ವೇದ್ಯಾ ವೃದ್ಧೇಭ್ಯಃ ಪ್ರತ್ಯಾಹಾರ್ಯಾ ನರಾಧಿಪ ॥೧೪೯॥**

**ಆಚಾರೋ ಭೂತಿಜನನ ಆಚಾರಃ ಕೀರ್ತಿವರ್ಧನಃ ।**
**ಆಚಾರಾದ್ವರ್ಧತೇ ಹ್ಯಾಯುರಾಚಾರೋ ಹಂತ್ಯಲಕ್ಷಣಂ ॥೧೫೦॥**

**ಆಗಮಾನಾಂ ಹಿ ಸರ್ವೇಷಾಮಾಚಾರಃ ಶ್ರೇಷ್ಠ ಉಚ್ಯತೇ ।**
**ಆಚಾರಃ ಪರಮೋ ಧರ್ಮ ಆಚಾರಾದ್ವರ್ಧತೇ ಧನಂ ॥ ೧೫೧ ॥**

**ಪುಣ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ ।**
**ಸರ್ವವರ್ಣಾನುಕಂಪಾರ್ಥಂ ಮಯ್ಯೈತತ್ಸಮುದಾಹೃತಂ ॥ ೧೫೨ ॥**

---

೧೪೮. ಪ್ರಾಜ್ಞನು ಗಾಂಧರ್ವವಿದ್ಯ (ಸಂಗೀತ) ವನ್ನೂ ಇತರ ಕಲೆಗಳನ್ನೂ ತಿಳಿದಿರಬೇಕು. ಹೀಗೆ ಪುರಾಣ ಇತಿಹಾಸ ಇತರ ಚಾರಿತ್ರಕ ಗ್ರಂಥಗಳು ಇವುಗಳನ್ನೆಲ್ಲಾ ತಿಳಿದಿರಬೇಕು.

೧೪೯. ಅಯ್ಯಾ ರಾಜನೇ! ಕೇಳು, ನಾನು ಈಗ ನಿನಗೆ ಆಚಾರದ ಕೆಲವು ಕುರುಹುಗಳನ್ನು ಮಾತ್ರ ಹೇಳಿರುತ್ತೇನೆ. ಇನ್ನೂ ಎಷ್ಟೋ ಶಿಷ್ಟಾಚಾರಗಳನ್ನು ವೃದ್ಧರಿಂದ ಕೇಳಿ ತಿಳಿದುಕೊಂಡು ಆಚರಣೆಯಲ್ಲಿ ಇಟ್ಟುಕೊಳ್ಳಬೇಕು.

೧೫೦. ಆಚಾರವು ಐಶ್ವರ್ಯಪ್ರದವಾದುದು. ಆಚಾರವು ಕೀರ್ತಿಯನ್ನು ಅಭಿವೃದ್ಧಿಗೊಳಿಸುವುದು. ಸದಾಚಾರಾನುಷ್ಠಾನದಿಂದ ಆಯುಸ್ಸು ವೃದ್ಧಿಯಾಗುವುದು. ಆಚಾರವು ಮಾನವನ ಅವಲಕ್ಷಣಗಳನ್ನು ನಾಶಮಾಡುವುದು.

೧೫೧. ಶ್ರುತಿ ಸ್ಮೃತಿ ಮೊದಲಾದುವುಗಳಲ್ಲಿ ಆಚಾರವೇ ಶ್ರೇಷ್ಠತಮವೆಂದು ಉಕ್ತವಾಗಿದೆ. ಈ ಆಚಾರವೇ ಪರಮಧರ್ಮವು. ಸದಾಚಾರದಿಂದ ಮಾನವನ ಸಂಪತ್ತು ವೃದ್ಧಿಯಾಗುವುದು ನಿಶ್ಚಯ.

೧೫೨. ಪುಣ್ಯಜನಕವಾಗಿಯೂ ಯಶಃಪ್ರದವಾಗಿಯೂ ಆಯುರ್ವರ್ಧಕವಾಗಿಯೂ ಸ್ವರ್ಗಸಾಧನವಾಗಿಯೂ ಮಹಾಮಂಗಳಪ್ರದವಾಗಿಯೂ ಇರುವ ಈ ಆಚಾರಗಳನ್ನು ಬ್ರಾಹ್ಮಣಾದಿ ಎಲ್ಲಾ ವರ್ಣದವರಿಗೂ ತಿಳಿಯಲಿ ಎಂದು ಆಶಯದಿಂದ ನಾನು ನಿನಗೆ ಇಲ್ಲಿ ಹೇಳಿರುತ್ತೇನೆ.

ಆಚಾರ ಏವ ನರಪುಂಗವ ಸೇವ್ಯಮಾನೋ ।
ಧರ್ಮಾರ್ಥಕಾಮ ಫಲದೋ ಭವತೀಹ ಪುಂಸಾಂ ॥
ತಸ್ಮಾತ್ಸದೈವ ವಿದುಷಾವಹಿತೇನ ರಾಜ- ।
ಶ್ಶಾಸ್ತ್ರೋದಿತೋ ಹ್ಯನುದಿನಂ ಪರಿಪಾಲನೀಯಃ ॥೧೫೩॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ಸದಾಚಾರಧರ್ಮವರ್ಣನಂ
ನಾಮ ಪಂಚಾಧಿಕದ್ವಿಶತತಮೋಽಧ್ಯಾಯಃ.



---

೧೫೩. ಅಯ್ಯಾ ಮಾನವಶ್ರೇಷ್ಠನೇ! ಕೇಳು, ಈ ಲೋಕದಲ್ಲಿ ಪುರುಷರಿಗೆ ಅವರು ಆಚರಿಸಿದ ಸದಾಚಾರವೇ ಧರ್ಮ ಅರ್ಥ ಕಾಮ ಎಂಬ ತ್ರಿವರ್ಗಫಲವನ್ನು ಕೊಡುತ್ತದೆ. ಆದುದರಿಂದ ವಿದ್ವಾಂಸನು ಸಾವಧಾನವಾಗಿ ಯಾವಾಗಲೂ ಶಾಸ್ತ್ರೋಕ್ತ ಸದಾಚಾರಗಳನ್ನು ಪ್ರತಿದಿನವೂ ಪರಿಪಾಲನಮಾಡುತ್ತಿರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದದಲ್ಲಿ ಸದಾಚಾರವಿಧಿವರ್ಣನೆಯೆಂಬ
ಇನ್ನೂರಐದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಡಧಿಕದ್ವಿಶತತಮೋಽಧ್ಯಾಯಃ

॥ ನಾರದ ಉವಾಚ ॥

ದೀರ್ಘಾಯುರಾರೋಗ್ಯಕುಲಾದಿವೃದ್ಧಿ ।
ಯುಕ್ತಃ ಪುಮಾನ್ಯೇನ ಗುಣಾನ್ವಿತಃ ಸ್ಯಾತ್ ॥
ಮುಹುರ್ಮುಹುರ್ಜನ್ಮನಿ ಯೇನ ಸಮ್ಯಕ್ ।
ವ್ರತಂ ಮಮ ಬ್ರೂಹಿ ತದಿಂದುಮೌಳೇ ॥ ೧ ॥

॥ ಶ್ರೀ ಭಗವಾನುವಾಚ ॥

ತ್ವಯಾ ಪೃಷ್ಟಮಿದಂ ಸಮ್ಯಗಮುತ್ರಾಕ್ಷಯಕಾರಕಂ ।
ರಹಸ್ಯಂ ತೇ ಪ್ರವಕ್ಷ್ಯಾಮಿ ಯತ್ಪುರಾಣವಿದೋ ವಿದುಃ ॥ ೨ ॥

---

## ಇನ್ನೂರಆರನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಓ ಚಂದ್ರಶೇಖರನಾದ ಪರಮೇಶ್ವರನೇ ! ಮಾನವನು ಪ್ರತಿಜನ್ಮದಲ್ಲಿಯೂ ಗುಣಾನ್ವಿತನೂ ದೀರ್ಘಾಯುರಾರೋಗ್ಯ ವಂಶಾಭಿವೃದ್ಧಿಗಳಿಂದ ಕೂಡಿದವನೂ ಆಗಬೇಕಾದರೆ ಯಾವ ವ್ರತವನ್ನು ಆಚರಿಸಬಹುದೋ ಅಂತಹ ಶ್ರೇಷ್ಠವಾದ ವ್ರತವನ್ನು ನನಗೆ ಚೆನ್ನಾಗಿ ಉಪದೇಶ ಮಾಡು ಎನ್ನಲು.

೨. ಶ್ರೀ ಪರಮೇಶ್ವರನು ಹೇಳುತ್ತಾನೆ—ಓ ನಾರದ! ನಿನ್ನ ಈ ಪ್ರಶ್ನೆಯು ಬಲು ಚೆನ್ನಾಗಿದೆ. ಪರಲೋಕದಲ್ಲಿ ಅಕ್ಷಯ ಫಲದಾಯಕವೂ ಅತಿ ರಹಸ್ಯವೂ ಆದ ಒಂದು ವ್ರತವನ್ನು ನಿನಗೆ ಹೇಳುತ್ತೇನೆ. ನಾನು ಹೇಳುವ ಈ ವ್ರತವನ್ನು ಪುರಾಣಜ್ಞರು ತಿಳಿದಿರುತ್ತಾರೆ.

ರೋಹಿಣೀಚಂದ್ರಶಯನಂ ನಾಮ ವ್ರತಮಿಹೋತ್ತಮಂ ।
ತಸ್ಮಿನ್ನಾರಾಯಣಸ್ಯಾರ್ಚಾಮರ್ಚಯೇದಿಂದುನಾಮಭಿಃ ॥ ೩ ॥

ಯದಾ ಸೋಮದಿನೇಯುಕ್ತಾ ಭವೇತ್ಪಂಚದಶೀ ಕ್ವಚಿತ್ ।
ಅಥ ವಾ ಬ್ರಹ್ಮನಕ್ಷತ್ರಂ ಪೌರ್ಣಮಾಸ್ಯಾಂ ಪ್ರಜಾಯತೇ ॥ ೪ ॥

ತದಾ ಸ್ನಾನಂ ನರಃ ಕುರ್ಯಾತ್ಪಂಚಗವ್ಯಂ ಚ ಸರ್ಷಪೈಃ ।
ಆಪ್ಯಾಯಸ್ವೇತಿ ಚ ಜಪೇದ್ವಿದ್ವಾನಷ್ಟಶತಂ ಪುನಃ ॥ ೫ ॥

ಶೂದ್ರೋಽಪಿ ಪರಯಾ ಭಕ್ತ್ಯಾ ಪಾಖಂಡಾಲಾಪವರ್ಜಿತಃ ।
ಸೋಮಾಯ ವರದಾಯಾಥ ವಿಷ್ಣವೇ ಚ ನಮೋನಮಃ ॥ ೬ ॥

---

೩. ರೋಹಿಣೀ ಚಂದ್ರಶಯನ ಎಂಬ ಹೆಸರಿನ ವ್ರತವು ಈ ಲೋಕದಲ್ಲಿ ಉತ್ತಮವಾದ ವ್ರತ. ಆ ವ್ರತದಲ್ಲಿ ಚಂದ್ರನ ನಾಮಗಳಿಂದ ಶ್ರೀಮನ್ನಾರಾಯಣನನ್ನು ಪೂಜೆಮಾಡಬೇಕು.

೪. ಪೌರ್ಣಮಾಸೀ ತಿಥಿಯ ದಿನ ಸೋಮವಾರ ಕೂಡಿ ಬಂದರೂ ಅಥವಾ ಪೌರ್ಣಮಾಸೀ ತಿಥಿಯ ದಿನ ರೋಹಿಣೀನಕ್ಷತ್ರ ಕೂಡಿ ಬಂದರೂ ಆ ದಿನ ಈ ವ್ರತ ಮಾಡಬೇಕು.

೫. ವ್ರತಾನುಷ್ಠಾನ ಮಾಡುವವನು ಸಾಸುವೆಯ ಕಲ್ಕಲೇಪನಪೂರ್ವಕವಾಗಿ ಪಂಚಗವ್ಯದಿಂದ ಸ್ನಾನಮಾಡಬೇಕು. ಪ್ರಾಜ್ಞನಾದವನು ಸ್ನಾನಾನಂತರ ಆಪ್ಯಾಯಸ್ವ ಎಂದು ಪ್ರಾರಂಭವಾಗುವ ಮಂತ್ರವನ್ನು ನೂರೆಂಟುಸಲ ಜಪಮಾಡಬೇಕು.

೬. ಶೂದ್ರನು ಈ ವ್ರತವನ್ನು ಮಾಡುವುದಾದರೆ ಆ ದಿನ ವೇದವನ್ನು ನಿಂದಿಸುವ ಪಾಷಂಡಿಗಳ ಜತೆ ಸಂಭಾಷಣೆಮಾಡದೆ ಶ್ರೀಮನ್ನಾರಾಯಣನಲ್ಲಿ ಪರಮಭಕ್ತಿಯುಳ್ಳವನಾಗಿ ಈ ವ್ರತಮಾಡಬೇಕು. ಈ ವ್ರತವನ್ನಾಚರಿಸುವಾಗ ಅವನು ಸ್ನಾನಾನಂತರದಲ್ಲಿ "ವರದಾಯ ಸೋಮಾಯನಮಃ" "ವಿಷ್ಣವೇ ನಮಃ" ಎಂಬದಾಗಿ ಜಪಿಸಬೇಕು. (ವೇದಾಧಿಕಾರಿಯಲ್ಲದವನಿಗೆ ಈ ಮಂತ್ರ ಜಪವೇ ಉಕ್ತವಾಗಿದೆ.)

**ಕೃತಜಪ್ಯಃ ಸ್ವಭವನಮಾಗತ್ಯ ಮಧುಸೂದನಂ ।**
**ಪೂಜಯೇತ್ಫಲಪುಷ್ಪೈಶ್ಚ ಸೋಮನಾಮಾನಿ ಕೀರ್ತಯೇತ್ ॥ ೭ ॥**

**ಸೋಮಾಯ ಶಾಂತಾಯ ನಮೋಽಸ್ತುಪಾದಾ ।**
**ವನಂತನಾಮ್ನೇ ಹ್ಯನುಜಾನು ಜಂಘೇ ॥**
**ಊರುದ್ವಯಂ ಚಾಪಿ ವೃಕೋದರಾಯ ।**
**ಸಂಪೂಜಯೇನ್ಮೇಢ್ರಮನಂಗಬಾಹವೇ ॥ ೮ ॥**

**ನಮೋನಮಃ ಕಾಮಸುಖಪ್ರದಾಯ ।**
**ಕಟಿಃ ಶಶಾಂಕಸ್ಯ ಸಮರ್ಚನೀಯಾ ॥**
**ತಥೋದರಂ ಚಾಪ್ಯಮೃತೋದರಾಯ ।**
**ನಾಭಿಃ ಸುಪೂಜ್ಯಾ ವಿಧಿಲೋಚನಾಯ ॥ ೯ ॥**

**ನಮೋಽಸ್ತು ಚಂದ್ರಾಯ ಮುಖಂ ಪ್ರಪೂಜ್ಯ ।**
**ಹನುರ್ದ್ವಿಜಾನಾಮಧಿಪಾಯ ಪೂಜ್ಯಾ ॥**

---

೭. ಈ ರೀತಿಯಲ್ಲಿ ಜಪಮಾಡಿದ ಮೇಲೆ ಆತನು ದೇವರ ಮನೆಗೆ ಬಂದು, ಗಂಧ ಪುಷ್ಪ ಫಲಾದಿಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ಹಾಗೆ ಪೂಜಿಸುವ ಕಾಲದಲ್ಲಿ ಚಂದ್ರನ ನಾಮಗಳನ್ನೇ ಉಚ್ಚರಿಸಿ ಹರಿಯ ಅಂಗಗಳನ್ನು ಪೂಜಿಸಬೇಕು.

೮. ಸೋಮಾಯನಮಃ ಶಾಂತಾಯನಮಃ ಎಂದು ಹೇಳಿ ಎರಡು ಪಾದ ಗಳನ್ನು ಪೂಜಿಸಬೇಕು. "ಅನಂತಾಯನಮಃ" ಎಂದು ಉಚ್ಚರಿಸಿ ಜಾನು ಜಂಘೆ (ಮೊಳಕಾಲು) ಗಳನ್ನು ಪೂಜಿಸಬೇಕು. ವೃಕೋದರಾಯನಮಃ ಎಂದು ಹೇಳಿ ಎರಡು ತೊಡೆಗಳನ್ನೂ, ಅನಂಗಬಾಹವೇನಮಃ ಎಂದು ಹೇಳಿ ಶಿಶ್ನವನ್ನು ಪೂಜಿಸಬೇಕು.

೯. ಕಾಮಸುಖಪ್ರದಾಯನಮಃ ಎಂದು ಹೇಳಿ ಕಟಿಪ್ರದೇಶವನ್ನೂ ಪೂಜಿಸಬೇಕು. ಅಮೃತೋದರಾಯನಮಃ ಎಂದು ಹೇಳಿ ಉದರವನ್ನೂ ವಿಧಿಲೋಚನಾಯನಮಃ ಎಂದು ಹೇಳಿ ಹೊಕ್ಕುಳನ್ನೂ ಪೂಜಿಸಬೇಕು.

೧೦. ಚಂದ್ರಾಯನಮಃ ಎಂದು ಹೇಳಿ ಮುಖವನ್ನೂ, ದ್ವಿಜಾಧಿಪಾಯ ನಮಃ ಎಂದು ಹೇಳಿ ಗಂಡಸ್ಥಳವನ್ನೂ ಪೂಜಿಸಬೇಕು. "ಚಂದ್ರಮಸೇನಮಃ"

ಆಸ್ಯಂ ನಮಶ್ಚಂದ್ರಮಸೇಭಿಪೂಜ್ಯ ।
ಮೋಷ್ಠೌ ಕುಮುತ್ಷಂಡವನಪ್ರಿಯಾಯ ॥ ೧೦ ॥

ನಾಸಾ ಚ ನಾಥಾಯ ವನೌಷಧೀನಾಂ ।
ಹ್ಯಾನಂದದಾಯಾಥ ಪುನರ್ಭ್ರುವೋಶ್ಚ ॥
ನೇತ್ರದ್ವಯಂ ನೀಲಕುಮುತ್ಪ್ರಿಯಾಯ ।
ಚೇಂದೀವರಶ್ಯಾಮಕರಾಯ ಚೋರಃ ॥ ೧೧ ॥

ನಮಃ ಸಮಸ್ತಾಧ್ವರವಂದಿತಾಯ ।
ಕರ್ಣದ್ವಯಂ ದೈತ್ಯನಿಷೂದನಾಯ ॥
ಲಲಾಟಮಿಂದೋರುದಧಿಪ್ರಿಯಾಯ ।
ಕೇಶಾಃ ಸುಷುಮ್ನಾಧಿಪತೇಃ ಪ್ರಪೂಜ್ಯಾಃ ॥ ೧೨ ॥

ಶಿರಃ ಶಶಾಂಕಾಯ ನಮೋಽಸುರಾರೇ- ।
ರ್ವಿಶ್ವೇಶ್ವರಾಯೇತಿ ನಮಃ ಕಿರೀಟಂ ॥

---

ಎಂದು ಹೇಳಿ ಮುಖವನ್ನೂ "ಕುಮುತ್ಷಂಡವನಪ್ರಿಯಾಯನಮಃ" ಎಂಬದಾಗಿ ಉಚ್ಚರಿಸಿ ತುಟಿಗಳನ್ನೂ ಪೂಜಿಸಬೇಕು.

೧೧. "ವನೌಷಧಿನಾಥಾಯನಮಃ" ಎಂದು ನಾಸಿಕವನ್ನೂ "ಆನಂದ ದಾಯನಮಃ" ಎಂದು ಹೇಳಿ ಹುಬ್ಬುಗಳನ್ನೂ ಪೂಜಿಸಬೇಕು. "ನೀಲ ಕುಮುತ್ಪ್ರಿಯಾಯನಮಃ" ಎಂದು ಎರಡು ಕಣ್ಣುಗಳನ್ನೂ "ಇಂದೀವರಶ್ಯಾಮ ಕರಾಯನಮಃ" ಎಂದು ಎದೆಯನ್ನೂ ಪೂಜಿಸಬೇಕು.

೧೨. "ಸಮಸ್ತಾಧ್ವರವಂದಿತಾಯನಮಃ" ಎಂದು ಹೇಳಿ ಎರಡು ಕಿವಿ ಗಳನ್ನೂ "ದೈತ್ಯನಿಷೂದನಾಯನಮಃ" ಎಂದು ಉಚ್ಚರಿಸಿ ಹಣೆಯನ್ನೂ ಪೂಜಿಸ ಬೇಕು. "ಉದಧಿಪ್ರಿಯಾಯನಮಃ" ಎಂದು ಹೇಳಿ ಪ್ರಕಾಶಾಧಿಪತಿಯಾದ ಚಂದ್ರನ ಕೇಶಗಳನ್ನು ಪೂಜಿಸಬೇಕು.

೧೩. ಬಳಿಕ ಶಶಾಂಕಾಯನಮಃ ಎಂದು ಹೇಳಿ ಶಿರಸ್ಸನ್ನೂ, ವಿಶ್ವೇಶ್ವರಾಯ ನಮಃ ಎಂದು ಉಚ್ಚರಿಸಿ ಕಿರೀಟವನ್ನೂ ಪೂಜಿಸಬೇಕು. ಕಮಲದಲ್ಲಿ ಪ್ರೀತಿ ಯುಳ್ಳವಳಾಗಿಯೂ ರೋಹಿಣೀ ಎಂಬ ನಾಮಧಾರಿಣಿಯಾಗಿಯೂ ಇರುವ

ಪದ್ಮಪ್ರಿಯೇ ರೋಹಿಣಿ ನಾಮ ಲಕ್ಷ್ಮಿ ।
ಸೌಭಾಗ್ಯಸೌಖ್ಯಾಮೃತತಾರಕಾಯೈ ॥ ೧೩ ॥
ದೇವೀಂ ಚ ಸಂಪೂಜ್ಯ ಸುಗಂಧಧೂಪೈ- ।
ರ್ನೈವೇದ್ಯಪುಷ್ಪಾದಿಭಿರಿಂದುಪತ್ನೀಂ ॥
ಪ್ರಪೂಜ್ಯ ಭೂಮೌ ಪುನರುತ್ಥಿತೇನ ।
ಸ್ನಾತ್ವಾ ಚ ವಿಪ್ರಾಯ ಹವಿಷ್ಯಯುಕ್ತಃ ॥ ೧೪ ॥
ದೇಯಃ ಪ್ರಭಾತೇ ಸ ಹಿರಣ್ಯವಾರಿ- ।
ಕುಂಭೋ ಮನಃಪಾಪವಿನಾಶನಾಯ ॥
ಸಂಪ್ರಾಶ್ಯ ಗೋಮೂತ್ರಮಮಾಂಸಮನ್ನ- ।
ಮಕ್ಷಾರಮಷ್ಟಾವಥ ವಿಂಶತಿಂ ಚ ॥ ೧೫ ॥
ಗ್ರಾಸಾನ್ ಪಯಃ ಸರ್ಪಿಯುತಾನುಪ್ರೋಷ್ಯ ।
ಭುಕ್ತ್ವೇತಿಹಾಸಂ ಶೃಣುಯಾನ್ಮುಹೂರ್ತಂ ॥
ಕದಂಬ ನಿಲೋತ್ಪಲ ಕೇತಕಾನಿ ।
ಜಾತೀಸರೋಜಂ ಶತಪತ್ರಿಕಾ ಚ ॥ ೧೧೬ ॥

---

ಓ ಲಕ್ಷ್ಮಿ ಸೌಭಾಗ್ಯಸೌಖ್ಯವನ್ನು ಕೊಟ್ಟು ಸಂಸಾರದಿಂದ ಉದ್ಧರಿಸಿ ಅಮೃತ ಸುಖವನ್ನು ಕೊಡುವ ನಿನಗೆ ನಮಸ್ಕಾರ ಎಂದು ರೋಹಿಣಿಯನ್ನು ಪೂಜಿಸಬೇಕು.

೧೪. ಸ್ನಾನಮಾಡಿ ಚಂದ್ರಪತ್ನಿಯಾದ ರೋಹಿಣೀದೇವಿಯನ್ನು ಸುಗಂಧ ಧೂಪ ನೈವೇದ್ಯ ಪುಷ್ಪಾದಿಗಳಿಂದ ಚೆನ್ನಾಗಿ ಪೂಜಿಸಿ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು ಮರುದಿನ ಪ್ರಾತಃಕಾಲದಲ್ಲಿ ಬ್ರಾಹ್ಮಣನಿಗೆ ಹವಿಷ್ಯಾನ್ನ ಭೋಜನ ಮಾಡಿಸಿ ಹಿರಣ್ಯ ಸಹಿತ ಜಲಕುಂಭದಾನವನ್ನು ಮಾನಸಿಕವಾದ ಪಾಪನಿವಾರಣೆಯಾಗುವುದಕ್ಕಾಗಿ ಕೊಡಬೇಕು.

೧೫. ವ್ರತಾನುಷ್ಠಾನ ಮಾಡುವಾತನು ಆ ದಿನ ಗೋಮೂತ್ರವನ್ನು ಪ್ರಾಶನಮಾಡಬೇಕು. ಮಾಂಸ ಉಪ್ಪು ಇವನ್ನು ಉಪಯೋಗಿಸದೆ ಹಾಲು ತುಪ್ಪ ಇವುಗಳಿಂದ ಯುಕ್ತವಾದ ಇಪ್ಪತ್ತೆಂಟು ಕವಳಗಳನ್ನು ತಿನ್ನಬೇಕು.

೧೬. ಈ ರೀತಿ ಪ್ರಾಶನ ಭೋಜನ ಇವು ಆದ ಮೇಲೆ ಆ ದಿನ ಇನ್ನೇನನ್ನೂ ಸೇವಿಸದೆ ಉಪವಾಸವಿರಬೇಕು. ಅನಂತರ ಒಂದು ಮುಹೂರ್ತದವರೆಗೆ ಪುರಾಣ ಶ್ರವಣಮಾಡಬೇಕು.

ಅಮ್ಲಾನಕುಬ್ಜಾನಥ ಸಿಂದುವಾರ ।
ಪುಷ್ಪಂ ಪುನರ್ನಾರದ ಮಲ್ಲಿಕಾಯಾಃ ॥
ಮುಕ್ತಂ ಚ ವಿಷ್ಣೋಃ ಕರವೀರಪುಷ್ಪಂ ।
ಶ್ರೀಚಂಪಕಂ ಚಂದ್ರಮಸಶ್ಚ ದೇಯಂ ॥ ೧೭ ॥

ಶ್ರಾವಣಾದಿಷು ಮಾಸೇಷು ಕ್ರಮಾದೇತಾನಿ ಸರ್ವದಾ ।
ಯಸ್ಮಿನ್ ಮಾಸೇ ವ್ರತಾದಿಃ ಸ್ಯಾತ್ಪುಷ್ಪೈರಭ್ಯರ್ಚಯೇದ್ಧರಿಂ ॥೧೮॥

ಏಕಸಂವತ್ಸರಂ ಯಾವದುಪೋಷ್ಯ ವಿಧಿವನ್ನರಃ ।
ವ್ರತಾಂತೇ ಶಯನಂ ದದ್ಯಾದ್ದರ್ಪಣೋಪಸ್ಕರಾನ್ವಿತಂ ॥ ೧೯ ॥

ರೋಹಿಣೀ ಚಂದ್ರಮಿಥುನಂ ಕಾರಯಿತ್ವಾ ತು ಕಾಂಚನಂ ।
ಚಂದ್ರಃ ಷಡಂಗುಲಃ ಕಾರ್ಯೋ ರೋಹಿಣೀ ಚತುರಂಗುಲಾ ॥೨೦॥

---

೧೭. ಅಯ್ಯಾ ನಾರದ! ಕದಂಬಪುಷ್ಪ ಕನ್ನೈದಿಲೆ ಕೇತಕೀಪುಷ್ಪ ಜಾಜಿಯಹೂವು ಕಮಲಪುಷ್ಪ ಬಾಡಿಹೋಗದೆ ಇರುವ ಕುಬ್ಜಪುಷ್ಪ ಸಿಂದುವಾರ ಪುಷ್ಪ (ಲಕ್ಕಿಯ ಹೂವು) ಮಲ್ಲಿಗೆಯ ಹೂವು ಶ್ರೀಮಹಾವಿಷ್ಣುವಿಗೆ ಪ್ರಿಯವಾದ ಕರವೀರಪುಷ್ಪ (ಕಣಿಗಲೆಹೂ) ಇವುಗಳಿಂದ ಪೂಜಿಸಬೇಕು. ಚಂದ್ರನಿಗೆ ಪ್ರಿಯ ವಾದ ಸಂಪಗೆಹೂವಿನಿಂದಲೂ ಪೂಜಿಸಬೇಕು.

೧೮. ಯಾವಾಗಲೂ ಶ್ರಾವಣಮಾಸ ಮೊದಲುಗೊಂಡು ಪ್ರತಿತಿಂಗಳುಗಳಲ್ಲಿ ಅನುಕ್ರಮವಾಗಿ ಈ ಪುಷ್ಪಗಳಿಂದ ಅರ್ಚಿಸಬೇಕು. ಯಾವ ತಿಂಗಳಲ್ಲಿ ಈ ವ್ರತ ಪ್ರಾರಂಭಮಾಡಿದರೂ ಆ ತಿಂಗಳಿಗೆ ಉಕ್ತವಾದ ಪುಷ್ಪಗಳಿಂದ ಶ್ರೀಹರಿಯನ್ನು ಪೂಜಿಸಬೇಕು.

೧೯. ಹೀಗೆ ಮಾನವನು ಒಂದುವರ್ಷವಾಗುವವರೆಗೆ ಶಾಸ್ತ್ರಪ್ರಕಾರ ಆ ದಿನ ಉಪವಾಸಪೂರ್ವಕವಾಗಿ ಈ ವ್ರತವನ್ನು ಆಚರಿಸಬೇಕು. ಈ ವ್ರತವನ್ನು ಒಂದುವರ್ಷ ಆಚರಿಸಿ ಮುಗಿಸುವಾಗ ಕನ್ನಡಿ ಇತರ ಉಪಕರಣಗಳ ಸಮೇತ ಮಂಚ (ಶಯ್ಯ) ದಾನ ಕೊಡಬೇಕು.

೨೦. ರೋಹಿಣಿ ಚಂದ್ರ ಈ ಎರಡು ಪ್ರತಿಮೆಗಳನ್ನೂ ಭಂಗಾರದಿಂದ ಮಾಡಿಸಬೇಕು. ಚಂದ್ರ ಪ್ರತಿಮೆಯು ಆರು ಅಂಗುಲ ಎತ್ತರವಾಗಿಯೂ ರೋಹಿಣೀ ಪ್ರತಿಮೆಯು ನಾಲ್ಕು ಅಂಗುಲ ಎತ್ತರವಾಗಿಯೂ ಇರಬೇಕು.

ಮುಕ್ತಾಫಲಾಷ್ಟಕಯುತಂ ಸಿತನೇತ್ರಪಟಾವೃತಂ ।
ಕ್ಷೀರಕುಂಭೋಪರಿ ಪುನಃ ಕಾಂಸ್ಯಪಾತ್ರಾಕ್ಷತಾನ್ವಿತಂ ॥ ೨೧ ॥

ದದ್ಯಾನ್ಮಂತ್ರೇಣ ಪೂರ್ವಾಹ್ಣೇ ಶಾಲೀಕ್ಷುಫಲಸಂಯುತಂ ।
ಶ್ವೇತಾಮಥ ಸುವರ್ಣಾಸ್ಯಾಂ ರೌಪ್ಯಖುರಸಮನ್ವಿತಾಂ ॥ ೨೨ ॥

ಸವಸ್ತ್ರಭಾಜನಾಂ ಧೇನುಂ ತಥಾ ಶಂಖಂ ಚ ಶೋಭನಂ ।
ಭೂಷಣೈರ್ದ್ವಿಜದಾಂಪತ್ಯಮಲಂಕೃತ್ಯ ಗುಣಾನ್ವಿತಂ ॥ ೨೩ ॥

ಚಂದ್ರೋಽಯಂ ದ್ವಿಜರೂಪೇಣ ಸಭಾರ್ಯ ಇತಿ ಕಲ್ಪಯೇತ್ ।
ಯಥಾ ನ ರೋಹಿಣೀ ಕೃಷ್ಣ ಶಯನಂ ತ್ಯಜ್ಯ ಗಚ್ಛತಿ ॥ ೨೪ ॥

---

೨೧. ಮತ್ತು ಆ ಪ್ರತಿಮೆಗಳು ಎಂಟು ಮುತ್ತುಗಳ ಸಹಿತವಾಗಿರಬೇಕು. ಮತ್ತು ಬಿಳುಪಾಗಿರುವ ಸೂಕ್ಷ್ಮವಸ್ತ್ರದಿಂದ ಆವೃತವಾಗಿರಬೇಕು. ಆ ರೀತಿ ಅಲಂಕರಿಸಿದ ಪ್ರತಿಮೆಗಳನ್ನು ಹಾಲಿನ ಬಿಂದಿಗೆಯ ಮೇಲಿಟ್ಟು ಇವುಗಳ ಜತೆ ಕಂಚಿನ ಪಾತ್ರೆ, ಅಕ್ಷತೆ ಇವುಗಳನ್ನೂ ಇಟ್ಟಿರಬೇಕು.

೨೨. ಹೀಗೆ ಸಿದ್ಧಪಡಿಸಿದ ಮೇಲೆ ಪೂರ್ವಾಹ್ಣದಲ್ಲಿ ಭತ್ತ ಕಬ್ಬು ಹಣ್ಣು ಇವುಗಳು ಸಹಿತವಾಗಿ ಅದನ್ನು ಮಂತ್ರಪೂರ್ವಕವಾಗಿ ದಾನ ಕೊಡಬೇಕು. ಮತ್ತು ಭಂಗಾರದ ಮುಖ, ಬೆಳ್ಳಿಯ ಗೊರಸು ಇವುಗಳಿಂದ ಕೂಡಿ ಬೆಳ್ಳಗಿರುವ ಗೋವಿನ ಪ್ರತಿಮೆಯನ್ನು ಮಾಡಿಸಿದ್ದು.

೨೩. ಅದಕ್ಕೆ ವಸ್ತ್ರವನ್ನು ಹೊದಿಸಿ ಹಾಲುಕರೆಯುವ ಪಾತ್ರೆ ಸಹಿತವಾಗಿ ಅದನ್ನೂ ದಾನಕ್ಕೆ ಸಿದ್ಧಮಾಡಬೇಕು. ಮತ್ತು ಅದರ ಜತೆಯಲ್ಲಿ ಶುಭಕರವಾದ ಶಂಖವನ್ನೂ ಸಹ ಇರಿಸಿ ಗುಣಯುತರಾದ ಬ್ರಾಹ್ಮಣ ದಂಪತಿಗಳನ್ನು ಅಲಂಕಾರಗಳಿಂದ ಪೂಜಿಸಿ ಇವುಗಳನ್ನೆಲ್ಲಾ ದಾನ ಕೊಡಬೇಕು.

೨೪. ದಾತೃವು (ಯಜಮಾನನು) ದಾನಕೊಡುವ ಕಾಲದಲ್ಲಿ ಪತ್ನೀಸಮೇತನಾದ ಆ ಬ್ರಾಹ್ಮಣನನ್ನು ಸಪತ್ನೀಕನಾದ ಚಂದ್ರನೆಂದೇ ಭಾವಿಸಿ ಈ ಮಂತ್ರವನ್ನು ಹೇಳಬೇಕು.

ಸೋಮರೂಪಸ್ಯ ತೇ ತದ್ವನ್ಮಮಾಭೇದೋಽಸ್ತು ಮೂರ್ತಿಭಿಃ ।
ಯಥಾ ತ್ವಮೇವ ಸರ್ವೇಷಾಂ ಪರಮಾನಂದಮುಕ್ತಿದಃ ॥ ೨೫ ॥

ಭುಕ್ತಿರ್ಮುಕ್ತಿಸ್ತಥಾ ಭಕ್ತಿಸ್ತ್ವಯಿ ಯಜ್ಞೇಽಸ್ತು ಮೇ ಧೃಥಾ ।
ಇತಿ ಸಂಸಾರಭೀತಸ್ಯ ಮುಕ್ತಿಕಾಮಸ್ಯ ಚಾ ನಘ ॥ ೨೬ ॥

ರೂಪಾರೋಗ್ಯಾಯುಷಾಮೇತದ್ವಿಧಾಯಕಮನುತ್ತಮಂ ।
ಇದಮೇವ ಪಿತೄಣಾಂ ಚ ಸರ್ವದಾ ವಲ್ಲಭಂ ಮುನೇ ॥ ೨೭ ॥

ತ್ರೈಲೋಕ್ಯಾಧಿಪತಿರ್ಭೂತ್ವಾ ಶತಕಲ್ಪಶತತ್ರಯಂ ।
ಚಂದ್ರಲೋಕಮವಾಪ್ನೋತಿ ಪುನರಾವೃತ್ತಿದುರ್ಲಭಂ ॥ ೨೮ ॥

---

೨೫. ಎಲೈ ಕೃಷ್ಣ! ಸೋಮರೂಪನಾದ ನಿನ್ನ ಹಾಸಿಗೆಯನ್ನು ಬಿಟ್ಟು ರೋಹಿಣೀರೂಪಳಾದ ಮಹಾಲಕ್ಷ್ಮಿಯು ಹೇಗೆ ಹೋಗುವುದಿಲ್ಲವೋ ಹಾಗೆಯೇ ನನಗೂ ಪತ್ನೀಪುತ್ರಾದಿ ವ್ಯಕ್ತಿಗಳಿಂದ ವಿಯೋಗ ಬಾರದೆ ಇರಲಿ.

೨೬. ಮತ್ತು ಯಾವಾಗಲೂ ಪರಮಾನಂದಕರವಾದ ಮುಕ್ತಿಯನ್ನು ನೀನೇ ಎಲ್ಲರಿಗೂ ಹೇಗೆ ಕೊಡುವೆಯೋ ಹಾಗೆಯೇ ನನಗೂ ಭುಕ್ತಿ, ಮುಕ್ತಿ ಮತ್ತು ಯಜ್ಞಸ್ವರೂಪನಾದ ನಿನ್ನಲ್ಲಿ ದೃಢಭಕ್ತಿ ಇವುಗಳನ್ನೆಲ್ಲಾ ಕೊಡು.

೨೭. ಓ ನಿಷ್ಕಲ್ಮಷನಾದ ಮುನಿಯೇ! ಸಂಸಾರಕ್ಕೆ ಹೆದರಿ ಅದರಿಂದ ಬಿಡುಗಡೆಹೊಂದಲು ಅಪೇಕ್ಷಿಸುವ ಮಾನವನಿಗೆ ಈ ಉತ್ತಮ ವ್ರತವು ಸೌಂದರ್ಯ ಆಯುಸ್ಸು ಆರೋಗ್ಯ ಇವುಗಳನ್ನು ಕೊಡುವುದು. ಮತ್ತು ಈ ವ್ರತವು ಪಿತೃಗಳಿಗೆ ಯಾವಾಗಲೂ ಪ್ರೀತಿಪಾತ್ರವಾಗಿದೆ.

೨೮. ಈ ವ್ರತವನ್ನು ಆಚರಿಸಿದವನು ನಾನೂರು ಕಲ್ಪಪರ್ಯಂತ ತ್ರಿಲೋಕಾಧಿಪತಿಯಾಗಿದ್ದು ಕೊನೆಗೆ ಪುನರಾವೃತ್ತಿರಹಿತವಾದ ಚಂದ್ರಲೋಕವನ್ನು ಪಡೆಯುತ್ತಾನೆ.

**ನಾರೀ ವಾ ರೋಹಿಣೀ ಚಂದ್ರಶಯನಂ ವಾ ಸಮಾಚರೇತ್ ।**
**ಸಾಽಪಿ ತತ್ಫಲಮಾಪ್ನೋತಿ ಪುನರಾವೃತ್ತಿದುರ್ಲಭಂ ॥ ೨೯ ॥**

**ಇತಿ ಪಠತಿ ಶೃಣೋತಿ ವಾ ಯ ಇತ್ಥಂ ।**
**ಮಧುಮಥನಾರ್ಚನಮಿಂದುಕೀರ್ತನೇನ ॥**
**ಮತಿಮಪಿ ಚ ದದಾತಿ ಸೋಽಪಿ ಶೌರೇಃ ।**
**ಭವನಗತಃ ಪರಿಪೂಜ್ಯತೇಽಮರೌಘೈಃ ॥ ೩೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ನಾರದ ಮಹೇಶ್ವರ ಸಂವಾದೇ ರೋಹಿಣೀಚಂದ್ರಶಯನವ್ರತವಿಧಿವರ್ಣನಂ ನಾಮ ಷಡಧಿಕದ್ವಿಶತತಮೋಽಧ್ಯಾಯಃ.**



---

೨೯. ಹೆಂಗಸೂ ಕೂಡ ಈ ರೋಹಿಣೀಚಂದ್ರಶಯನ ವ್ರತವನ್ನು ಆಚರಿಸಿದರೆ ಆಕೆಯೂ ಅದರ ಫಲವನ್ನು ಹೊಂದುತ್ತಾಳೆ. ಎಂದರೆ ಪುನರಾವೃತ್ತಿ ರಹಿತವಾದ ಚಂದ್ರಲೋಕವನ್ನು ಪಡೆಯುತ್ತಾಳೆ.

೩೦. ಈ ವ್ರತಪ್ರತಿಪಾದಕವಾದ ಗ್ರಂಥವನ್ನು ಪಠಿಸಿದವನು, ಶ್ರವಣ ಮಾಡಿದವನು, ಚಂದ್ರನಾಮ ಕೀರ್ತನಪೂರ್ವಕವಾಗಿ ಮಧುಮಥನನಾದ ವಿಷ್ಣುವಿನ ಅರ್ಚನೆಮಾಡಿ ಈ ವ್ರತಾಚರಣಮಾಡಿದವನು, ಇತರರಿಗೆ ಈ ವ್ರತ ವಿಷಯಕವಾದ ತಿಳಿವಳಿಕೆಯನ್ನು ಹುಟ್ಟಿಸುವವನು, ಇವರೆಲ್ಲರೂ ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ದೇವತಾಸಮೂಹದಿಂದ ಪೂಜಿತರಾಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ನಾರದಮಹೇಶ್ವರ ಸಂವಾದದಲ್ಲಿ ರೋಹಿಣೀಚಂದ್ರಶಯನ ವ್ರತವರ್ಣನೆಯೆಂಬ ಇನ್ನೂರಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಾಧಿಕದ್ವಿಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ವ್ರತಂ ದಾನಮಥೋ ರಾಜಂಸ್ತವ ಧರ್ಮಾಃ ಪ್ರಕಾಶಿತಾಃ ।
ಧರ್ಮಮೂಲಂ ಯತಶ್ಚೇದಂ ತಸ್ಮಾದ್ಧರ್ಮಪರೋ ಭವ ॥ ೧ ॥

ಜಾನತಾಽಪಿ ಮಯಾ ಪಾರ್ಥ ಕಾಮಾರ್ಥೌ ನ ಪ್ರಕಾಶಿತೌ ।
ಯತಃ ಸ್ವಯಂ ಪ್ರವೃತ್ತೋಽತ್ರ ಲೋಕಃ ಕಿಮನುವರ್ಣ್ಯತೇ ॥ ೨ ॥

---

### ಇನ್ನೂರಏಳನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ! ವ್ರತ ದಾನ ಇವೇ ಮೊದಲಾದ ಧರ್ಮಗಳನ್ನು ನಿನಗೆ ನಾನು ಹೇಳಿದೆನು. ಇವೆಲ್ಲಕ್ಕೂ ಧರ್ಮವೇ ಮೂಲವಾದುದರಿಂದ ನೀನು ಧರ್ಮಪರನಾಗಿ ಇರು.

೨. ಅಯ್ಯಾ ಕುಂತೀಪುತ್ರ! ಕಾಮ ಅರ್ಥ ಎಂಬ ಎರಡು ಪುರುಷಾರ್ಥಗಳನ್ನು ನಾನು ತಿಳಿದುಕೊಂಡಿದ್ದರೂ ಅವುಗಳನ್ನು ನಿನಗೆ ಹೇಳಲಿಲ್ಲ. ಏಕೆಂದರೆ ಈ ಕಾಮ ಮತ್ತು ಅರ್ಥಗಳಲ್ಲಿ ಪ್ರತಿ ಮಾನವನೂ ಸ್ವಯಂ ಪ್ರವೃತ್ತನಾಗುವನು. ಆದುದರಿಂದ ಅರ್ಥ ಕಾಮ ಇವುಗಳ ವರ್ಣನೆಯಿಂದ ಏನು ಪ್ರಯೋಜನ.

**ಕಾಮಿನೋ ವರ್ಣಯನ್ಕಾಮಾಲ್ಲೋಭಂ ಲುಬ್ಧಸ್ಯ ವರ್ಣನಂ ।**
**ನರಃ ಕಿಂ ಫಲಮಾಪ್ನೋತಿ ಕೂಪೇಽಂಧಮಿವ ಪಾತಯನ್ ॥ ೩ ॥**

**ಭವಿಷ್ಯೋತ್ತರಮೇತತ್ತೇ ಕಥಿತಂ ಪಾಂಡುನಂದನ ।**
**ಸದಾಚಾರವತಾಂ ಪುಂಸಾಂ ವ್ರತದಾನಸಮುಚ್ಚಯಃ ॥ ४ ॥**

**ಯದ್ದೃಷ್ಟಮಿತಿಹಾಸೇಷು ಪುರಾಣೇಷು ಚ ಭಾರತ ।**
**ವೇದವೇದಾಂಗಸಂಬದ್ಧಃ ತತ್ಸರ್ವಮಿಹ ದರ್ಶಿತಂ ॥ ೫ ॥**

**ಲೋಕವೇದವಿರುದ್ಧಂ ಯತ್ಕಥ್ಯತೇ ಮನುಜೋತ್ತಮ ।**
**ನ ತತ್ರಾಸ್ಥಾ ಪ್ರಕರ್ತವ್ಯಾ ವಿಪ್ರಲಾಪೋ ಹಿ ಸ ಸ್ಮೃತಃ ॥ ೬ ॥**

---

೩. ಕಾಮಿಗಳ ಕಾಮವಿಕಾರವನ್ನೂ ಲೋಭಿಗಳ ಲೋಭವನ್ನೂ ವರ್ಣನೆ ಮಾಡುವ ಮಾನವನು ಯಾವ ಫಲವನ್ನು ಹೊಂದುತ್ತಾನೆ. ಕುರುಡನನ್ನು ಕರೆದುಕೊಂಡು ಹೋಗಿ ಭಾವಿಯಲ್ಲಿ ಕೆಡಹಿದವನಂತೆ ಪಾಪಭಾಗಿಯಾಗುವನು.

೪. ಅಯ್ಯಾ ಪಾಂಡುಪುತ್ರನೇ! ಈ ಭವಿಷ್ಯೋತ್ತರ ಪುರಾಣವನ್ನು ನಿನಗೆ ನಾನು ಹೇಳಿದ್ದಾಯಿತು. ಇದರಲ್ಲಿ ಸದಾಚಾರವಂತರಾದ ಪುರುಷರ ಆಚಾರವನ್ನೂ ವ್ರತ ದಾನ ಇವುಗಳ ಸಮುಚ್ಚಯವನ್ನೂ ಸಹ ಹೇಳಿರುತ್ತೇನೆ.

೫. ಎಲೈ ಭರತವಂಶಜನೇ! ಇತಿಹಾಸಗಳು ಪುರಾಣಗಳು ಇವುಗಳಲ್ಲಿ ಯಾವುದು ಕಾಣುವುದೋ ವೇದವೇದಾಂಗಗಳಿಗೆ ಯಾವುದು ಸಂಬಂಧಪಟ್ಟುದೋ ಅವೆಲ್ಲವನ್ನೂ ಇಲ್ಲಿ ನಾನು ತೋರಿಸಿದ್ದೇನೆ.

೬. ಅಯ್ಯಾ ನರೋತ್ತಮ! ಲೋಕವಿರುದ್ಧ ವೇದವಿರುದ್ಧ ಶಾಸ್ತ್ರವಿರುದ್ಧ ಎಂದು ಯಾವುದು ಹೇಳಲ್ಪಡುವುದೋ ಅಂತಹ ಕಾರ್ಯಗಳಲ್ಲಿ ಮಾನವನು ಆಸಕ್ತಿಯಿಡಬಾರದು. ಆ ರೀತಿ ಲೋಕವೇದವಿದ್ವಿಷ್ಟವಿಷಯಗಳನ್ನು ಹೇಳುವ ವಚನಗಳು ಕೇವಲ ಅಸಂಬದ್ಧ ಪ್ರಲಾಪಗಳೆಂದು ಹೇಳಲ್ಪಟ್ಟಿವೆ.

ಅತಿಸ್ನೇಹೇನ ಭವತೋ ಮಮೈತತ್ಸಮುದಾಹೃತಂ ।
ಋಷೀಣಾಂ ಪುರತಃ ಪಾರ್ಥ ಕುಂಠಾಭವತಿ ಭಾರತೀ ॥ ೭ ॥

ನೈತತ್ಪ್ರಕಾಶನೀಯಂ ಹಿ ಡಾಂಭಿಕಾಯ ಶಠಾಯ ಚ ।
ನಾಸ್ತಿಕಾಯಾನ್ಯಮನಸೇ ಕುತರ್ಕೋಪಹತಾಯ ಚ ॥ ೮ ॥

ಸಾಧುವೃತ್ತಾಯ ದಾಂತಾಯ ಸತ್ಯಾರ್ಜವರತಾಯ ಚ ।
ಏತದಾಖ್ಯಾಯಮಾನಂ ಹಿ ಶುಭಾಮುತ್ಪಾದಯೇದ್ಗತಿಂ ॥ ೯ ॥

ಸಾಮಾನ್ಯಮೇತತ್ಸುರಸತ್ತಮಾನಾಮ್ ।
ವರ್ಣಾಶ್ರಮಾಣಾಂ ಚ ನರೇಂದ್ರಚಂದ್ರ ॥
ಖ್ಯಾತಂ ಭವಿಷ್ಯೋತ್ತರನಾಮಧೇಯಂ ।
ಮಯಾ ಪುರಾಣಂ ತವ ಸೌಹೃದೇನ ॥ ೧೦ ॥

---

೭. ಅಯ್ಯಾ ಕುಂತೀಪುತ್ರನೇ ! ನಿನ್ನಲ್ಲಿ ನನಗೆ ಪರಮ ಸ್ನೇಹವಿದ್ದುದರಿಂದ ಇದನ್ನು ಯತ್ಕಿಂಚಿತ್ ಹೇಳಿರುತ್ತೇನೆ. ಪ್ರಾಜ್ಞರಾದ ಋಷಿಗಳ ಇದಿರಿಗೆ ಹೇಳಲು ಹೊರಟರೆ ವಾಕ್ಕು ಕುಂಠಿತವಾಗುವುದು.

೮. ನಾನು ಹೇಳಿದ ವಿಷಯವನ್ನು ಡಾಂಭಿಕನಿಗೂ ನೀಚನಿಗೂ ನಾಸ್ತಿಕನಿಗೂ ಅನ್ಯತ್ರ ಮನಸ್ಸುಳ್ಳವನಿಗೂ ಕುತರ್ಕಮಾಡಿ ದುಷ್ಟನೆನಿಸಿರುವವನಿಗೂ ಉಪದೇಶಮಾಡಬಾರದು.

೯. ಸದಾಚಾರಶೀಲನೂ ಇಂದ್ರಿಯನಿಗ್ರಹವುಳ್ಳವನೂ ಸತ್ಯವಚನಾಸಕ್ತನೂ ಸರಳಸ್ವಭಾವದವನೂ ಆಗಿರುವವನಿಗೆ ಈ ವಿಷಯಗಳನ್ನು ಉಪದೇಶಿಸಿದರೆ ಅಂತಹ ಉಪದೇಶಕನಿಗೆ ಆ ಉಪದೇಶವು ಸದ್ಗತಿಯನ್ನು ಕೊಡುವುದು.

೧೦. ಅಯ್ಯಾ ರಾಜೋತ್ತಮನೇ! ನಾನು ಹೇಳಿದ ವಿಷಯವು ದೇವತಾಶ್ರೇಷ್ಠರಿಗೂ ಬ್ರಾಹ್ಮಣಾದಿ ವರ್ಗದವರಿಗೂ ಬ್ರಹ್ಮಚಾರಿ ಮೊದಲಾದ ಆಶ್ರಮಿಗಳಿಗೂ ಸಾಮಾನ್ಯವಾಗಿದೆ. ಈ ಭವಿಷ್ಯೋತ್ತರವೆಂಬ ಹೆಸರಿನ ಪುರಾಣವನ್ನು ನಾನು ನಿನಗೆ ಕೇವಲ ಸ್ನೇಹನಿಮಿತ್ತದಿಂದ ಹೇಳಿರುತ್ತೇನೆ.

ಧರ್ಮಃ ಸ್ವಯಂ ಪಾರ್ಥ ಭವಾನಿಹ ತ್ವಂ ।
ಧರ್ಮಾರ್ಥವಿದ್ದೃಷ್ಟಪರಾವರಶ್ಚ ॥
ಪೃಷ್ಟೋಽಸ್ಮ್ಯತೋ ಧರ್ಮಮಹಂ ಚ ವಚ್ಮಿ ।
ಶ್ರದ್ಧೇಯಮೇತತ್ಸುತರಾಂ ಜನಸ್ಯ ॥ ೧೧ ॥

ಯಾಸ್ಯಾಮ್ಯಹಂ ದ್ವಾರವತೀಂ ಪುನಶ್ಚ ।
ಯಜ್ಞಂ ಸಮೇಷ್ಯಾಮಿ ಮಹೋತ್ಸವೇ ಚ ॥
ಕಾಲಸ್ಯ ಸರ್ವಂ ಹಿ ವಶೇ ವಿದಿತ್ವಾ ।
ನೈವಾನುತಾಪೋ ಭವತಾತ್ರ ಕಾರ್ಯಃ ॥ ೧೨ ॥

ಇತ್ಯುಕ್ತವಾನ್ ಯಾತುಕಾಮಃ ಪ್ರಹೃಷ್ಟಃ ।
ಸಂಪೂಜಿತಃ ಪಾಂಡುಸುತೈರ್ಮಹಾತ್ಮಾ ॥
ದೃಷ್ಟ್ವಾ ಸುಹೃದ್ ಜ್ಞಾತಿಜನಂ ಹಿ ಸರ್ವಂ ।
ಜಗಾಮ ವಿಪ್ರಾನ್ ಪ್ರಣಿಪತ್ಯ ಕೃಷ್ಣಃ ॥ ೧೩ ॥

---

೧೧. ಅಯ್ಯಾ ಪಾರ್ಥನೇ! ಈ ಮನುಷ್ಯಲೋಕದಲ್ಲಿ ನೀನು ಸ್ವಯಂ ಧರ್ಮಸ್ವರೂಪನಾಗಿರುವೆ. ಧರ್ಮಾರ್ಥಗಳನ್ನು ತಿಳಿದವನಾಗಿರುವೆ. ಪರಾವರ ಸ್ವರೂಪಿಯಾದ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡಿರುವೆ. ಅಂತಹ ನೀನು ಧರ್ಮವಿಷಯಕವಾಗಿ ನನ್ನನ್ನು ಪ್ರಶ್ನೆಮಾಡಿದುದರಿಂದ ನಿನಗೆ ನಾನು ಹೇಳಿರುತ್ತೇನೆ. ನಾನು ಹೇಳಿದ ಈ ವಿಷಯದಲ್ಲಿ ಜನಸಾಮಾನ್ಯವು ವಿಶ್ವಾಸವನ್ನಿಡಬೇಕು.

೧೨. ನಾನು ಈಗ ದ್ವಾರಕಾಪುರಿಗೆ ಹೋಗುತ್ತೇನೆ. ನೀನು ಯಜ್ಞ ಮಹೋತ್ಸವವನ್ನು ನಡೆಯಿಸುವೆಯಾದರೆ ಆ ಕಾಲದಲ್ಲಿ ಬರುತ್ತೇನೆ. ಎಲ್ಲವೂ ಕಾಲಕ್ಕೆ ಅಧೀನವೆಂಬುದನ್ನು ತಿಳಿದುಕೊಂಡು ನನ್ನ ಗಮನಕ್ಕಾಗಿ ಅನುತಾಪ ಪಡಬಾರದು.

೧೩. ಗಮನಾಭಿಲಾಷೆಯುಳ್ಳ ಶ್ರೀಕೃಷ್ಣನು ಸಂತೋಷದಿಂದ ಹೀಗೆ ಹೇಳಿದನು. ಆಗ ಪಾಂಡುಪುತ್ರರು ಆ ಮಹಾತ್ಮನನ್ನು ಪೂಜಿಸಿದರು. ಶ್ರೀಕೃಷ್ಣನು ಬಂಧುಗಳೆಲ್ಲರಿಗೂ ಹೋಗಿ ಬರುತ್ತೇನೆಂದು ಹೇಳಿ ಬೀಳ್ಕೊಂಡು ಬ್ರಾಹ್ಮಣರಿಗೆ ನಮಸ್ಕಾರಮಾಡಿ ಅಲ್ಲಿಂದ ಪ್ರಯಾಣಮಾಡಿದನು.

ಯದ್ಯಾಜ್ಞವಲ್ಕ್ಯಮುನಿನಾ ಭಗವಾನ್ವಶಿಷ್ಠಃ ।
ಪೃಷ್ಟಃ ಕಿಲೋತ್ತರಮುವಾಚ ಬಹುಪ್ರಕಾರಂ ॥
ಕೃಷ್ಣೇನ ಪಾಂಡುತನಯಸ್ಯ ಚ ತತ್ಪ್ರದಿಷ್ಟಂ ।
ವ್ಯಾಸೇನ ತತ್ಕೃತಮಹೋ ಮುನಿಪುಂಗವೇನ ॥ ೧೪ ॥

ಜಯತಿ ಪರಾಶರಸೂನುಃ ।
ಸತ್ಯವತೀ ಹೃದಯನಂದನೋವ್ಯಾಸಃ ॥
ಯಸ್ಯಾಸ್ಯ ಕಮಲಗಲಿತಂ ।
ವಾಙ್ಮಧುಪುಣ್ಯಂ ಜಗತ್ಪಿಬತಿ ॥ ೧೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಸಮಾಪ್ತಿ ವರ್ಣನಂ ಶ್ರೀಕೃಷ್ಣಸ್ಯ ದ್ವಾರಕಾಂ ಪ್ರತಿಗಮನವರ್ಣನಂ ನಾಮ ಸಪ್ತಾಧಿಕದ್ವಿಶತತಮೋಽಧ್ಯಾಯಃ.



---

೧೪. ಪೂಜ್ಯನಾದ ವಸಿಷ್ಠಮಹರ್ಷಿಯನ್ನು ಯಾಜ್ಞವಲ್ಕ್ಯಋಷಿಯು ಪ್ರಶ್ನೆಮಾಡಿದಾಗ ಬಹುತರವಾಗಿ ಅವರು ಯಾವ ಉತ್ತರ ಹೇಳಿದರೋ ಅದೇ ವಿಷಯವನ್ನು ಪಾಂಡುಪುತ್ರನಾದ ಧರ್ಮರಾಜನು ಪ್ರಶ್ನೆಮಾಡಿದಾಗ ಕೃಷ್ಣನೂ ಅವನಿಗೆ ಅದೇರೀತಿ ಉಪದೇಶಮಾಡಿದನು. ಋಷಿಶ್ರೇಷ್ಠನಾದ ವ್ಯಾಸಮಹರ್ಷಿಯು ಅದನ್ನು ಈ ಗ್ರಂಥರೂಪವಾಗಿ ರಚಿಸಿರುತ್ತಾನೆ.

೧೫. ಸತ್ಯವತಿಯ ಮನಸ್ಸಿಗೆ ಆನಂದವನ್ನುಂಟುಮಾಡುವವನೂ ಪರಾಶರ ಪುತ್ರನೂ ಆದ ವ್ಯಾಸನು ಸರ್ವೋತ್ಕೃಷ್ಟನಾಗಿರಲಿ. ಆ ವ್ಯಾಸಮಹರ್ಷಿಯ ಮುಖಪದ್ಮದಿಂದ ಹೊರಟ ವಾಙ್ಮಧುವೆಂಬ ಪುಣ್ಯವನ್ನು ಲೋಕವೇ ಪಾನ ಮಾಡುತ್ತದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಸಮಾಪ್ತಿವರ್ಣನೆ ಎಂಬ ಇನ್ನೂರೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟೋತ್ತರದ್ವಿಶತತಮೋಽಧ್ಯಾಯಃ

॥ ಅಥ ವೃತ್ತಾಂತಾಃ ॥

ವ್ಯಾಸಾನುಗಮನಂ ಪೂರ್ವಂ ಬ್ರಹ್ಮಾಂಡಸ್ಯ ಸಮುದ್ಭವಃ ।
ಮಾಯಾ ಚ ವೈಷ್ಣವೀ ಯಸ್ಮಾತ್ಸಂಸಾರೇ ದೋಷಕೀರ್ತನಂ ॥ ೧ ॥

ಪಾಪಭೇದಸ್ತತಸ್ತಸ್ಮಾಚ್ಛುಭಾಶುಭವಿನಿರ್ಣಯಃ ।
ಶಕಟವ್ರತಮಾಹಾತ್ಮ್ಯಂ ತಿಲಕವ್ರತಕೀರ್ತನಂ ॥ ೨ ॥

---

### ಇನ್ನೂರೆಂಟನೆಯ ಅಧ್ಯಾಯ

೧. ಈ ಪುರಾಣದಲ್ಲಿ ಉಕ್ತವಾಗಿರುವ ವಿಷಯ ವೃತ್ತಾಂತಗಳು—ಈ ಗ್ರಂಥದಲ್ಲಿ ಎಂದರೆ ಈ ಭವಿಷ್ಯಮಹಾಪುರಾಣದ ಆದಿಯಲ್ಲಿ ವ್ಯಾಸರ ಆಗಮನ ವೃತ್ತಾಂತವು ವರ್ಣಿತವಾಗಿದೆ. ಅನಂತರ ಬ್ರಹ್ಮಾಂಡೋತ್ಪತ್ತಿಯೂ, ಸಂಸಾರದಲ್ಲಿ ಯಾವ ಮಾಯೆಯಿಂದ ನಿಖಿಲ ಅನರ್ಥಗಳೂ ದೋಷಗಳೂ ಸಂಭವಿಸುವುವೋ ಅಂತಹ ವಿಷ್ಣುಮಾಯಾ ವರ್ಣನೆಯೂ, ಸಾಂಸಾರಿಕ ದೋಷಗಳೂ ಕೀರ್ತಿತ ವಾಗಿವೆ.

೨. ಪಾಪವಿಶೇಷಗಳು, ಆ ಪಾಪಪುಣ್ಯಗಳಿಂದ ಲಭಿಸುವ ಶುಭಾಶುಭ ಫಲ ನಿರ್ಣಯ ಇವು ಉಕ್ತವಾಗಿದೆ. (ಪ್ರತಿಪದ್ವ್ರತಸಮುದಾಯವಲ್ಲಿ) ಶಕಟವ್ರತ ಮಾಹಾತ್ಮ್ಯ, ತಿಲಕವ್ರತ ಮಾಹಾತ್ಮ್ಯೆ ಇವು ನಿರೂಪಿತವಾಗಿವೆ.

**ಅಶೋಕಕರವೀರಾಖ್ಯಂ ವ್ರತಂ ತಸ್ಮಾಚ್ಚ ಕೋಕಿಲಂ ।**
**ಬೃಹತ್ತಪೋವ್ರತಂ ನಾಮ ರುದ್ರೋಪೋಷಣಮೇವ ಚ ॥ ೩ ॥**

**ದ್ವಿತೀಯಾವ್ರತಮಾಹಾತ್ಮ್ಯಮಶೂನ್ಯಶಯನಂ ತಥಾ ।**
**ಕಾಮಾಖ್ಯಾ ತು ತೃತೀಯಾ ಚ ಮೇಘಪಾಲೀವ್ರತಂ ತಥಾ ॥ ೪ ॥**

**ಪಂಚಾಗ್ನಿಸಾಧನಾ ರಮ್ಯಾ ತೃತೀಯಾವ್ರತಮುತ್ತಮಂ ।**
**ತ್ರಿರಾತ್ರಂ ಗೋಷ್ಪದಂ ನಾಮ ಹರಕಾಲೀವ್ರತಂ ತಥಾ ॥ ೫ ॥**

**ಲಲಿತಾಖ್ಯಾ ತೃತೀಯಾ ಚ ಯೋಗಾಖ್ಯಾ ಚ ತಥಾಪರಾ ।**
**ಉಮಾಮಹೇಶ್ವರಂ ನಾಮ ತಥಾ ರಂಭಾತೃತೀಯಕಂ ॥ ೬ ॥**

**ಸೌಭಾಗ್ಯಾಖ್ಯಾ ತೃತೀಯಾ ಚ ಆರ್ದ್ರಾನಂದಕರೀ ತಥಾ ।**
**ಚೈತ್ರೇ ಭಾದ್ರಪದೇ ಮಾಘೇ ತೃತೀಯಾವ್ರತಮುಚ್ಯತೇ ॥ ೭ ॥**

---

೩. ಅನಂತರ ಅಶೋಕವ್ರತ, ಕರವೀರವ್ರತ, ಕೋಕಿಲಾವ್ರತ, ಬೃಹತ್ತಪೋವ್ರತ, ರುದ್ರೋಪವಾಸವ್ರತ ಇವುಗಳೂ ಉಕ್ತವಾಗಿವೆ.

೪. ದ್ವಿತೀಯಾವ್ರತಗಳ ನಿರೂಪಣ ಕ್ರಮದಲ್ಲಿ ಅಶೂನ್ಯಶಯನವೆಂಬ ವ್ರತವು ನಿರೂಪಿತವಾಗಿದೆ. ತೃತೀಯಾವ್ರತ ಸಮುದಾಯದಲ್ಲಿ ಕಾಮಾಖ್ಯ ತೃತೀಯಾವ್ರತ, ಮೇಘಪಾಲೀವ್ರತ ಇವು ಹೇಳಲ್ಪಟ್ಟಿವೆ.

೫. ಆ ಸಮುದಾಯದಲ್ಲೇ ಮನೋಹರವೂ ಅತ್ಯುತ್ತಮವೂ ಆದ ಪಂಚಾಗ್ನಿಸಾಧನಾವ್ರತ, ಗೋಷ್ಪದ ತೃತೀಯಾವ್ರತ, ಹರಕಾಲೀವ್ರತ ಇವನ್ನು ಸಹ ಹೇಳಲಾಗಿದೆ.

೬. ಲಲಿತತೃತೀಯಾವ್ರತ, ಇನ್ನೊಂದು ಯೋಗತೃತೀಯಾವ್ರತ, ರಂಭಾತೃತೀಯಾವ್ರತ ಮತ್ತು ಉಮಾಮಹೇಶ್ವರವ್ರತ ಇವು ಸಹ ಹೇಳಲ್ಪಟ್ಟಿವೆ.

೭. ಮತ್ತು ಸೌಭಾಗ್ಯತೃತೀಯಾವ್ರತವೂ ಚೈತ್ರ, ಭಾದ್ರಪದ, ಮಾಘ ಈ ಮಾಸಗಳ ತೃತೀಯಾ (ಗೌರೀ) ವ್ರತವೂ ಉಕ್ತವಾಗಿದೆ.

**ಅನಂತರೀತೃತೀಯಾ ಚ ಗಣಶಾಂತಿವ್ರತಂ ತಥಾ ।**
**ಸಾರಸ್ವತವ್ರತಂ ನಾಮ ಪಂಚಮೀವ್ರತಮುಚ್ಯತೇ ॥ ೮ ॥**

**ತಥಾ ಶ್ರೀಪಂಚಮೀ ನಾಮ ಷಷ್ಠೀ ಶೋಕಪ್ರಣಾಶಿನೀ ।**
**ಫಲಷಷ್ಠೀ ಚ ಮಂದಾರಷಷ್ಠೀವ್ರತಮಥೋಚ್ಯತೇ ॥ ೯ ॥**

**ಲಲಿತಾವ್ರತಷಷ್ಠೀ ಚ ಷಷ್ಠೀ ಕಾರ್ತಿಕಸಂಜ್ಞಿತಾ ।**
**ಮಹತ್ತಪಃ ಸಪ್ತಮೀ ಚ ವಿಭೂಷಾ ಸಪ್ತಮೀ ತಥಾ ॥ ೧೦ ॥**

**ಆದಿತ್ಯಮಂಡಪವಿಧಿಸ್ತ್ರಯೋದಶೀತಿ ಸಪ್ತಮೀ ।**
**ಕೃಕವಾಕುಪ್ಲವಂಗಾ ಚ ತಥೈವಾಭಯಸಪ್ತಮೀ ॥ ೧೧ ॥**

**ಕಲ್ಯಾಣಸಪ್ತಮೀ ನಾಮ ಶರ್ಕರಾಸಪ್ತಮೀವ್ರತಂ ।**
**ಸಪ್ತಮೀ ಕಮಲಾಖ್ಯಾ ಚ ತಥಾನ್ಯಾ ಶುಭಸಪ್ತಮೀ ॥ ೧೨ ॥**

---

೮. ಅನಂತರೀತೃತೀಯಾವ್ರತವೂ ಸಹ ವಿವರಿಸಲ್ಪಟ್ಟಿದೆ. ಹಾಗೆಯೇ ಗಣಶಾಂತಿಚತುರ್ಥೀವ್ರತವೂ, ಸಾರಸ್ವತವೆಂಬ ಪಂಚಮೀವ್ರತವೂ ಸಹ ವಿಶದ ಮಾಡಲ್ಪಟ್ಟವೆ.

೯. ಮತ್ತು ಶ್ರೀಪಂಚಮಿಯೆಂಬ ವ್ರತವೂ, ಆ ಬಳಿಕ ಶೋಕಪ್ರಣಾಶಿನಿಯೆಂಬ ಷಷ್ಠೀವ್ರತವೂ, ಫಲಷಷ್ಠೀ ಎಂಬ ವ್ರತವೂ, ಅನಂತರ ಮಂದಾರಷಷ್ಠೀ ಎಂಬ ವ್ರತವೂ ಉಕ್ತವಾಗಿವೆ.

೧೦. ಲಲಿತಾವ್ರತವೆಂಬ ಷಷ್ಠೀವ್ರತವೂ ಕಾರ್ತಿಕಯೆಂಬ ಹೆಸರಿನ ಷಷ್ಠೀವ್ರತವೂ ಉಕ್ತವಾಗಿರುವುದಲ್ಲದೆ ಮಹತ್ತಪಯೆಂಬ ಸಪ್ತಮೀವ್ರತವೂ ವಿಭೂಷಾಸಪ್ತಮೀಯೆಂಬ ವ್ರತವೂ ಕೂಡ ಹೇಳಲ್ಪಟ್ಟವೆ.

೧೧. ಹೀಗೆಯೇ ಆದಿತ್ಯಮಂಟಪವಿಧಿತ್ರಯೋದಶೀಯೆಂಬ ಸಪ್ತಮೀವ್ರತವೂ ಕೃಕವಾಕುಪ್ಲವಂಗಸಪ್ತಮೀ ಮತ್ತು ಅಭಯಸಪ್ತಮೀವ್ರತವೂ ಸಹ ಹೇಳಲ್ಪಟ್ಟವೆ.

೧೨. ಕಲ್ಯಾಣಸಪ್ತಮೀವ್ರತ, ಶರ್ಕರಾಸಪ್ತಮೀವ್ರತ, ಕಮಲಾಸಪ್ತಮೀವ್ರತ, ಹಾಗೆಯೇ ಶುಭಸಪ್ತಮೀವ್ರತ, ಇವೂ ಹೇಳಲ್ಪಟ್ಟವೆ.

ಸ್ನಪನವ್ರತಸಪ್ತಮ್ಯೌ ತಥೈವಾಚಲಸಪ್ತಮೀ ।
ಬುಧಾಷ್ಟಮೀವ್ರತಂ ನಾಮ ತಥಾ ಜನ್ಮಾಷ್ಟಮೀವ್ರತಂ ॥ ೧೩ ॥

ದೂರ್ವಾಕೃಷ್ಣಾಷ್ಟಮೀ ಪ್ರೋಕ್ತಾ ಅನಯಾವ್ರತಮಷ್ಟಮೀ ।
ಅಷ್ಟಮ್ಯರ್ಕಾಷ್ಟಮೀ ಚಾಥ ಶ್ರೀವೃಕ್ಷನವಮೀ ವ್ರತಂ ॥ ೧೪ ॥

ಧ್ವಜಾಖ್ಯಾ ನವಮೀ ಚೈವ ಉಲ್ಕಾಖ್ಯಾ ನವಮೀ ತಥಾ ।
ದಶಾವತಾರವ್ರತಕಂ ತಥಾಶಾದಶಮೀವ್ರತಂ ॥ ೧೫ ॥

ರೋಹಿಣೀಂದ್ರಹರಿಶ್ಯಂಭುಬ್ರಹ್ಮಸೂರ್ಯಾವಿಯೋಗಕಂ ।
ಗೋವತ್ಸದ್ವಾದಶೀ ನಾಮ ವ್ರತಮುಕ್ತಂ ತತಃ ಪರಂ ॥ ೧೬ ॥

ನೀರಾಜನದ್ವಾದಶೀ ಚ ಭೀಷ್ಮಪಂಚಕಮೇವ ಚ ।
ಮಲ್ಲಿಕಾಖ್ಯಾ ದ್ವಾದಶೀ ಚ ಭೀಮಾ ದ್ವಾದಶಿಕೋತ್ತಮಾ ॥ ೧೭ ॥

---

೧೩. ಎರಡು ಸ್ನಪನಸಪ್ತಮಿಗಳು ಅಚಲವ್ರತಸಪ್ತಮಿ ಈ ವ್ರತಗಳನ್ನೂ ಹೇಳಲಾಗಿದೆ. ಇನ್ನು ಅಷ್ಟಮೀವ್ರತಗಳಲ್ಲಿ ಬುಧಾಷ್ಟಮೀವ್ರತ ಜನ್ಮಾಷ್ಟಮೀ ವ್ರತ ಇವುಗಳನ್ನೂ.

೧೪. ದೂರ್ವಾಕೃಷ್ಣಾಷ್ಟಮೀವ್ರತ, ಅನಯಾವ್ರತಮಷ್ಟಮೀ ಮತ್ತು ಅರ್ಕಾಷ್ಟಮೀವ್ರತಗಳನ್ನು ಹೇಳಿದೆ. ಇದಲ್ಲದೆ ನವಮೀವ್ರತಗಳಲ್ಲಿ ಶ್ರೀವೃಕ್ಷ ನವಮೀ ಎಂಬ ವ್ರತವೂ ಹೇಳಲ್ಪಟ್ಟಿದೆ.

೧೫. ಧ್ವಜನಾಮಕವಾದ ನವಮೀವ್ರತವೂ ಮತ್ತು ಉಲ್ಕಾಖ್ಯನವಮೀ ವ್ರತವೂ ಹಾಗೆಯೇ ದಶಾವತಾರವ್ರತವು ತಿಳಿಸಲ್ಪಟ್ಟಿದೆ. ದಶಮೀವ್ರತಗಳಲ್ಲಿ ಆಶಾದಶಮೀವ್ರತವೂ ಉಕ್ತವಾಗಿದೆ.

೧೬. ಅಲ್ಲದೆ ರೋಹಿಣೀ ಮತ್ತು ಇಂದ್ರ, ಹರಿ, ಈಶ್ವರ, ಬ್ರಹ್ಮ, ಸೂರ್ಯ ಇವರ ಅವಿಯೋಗವ್ರತಗಳೂ, ಅನಂತರ ಗೋವತ್ಸದ್ವಾದಶಿ ಎಂಬ ವ್ರತವೂ ಹೇಳಲ್ಪಟ್ಟಿವೆ.

೧೭. ಮತ್ತು ನೀರಾಜನದ್ವಾದಶೀವ್ರತ, ಭೀಷ್ಮಪಂಚಕವ್ರತ, ಮಲ್ಲಿಕಾಖ್ಯದ್ವಾದಶೀವ್ರತ ಮತ್ತು ಅತ್ಯುತ್ತಮವಾದ ಭೀಮಾದ್ವಾದಶೀವ್ರತ ಇವೂ ಉಕ್ತವಾಗಿವೆ.

**ಶ್ರವಣದ್ವಾದಶೀನಾಮ ಸಂಪ್ರಾಪ್ತಿದ್ವಾದಶೀವ್ರತಂ ।**
**ಗೋವಿಂದದ್ವಾದಶೀನಾಮ ವ್ರತಮುಕ್ತಂ ತತಃ ಪರಂ ॥ ೧೮ ॥**

**ಅಖಂಡದ್ವಾದಶೀನಾಮ ತಿಲದ್ವಾದಶ್ಯತಃ ಪರಂ ।**
**ಸುಕೃತದ್ವಾದಶೀ ನಾಮ ಧರಣೀವ್ರತಮೇವ ಚ ॥ ೧೯ ॥**

**ವಿಶೋಕದ್ವಾದಶೀ ನಾಮ ವಿಭೂತಿದ್ವಾದಶೀವ್ರತಂ ।**
**ಪುಷ್ಯರ್ಕ್ಷದ್ವಾದಶೀ ಚೈವ ದ್ವಾದಶೀ ಶ್ರವಣರ್ಕ್ಷಗಾ ॥ ೨೦ ॥**

**ಅನಂಗದ್ವಾದಶೀ ಚೈವ ಅಂಕಪಾದವ್ರತಂ ತಥಾ ।**
**ನಿಂಬಾರ್ಕಕರವೀರಾಥ ಯಮಾ ದರ್ಶತ್ರಯೋದಶೀ ।**
**ಅನಂಗದ್ವಾದಶೀ ಚಾಪಿ ಪಾಲೀರಂಭಾವ್ರತೇ ತಥಾ ॥ ೨೧ ॥**

**ಚತುರ್ದಶೀ ವ್ರತಂ ಪ್ರೋಕ್ತಂ ತತೋಽನಂತಚತುರ್ದಶೀ ।**
**ಶ್ರಾವಣೀವ್ರತನಕ್ತಂ ಚ ಚತುರ್ದಶ್ಯಷ್ಟಮೀದಿನೇ ॥ ೨೨ ॥**

---

೧೮–೧೯. ಅದಲ್ಲದೆ ಶ್ರವಣದ್ವಾದಶೀವ್ರತ, ಸಂಪ್ರಾಪ್ತಿದ್ವಾದಶೀವ್ರತ, ಗೋವಿಂದದ್ವಾದಶೀವ್ರತ ಮತ್ತು ಅಖಂಡದ್ವಾದಶೀವ್ರತ, ತಿಲದ್ವಾದಶೀವ್ರತ, ಸುಕೃತದ್ವಾದಶೀವ್ರತ, ಧರಣೀವ್ರತ ಇವುಗಳನ್ನು ಹೇಳಿದೆ.

೨೦. ವಿಶೋಕದ್ವಾದಶೀ ಎಂಬ ಹೆಸರಿನ ವ್ರತವೂ ವಿಭೂತಿದ್ವಾದಶೀ ವ್ರತವೂ ಪುಷ್ಯನಕ್ಷತ್ರದ್ವಾದಶೀವ್ರತವೂ ಮತ್ತು ಶ್ರವಣನಕ್ಷತ್ರಯುಕ್ತವಾದ ದ್ವಾದಶೀವ್ರತವೂ ಸಹ ಹೇಳಲ್ಪಟ್ಟಿವೆ.

೨೧. ಮತ್ತು ಅನಂಗದ್ವಾದಶೀವ್ರತ, ಅಂಕಪಾದವ್ರತ, ನಿಂಬಾರ್ಕವ್ರತ ಇವುಗಳೂ ಅನಂತರ ಕರವೀರವ್ರತ, ದರ್ಶತ್ರಯೋದಶೀವ್ರತ ಮತ್ತು ಅನಂಗ ದ್ವಾದಶೀವ್ರತ, ಪಾಲೀವ್ರತ, ರಂಭಾವ್ರತ ಇವುಗಳೂ ಉಕ್ತವಾಗಿವೆ.

೨೨. ಆ ಬಳಿಕ ಚತುರ್ದಶೀವ್ರತಗಳಲ್ಲಿ ಅನಂತಚತುರ್ದಶೀವ್ರತ, ಚತುರ್ದಶೀ, ಅಷ್ಟಮೀ ಈ ದಿನಗಳಲ್ಲಿ ಆಚರಿಸಬೇಕಾದ ಶ್ರಾವಣೀನಕ್ತವ್ರತವೂ ಹೇಳಲ್ಪಟ್ಟಿವೆ.

**ವ್ರತಂ ಶಿವಚತುರ್ದಶ್ಯಾಂ ಫಲತ್ಯಾಗಚತುರ್ದಶೀ ।**
**ವೈಶಾಖೀ ಕಾರ್ತಿಕೀ ಮಾಘೀವ್ರತಮೇತದನಂತರಂ ॥ ೨೩ ॥**

**ಕಾರ್ತಿಕ್ಯಾಂ ಕೃತ್ತಿಕಾಯೋಗೇ ಕೃತ್ತಿಕಾವ್ರತಮೀರಿತಂ ।**
**ಫಾಲ್ಗುನೇ ಪೂರ್ಣಿಮಾಯಾಂ ತು ವ್ರತಂ ಪೂರ್ಣಮನೋರಥಂ ॥೨೪॥**

**ಅಶೋಕಪೂರ್ಣಿಮಾನಾಮ ಅನಂತವ್ರತಮೇವ ಚ ।**
**ವ್ರತಂ ಹಿ ಸಾಂಭರಾಯಿಣ್ಯಾಂ ನಕ್ಷತ್ರಪುರುಷವ್ರತಂ ॥ ೨೫ ॥**

**ಶಿವನಕ್ಷತ್ರಪುರುಷಂ ಸಂಪೂರ್ಣಂ ಯೇನ ಮುಚ್ಯತೇ ।**
**ಕಾಮದಾನವ್ರತಂ ನಾಮ ವೃಂತಾಕವಿಧಿರೇವ ಚ ॥ ೨೬ ॥**

**ಆದಿತ್ಯಸ್ಯ ದಿನೇ ನಕ್ತಂ ಸಂಕ್ರಾಂತ್ಯುದ್ಯಾಪನೇ ಫಲಂ ।**
**ಭದ್ರಾವ್ರತಮಗಸ್ತ್ಯಾರ್ಘ್ಯೋ ನವಚಂದ್ರಾರ್ಕಮೇವ ಚ ॥ ೨೭ ॥**

---

೨೩. ಅಲ್ಲದೆ ಶಿವಚತುರ್ದಶೀವ್ರತ, ಫಲತ್ಯಾಗಚತುರ್ದಶೀವ್ರತ ಅನಂತರ ವೈಶಾಖೀ, ಕಾರ್ತಿಕೀ, ಮಾಘೀ ವ್ರತಗಳೂ ಸಹ ಉಕ್ತವಾಗಿವೆ.

೨೪. ಕಾರ್ತಿಕಮಾಸದ ಕೃತ್ತಿಕಾನಕ್ಷತ್ರಯುಕ್ತವಾದ ದಿನದಲ್ಲಿ ಕೃತ್ತಿಕಾ ವ್ರತವೂ ಫಾಲ್ಗುಣ ಶುಕ್ಲಪೂರ್ಣಿಮೆಯಲ್ಲಿ ಆಚರಿಸಬೇಕಾದ ಪೂರ್ಣಮನೋರಥ ವ್ರತವೂ ಹೇಳಲ್ಪಟ್ಟಿವೆ.

೨೫. ಅಶೋಕಪೂರ್ಣಿಮಾ ಎಂಬ ಪೂರ್ಣಿಮಾವ್ರತವೂ ಹಾಗೆಯೇ ಅನಂತವ್ರತವೂ ಸಾಂಭರಾಯಿಣೀವ್ರತವೂ ಮತ್ತು ನಕ್ಷತ್ರಪುರುಷವ್ರತವೂ ಹೇಳಲ್ಪಟ್ಟಿವೆ.

೨೬. ಯಾವ ವ್ರತವನ್ನು ಆಚರಿಸುವುದರಿಂದ ಮಾನವನು ಮುಕ್ತನಾಗುವನೋ ಅಂತಹ ಸಂಪೂರ್ಣವ್ರತವೂ ಶಿವನಕ್ಷತ್ರಪುರುಷವ್ರತವೂ ಕಾಮದಾನ ವ್ರತವೂ ವೃಂತಾಕವಿಧಿವ್ರತವೂ ಉಕ್ತವಾಗಿವೆ.

೨೭. ಆದಿತ್ಯವಾರದಲ್ಲಿ ಆಚರಿಸಬೇಕಾದ ನಕ್ತವ್ರತವೂ, ಸಂಕ್ರಾಂತಿ ಉದ್ಯಾಪನದ ಫಲವೂ, ಭದ್ರಾವ್ರತವೂ ಅಗಸ್ತ್ಯಾರ್ಘ್ಯವ್ರತವೂ, ನವಚಂದ್ರಾರ್ಕ ವ್ರತವೂ ಹೇಳಲ್ಪಟ್ಟಿವೆ.

ಅರ್ಘಾಃ ಶುಕ್ರಬೃಹಸ್ಪತ್ಯೋಃ ಪಂಚಾಶೀತಿವ್ರತಾನಿ ಚ ।
ಮಾಘಸ್ನಾನಂ ನಿತ್ಯಸ್ನಾನಂ ರುದ್ರಸ್ನಾನವಿಧಿಸ್ತಥಾ ॥ ೨೮ ॥

ಚಂದ್ರಾರ್ಕಗ್ರಹಣೇ ಸ್ನಾನಂ ವಿಧಿಶ್ಚಾನ್ನಾಶನೇ ತಥಾ ।
ವಾಪೀಕೂಪತಡಾಗಾನಾ ಮುತ್ಸರ್ಗೋ ವೃಕ್ಷಯೋಜನಂ ॥ ೨೯ ॥

ದೇವಪೂಜಾದೀಪದಾನವೃಷೋತ್ಸರ್ಗವಿಧಿಸ್ತಥಾ ।
ಫಾಲ್ಗುನ್ಯುತ್ಸವಕಂ ನಾಮ ತಥಾನ್ಯಃ ಸದನೋತ್ಸವಃ ॥ ೩೦ ॥

ಭೂತಮಾತಾ ಚ ಶ್ರಾವಣ್ಯಾಂ ರಕ್ಷಾಬಂಧವಿಧಿಸ್ತಥಾ ।
ವಿಧಿಸ್ತಥಾ ನವಮ್ಯಾಸ್ತು ತಥಾ ಚಂದ್ರಮಹೋತ್ಸವಃ ॥ ೩೧ ॥

ದೀಪಾಲಿಕಾಯಾಂ ತು ಹೋಮೋ ಲಕ್ಷಹೋಮವಿಧಿಸ್ತಥಾ ।
ಕೋಟಿಹೋಮೋ ಮಹಾಶೀತಿರ್ಗಣನಾಥಸ್ಯ ಶಾಂತಿಕಾ ॥ ೩೨ ॥

---

೨೮. ಶ್ರೇಷ್ಠವಾದ ಶುಕ್ರ ಮತ್ತು ಬೃಹಸ್ಪತಿಗಳ ವ್ರತಗಳು. ಮತ್ತು ಇತರ ಎಂಬತ್ತೈದು ವ್ರತಗಳು ಹೇಳಲಾಗಿವೆ. ಇದಲ್ಲದೆ ಮಾಘಸ್ನಾನ, ನಿತ್ಯಸ್ನಾನ, ರುದ್ರಸ್ನಾನ ಈ ಸ್ನಾನಗಳ ವಿಧಿಯು ವಿವರಿಸಲ್ಪಟ್ಟದೆ.

೨೯. ಸೂರ್ಯಚಂದ್ರರಗ್ರಹಣಸ್ನಾನವಿಧಿ, ಅನ್ನಪ್ರಾಶನವಿಧಿ, ವಾಪೀ ಕೂಪ ತಟಾಕ ಇವುಗಳ ಉತ್ಸರ್ಗವಿಧಿ, ವೃಕ್ಷಯೋಜನವಿಧಿ ಇವೂ ಉಕ್ತವಾಗಿವೆ.

೩೦. ಮತ್ತು ದೇವತಾಪೂಜಾವಿಧಿ, ದೀಪದಾನ, ವೃಷೋತ್ಸರ್ಗ ಇವುಗಳ ವಿಧಿಗಳೂ ಹಾಗೆಯೇ ಫಾಲ್ಗುನ್ಯುತ್ಸವ ಎಂಬ ಉತ್ಸವವಿಧಿಯೂ ಮತ್ತು ಸದನ ಮಹೋತ್ಸವವಿಧಿಯೂ ಹೇಳಲ್ಪಟ್ಟಿವೆ.

೩೧. ಶ್ರಾವಣಮಾಸದಲ್ಲಿ ಮಾಡಬೇಕಾದ ಭೂತಮಾತೃತ್ಸವದ ಕ್ರಮ, ರಕ್ಷಾಬಂಧನಕ್ರಮ, ಮತ್ತು ನವಮೀ ಉತ್ಸವವಿಧಿ, ಚಂದ್ರಮಹೋತ್ಸವವಿಧಿ ಇವುಗಳೂ ಹೇಳಲ್ಪಟ್ಟಿವೆ.

೩೨. ದೀಪಾಲಿಕಾಹೋಮ, ಲಕ್ಷಹೋಮ, ಕೋಟಿಹೋಮ, ಮಹಾ ಶೀತಿಹೋಮ, ಗಣಪತಿಶಾಂತಿ ಇವುಗಳ ವಿಧಾನವನ್ನೂ ಹೇಳಿದೆ.

ತಥಾ ನಕ್ಷತ್ರಹೋಮೋಥ ಗೋದಾನವಿಧಿರೇವ ಚ |
ಗುಡಧೇನು ಘೃತಧೇನು ತಿಲಧೇನುವ್ರತಂ ತಥಾ || ೩೩ ||

ಜಲಧೇನುವಿಧಿಃ ಪ್ರೋಕ್ತೋ ಲವಣಸ್ಯ ತಥಾ ಪರಾ |
ಧೇನುಃ ಕಾರ್ಯಾ ಸಮಂ ಜ್ಞಾತ್ವಾ ನವನೀತಸ್ಯಚಾಪರಾಃ ||
ಸುವರ್ಣಧೇನುಶ್ಚ ತಥಾ ದೇವಕಾರ್ಯಂ ಚಿಕೀರ್ಷುಭಿಃ || ೩೪ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಸಂಕ್ಷಿಪ್ತ ಅನುಕ್ರಮಣಿಕಾಕಥನಂ ನಾಮ ಅಷ್ಟೋತ್ತರದ್ವಿಶತತಮೋಽಧ್ಯಾಯಃ.

ಇತಿ ಉತ್ತರಪರ್ವ

## ಸಮಾಪ್ತಮಿದಂ ಭವಿಷ್ಯಮಹಾಪುರಾಣಂ.

---

೩೩. ಹಾಗೆಯೇ ನಕ್ಷತ್ರಹೋಮ, ಗೋದಾನವಿಧಿ, ಗುಡಧೇನು, ಘೃತ ಧೇನು, ತಿಲಧೇನು ಈ ವ್ರತವಿಧಾನಗಳು ಉಕ್ತವಾಗಿವೆ.

೩೪. ಅಲ್ಲದೆ ಜಲಧೇನು, ಲವಣಧೇನು ಮತ್ತು ನವನೀತಧೇನು ಈ ಧೇನುವ್ರತ ವಿಧಾನವೂ ಹೇಳಲ್ಪಟ್ಟಿವೆ. ನವನೀತಧೇನುವನ್ನು ಪ್ರಸಿದ್ಧ ಧೇನು ಸಮವೆಂದು ಭಾವಿಸಿ ಮಾಡಬೇಕೆಂದು ದೇವಕಾರ್ಯವನ್ನು ಕೃಪ್ತಿಕರವಾಗಿ ಮಾಡ ಬೇಕೆಂದು ಅಭಿಲಾಷೆಯುಳ್ಳವರು ಸುವರ್ಣಧೇನುವ್ರತವನ್ನು ಮಾಡಬೇಕೆಂದು ಹೇಳಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಸಂಕ್ಷಿಪ್ತಅನುಕ್ರಮಣಿಕಾ ಕಥನವೆಂಬ ಇನ್ನೂರೆಂಟನೆಯ ಅಧ್ಯಾಯವು ಮುಗಿದು ಉತ್ತರಪರ್ವ ಸಮಾಪ್ತವಾಯಿತು.

## ಶ್ರೀ ಭವಿಷ್ಯಮಹಾಪುರಾಣದ ಅನುವಾದವು ಸಂಪೂರ್ಣವಾಯಿತು.



# ಮಂಗಳಾಶಂಸನಂ

ದೈವಜ್ಞವಂಶಜೋ ನಾಮ್ನಾ ಚನ್ನಕೇಶವಪಂಡಿತಃ ।
ಮಹೀಶೂರಮಹಾರಾಜಸಭಾವಿಖ್ಯಾತಕೋವಿದಃ ॥ ೧ ॥

ಸುಬ್ಬರಾಯತನೂಜೋಽಸೌ ವಿಶ್ವಾಮಿತ್ರಸಗೋತ್ರಜಃ ।
ರಾಜಾಜ್ಞಾಂ ಶಿರಸಾ ಧೃತ್ವಾ ವೇದವ್ಯಾಸೋದಿತಸ್ಯ ಚ ॥ ೨ ॥

ಭವಿಷ್ಯಾಖ್ಯ ಪುರಾಣಸ್ಯ ಅನುವಾದಂ ವ್ಯಧಾನ್ಮುದಾ ।
ಮನ್ಯೇಽಲ್ಪಸೇವಯಾ ತುಷ್ಟೋ ಭಗವಾನ್ ಚನ್ನಕೇಶವಃ ॥ ೩ ॥

ಯದಿ ತುಷ್ಯೇತ್ಸುಧೀವ್ರಾತಃ ಸಫಲಸ್ಸ್ಯಾನ್ಮಮ ಶ್ರಮಃ ।
ವಿದ್ವದ್ಗೋಷ್ಠೀಪ್ರಿಯೋಽಸ್ಮಾಕಂ ರಾಜಾ ಸದ್ಧರ್ಮಪಾಲಕಃ ॥ ೪ ॥

ಶ್ರೀಮಾನ್ ಶ್ರೀ ಜಯಚಾಮೇಂದ್ರಃ ಕರ್ಣಾಟಪೃಥ್ವೀಪತಿಃ ।
ಆಚಂದ್ರಾರ್ಕಂ ವಿಜಯತಾಂ ಪುತ್ರಪೌತ್ರಾದಿಭಿರ್ಯುತಃ ॥ ೫ ॥

